# ಶ್ರೀ ವೇಂಕಟಾಚಲ ಇತಿಹಾಸ



ಟಿ.ಎಸ್. ಶಲ್ಲಪ್ಪನ್

ಶ್ರೀ:

# ಶ್ರೀವೇಂಕಟಾಚಲ ಇತಿಹಾಸ ಮಾಲೆ

(ಶ್ರೀಮದನಂತಾರ್ಯರು ರಚಿಸಿದ ಶ್ರೀವೇಂಕಟಾಚಲೇತಿಹಾಸ ಮಾಲಾ
ಎಂಬ ಸಂಸ್ಕೃತ ಗ್ರಂಥದ ಕನ್ನಡ ಅನುವಾದ)

ಟಿ. ಎಸ್. ಶಲ್ಲಪ್ಪನ್
(ಅನುವಾದಕರು)

*This book is published with the financial assistance of* Tirumalai Tirupati Devasthanams *under their scheme, Aid to publish Religious books vide Roc No. Edit - 8/378/2001 dt. 27-07-2001*

ಪ್ರಥಮ ಮುದ್ರಣ 2002

1000 ಪ್ರತಿಗಳು






ಮೌಲ್ಯ ರೂ. 50 ಮಾತ್ರ. ಅಂಚೆ ವೆಚ್ಚ ಪ್ರತ್ಯೇಕ

ಮುದ್ರಕರು ಮತ್ತು ಪ್ರಕಾಶಕರು.
T. S. ಶಲ್ಲಪ್ಪನ್,
10/2, D-4, ಅಲಂಗೂರ್ ಗ್ರೂಪ್ಸ್ ಅಪಾರ್ಟ್‌ಮೆಂಟ್ಸ್,
23 ನೇ ಮುಖ್ಯರಸ್ತೆ, 16ನೇ ಅಡ್ಡರಸ್ತೆ,
ಜೆ. ಪಿ. ನಗರ (5ನೇ ಹಂತ) ಬೆಂಗಳೂರು - 5600078 Ph : 6592620.

ಪುಸ್ತಕಗಳಿಗಾಗಿ ಮೇಲ್ಕಂಡ ವಿಳಾಸದಲ್ಲಿ ಸಂಪರ್ಕಿಸಿ.

ಮುದ್ರಣ
ಸಮೃದ್ಧ ಆಫ್‌ಸೆಟ್ ಪ್ರಿಂಟರ್ಸ್,
ವಿಠಲ್ ನಗರ, ಬೆಂಗಳೂರು - 560026.
Ph : 6747677

(V. P. P. ಮೂಲಕವೂ ಪುಸ್ತಕಗಳನ್ನು ಕಳುಹಿಸಿ ಕೊಡಲಾಗುತ್ತದೆ.)

## ಸ್ಮರಣೆ ಮತ್ತು ಸಮರ್ಪಣೆ.

ದಾಸನಿಗೆ ಜನ್ಮನೀಡಿದ ಪೂಜ್ಯ ಮಾತಾಪಿತೃಗಳಾದ **ಶ್ರೀಮತಿ ಅಲಮೇಲಮ್ಮ** ಮತ್ತು **ಶ್ರೀ ಉಭಯವೇದಾಂತ ವಿದ್ವಾನ್ ತಿ.ಅ. ಅಕ್ಕಾರಕ್ಕನಿ ಶ್ರೀನಿವಾಸವರದಾಚಾರ್ಯರು** (ಪರಮಪದವಾಸಿಗಳು)

ದಾಸನಿಗೆ ಆಚಾರ್ಯರಾಗಿಯೂ ಮತ್ತು ಪಿತಾಮಹರೂ ಆಗಿದ್ದ **ಶ್ರೀ ಉಭಯವೇದಾಂತ ವಿದ್ವಾನ್ ತಿ.ಅ. ಅಕ್ಕಾರಕ್ಕನಿ ರಾಮಾನುಜಾಚಾರ್ಯರು** ಮತ್ತು ಪಿತಾಮಹಿ **ಶ್ರೀಮತಿ ಕಣ್ಣಮ್ಮನವರು** (ಪರಮಪದವಾಸಿಗಳು)

ದಾಸನಿಗೆ ಜ್ಞಾನಗುರುವಾಗಿ ಅನೇಕ ಶ್ರೀವೈಷ್ಣವ ಸಂಪ್ರದಾಯ ವಿಷಯಗಳನ್ನು ತಿಳಿಸಿಕೊಟ್ಟುದುದಲ್ಲದೇ ಬಾಲ್ಯದಲ್ಲಿಯೇ ಮಾತಾಪಿತೃಗಳ ವಿಯೋಗದಿಂದ ದುಃಖಿತರಾಗಿದ್ದ ನಮ್ಮನ್ನು ಪೋಷಿಸಿ ಸಲಹಿದ ಪೂಜ್ಯ ಚಿಕ್ಕಪ್ಪನವರಾದ **ಶ್ರೀ ಉಭಯವೇದಾಂತ ಮತ್ತು ತರ್ಕ ಶಾಸ್ತ್ರವಿದ್ವಾನ್. ತಿ.ಅ. ಅಕ್ಕಾರಕ್ಕನಿ ಸಂಪತ್ಕುಮಾರಾಚಾರ್ಯರು. ಎಂ.ಎ., ಮತ್ತು ಚಿಕ್ಕಮ್ಮ ಶ್ರೀಮತಿ ಶ್ರೀನಿವಾಸಮ್ಮಾಳ್** (ಪರಮಪದವಾಸಿಗಳು) ರವರು

ಗಂಡು ಸಂತಾನವಿಲ್ಲದುದರಿಂದ ದೌಹಿತ್ರನಾದ ದಾಸನ ಮೇಲೆ ಅಪಾರ ಪ್ರೀತಿಯನ್ನಿಟ್ಟು ಸಾಕಿ ಸಲಹಿದ ಮಾತಾಮಹರಾದ **ಶ್ರೀ ಉಭಯವೇದಾಂತ ವಿದ್ವಾನ್ ಮುಡುಂಬೈ ಸಂಪತ್ಕುಮಾರಾಚಾರ್ಯರು** ಮತ್ತು **ಮಾತಾಮಹಿ ತಿರುವೇಂಗೆಡಮ್ಮನವರು** (ಪರಮಪದ ವಾಸಿಗಳು)

ದಾಸನಿಗೆ ಯಾವ ಯೋಗ್ಯತೆಯೂ ಇಲ್ಲದಿದ್ದಾಗ ತಮ್ಮ ಮಗಳನ್ನು ವಿವಾಹಮಾಡಿಕೊಟ್ಟು, ವಿದ್ಯಾರ್ಹತೆಯನ್ನು ಪಡೆಯಲು ಸಹಕರಿಸಿ, ಭವಿಷ್ಯವನ್ನು ರೂಪಿಸಿದ ದಾಸನ ಅತ್ತೆಮಾವರಾದ **ಶ್ರೀಮತಿ ರಂಗನಾಯಕಿ ಅಮ್ಮಾಳ್** ಮತ್ತು **ಶ್ರೀ ಕಾಂಚೀ ಪ್ರತಿವಾದಿ ಭಯಂಕರಂ ಜಗದ್ಗುರು ಉಭಯ ವೇದಾಂತವಿದ್ವಾನ್ ಗಾಧಿ ಶ್ರೀಕೃಷ್ಣಮಾಚಾರ್ಯಸ್ವಾಮಿಗಳು** (ಪರಮಪದವಾಸಿಗಳು)

ದಾಸನನ್ನು ಬಾಲ್ಯದಲ್ಲಿ ತಮ್ಮ ಮನೆಯಲ್ಲಿಯೇ ಇಟ್ಟುಕೊಂಡು ಪೋಷಿಸಿ ಪ್ರೌಢಶಾಲಾ ವ್ಯಾಸಂಗಕ್ಕೆ ಸಹಕರಿಸಿದ, ತಮ್ಮ ಮಕ್ಕಳಿಗಿಂತಲೂ ಹೆಚ್ಚಾದ ಪ್ರೀತಿ ವಾತ್ಸಲ್ಯವನ್ನು ತೋರಿದ, ದಾಸನ ತಾಯಿಯ ಮಾತುಲರಾದ ಶ್ರೀ ಉಭಯ ವೇದಾಂತ ವಿದ್ವಾನ್ ಮಹದೇವಪುರಂ ಸಂಪತ್ಕುಮಾರಾಚಾರ್ಯರು ಮತ್ತು ಅವರ ಧರ್ಮಪತ್ನಿ ಶ್ರೀಮತಿ ರಾಜಲಕ್ಷ್ಮಿಯಮ್ಮಾಳ್‌ರವರುಗಳು (ಪರಮಪದವಾಸಿ)

ಈ ಎಲ್ಲ ಶುಧ್ಧಾತ್ಮರುಗಳನ್ನೂ ಕೃತಜ್ಞತೆಯಿಂದ ಕೂಡಿ ಸ್ಮರಿಸುತ್ತಾ, ಯಾವ ಪ್ರಯೋಜನಕ್ಕೂ ಬಾರದ ಈ ದಾಸನಿಂದ ಈ ಇತಿಹಾಸ ಪುಸ್ತಕವನ್ನು ಬರೆಯುವಂತೆ ಪ್ರೇರಣೆಕೊಟ್ಟು ನಡೆಸಿಕೊಂಡ ದಿವ್ಯದಂಪತಿಗಳಾದ ಶ್ರೀ ಶ್ರೀನಿವಾಸ ಮತ್ತು ಶ್ರೀ ಜಗನ್ಮಾತೆ ಪದ್ಮಾವತೀದೇವಿ.ಯವರುಗಳ ಅಡಿದಾವರೆಗಳಲ್ಲಿ ಈ ಇತಿಹಾಸ ಮಾಲೆಯನ್ನು ಸಮರ್ಪಿಸುತ್ತೇನೆ.

ತಿ. ಅ. ಅಕ್ಕಾರಕ್ಕನಿ ಸಂಪತ್ಕುಮಾರದಾಸ

(ಟಿ. ಎಸ್. ಶಲ್ಲಪ್ಪನ್)

ಶ್ರೀಃ

ಶ್ರೀನಿವಾಸ ಪರಬ್ರಹ್ಮಣೇ ನಮಃ
ಶ್ರೀಮತ್ಯೈ ಪದ್ಮಾವತ್ಯೈ ನಮಃ
ಶ್ರೀಮತೇ ರಾಮಾನುಜಾಯ ನಮಃ
ಶ್ರೀಮದನಂತಾರ್ಯ ಮಹಾಗುರವೇ ನಮಃ
ಶ್ರೀಮದ್ವರವರ ಮುನಯೇ ನಮಃ

## ಅನುವಾದಕನ ಮಾತು

**ಮಾಯಾವೀ ಪರಮಾನಂದಂ ತ್ಯಕ್ತ್ವಾ ವೈಕುಂಠ ಮುತ್ತಮಮ್।**
**ಸ್ವಾಮಿ ಪುಷ್ಕರಿಣೀ ತೀರೇ ರಮಯಾ ಸಹ ಮೋದತೇ॥**
**ವೇಂಕಟಾದ್ರಿಸಮಂಸ್ಥಾನಂ ಬ್ರಹ್ಮಾಂಡೇ ನಾಸ್ತಿ ಕಿಂಚನ।**
**ವೆಂಕಟೇಶ ಸಮೋದೇವೋ ನ ಭೂತೋ ನಭವಿಷ್ಯತಿ॥**

ಭಗವಾನ್ ಶ್ರೀ ಮನ್ನಾರಾಯಣನು ಪರಮಾನಂದಕರವಾದುದೂ, ಉತ್ತಮವಾದುದೂ ಆದ ವೈಕುಂಠ ಲೋಕವನ್ನು ಬಿಟ್ಟು ಸ್ವಾಮಿ ಪುಷ್ಕರಿಣಿಯ ತೀರದಲ್ಲಿ ರಮೆಯೊಡನೆ ಕೂಡಿ ಸಂತೋಷಗೊಂಡಿದಾನೆ. ಅಂಥಹ ನಾರಾಯಣನು ವಾಸಮಾಡುತ್ತಲೂ, ಕ್ರೀಡಿಸುತ್ತಲೂ ಇರುವ ಶ್ರೀವೇಂಕಟಾಚಲಕ್ಕೆ ಸಮನಾದ ಮತ್ತೊಂದು ದಿವ್ಯ ಸ್ಥಾನವು ಬ್ರಹ್ಮಾಂಡದಲ್ಲಿ ಎಲ್ಲಿಯೂ ಇಲ್ಲ. ಅಂಥಹ ಶ್ರೀವೇಂಕಟೇಶನಾದ ದೇವನಿಗೆ ಸಮನಾದ ಮತ್ತೊಬ್ಬದೇವನು ಹಿಂದೆಯೂ ಇರಲಿಲ್ಲ ಮತ್ತು ಮುಂದೆಯೂ ಇರುವುದಿಲ್ಲ. ಇದೇ ಮೇಲಿನ ಎರಡು ಶ್ಲೋಕಗಳ ಸಾರಾಂಶವು.

ಶ್ರೀವೈಕುಂಠನಾಥನು, ಶ್ರೀನಿವಾಸ, ವೇಂಕಟೇಶ, ವೇಂಕಟನಾಥ, ಶೇಷಾದ್ರಿವಾಸ ಇತ್ಯಾದಿ ಹಲವಾರು ಹೆಸರುಗಳಿಂದ ಕೂಡಿ ಅರ್ಚಾರೂಪಿಯಾಗಿ ಶ್ರೀವೇಂಕಟಾಚಲದಲ್ಲಿ ಆವಿರ್ಭವಿಸಿದ ಶ್ರೇಷ್ಠವಾದ ಸಮಯದಿಂದಲೂ, ಶ್ರೀಪರಾಂಕುಶ ಸೂರಿ (ನಮ್ಮಾಳ್ವಾರ್) ಯವರು ತಮ್ಮ ಸಹಸ್ರಗೀತೆಯಲ್ಲಿ ''ಅಗಲಗಿಲ್ಲೇನ್ ಇರೈಯುಮೆನ್ರು ಅಲರ್ ಮೇಲ್ ಮಂಗೈಯುರೈಮಾರ್ಬಾ'' ಎಂದು ಹಾಡಿರುವಂತೆಯೇ ಸಕಲ ಸಂಪತ್ತುಗಳಿಗೂ ದೇವಿಯಾದ ಮಹಾಲಕ್ಷ್ಮಿಯು ಆ ದೇವನ ವಕ್ಷಃಸ್ಥಳದಲ್ಲಿಯೇ ಆತನನ್ನು ಎಡೆಬಿಡದೆ ಯಾವಾಗಲೂ ಇರುವ ಕಾರಣದಿಂದಲೂ, ಶ್ರೀ ಪರಕಾಲ ಸೂರಿಯೇ ಮುಂತಾದ ಇತರ ಆಳ್ವಾರುಗಳು (ದಿವ್ಯ ಸೂರಿಗಳು) ಈತನನ್ನು ಮಂಗಳಾಶಾಸನಮಾಡಿರುವುದರಿಂದಲೂ, ಶ್ರೀವೈಷ್ಣವ

ಮತವನ್ನು ಬಹಳವಾಗಿ ಕಷ್ಟಪಟ್ಟು ಬೆಳೆಸಿದ ಶ್ರೀ ಭಗವದ್ರಾಮಾನುಜ ಮುನಿವರ್ಯರು, ಈ ತಿರುಮಲೆ (ತಿರುಪತಿ ಬೆಟ್ಟ) ಎಂದು ಕರೆಯಲ್ಪಡುವ ಶ್ರೀವೇಂಕಟಾಚಲದ ಸಂಪತ್ತು ಅಭಿವೃದ್ಧಿಗೊಳ್ಳುವ ಸಲುವಾಗಿ ಸ್ವರ್ಣಮಯವಾದ ಶ್ರೀದೇವಿಯ ವಿಗ್ರಹವನ್ನು ನಿರ್ಮಿಸಿ, ಆತನ ವಕ್ಷಃ ಸ್ಥಳದಲ್ಲಿ ಪ್ರತಿಷ್ಠೆಮಾಡಿದ ಕಾರಣದಿಂದಲೂ, ಆತನ ದಿವ್ಯವಾದ ಸಂಪತ್ತು ದಿನೇ ದಿನೇ ವೃದ್ಧಿಯಾಗುತ್ತಲೇ ಬರುತ್ತಿರುವುದು ಎಲ್ಲರಿಗೂ ವೇದ್ಯವಾದ ವಿಷಯವಷ್ಟೆ. ಅತ್ಯಂತ ಹೆಚ್ಚಿನ ಧರ್ಮ ಚಿಂತೆಯುಳ್ಳ ತಿರುಮಲೆ ತಿರುಪತಿ ದೇವಸ್ಥಾನಗಳ (T.T D) ಅಧಿಕಾರಿಗಳಿಂದ, ಪ್ರಪಂಚದ ನಲ್ಮೆಗಾಗಿಯೇ ತಮ್ಮ ಕರ್ತವ್ಯವು ಎಂಬುದನ್ನು ಚೆನ್ನಾಗಿ ಮನಗಂಡ, ಶ್ರೀನಿವಾಸನ ಸಂಪತ್ತಿನ ಅತಿ ಹೆಚ್ಚಿನ ಪಾಲನ್ನು, ಅನ್ನದಾನಮಾಡುವುದಕ್ಕೂ, ಭಕ್ತಾದಿಗಳ ಸೌಕರ್ಯಕ್ಕೂ, ಕಡಿಮೆ ಸಂಪತ್ತುಳ್ಳ ಇತರ ದೇವಸ್ಥಾನಗಳ ದೈನಂದಿನ ಭಗವತ್ಕೈಂಕರ್ಯಕ್ಕೂ ಮತ್ತು ಅವುಗಳ ನಿರ್ವಹಣೆಗೂ, ತಮ್ಮದೇ ದೇವಸ್ಥಾನಗಳಿರುವ ತಿರುಮಲೆ, ತಿರುಪತಿ, ತಿರುಚ್ಚಾನೂರ್ ಮುಂತಾದ ಪಟ್ಟಣಗಳಲ್ಲಿ ಭಕ್ತಾದಿಗಳಿಗೆ ತಂಗುವ ವಸತಿಗಾಗಿ ಅನೇಕ ಸೌಲಭ್ಯಗಳನ್ನು ಮಾಡಿಯೂ, ಮತ್ತು ಮಾಡುತ್ತಲೂ, ಅದೂ ಅಲ್ಲದೇ ರಾಷ್ಟ್ರದ ಹಲವೆಡೆಗಳಲ್ಲಿ ಯಾತ್ರಿಕರು ತಂಗಲು ಛತ್ರಗಳನ್ನೂ, ಪ್ರತ್ಯೇಕ ಮನೆಗಳನ್ನೂ, ಕಲ್ಯಾಣಮಂಟಪಗಳನ್ನೂ, ವಾರ್ತಾಕೇಂದ್ರಗಳನ್ನೂ ಕಟ್ಟಿರುವುದೂ ಅಲ್ಲದೆ ಆಳ್ವಾರ್‌ಗಳು, ಆಚಾರ್ಯರುಗಳೂ, ಅನ್ನಮಾಚಾರ್, ಪುರಂದರ ದಾಸರು ಮುಂತಾದ ಭಕ್ತಿಮಾರ್ಗ ಪ್ರದರ್ಶಕರುಗಳ ಜಯಂತಿಗಳನ್ನು ಕೊಂಡಾಡುವುದೂ, ಅಂಥಹ ಸಂತರುಗಳು ರಚಿಸಿದ ಮತ್ತು ರಚಿಸಿ ಹಾಡಿದ ಕೃತಿಗಳನ್ನು ಮುದ್ರಿಸಿ ಪ್ರಚುರಿಸುತ್ತಲೂ, ಇವರುಗಳ ವಿಷಯವಾಗಿ ಪಂಡಿತರುಗಳಿಂದ ಉಪನ್ಯಾಸಗಳನ್ನು ಏರ್ಪಡಿಸುತ್ತಲೂ ಬರುತ್ತಿರುವುದು ನಾಡರಿತ ವಿಷಯವಾಗಿದೆ.

ಹೀಗೆ ಭಗವಂತನ ಆದಾಯ ಮತ್ತು ಖರ್ಚು ಆಗುವ ಐಶ್ವರ್ಯವಲ್ಲದೆ ಸ್ಥಿರವಾದ ಸಂಪತ್ತೂ ಈ ಶ್ರೀ ವೇಂಕಟಾಚಲಾಧೀಶ್ವರನಿಗೆ ಉಂಟು. ಇವುಗಳು ಈ ಬೆಟ್ಟದಲ್ಲಿ ಭಗವಂತನು ವಿರಾಜಿಸುತ್ತಿರುವವರೆಗೂ ಸ್ಥಿರವಾಗಿರುತ್ತವೆ. ಅವುಗಳು ಯಾವುವೆಂದರೆ:-

ಕೃತ, ತ್ರೇತಾ ಮತ್ತು ದ್ವಾಪರಯುಗಗಳಲ್ಲಿ ಉಂಟಾದ ಶ್ರೀವೇಂಕಟೇಶ್ವರನ ದಿವ್ಯ ಚರಿತ್ರೆಗಳನ್ನು ಭಗವಾನ್ ಶ್ರೀವೇದವ್ಯಾಸರು ಹಲವು ಪುರಾಣಗಳಲ್ಲಿ ಸೂಚಿಸಿರುವುದಾಗಿ, ಸ್ವಲ್ಪ ಹೆಚ್ಚು ಕಡಿಮೆ, ಹನ್ನೆರಡು ಸಹಸ್ರ ಶ್ಲೋಕಗಳನ್ನೊಳಗೊಂಡ 'ಶ್ರೀವೇಂಕಟಾಚಲ ಮಾಹಾತ್ಮ್ಯೆ'' ಎಂಬುವ ಸಂಕಲನ ಗ್ರಂಥವೂ, ಶ್ರೀ ವೇಂಕಟಾಚಲಾಧೀಶನ ಈ ಕಲಿಯುಗದ ಚರಿತ್ರೆಗಳನ್ನು ವಿವರಿಸಿ,

ಶ್ರೀ ಭಗವದ್ರಾಮಾನುಜರ ಕಾಲದಲ್ಲಿ ಅವರ ಅತ್ಯಂತ ಪ್ರಿಯ ಶಿಷ್ಯರಾಗಿದ್ದ 'ತಿರುಮಲೆ ಅನಂದಾಳ್ವಾನ್'' ಎಂದು ಎಲ್ಲರಿಂದಲೂ ಕರೆಯಲ್ಪಟ್ಟ ಶ್ರೀ ಅನಂತಾರ್ಯರು ಸಂಸ್ಕೃತ ಭಾಷೆಯಲ್ಲಿ ರಚಿಸಿ ನೀಡಿರುವ 'ಶ್ರೀ ವೇಂಕಟಾಚಲೇತಿಹಾಸ ಮಾಲಾ'' ಎಂಬ ಗ್ರಂಥವೂ, ಮಣಿಪ್ರವಾಳ ಶಾಣಿಯಲ್ಲಿ (ಸಂಸ್ಕೃತ ಮತ್ತು ತಮಿಳು ಕಲೆತು ರಚಿಸಲ್ಪಟ್ಟಿರುವ ಪಾಣಿಯಲ್ಲಿ) ರಚಿಸಿರುವ ''ತಿರುಮಲೈಒಳುಗು'' ಎಂಬ ಗ್ರಂಥವೂ ಈ ಯುಗದ ಕೊಡುಗೆಗಳಾಗಿರುತ್ತವೆ. ನಾಶರಹಿತವಾದ ಐಶ್ವರ್ಯಗಳಾದ ಇವುಗಳಲ್ಲಿ, ಶ್ರೀವೇಂಕಟಾಚಲ ಮಾಹಾತ್ಮ್ಯ' ವೆಂಬ ಸಂಸ್ಕೃತ ಗ್ರಂಥವನ್ನು ತೆಲುಗು ಲಿಪಿಯಲ್ಲಿಯೂ ಮತ್ತು ದೇವನಾಗರೀ ಲಿಪಿಯಲ್ಲಿಯೂ ತಿರುಮಲೆ ತಿರುಪತಿ ದೇವಸ್ಥಾನದವರು ಹಲವು ಬಾರಿ ಮುದ್ರಿಸಿ ಪ್ರಚುರ ಪಡಿಸಿರುತ್ತಾರೆ. ಶ್ರೀ ವೇಂಕಟಾಚಲೇತಿಹಾಸ ಮಾಲಾ' ಮತ್ತು ತಿರುಮಲೈಯೊಳಗು ಈ ಗ್ರಂಥಗಳನ್ನು ಒಂದು ಸಲ ಮಾತ್ರ ಪ್ರಚುರ ಪಡಿಸಿರುತ್ತಾರೆ ಎಂಬ ವಿಷಯವು ತಿಳಿದು ಬರುತ್ತದೆ.

ಈಗ 'ಶ್ರೀವೇಂಕಟಾಚಲೇತಿಹಾಸ ಮಾಲಾ, ಗ್ರಂಥದ ತೆಲುಗುಭಾಷೆಯ ಅನುವಾದವನ್ನು ಶ್ರೀಮಾನ್ ಎನ್.ಸಿ. ವಿ. ನರಸಿಂಹಾಚಾರ್ಯರು, (ಶಿರೋಮಣಿ ವಿದ್ವಾನ್. ಎಂ.ಎ., ನಿವೃತ್ತ ಪ್ರಾಧ್ಯಾಪಕರು, ಶ್ರೀವೇಂಕಟೇಶ್ವರ ಓರಿಯಂಟಲ್ ಕಾಲೇಜು, ತಿರುಪತಿ) ಮಾಡಿರುತ್ತಾರೆ.

ಇದೇ ಗ್ರಂಥದ ತಮಿಳುಭಾಷೆಯ ಅನುವಾದವನ್ನು ಶ್ರೀಮಾನ್ ಟಿ.ಎ. ಕೃಷ್ಣಮಾಚಾರ್ಯಸ್ವಾಮಿಯವರು, (ಶಿರೋಮಣಿ, ವಿದ್ವಾನ್. ನಿವೃತ್ತ ತರ್ಕ ಶಾಸ್ತ್ರ ಪ್ರಾಧ್ಯಾಪಕರು, ಶ್ರೀವೇಂಕಟೇಶ್ವರ ಓರಿಯಂಟಲ್ ಕಾಲೇಜು, ತಿರುಪತಿ) ಮಾಡಿರುತ್ತಾರೆ. ಈ ತಮಿಳುಭಾಷಾನುವಾದ ಗ್ರಂಥವು, ದೇವಸ್ಥಾನದ ''ಸಪ್ತಗಿರಿ'' ಮಾಸ ಸಂಚಿಕೆಗಳಲ್ಲಿ ಮೊದಲು ಪ್ರಚುರವಾಗಿದ್ದು ನಂತರ ಅದನ್ನು ದೇವಸ್ಥಾನದವರೇ ಪ್ರತ್ಯೇಕವಾಗಿ ಪುಸ್ತಕರೂಪವಾಗಿ ಮುದ್ರಿಸಿ ಪ್ರಚುರ ಪಡಿಸಿರುತ್ತಾರೆ.

ಇನ್ನು ಈ ಶ್ರೀ ವೇಂಕಟಾಚಲೇತಿಹಾಸ ಮಾಲಾ' ಎಂಬ ಸಂಸ್ಕೃತ ಗ್ರಂಥದ ಒಗೆಗಿನ ಕೆಲವು ವಿಷಯಗಳು ತಿಳಿಸಲ್ಪಡುತ್ತವೆ, ಈ ಸಂಸ್ಕೃತ ಗ್ರಂಥದಲ್ಲಿ ಹೆಚ್ಚಿನ ಭಾಗವು ಗದ್ಯರೂಪದಲ್ಲಿಯೂ, ಉಳಿದುದು ಶ್ಲೋಕರೂಪದಲ್ಲಿಯೂ ಕಂಡುಬರುತ್ತದೆ. ಇವುಗಳಲ್ಲಿ ಈ ಗ್ರಂಥದ ಅರ್ಧಕ್ಕಿಂತ ಹೆಚ್ಚು ಭಾಗವು ಪುರಾಣ, ಆಗಮ ಇವುಗಳ ಶ್ಲೋಕಗಳಿಂದಲೇ ವಿಷಯಾಧಾರಕ್ಕಾಗಿ ಕೊಟ್ಟು ರಚಿಸಲ್ಪಟ್ಟಿದೆ. ಇದರಲ್ಲಿ ಏಳು ಸ್ತಬಕಗಳೆಂದು ಕರೆಯುವ ಭಾಗಗಳಿಂದ ಮಾಲೆಯಂತೆ

ರಚಿಸಲ್ಪಟ್ಟಿದೆ. ಸ್ತಬಕ ವೆಂದರೆ ಹೂಗೊಂಚಲು ಅಥವಾ ಪುಷ್ಪಗುಚ್ಛ ಗ್ರಂಥಕರ್ತರು ಶ್ರೀವೇಂಕಟನಾಥನಿಗೆ ಪುಷ್ಪಮಾಲೆಗಳನ್ನು ಕಟ್ಟಿ ಪ್ರತಿದಿನವೂ ಸಮರ್ಪಿಸುವ ಕೈಂಕರ್ಯವನ್ನು ಮಾಡುತ್ತಿದ್ದುದರಿಂದಲೇ ಏನೋ ಈ ಭಾಷಾಗ್ರಂಥವನ್ನೂ ಸಹ ಏಳು ಕುಸುಮ ಗೊಂಚಲುಗಳಿಂದ ಕಟ್ಟಿದ ಹೂಮಾಲೆಯೆಂದು ಹೇಳಿ ಅದನ್ನು ಆ ಭಗವಂತನಿಗೇ ಅರ್ಪಿಸಿರುತ್ತಾರೆ.

ಇದರಲ್ಲಿ ಭಗವದ್ರಾಮಾನುಜ ಮುನಿವರ್ಯರು ತಿರುಪತಿಗೆ ಬಿಜಯಗೈದು, ಯಾದವರಾಜನ ಸಭೆಯಲ್ಲಿ ವಾದಮಾಡಿದ ಶೈವರುಗಳ ವಾದವನ್ನು ಪುರಾಣಾದಿಗಳಿಂದ, ಸೂಕ್ತವಾದ ಪ್ರಮಾಣಗಳಿಂದ ನಿರಾಕರಿಸಿ, ಶ್ರೀವೇಂಕಟಾಚಲವು ವಿಷ್ಣುಕ್ಷೇತ್ರವೇ ಎಂದೂ, ಶ್ರೀವೇಂಕಟನಾಥನು ಭಗವಾನ್ ಶ್ರೀ ನಾರಾಯಣನೇ ಎಂದೂ ಸ್ಥಿರಪಡಿಸಲ್ಪಟ್ಟ ಇತಿಹಾಸವೂ, ತಿರುಮಲೆಯಲ್ಲಿಯೂ, ಕೆಳಗಿನ ತಿರುಪತಿಯಲ್ಲಿಯೂ ಮಧ್ಯಕಾಲದಲ್ಲಿ ಬಿಟ್ಟು ಹೋಗಿದ್ದ ಪುರಾತನ ಆಚಾರಗಳನ್ನು ಪುನಃ ಪುರಾಣಗ್ರಂಥಗಳನ್ನು ಆಧರಿಸಿ ಸ್ಥಾಪಿಸಿದ ವಿಧಗಳೂ ಅತ್ಯಂತ ತಿಳಿಯಾಗಿ ತಿಳಿಸಲ್ಪಟ್ಟಿವೆ. ಈ ಗ್ರಂಥವನ್ನಾಗಲೀ ಇದರ ಅನುವಾದವನ್ನಾಗಲೀ ಓದುವ ವಾಚಕರುಗಳಿಗೆ ಹಲವಾರು ಸಂದೇಹಗಳು ನಿವೃತ್ತಿಯಾಗುತ್ತವೆ ಎಂಬುವುದರಲ್ಲಿ ಯಾವ ಸಂದೇಹವೂ ಇರುವುದಿಲ್ಲ.

ಈ ಗ್ರಂಥವನ್ನು ರಚಿಸಿದವರು ಶ್ರೀ ಅನಂತಾರ್ಯರು ಎಂಬುವುದು ಒಂದೊಂದು ಸ್ತಬಕದ ಮುಕ್ತಾಯದಲ್ಲಿಯೂ ಕಂಡು ಬರುತ್ತದೆ. ತಿರುಮಲೆ ಅನಂದಾಳ್ವಾನ್‌ರವರೇ ಈ ಗ್ರಂಥವನ್ನು ರಚಿಸಿದರೆಂಬ ಮಾತು ಕರ್ಣಪರಂಪರೆಯಾಗಿ ಕೇಳಿ ಬರುವುದರಿಂದಲೂ, ಹಲವೆಡೆಗಳಲ್ಲಿ ಇವರು ಈ ಗ್ರಂಥದಲ್ಲಿ ರಾಮಾನುಜ ಮುನಿವರ್ಯರಿಂದ 'ಅನಂತಾರ್ಯ'ರೆಂದು ಕರೆಯಲ್ಪಟ್ಟಿರುವುದುರಿಂದಲೂ, ಶ್ರೀ ಶ್ರೀಶೈಲಪೂರ್ಣರೊಂದಿಗೂ ತಮ್ಮ ಆಚಾರ್ಯರಾದ ಶ್ರೀ ರಾಮಾನುಜ ಮುನಿವರ್ಯರೊಂದಿಗೂ ಒಟ್ಟಿಗೆ ಸೇರಿ ಇದ್ದು ಭಗವತ್ಸೇವೆಯನ್ನು ಮಾಡುತ್ತಿದ್ದುದರಿಂದಲೂ, ಇವರು ಯಾದವರಾಜನ ಸಭೆಯಲ್ಲಿ ಶೈವರುಗಳೊಂದಿಗೆ ಶ್ರೀರಾಮಾನುಜರು ವಾದಿಸಿ ಅವರುಗಳನ್ನು ಜಯಿಸಿದಾಗ ಜೊತೆಯಲ್ಲಿಯೇ ಇದ್ದು, ಅವರು ವಾದಿಸಿ ಜಯಿಸಿದ ವಿಧವನ್ನೂ ಮತ್ತು ಕೆಳತಿರುಪತಿ ಮತ್ತು ಮೇಲಿನ ತಿರುಪತಿಯಲ್ಲಿ ಅವರು ನಡೆಸಿದ ಧರ್ಮಕಾರ್ಯಗಳನ್ನು ಮುಂದಿನ ಪೀಳಿಗೆಗೆ ಸೇರಿದ ನಮ್ಮಂಥಹವರು ಆಗ ನಡೆದ ಅದ್ಭುತವಾದ ಈ ವಿಷಯಗಳನ್ನು ತಿಳಿದುಕೊಳ್ಳದೆಯೇ ಇರಬಾರದು ಎಂಬ ಧರ್ಮಚಿಂತನೆಯಿಂದಲೂ ಕರುಣೆಯಿಂದ ಈ ಗ್ರಂಥವನ್ನು ರಚಿಸಿರಬಹುದು ಎಂಬುದನ್ನು ತಿಳಿಯಲು ಸಾಧ್ಯವಾದುದರಿಂಲೂ, ಶ್ರೀ ರಾಮಾನುಜ ಮುನಿವರ್ಯರು ಪರಮಪದಿಸಿದ (ದೇಹತ್ಯಾಗ ಮಾಡಿದ)

ವೃತ್ತಾಂತವನ್ನು ಸೂಚಿಸುವ ಈ ಗ್ರಂಥವು, ತಿರುಮಲೆ ಅನಂದಾಳ್ವಾನ್‌ರವರು ತಮ್ಮ ಪುತ್ರನೊಂದಿಗೆ ತಿರುಮಲೆಯಪ್ಪನಾದ ವೇಂಕಟನಾಥನನ್ನು ಸೇವೆ ಮಾಡಿಕೊಂಡು ಪುಷ್ಪಕೈಂಕರ್ಯಾದಿಗಳನ್ನು ಮಾಡುತ್ತಾ ಇದ್ದರು ಎಂದು ಮಾತ್ರವೇ ತಿಳಿಸಿ ಅವರು ಪರಮಪದಿಸಿದ ವಿಷಯವನ್ನು ಈ ಗ್ರಂಥವು ಸೂಚಿಸದೇ ಇರುವುದರಿಂದಲೂ, ಹೆಚ್ಚು ಕಡಿಮೆ 900 ವರ್ಷಗಳ ಸ್ವಲ್ಪ ಮುಂಚೆ ಅಥವಾ ಹಿಂದೆ ನಡೆದ ಶ್ರೀ ಮಹಾಪೂರ್ಣರು ಶ್ರೀಶೈಲಪೂರ್ಣರು, ಶ್ರೀರಾಮಾನುಜರು, ಶ್ರೀ ಅನಂದಾಳ್ವಾನ್ ಮುಂತಾದವರ ವೃತ್ತಾಂತವಲ್ಲದೇ ಬೇರೆ ಯಾವುದೂ ಕಂಡು ಬಾರದೇ ಇರುವುದರಿಂದಲೂ, - ಈ ಗ್ರಂಥದಲ್ಲಿ ಐದು, ಆರು ಮತ್ತು ಏಳನೆಯ ಸ್ತಬಕಗಳಲ್ಲಿ ಹೇಳಿರುವಂತೆಯೇ-ಶ್ರೀರಂಗ ಕ್ಷೇತ್ರದಿಂದ ಶ್ರೀರಾಮಾನುಜರ ಆಣತಿಯಂತೆಯೇ ತಿರುಮಲೆಗೆ ಬಂದು ಕೆರೆ, ಭಾವಿ, ನಂದನವನ ಮುಂತಾದವುಗಳನ್ನು ತಾವೂ ಮತ್ತು ತಮ್ಮ ಪತ್ನಿ ಮಾತ್ರವೇ ಸೇರಿ ನಿರ್ಮಿಸಿ ಶ್ರೀವೇಂಕಟನಾಥನ ದೇಗುಲದಲ್ಲಿ ಶ್ರೀಯಾಮುನಾಚಾರ್ಯರ ಹೆಸರಿನಿಂದ (ಯಮುನೈತ್ತುರೈವನ್) ಮಂಟಪವನ್ನು ಕಟ್ಟಿಸಿ, ತೋಟದಲ್ಲಿ ಅರಳುವ ಹೂಗಳನ್ನು ಆ ಮಂಟಪಕ್ಕೆ ತಂದು ಮಾಲೆಗಳಾಗಿ ಕಟ್ಟಿ, ಪ್ರತಿನಿತ್ಯವೂ ತಿರುಮಲೆಯಪ್ಪನಿಗೆ ಧಾರಣೆಮಾಡಿಸಿ ಬಂದವರೂ, ಶ್ರೀರಾಮಾನುಜರು ಇಹಲೋಕವನ್ನು ತ್ಯಜಿಸಿ ಪರಮಪದವನ್ನು ಸೇರಿದ ನಂತರ ಅವರ ದಿವ್ಯಮಂಗಳ ವಿಗ್ರಹ (ಅರ್ಚಾವಿಗ್ರಹ)ವನ್ನು ಶ್ರೀನಿವಾಸನ ಅನುಮತಿ ಪಡೆದು ಆತನ ದೇವಸ್ಥಾನದಲ್ಲಿಯೇ ಪ್ರತಿಷ್ಠೆಮಾಡಿಸಿದವರೂ ಆದ ಶ್ರೀ ತಿರುಮಲೆಯ ಆನಂದಾಳ್ವಾನ್ ರವರೇ ಈ ಗ್ರಂಥವನ್ನು ರಚಿಸಿರಬೇಕೆಂದು ಗೊತ್ತಾಗುತ್ತದೆ.

ಈ ಗ್ರಂಥದ ಮೊದಲನೆಯ ಸ್ತಬಕದಲ್ಲಿ- ಶ್ರೀವೇಂಕಟಾಚಲವು ಶ್ರೀ ಮಹಾವಿಷ್ಣುವಿನ ಸ್ಥಳವೇ ಎಂದೂ, ಎರಡನೆಯ ಸ್ತಬಕದಲ್ಲಿ ಸ್ವಾಮಿಪುಷ್ಕರಿಣಿಯು ಶ್ರೀ ವಿಷ್ಣುತೀರ್ಥವೇ ಎಂದೂ, ಮೂರನೆಯ ಸ್ತಬಕದಲ್ಲಿ ಸ್ವಾಮಿಪುಷ್ಕರಿಣಿಯ ದಕ್ಷಿಣ ತಟದಲ್ಲಿರುವ ದೇವನು ಸ್ಕಂದನೂ ಅಲ್ಲ, ಪರಮಶಿವನೂ ಅಲ್ಲ ಮತ್ತು ಹರಿಹರೇಶ್ವರನೂ ಅಲ್ಲವೆಂದೂ, ಸಾಕ್ಷಾತ್ ವಿಷ್ಣುಮೂರ್ತಿಯೇ ಎಂದೂ, ಶ್ರೀ ರಾಮಾನುಜರು ವಿವರಿಸಿದ ವಿಷಯವು ಹೇಳಲ್ಪಟ್ಟಿದೆ. ಇತರ ನಾಲ್ಕು ಸ್ತಬಕಗಳಲ್ಲಿ ಶುಕ್ರವಾರದ ಅಭಿಷೇಕ, ಮೂಲದೇವರ ಊರ್ಧ್ವಪುಂಡ್ರ, ಉತ್ಸವ ಮೂರ್ತಿಯ ತಿಲಕ, ಮೂಲ ದೇವರ ವಕ್ಷಃ ಸ್ಥಳದಲ್ಲಿ ಲಕ್ಷ್ಮೀದೇವಿಯ ಪ್ರತಿಷ್ಠೆ, ಕೆಳ ತಿರುಪತಿಯಲ್ಲಿ ಗೋವಿಂದರಾಜ ದೇವನ ಪ್ರತಿಷ್ಠೆ, ಅವರಿಗೆ ಬಲ ಭಾಗದಲ್ಲಿ ಆಂಡಾಳ್ (ಗೋದಾದೇವಿ)ರ ಪ್ರತಿಷ್ಠೆ, ಶ್ರೀ ಶ್ರೀನಿವಾಸನ

ಗಲ್ಲದಲ್ಲಿ ಪಚ್ಚಕರ್ಪೂರ ಪರಿಮಳ ಲೇಪನ, ಗೋಪುರದಲ್ಲಿ ತೂಗುಹಾಕಿರುವ ಹಾರೆ, ಶ್ರೀಶೈಲಪೂರ್ಣರ ಸಾನ್ನಿಧ್ಯದಲ್ಲಿ ಶ್ರೀರಾಮಾನುಜರು ಶ್ರೀರಾಮಾಯಣದ ರಹಸಾರ್ಥಗಳನ್ನು ತಿಳಿದುಕೊಂಡದ್ದೂ, ಆ ಶ್ರೀಶೈಲಪೂರ್ಣರಿಗೆ ಶ್ರೀನಿವಾಸನು ಬೇಡನಾಗಿ ಸೇವೆಯನ್ನು ಕೊಟ್ಟದ್ದೂ, ಅದೇ ಕಾರಣವಾಗಿ 'ಶೀತಲ ತೀರ್ಥಾಮೃತವನ್ನು ಎದುರುಗೊಳ್ಳುವ ಉತ್ಸವವನ್ನು ಕೊಂಡಾಡುವುದೂ, ತಿರುಮಲೆ ಅನಂದಾಳ್ವಾನ್‌ರ ಚರಿತ್ರೆ, ತಿರುಮಲೆಯಲ್ಲಿ ಭಕ್ತಜನರುಗಳು ಅನುಸರಿನಬೇಕಾದ ಶಿಷ್ಟಾಚಾರಗಳೂ, ಕೈಂಕರ್ಯಮಾಡುವುದಕ್ಕಾಗಿ ಜೀಯರ್ ಸ್ವಾಮಿಗಳನ್ನೂ ಅವರಿಗೆ ಸಹಾಯಕರುಗಳಾಗಿ ಏಕಾಂಗಿಗಳನ್ನೂ ನಿಯಮಿಸಿದುದು, ತಿರುಮಲೆಯಲ್ಲಿ ರಾಮಾನುಜರ ವಿಗ್ರಹ ಪ್ರತಿಷ್ಠೆ ಮುಂತಾದ ನಾವುಗಳು ಅವಶ್ಯಕವಾಗಿ ತಿಳಿದುಕೊಳ್ಳಬೇಕಾದ ಹಲವು ವಿಷಯಗಳು ತಿಳಿಸಲ್ಪಟ್ಟಿವೆ.

ಈ ಗ್ರಂಥದ ಆಂಗ್ಲಭಾಷೆಯ ಸಂಗ್ರಹಾನುವಾದವನ್ನು ಟಿ.ಟಿ.ಡಿ. ಕಮೀಷನರ್ ಶ್ರೀ ಎ. ರಂಗನಾಥ ಮುದಲಿಯಾರ್ ಬಿ.ಎ., ಬಿ.ಎಲ್ ಅವರಕಾಲದಲ್ಲಿ, ರಾಜಸೇವಾಸಕ್ತ, ದಿವಾನ್ ಬಹದ್ದೂರ್, ಡಾಕ್ಟರ್ ಶ್ರೀ ಎಸ್. ಕೃಷ್ಣಸ್ವಾಮಿ ಅಯ್ಯಂಗಾರ್, ಎಂ.ಎ., ಪಿ.ಎಚ್‌ಡಿ. ಅವರು ಮಾಡಿರುತ್ತಾರೆ.

ಈಗ ಈ ಗ್ರಂಥದ ಕನ್ನಡ ಅನುವಾದವನ್ನು ದಾಸನು ತಮ್ಮ ಮುಂದಿಟ್ಟಿರುತ್ತೇನೆ. ಇದನ್ನು ಕನ್ನಡ ಭಾಷೆಯಲ್ಲಿ ಅನುವಾದ ಮಾಡಲು ಪ್ರೋತ್ಸಾಹಿಸಿ, ತಾವು ಮಾಡಿದ ತಮಿಳು ಭಾಷಾಂತರ ಗ್ರಂಥವನ್ನು ದಾಸನಿಗೆ ಕೊಟ್ಟುದುದೂ ಅಲ್ಲದೆ, ಆ ಗ್ರಂಥವನ್ನು ಉಪಯೋಗಿಸಿಯೇ ಅನುವಾದ ಮಾಡಲು ಅವಕಾಶವನ್ನು ಕೊಟ್ಟ, ನನ್ನ ಹತ್ತಿರದ ಸಂಬಂಧಿಯೂ, ಸ್ನೇಹಿತರೂ, ಮಾರ್ಗದರ್ಶಕರೂ ಆಗಿರುವ ತಿರುಪತಿ ಶ್ರೀವೇಂಕಟೇಶ್ವರ ಓರಿಯಂಟಲ್ ಕಾಲೇಜಿನ ತರ್ಕಶಾಸ್ತ್ರ ಪ್ರಾಧ್ಯಾಪಕರೂ, (ನಿವೃತ್ತ), ಉಭಯ ವೇದಾಂತಗಳಲ್ಲಿ ನಿಷ್ಣಾತರೂ, ನಮ್ಮ ತಿರುಮಲೈ ಅನಂದಾಳ್ವಾನ್‌ರವರ ವಂಶಕ್ಕೆ ತಿಲಕಪ್ರಾಯರಾಗಿರುವ ಶ್ರೀ ಟಿ.ಎ. ಕೃಷ್ಣಮಾಚಾರ್ಯ ಸ್ವಾಮಿಯವರ ಪೂರ್ಣವಾದ ಆಶೀರ್ವಾದದೊಂದಿಗೂ, ಶ್ರೀವೇಂಕಟಾಚಲಾಧೀಶನಾದ, ನನ್ನ ದೇವನ ಕೃಪೆಯಿಂದಲೂ, ದಾಸನ ವಂಶದ ಮೂಲ ಪುರುಷರೂ, ಶ್ರೀ ಭಗವದ್ರಾಮಾನುಜರು ನಿಯಮಿಸಿದ 74 ಸಿಂಹಾಸನಾಧಿಪತಿಗಳಲ್ಲಿ ಒಬ್ಬರಾದ ತಿರುಮಲೈ ಅನಂದಾಳ್ವಾನ್‌ರವರ ಕೃಪೆಯಿಂದಲೂ ಈ ಒಂದು ಮಹತ್ಕಾರ್ಯವು ನಡೆದುದು ದಾಸನಾದ ನನ್ನ ಸೌಭಾಗ್ಯ.

ಮತ್ತೊಂದು ಮುಖ್ಯವಾದ ಸಂಗತಿಯೇನೆಂದರೆ, ಶ್ರೀ ತಿರುಮಲೈ ಅನಂದಾಳ್ವಾನ್‌ರವರು ನಮ್ಮ ಕರ್ನಾಟಕದವರು ಎಂದರೆ ಆಶ್ಚರ್ಯಪಡಬೇಕಲ್ಲವೇ? ಇದು ನಿಜ. ಶ್ರೀ ಅನಂದಾಳ್ವಾನ್ (ಅನಂತಾರ್ಯರು)

ಅವತರಿಸಿದ ಸ್ಥಳವು ಮಂಡ್ಯ ಜಿಲ್ಲೆಗೆ ಸೇರಿದ ಶ್ರೀರಂಗಪಟ್ಟಣದ ಸಮೀಪವಿರುವ ಹಳೆಯ ಕಿರಂಗೂರು ಗ್ರಾಮ. ಇವರು ಅವತರಿಸಿದ ಪ್ರದೇಶವನ್ನು ಈಗಲೀಗ ''ಶ್ರೀ ತಿರುವನಂದಾಳ್ವಾರ್‌ಸನ್ನಿಧಿ ಟ್ರಸ್ಟ್ (ರಿ)''ನವರು ತಮ್ಮ ವಶಕ್ಕೆ ತೆಗೆದು ಕೊಂಡು, ಅಲ್ಲಿ ಆಲಯನಿರ್ಮಾಣ, ನಂದನವನ ನಿರ್ಮಾಣ, ಒಂದು ಸಮುದಾಯ ಭವನ ನಿರ್ಮಾಣ ಮುಂತಾದ ಕಾರ್ಯಗಳನ್ನು ನಡೆಸಲು ಏರ್ಪಾಟುಗಳನ್ನು ಮಾಡುತ್ತಿದಾರೆ.

ಶ್ರೀ ತಿರುಮಲೆ ತಿರುಪತಿ ದೇವಸ್ಥಾನದವರು ಈ ಪುಸ್ತಕವನ್ನು ಮುದ್ರಿಸಿ ಪ್ರಚುರ ಪಡಿಸಲು ಉದಾರವಾಗಿ ಸಹಾಯ ಧನವನ್ನು ನೀಡಿರುತ್ತಾರೆ. ಅವರಿಗೆ ದಾಸನ ಅನಂತವಾದ ಕೃತಜ್ಞತೆಗಳು. ಮೇಲೂ ಅವರುಗಳಿಂದ ಇಂಥಹ ಕೆಲಸಗಳು ಇನ್ನೂ ಚೆನ್ನಾಗಿ ನಡೆಯಲಿ ಎಂದು ಹಾರೈಸುತ್ತೇನೆ. ಮುದ್ರಣಕ್ಕಾಗುವ ಖರ್ಚು ಇನ್ನೂ ಬಹಳವಾಗಿದ್ದಾಗ ಮತ್ತು ಯಾವರೀತಿ ಈ ಖರ್ಚನ್ನು ನಿಭಾಯಿಸುವುದು ಎಂದು ಕಳವಳಗೊಂಡಿರುವಾಗ, ನನ್ನ ಚಿಕ್ಕಪ್ಪನವರಾದ ಶ್ರೀಮಾನ್ ಟಿ.ಎ ಕೇಶವಾಚಾರ್ಯರು ಮತ್ತು ನನ್ನ ಹತ್ತಿರದ ಸಂಬಂಧಿ ಮತ್ತು ಮಿತ್ರರಾದ ಶ್ರೀ ಎ.ಅನಂತಾಚಾರ್ಯರು ಇಬ್ಬರೂ ನನಗೆ ಧೈರ್ಯವನ್ನು ಕೊಟ್ಟುದುದೇ ಅಲ್ಲದೆ, ದಾಸನ ಅನೇಕ ಬಂಧು ಮಿತ್ರರಲ್ಲಿ ಈ ವಿಷಯವನ್ನು ತಿಳಿಸಿ ಅವರುಗಳಿಂದ ಈ ಕಾರ್ಯಕ್ಕೆ ಧನ ಸಂಗ್ರಹವಾಗುಂತೆ ಸಹಾಯ ಮಾಡಿರುತ್ತಾರೆ.

ಈ ಮಹಾನ್ ಕಾರ್ಯಕ್ಕೆ ಪ್ರೋತ್ಸಾಹ ನೀಡಿ ಧನಸಹಾಯ ಮಾಡಿರುವವರನ್ನು ಹೆಸರಿಸಿ ದಾಸನು ಕೃತಜ್ಞತೆಗಳನ್ನು ಸಲ್ಲಿಸದಿದ್ದಲ್ಲಿ ಕೃತಘ್ನನಾಗುತ್ತೇನೆ. ಈ ಕಾರ್ಯಕ್ಕೆ ಧನಸಹಾಯ ಮಾಡಿರುವ ಶ್ರೀ ಟಿ.ಎ. ಕೇಶವಾಚಾರ್ಯರು, ಶ್ರೀ ಡಿ.ಎಸ್. ಗೋಪೀನಾಥ್‌ರವರು, ಶ್ರೀ ಟಿ.ಎ. ಸಂಪತ್ಕುಮಾರಾಚಾರ್ಯರು, ಶ್ರೀ ಟಿ.ಎ.ನಾರಾಯಣ ಅಯ್ಯಂಗಾರ್ ಮತ್ತು ಶ್ರೀಮತಿ ಪುಷ್ಪಾನಾರಾಯಣ ಅಯ್ಯಂಗಾರ್ ಶ್ರೀ ಟಿ.ಎ. ವೇಣುಗೋಪಾಲಾಚಾರ್, ಶ್ರೀ ಟಿ.ಎ. ಪಾರ್ಥಸಾರಥಿ, ಶ್ರೀ ಟಿ.ಎ. ಪುರುಷೋತ್ತಮನ್, ಶ್ರೀ ಎಸ್.ಎ. ರಾಮಾನುಜಂ, ಶ್ರೀ ಪಿ.ಆರ್. ರಂಗಾಚಾರ್, ಶ್ರೀಗುರುಶೇಖರ್ ಮತ್ತು ಶ್ರೀಮತಿ ವೀಣಾ. ದಾಸನ ಸಹೋದರ ಶ್ರೀ ಟಿ.ಎಸ್. ರಾಮನ್ ಮತ್ತು ಆತನ ಪತ್ನಿ ಸೌ. ಇಂದಿರಾರಾಮನ್, ದಾಸನ ಸಹೋದರಿಯರಾದ ಶ್ರೀಮತಿ ಜಯಲಕ್ಷ್ಮೀಶ್ರೀನಿವಾಸನ್ ಮತ್ತು ಶ್ರೀಮತಿ ಕಮಲಾವೆಂಕಟೇಶನ್, ಹಿರಿಯ ಸಹೋದರಿಯ ಪುತ್ರ ಚಿ. ಎಸ್. ಮಣಿವಣ್ಣನ್, ಕಿರಿಯ ಸಹೋದರಿಯ ಪುತ್ರಿ. ಚಿ.ಸೌ. ಶ್ರೀದೇವಿ ವೇಂಕಟೇಶನ್, ದಾಸನ ಚಿಕ್ಕಪ್ಪನವರ ಮೊಮ್ಮಗ ಚಿ.ಟಿ. ಎ. ಶ್ರೀನಿಧಿ (ಕಾಂಚೀಪುರ) ಇವರೆಲ್ಲರಿಗೂ

ದೇವಾಧಿದೇವನಾದ ಶ್ರೀವೇಂಕಟಾಚಲಾಧೀಶನು ಸನ್ಮಂಗಳವನ್ನುಂಟುಮಾಡಲಿ ಎಂದು ಹಾರೈಸುತ್ತೇನೆ.

ಇವರೆಲ್ಲರ ಧನ ಸಹಾಯವು ಒದಗಿಬಂದಾಗಲೂ ಸಹ ಕೊರತೆ ಬಂದ ಧನವನ್ನು ದಾಸನ ಇಬ್ಬರು ಪುತ್ರರಾದ ಚಿ.ಟಿ.ಎಸ್. ಶೇಷಾದ್ರಿ ಮತ್ತು ಚಿ.ಟಿ.ಎಸ್. ಶ್ರೀನಿಧಿ, ದಾಸನ ಇಬ್ಬರು ಜಾಮಾತೃಗಳಾದ ಶ್ರೀ ರತ್ನಂ ಶೇಷಾದ್ರಿ ಮತ್ತು ಶ್ರೀ ಎ.ವಿ. ಶ್ರೀನಾಥ್, ದಾಸನ ಇಬ್ಬರು ಪುತ್ರಿಯರಾದ ಚಿ. ಸೌ. ಚಂದ್ರಾಶೇಷಾದ್ರಿ ಮತ್ತು ಚಿ.ಸೌ.ಜಯಶ್ರೀ ಶ್ರೀನಾಥ್‌ರವರುಗಳೂ, ದಾಸನ ಪತ್ನಿ ಸೌ.ಲಕ್ಷ್ಮೀಶಲ್ಲಪ್ಪನ್, ಇವರೆಲ್ಲರೂ ತುಂಬಿಸಿಕೊಟ್ಟಿರುತ್ತಾರೆ. ಇವರೆಲ್ಲರಿಗೂ ಆ ಶೇಷಾದ್ರಿವಾಸನು ಸನ್ಮಂಗಳವನ್ನುಂಟುಮಾಡಲಿ ಎಂದು ಪ್ರಾರ್ಥಿಸುತ್ತೇನೆ.

ಈ ಕೃತಿಯನ್ನು ಮುದ್ರಿಸುವುದಕ್ಕೆ ಮುಂಚೆ, ತಿರುಮಲೆ, ತಿರುಪತಿ ದೇವಸ್ಥಾನದವರೊಡನೆ ಸಂಪರ್ಕಿಸಲು, ಕೈಬರಹ ಪ್ರತಿಯನ್ನು ಅವರಲ್ಲಿ ಒಪ್ಪಿಸಲು ಮತ್ತು ಇತರ ವ್ಯವಹಾರಗಳನ್ನು ಅವರೊಡನೆ ದಾಸನಿಗಾಗಿ ನೆರವೇರಿಸಿದ ದಾಸನ ಹತ್ತಿರದ ಬಂಧುವಾದ ಶ್ರೀಮಾನ್ ಉ.ವೇ. ವಿದ್ವಾನ್ ಡಾಕ್ಟರ್. ಕೆ.ಕೆ. ಎ. ರಂಗರಾಜನ್ (ಶ್ರೀವೇಂಕಟೇಶ್ವರ ವಿಶ್ವವಿದ್ಯಾನಿಲಯ, ತಿರುಪತಿ) ಬಹಳಷ್ಟು ಸಹಾಯ ಮಾಡಿರುತ್ತಾರೆ. ಇದರ ಮುದ್ರಣ ಕೆಲಸದಲ್ಲಿ ಪ್ರೂಫ್, ತಿದ್ದುವಕೆಲಸಕ್ಕೆ ದಾಸನ ಸೊಸೆ ಚಿ.ಸೌ. ವಸಂತಾ ಶೇಷಾದ್ರಿಯು ಬಹಳ ಸಹಾಯ ಮಾಡಿರುತ್ತಾಳೆ. ಇವರೆಲ್ಲರಿಗೂ ಸಹ ಶ್ರೀನಿವಾಸನು ಸನ್ಮಂಗಳವನ್ನುಂಟು ಮಾಡಲಿ ಎಂದು ಪ್ರಾರ್ಥಿಸುತ್ತೇನೆ.

ಕೊನೆಯದಾಗಿ ಈ ಪುಸ್ತಕವನ್ನು ಅಂದವಾಗಿ ಮುದ್ರಿಸಿಕೊಟ್ಟ ಬೆಂಗಳೂರಿನ ವಿಶ್ವಲನಗರದ ಸಮೃದ್ಧ ಆಫ್‌ಸೆಟ್ ಪ್ರಿಂಟರ್ಸ್‌ನ ಮಾಲೀಕರಾದ ಶ್ರೀ ರಾಘವೇಂದ್ರರವರಿಗೂ ಮತ್ತು ಸಿಬ್ಬಂದಿವರ್ಗದವರಿಗೂ ದಾಸನು ಕೃತಜ್ಞತೆಗಳನ್ನು ಸಲ್ಲಿಸುತ್ತಾನೆ. ಭಗವಂತನು ಅವರೆಲ್ಲರಿಗೂ ಒಳಿತುಮಾಡಲಿ ಎಂದು ಪ್ರಾರ್ಥಿಸುತ್ತೇನೆ.

ತಿ.ಅ. ಅಕ್ಕಾರಕ್ಕನಿ ಸಂಪತ್ಕುಮಾರ ದಾಸ
(ಟಿ.ಎಸ್.ಶಲ್ಲಪ್ಪನ್)

ಆಲಂಗೂರ್ ಗ್ರೂವ್ಸ್ ಅಪಾರ್ಟ್‌ಮೆಂಟ್ಸ್
23ನೇ ಮುಖ್ಯರಸ್ತೆ 16ನೇ ಅಡ್ಡರಸ್ತೆ ಜೆ.ಪಿ. ನಗರ (5ನೆಯ ಹಂತ)
ಬೆಂಗಳೂರು - 560078 Phone : 6592620

## ವಿಷಯಾನುಕ್ರಮಣಿಕೆ.

ಶ್ರೀ ಅನಂತಾರ್ಯರು ವಿರಚಿಸಿದ ಸಂಸ್ಕೃತಭಾಷೆಯ
''ಶ್ರೀ ವೇಂಕಟಾಚಲೇತಿಹಾಸಮಾಲಾ'' ಗ್ರಂಥದ ಕನ್ನಡ ಅನುವಾದ

ಶ್ರೀ ಶ್ರೀನಿವಾಸ ಪರಬ್ರಹ್ಮಣೇ ನಮಃ
ಶ್ರಿಯೈ ಶ್ರೀ ಪದ್ಮಾವತ್ಯೈ ನಮಃ
ಶ್ರೀಮತೇ ವಿಷ್ವಕ್ಸೇನಾಯ ನಮಃ
ಶ್ರೀಮತೇ ರಾಮಾನುಜಾಯ ನಮಃ

# ಮೊದಲನೆಯ ಪುಷ್ಪ ಗುಚ್ಛ

ಹಣೆಯಲ್ಲಿ ಪಚ್ಚಕರ್ಪೂರದ ಊರ್ಧ್ವಪುಂಡ್ರ (ನಾಮ), ಶಿರಸ್ಸಿನಲ್ಲಿ ಸೊಂಪಾಗಿರುವ ಕೇಶರಾಶಿಯನ್ನು ಬಿಟ್ಟಿರಲಾರದ ಮಕುಟ (ಕಿರೀಟ), ಅಂದವಾದ ನಾಸಿಕ, ಕರ್ಣಗಳಲ್ಲಿ ಧರಿಸಿರುವ ಮಕರ ಕುಂಡಲಗಳ ತೇಜಸ್ಸಿನಿಂದ ಹೊಳೆಯುತ್ತಿರುವ ಸುಂದರ ಕಪೋಲಗಳು (ಕೆನ್ನೆಗಳು), ಕಳಿತ ತೊಂಡೆಹಣ್ಣಿನಂತೆ ಕೆಂಪಾದ ಅಧರಗಳು (ತುಟಿಗಳು), ಕರುಣೆ ತುಂಬಿದ ದೀರ್ಘವಾದ ಓರೆ ನೋಟವು, ಇವುಗಳಿಂದ ಕೂಡಿದ ಶ್ರೀವೇಂಕಟೇಶ್ವರನ ಶ್ರೀ ಮುಖಮಂಡಲವು ದಾಸನ ಮನಸ್ಸಿನಲ್ಲಿ (ಹೃದಯದಲ್ಲಿ) ಎಂದೂ ಮರೆಯದಂತಿರಲು ಅನುಗ್ರಹವು ಉಂಟಾಗಲಿ.

ಶ್ರೀವೇಂಕಟಗಿರಿಯ ಬಗ್ಗೆ, ಕಲಿಯುಗದಲ್ಲಿ ನಡೆದ ಪುಣ್ಯವಾದ ಚರಿತ್ರೆಗಳೆಂಬ, ಸುವಾಸನೆಯಿಂದ ಕೂಡಿದ, ಒಳ್ಳೆಯ ಪುಷ್ಪಗಳನ್ನು ಕೊಂಡು ''ಶ್ರೀವೇಂಕಟಾಚಲ ಇತಿಹಾಸ ಮಾಲೆ'' ಎಂಬ ಅಂದವಾದ ಗ್ರಂಥಮಾಲೆಯನ್ನು ದಾಸನು ಕಟ್ಟುತ್ತೇನೆ. ಶ್ರೀಮಹಾಲಕ್ಷ್ಮಿಯನ್ನು ಬಿಟ್ಟಿರಲಾರದ ಹರಿಯೂ, ಆ ಹರಿಯಲ್ಲಿ ಪ್ರೇಮವನ್ನಿಟ್ಟಿರುವ ದಾಸವರ್ಗಗಳೂ, ಈ ಮಾಲೆಯನ್ನು ತಮ್ಮ ವಕ್ಷಸ್ಥಳದಲ್ಲಿಯೂ, ಹೃದಯ (ಮನಸ್ಸು)ದಲ್ಲಿಯೂ, ಧರಿಸಿಕೊಂಡು ಕೃಪೆ ಮಾಡುವವರಾಗಲಿ.

ಶ್ರೀ ಮಹಾಲಕ್ಷ್ಮಿಯ ಪತಿಯಾದವನೂ, ಶ್ರೀ ವೈಕುಂಠದಲ್ಲಿ ವಿರಾಜಿಸುವವನೂ (ಇವುಗಳಿಂದ) ಮಿಗಿಲಾದ -ಇದಕ್ಕಿಂತಲೂ ಹೆಚ್ಚಿನ ಮಿಗಿಲಿಲ್ಲದ, ಆನಂದದಿಂದ ಕೂಡಿದವನೂ, ಎಲ್ಲರನ್ನೂ ತನ್ನ ಅಂಗೈಯಲ್ಲಿಟ್ಟುಕ್ಕೊಂಡು ಆಳುವವನೂ, ಸೀಮಾತೀತವಾದ (ಎಲ್ಲೆಯೇ ಇಲ್ಲದ) ಕರುಣೆಯನ್ನೇ ತನ್ನ ಸ್ವಭಾವವನ್ನಾಗಿ ಉಳ್ಳವನೂ ಆದ ಭಗವಂತನು, ಅನವರತವಾಗಿ ತನಗೆ ಸೇವೆಮಾಡಿ ಆನಂದಪಡುವುದರ ಬಗ್ಗೆ ಅರಿಯದೇ ಇರುವ, ಅತಿ ಕ್ರೂರವಾದುದೂ, ನಾಶಮಾಡಲಾಗದ ದುಃಖಗಳಿಗೆ ಆಸರೆಯಾಗಿರುವ ಈ ಸಂಸಾರವೆಂಬ (ಜನನ ಮರಣಗಳು ಉಂಟಾಗುತ್ತಲೇ ಇರುವ) ಸಾಗರದಲ್ಲಿ ಮೇಲಿಂದ ಮೇಲೆ ಮುಳುಗಿ ಏಳುವುದರಲ್ಲೇ ಅಭಿಪ್ರಾಯವನ್ನು ಹೊಂದಿ ಎಷ್ಟು ದಿನಗಳು ಕಳೆದಾಗಲೂ ಈ ಸಾಗರವನ್ನು ದಾಟಿ ಹೊರಬರಲು ದಾರಿಗಾಣದೆ ತೊಳಲುತ್ತಿರುವ ಜೀವಗಳನ್ನು, ತಮ್ಮ ತಾವರೆ ಹೂವಿನಂತಿರುವ ಪಾದಗಳಲ್ಲಿ ಶರಣಾಗುವಂತೆ ತೋರಿಸಿ, ಎತ್ತಿ ಹಿಡಿದು, ಇವರುಗಳನ್ನು ಉಜ್ಜೀವನ ಗೊಳಿಸಲು ಇಷ್ಟಪಟ್ಟು, ಶ್ರೀ ವೈಕುಂಠವನ್ನು ಬಿಟ್ಟು ಬಹಳ ದೂರವಾದ ಈ ಪ್ರಪಂಚಕ್ಕೆ (ಭೂಲೋಕಕ್ಕೆ) ಬಿಜಯ ಮಾಡಿಸಿ, ಶ್ರೀವೇಂಕಟಗಿರಿಯಲ್ಲಿ ಅರ್ಚಾರೂಪಿಯಾಗಿ (ಪೂಜಿಸಲ್ಪಡುವ ಮೂರ್ತಿಯಾಗಿ) ಅಗಲದಂತೆ ಬಂದಿದ್ದು, ಪರಮಕರುಣೆಯಿಂದ, ತನ್ನ ಬಲಗೈಯಿಂದ ಎಲ್ಲರನ್ನೂ ತನ್ನ ಅಡಿದಾವರೆಗಳಲ್ಲಿ ಶರಣಾಗತಿ ಮಾಡುವಂತೆ ತೋರಿಸುತ್ತಲೂ, ಮೊಣಕಾಲಿನ ಬಳಿ ಇಟ್ಟಿರುವ ತನ್ನ ಎಡಗೈಯಿಂದ, ತನ್ನಲ್ಲಿ ಶರಣಾದವರೆಲ್ಲರಿಗೂ ಈ ಸಂಸಾರ ಸಾಗರವನ್ನು ಕೇವಲ ಮೊಣಗಾಲಿನಷ್ಟಕ್ಕೇ ಬತ್ತಿಸುವುದೆಂದೂ ಎಂಬುದನ್ನು ವಿವರಿಸುತ್ತಲೂ ಎಲ್ಲ ಜೀವಿಗಳ (ಈ ಪ್ರಾಪಂಚಿಕ) ದೃಷ್ಟಿಗೂ ಗೋಚರನಾಗಿ ಕಂಡುಬರುತ್ತಿದಾನೆ ಎಂಬುದು ಎಲ್ಲರೂ ಅರಿತಿರುವ ವಿಷಯವಲ್ಲವೇ!

ಈಗಿರುವ ಬ್ರಹ್ಮದೇವನ ಆಯುಷ್ಯದಲ್ಲಿ ಹಿಂದಿನ ಅರ್ಧಭಾಗದಲ್ಲಿ ಮೊದಲನೆಯದಾದ ಶ್ವೇತವರಾಹ ಕಲ್ಪದಲ್ಲಿ, ಏಳನೆಯದಾದ ವೈವಸ್ವತ ಮನುವಿನ ಅಧಿಕಾರ ಕಾಲದಲ್ಲಿ, ಹದಿನೆಂಟನೆಯದಾದ ಈ ಮಹಾಯುಗದಲ್ಲಿ, ಕಲಿಯುಗದ ಪ್ರಾರಂಭದಲ್ಲಿ ನೈಮಿಶಾರಣ್ಯ ಕ್ಷೇತ್ರದಲ್ಲಿ ದೀರ್ಘಸತ್ರವೆಂಬ ಒಂದು ದೊಡ್ಡ ಮಹಾಯಜ್ಞ (ಯಾಗ)ವು ನಡೆದಂಥಹ ಕಾಲದಲ್ಲಿ, ಮಹರ್ಷಿಗಳು ಗುಂಪು ಗುಂಪಾಗಿ ಕೂಡಿದ್ದ ಸಮಯದಲ್ಲಿ, ಎಲ್ಲ ಇತಿಹಾಸ ಪುರಾಣಗಳಲ್ಲಿರುವ ವಿಷಯಗಳನ್ನು ಚೆನ್ನಾಗಿ ಅರಿತವರಾದವರೂ, ಭಗವದ್ವೇದ ವ್ಯಾಸರ ಶಿಷ್ಯರೂ, ರೋಮಹರ್ಷಣರ ಪುತ್ರರೂ ಆದ ಸೂತಮಹಾಮುನಿಗಳು, ತಾವು ಅರಿತ ಇತಿಹಾಸಪುರಾಣಾದಿಗಳ ಅರ್ಥಗಳೆಲ್ಲವನ್ನೂ ತಿಳಿಸಲು ಆಸೆಗೊಂಡು,

ಶ್ರೀವೇಂಕಟಗಿರಿಯ ಪವಿತ್ರವಾದ ಚರಿತ್ರೆಗಳನ್ನು ಹೇಳುತ್ತಾ ಭವಿಷ್ಯದಲ್ಲಿ ಶ್ರೀವೇಂಕಟಾಚಲ ಇತಿಹಾಸಗಳಲ್ಲಿ, ಭೂತಕಾಲದ ಶ್ರೀವೇಂಕಟಾಚಲದ ಇತಿಹಾಸಗಳಿಗೆ ನಿದರ್ಶನವಾಗಿ ಕೆಲವು ವಿಷಯಗಳನ್ನು ವಿಸ್ತಾರವಾಗಿಯೂ, ಕೆಲವನ್ನು ಸಂಕ್ಷಿಪ್ತವಾಗಿಯೂ ಹೇಳಿರುತ್ತಾರೆ, ಅವುಗಳ ನಂತರ, ಈ ಕಲಿಯುಗದಲ್ಲಿ ನಡೆದ ಕೆಲವು ವಿಶೇಷವಾದ ಚರಿತ್ರೆಗಳು ಈ ಗ್ರಂಥದಲ್ಲಿ ಹೇಳಲ್ಪಟ್ಟಿದೆ.

ಪುರಾಣವಚನದಿಂದ, ಮುಂಚೆಯೇ ಭವಿಷ್ಯದಲ್ಲಿ ಅವತರಿಸುತ್ತಾನೆ ಎಂದು ತಿಳಿಯಲ್ಪಟ್ಟವನೂ, ತೊಂಡೆಮಾನ್ ಚಕ್ರವರ್ತಿಯೆಂದು ಪ್ರಸಿದ್ಧಿ ಹೊಂದಿದವನೂ, ಶ್ರೀ ಶ್ರೀನಿವಾಸನ ಪರಮ ಭಕ್ತನೂ ಆಗಿದ್ದ ಒಬ್ಬ ಮಹಾರಾಜನು - ಈ ಕಲಿಯುಗದಲ್ಲಿ ವಿಕ್ರಮಾದಿತ್ಯನೇ ಮುಂತಾದ ಶಕಪುರುಷರುಗಳ ನಂತರ, ಈ ಕಾಲಕ್ಕೆ ಸ್ವಲ್ಪ ಮುಂಚೆ, ಜೀವಿಸಿದ್ದನು.

ತನ್ನಿಂದ ಸಹಿಸಲಾರದ ಶತ್ರುಗಳ ಸೇನೆಯನ್ನು ನಾಶಮಾಡಲು ಆಸೆಗೊಂಡ ಆ ರಾಜನಿಗೆ ಪರಮದಯಾಳುವಾದ ಭಗವಾನ್ ವೇಂಕಟನಾಥನು ತನ್ನದೇ ಆದ (ತನಗೆ ಮಾತ್ರವೇ ಸೇರಿದ) ಶಂಖ ಮತ್ತು ಚಕ್ರಾಯುಧಗಳನ್ನು ಕೊಟ್ಟು ಬಿಟ್ಟು, ಅಂದಿನಿಂದ ಅಂಥಹ ತನ್ನ ದಾನ ಮಾಡುವ ಶ್ರೇಷ್ಠಗುಣವನ್ನು ಪ್ರಸಿದ್ಧಪಡಿಸಿ, ಅದರಿಂದ ಪ್ರಪಂಚದ ಜನರನ್ನು ತನ್ನ ವಶಕ್ಕೆ ಸೇರಿಸಿಕೊಳ್ಳುವುದಕ್ಕಾಗಿ, ಶಂಖ ಚಕ್ರಗಳನ್ನು ಧರಿಸದೆಯೇ ಕೆಲವು ದಿನಗಳು ಕಂಡು ಬಂದನು.

ಆಗ ಭೂಮಂಡಲದಲ್ಲಿ ಎಲ್ಲಾ ಜಾಗಗಳಲ್ಲಿಯೂ ಹರಡಿದ ಕಲಿ ಪುರುಷನ ಅತ್ಯಂತ ಕ್ರೂರತೆಯಿಂದಾಗಿ, ವರ್ಣಾಶ್ರಮ ಧರ್ಮಗಳು ಹೆಚ್ಚುಕಡಿಮೆ ನಾಶವಾಗಿಯೂ, ವಿಷ್ಣುವಿನ ಆಲಯಗಳು ಒಡೆದು ಹಾಕಲ್ಪಟ್ಟೂ, ಅರಸರುಗಳು ಪಾಪ ಕೆಲಸಗಳಲ್ಲಿ ಆಸೆಗೊಂಡವರಾಗಿಯೂ, ಜನರು ವೇದವನ್ನು ನಿಂದಿಸುವವರಾಗಿಯೂ, ಎಲ್ಲಾ ಜಾಗಗಳಲ್ಲಿಯೂ ಧರ್ಮವು ಹಾಳಾಗುತ್ತಲೂ ಇರುವಾಗ, ಅಪಾರ ಕರುಣಾ ಸಮುದ್ರನಾದ ಶ್ರೀಮನ್ನಾರಾಯಣನು ಧರ್ಮನಾಶವನ್ನು ಸಹಿಸಲಾರದೆ, ಒಂದು ಕಾಲದಲ್ಲಿ ತನ್ನ ಅಂತರಂಗ ದಾಸನಾದ ತನಗೆ ಹಾಸಿಗೆಯೂ ಆದ ಅನಂತನನ್ನು (ಆದಿಶೇಷನನ್ನು) ಕರೆದು "ನೀನು ಭೂಮಂಡಲದಲ್ಲಿ, ಅವತಾರ ಮಾಡಿ ವರ್ಣಾಶ್ರಮ ಧರ್ಮಗಳೆಲ್ಲವನ್ನೂ ಸ್ಥಿರ ಪಡಿಸಿ, ವೇದವನ್ನು ನಿಂದಿಸುವವರೂ ಅದಕ್ಕೆ ತಪ್ಪಾದ ಅರ್ಥವನ್ನು ಹೇಳುವವರೂ ಆದ ಪಾಷಂಡಿಗಳನ್ನು ಜಯಿಸಿ, ಓಡಿಸಿ, ಪರಮಪಾವನವಾದ ಪರಮ ವೈಷ್ಣವ ಧರ್ಮವನ್ನು ಹುಲುಸಾಗಿ ಬೆಳೆಯುವಂತೆ ಮಾಡಿ, ಹಿಂದಿನಂತೆಯೇ ಶ್ರೀವಿಷ್ಣು ದೇವಾಲಯಗಳಲ್ಲಿ ಯಾವಾಗಲೂ, ಎಲ್ಲಾ ವಿಧವಾದ ಪೂಜೆಗಳೂ, ನಡೆಯುವಂತೆ ಸ್ಥಾಪನೆ ಮಾಡಿ, ಪ್ರಪಂಚವೆಲ್ಲವನ್ನೂ ತಕ್ಕ ರೀತಿಯಲ್ಲಿ ಕಾಪಾಡುವವನಾಗು" ಎಂದು ಆಜ್ಞಾಪಿಸಿದನು.

ಅಂತೆಯೇ ಭಗವಂತನಿಂದ ಕಟ್ಟಳೆಯಿಡಲ್ಪಟ್ಟ ಆದಿಶೇಷನು, ಭೂಮಂಡಲದಲ್ಲಿ ವರ್ಣಾಶ್ರಮ ಧರ್ಮ ನೀತಿಯು ಸ್ವಲ್ಪವೇ ಮಿಕ್ಕುಳಿದ ತಮಿಳು ನಾಡಿನಲ್ಲಿ ತೊಂಡೆಮಂಡಲದಲ್ಲಿ ಪಾಲಾರ್ ಎಂದು ಕರೆಯಲ್ಪಡುವ ನದಿಯ ಪಕ್ಕದಲ್ಲಿ ಇರುವ ಶ್ರೀಪೆರುಂಬೂದೂರಿನಲ್ಲಿ, ಕಲಿಯುಗ ೪೧೧೮ ಶಾಲಿವಾಹನ ಶಕ೯೩೯ ವರ್ಷಗಳು ಕಳೆದ ನಂತರ ಬರುವ ಪಿಂಗಳ ಸಂವತ್ಸರದಲ್ಲಿ, ಸೂರ್ಯನು ಮೇಷರಾಶಿಯನ್ನು ಪ್ರವೇಶಿಸಿದ, ಮೇಷ (ಶಿತ್ತಿರೈ)ಮಾಸದಲ್ಲಿ, ಶ್ರೀ ಆರಿದ್ರಾನಕ್ಷತ್ರ ಕೂಡಿದ ಶುಭದಿನದಲ್ಲಿ, ನಾಡರಿತ, ಒಳ್ಳೆಯ ಹೆಸರುವಾಸಿಯಾದವರೂ, ವೈದಿಕಶ್ರೇಷ್ಠರೂ, ಹಾರೀತ ಗೋತ್ರ ತಿಲಕರೂ ಆದ ಕೇಶವ ಯಜ್ವಾರವರ ಮಗನಾಗಿ ಅವತರಿಸಿದನು.

ಕಲಿಯುಗದ ವರ್ಷಗಳು ೪೧೧೮ ಕಳೆದನಂತರ ಮುಂದೆ ಬರುವ ಪಿಂಗಳ ಸಂವತ್ಸರದಲ್ಲಿ, ಸೂರ್ಯನು ಮೇಷ ರಾಶಿಯನ್ನೂ, ಚಂದ್ರನು ಆರಿದ್ರಾ ನಕ್ಷತ್ರವನ್ನೂ ಪ್ರವೇಶಿಸಿದ ನಂತರ ಹರಿತ ಕುಲಮಣಿಯಾದ ಕೇಶವನೆಂಬ ಬ್ರಾಹ್ಮಣ ಶಿಷ್ಠರಿಂದ ಭೂತಪುರಿಯಲ್ಲಿ ಆದಿಶೇಷನು ಅವತರಿಸಿದನು.

ಹೀಗೆ ಅವತರಿಸಿದ ಶ್ರೀ ಆದಿಶೇಷನು ಶ್ರೀರಾಮಾನುಜನೆಂಬ ದಿವ್ಯನಾಮದಿಂದ ಕರೆಯಲ್ಪಟ್ಟು, ಸಕಲಕಲೆಗಳಲ್ಲಿಯೂ ನುರಿತವರಾಗಿ, ಸಂಸ್ಕೃತ ಮತ್ತು ತಮಿಳು ವೇದಗಳನ್ನು ಅಂಗ ಮತ್ತು ಉಪಾಂಗಗಳೊಡನೆ (ಜೊತೆಯ ಗ್ರಂಥಗಳು) ಆಳವಾಗಿ ಅರಿತು, ಸಾರವಾದ ಅವುಗಳ ಅರ್ಥಗಳನ್ನು ಕ್ರೋಢೀಕರಿಸಿ, ತಾವೇ ರಚಿಸಿದ "ವೇದಾರ್ಥಸಂಗ್ರಹ" "ಶ್ರೀಭಾಷ್ಯ" ಮುಂತಾದ ಗ್ರಂಥಗಳಿಂದ - ಜೀವ, ಭಗವಂತ, ಬದುಕಿನ ಫಲ. ಅದನ್ನು ಹೊಂದುವ ಉಪಾಯ - ಆ ಫಲವನ್ನು ಹೊಂದಲಾರದಂತೆ ತಡೆಯುವ ಶತ್ರು - ಈ ಐದು ವಿಷಯಗಳನ್ನು ವಿವರಿಸಿ, ವೇದಧರ್ಮವನ್ನು ಹಿಂದಿನಂತೆಯೇ ಸ್ಥಾಪಿಸಿ, ಅಲ್ಲಲ್ಲೇ ದೇವಾಲಯ ಪೂಜಾಕ್ರಮಗಳಲ್ಲಾಗಿದ್ದ ಬದಲಾವಣೆಗಳನ್ನು ತಿದ್ದುಪಡಿಸಿ, ಪರಮಪವಿತ್ರವಾದ ವೈಷ್ಣವ ಧರ್ಮವನ್ನು ಅಭಿವೃದ್ಧಿ ಹೊಂದುವಂತೆ ಮಾಡಿಕೊಂಡು, ಶ್ರೀ ಮಹಾವಿಷ್ಣುವಿನ ದೇವಾಲಯಗಳೆಲ್ಲಕ್ಕೂ (ತಿರುಪತಿ) ಶಿರೋಮಣಿಯಾಗಿರುವ ಶ್ರೀರಂಗವೆಂಬ ದಿವ್ಯನಗರದಲ್ಲಿಯೇ ಅಧಿಕವಾಗಿ ವಾಸ ಮಾಡುತ್ತಾ ಬಂದರು.

ಈ ಸಮಯದಲ್ಲಿ, ಹಿಂದೆ ತಿಳಿಸಿದ ಶ್ರೀವೇಂಕಟನಾಥನಿಗೆ ಕೈಂಕರ್ಯ (ಪೂಜಾದಿಗಳು)ಗಳನ್ನು ಮಾಡುವ ವೈಖಾನಸ ಶ್ರೀ ವೈಷ್ಣವರುಗಳಿಂದ, ಆಗಾಗ, ಆ ದೇವನಿಗೆ ಮಾಡತಕ್ಕ ಸೇವೋಪಚಾರಗಳನ್ನು ಮಾಡುವುದರಲ್ಲಿ ಮಗ್ನತೆಯು ಕಡಿಮೆಯಾಗಿದ್ದುದರ ಕಾರಣದಿಂದ ಆಗಿನ ಅರಸನಾದ

ಯಾದವರಾಜನೆಂಬುವನಿಂದ ಹಲವು ರೀತಿಗಳಲ್ಲಿ ದಂಡಿಸಲ್ಪಟ್ಟು ಅಲ್ಲಿಯೇ ವಾಸ ಮಾಡಿಕೊಂಡಿರಲು ಸಾಧ್ಯವಿಲ್ಲದೆ ದೇಶಾಂತರವನ್ನು ಅರಸಿ ನಡೆದರು.

ಹೀಗೆ ಜ್ಞಾನ, ಅನುಭವ, ವಯಸ್ಸು ಮುಂತಾದುವುಗಳು ಅಧಿಕವಾಗಿದ್ದ ಅರ್ಚಕರುಗಳು ಬೇರೆ ಜಾಗಗಳನ್ನು ಅರಸಿ ಹೋದಾಗ, ಜ್ಞಾನಾನುಭವಗಳೇ ಮುಂತಾದುವುಗಳಲ್ಲಿ ನಿಪುಣರಾದ ಶ್ರೀ ವೈಷ್ಣವರುಗಳು ಯಾರೂ ಅಲ್ಲಿ ಇಲ್ಲದಿರುವುದನ್ನು ಕಂಡ ಕೆಲವು ಶೈವರುಗಳು, ವೈಖಾನಸ ಶ್ರೀವೈಷ್ಣವರುಗಳಲ್ಲಿ ಸ್ವಲ್ಪ ಕೋಪವನ್ನು ಕೊಂಡಿದ್ದ ಯಾದವರಾಜನೆಂಬ ಆ ದೇಶದ ರಾಜನ ಬಳಿ ಸಾರಿ ಸ್ವಲ್ಪ ಸ್ವಲ್ಪವಾಗಿ ಅವನಲ್ಲಿ ತಮ್ಮ ಬಗ್ಗೆ ವಾಲ್ಲಭ್ಯವನ್ನು ಶೇಖರಿಸಿಕೊಂಡು ಈ ರೀತಿ ಸಮರ್ಥನ (ನಿಜವೆಂದು ತೋರುವಂತೆ ಸುಳ್ಳನ್ನು ಹೇಳುವಿಕೆ) ಮಾಡಿದರು.

**ಶೈವರುಗಳು**

ಎಲೈ ಮಹಾರಾಜನೇ! ಶ್ರೀವೇಂಕಟಾಚಲದಲ್ಲಿ ಸ್ವಾಮಿ ಪುಷ್ಕರಿಣಿಯ ದಕ್ಷಿಣದ ತಟದಲ್ಲಿ ವಿರಾಜಮಾನನಾಗಿರುವ ದೇವನು ಸ್ಕಂದ ಭಗವಂತನೇ ಆಗುತ್ತಾನೆ. ಆತನಿಗೆ ಕುಮಾರಸ್ವಾಮಿಯೆಂಬ ಹೆಸರೂ ಸಹ ಪ್ರಸಿದ್ಧಿಯಾದುದರಿಂದ ಅವನ ಸಮೀಪದಲ್ಲಿರುವ ಪುಷ್ಕರಿಣಿಯೂ (ಕೊಳ) ಅವನದೇ. ಆದುದರಿಂದ ಸ್ವಾಮಿ ಪುಷ್ಕರಿಣಿ ಎಂದು ಎಲ್ಲ ಜನರಿಂದಲೂ ಕರೆಯಲ್ಪಡುತ್ತದೆ. ಭೀಮಸೇನನನ್ನು ಭೀಮನೆಂದೂ, ಸತ್ಯಭಾಮೆಯನ್ನು ಭಾಮೆಯಂದೂ ಕರೆಯಲ್ಪಡುವ ರೀತಿಯಲ್ಲಿ ಸಂಪೂರ್ಣವಾದ ಹೆಸರಿನ ಒಂದು ಭಾಗವೇ ಪೂರ್ಣ ಹೆಸರನ್ನು ಸೂಚಿಸುವುದು ಸಾಂಪ್ರದಾಯಕವಾದುದರಿಂದ ಇಲ್ಲಿಯೂ ಸ್ವಾಮಿ ಪುಷ್ಕರಿಣಿ ಎಂಬುವುದರಲ್ಲಿರುವ ''ಸ್ವಾಮಿ'' ಎಂಬ ಶಬ್ದದಿಂದ ಕುಮಾರಸ್ವಾಮಿಯ ಹೆಸರನ್ನು ಸೂಚಿಸುವುದು ಯುಕ್ತವು.

ಅಲ್ಲದೇ ವಾಮನ ಪುರಾಣದ ವೇಂಕಟಾಚಲ ಮಾಹಾತ್ಮ್ಯದ ಎರಡನೆಯ ಅಧ್ಯಾಯದಲ್ಲಿ ಸ್ಕಂದನು (ಕುಮಾರಸ್ವಾಮಿಯು) ತನ್ನ ತಂದೆಯಾದ ಪರಮಶಿವನ ಬಗೆಗಿನ, ಪಾಪವನ್ನು ಹೋಗಲಾಡಿಸಿ ಮಂಗಳವನ್ನುಂಟುಮಾಡುವ ಮಾತನ್ನು ಕೇಳಿ, ಅತ್ಯಂತ ಸಂತೋಷಗೊಂಡು ತತ್ವವನ್ನರಿತ ಆ ತಂದೆಯನ್ನು ಕುರಿತು, ''ಸ್ವಾಮಿ ತಪಸ್ಸು ಮಾಡಲಿಚ್ಛಿಸಿರುವ ನನಗೆ ಯಾವ ಪ್ರದೇಶದಲ್ಲಿ ಯಾವ ತೊಂದರೆಗಳೂ ಉಂಟಾಗುವುದಿಲ್ಲವೋ ಅಂಥಹ ತಪಸ್ಸು ಮಾಡಲು ಯೋಗ್ಯವಾದ, ಮಂಗಳಕರವಾದ ಕ್ಷೇತ್ರವು ಯಾವುದೆಂಬುದನ್ನು ತಿಳಿಸಿ. ಸಂಸಾರ ದುಃಖವನ್ನು ಹೋಗಲಾಡಿಸುವವರೇ! ಆ ಕ್ಷೇತ್ರದಲ್ಲಿ ನಿಮ್ಮ ಅಪ್ಪಣೆಯನ್ನು ಪಡೆದು ತಪಸ್ಸನ್ನು ಮಾಡಲಿರುವೆನು'' ಎಂದು ಪುನಃ ಬಿನ್ನವಿಸಿದನು - ಎಂದು ಪ್ರಾರಂಭಿಸಿ,

''ಸ್ಕಂದನು ಬೃಹಸ್ಪತಿಗೆ ವರವನ್ನು ನೀಡಿ ದೇವತೆಗಳೆಲ್ಲರನ್ನೂ ಕಳುಹಿಸಿ ಬಿಟ್ಟು, ತನ್ನ ವಾಹನವಾದ ನವಿಲನ್ನೇರಿ ವೃಷಭಾಚಾಲಕ್ಕೆ (ಶ್ರೀ ವೇಂಕಟಗಿರಿಗೆ) ಹೋದನು. ಅಲ್ಲಿ ಸುಂದರವೂ ಮತ್ತು ಶುದ್ಧವೂ ಆಗಿದ್ದ ಒಂದು ಪ್ರದೇಶದಲ್ಲಿ ದೇವಪೂಜೆಗೆ ಯೋಗ್ಯವಾದ ತಾವರೆ, ನೈದಿಲೆ ಮುಂತಾದ ಪುಷ್ಪಗಳಿಂದ ಕೂಡಿದ ಅತ್ಯಂತ ಸುಂದರವಾದ ಕೊಳವನ್ನು ಕಂಡನು. ಅದರಲ್ಲಿ ಮಿಂದು, ಅದರ ತಟದಲ್ಲಿ ವಾಯುದೇವನೂ ತಪಸ್ಸು ಮಾಡುತ್ತಿರುವುದನ್ನು ಕಂಡು ಷಣ್ಮುಖನು, ಅಲ್ಲಿಯೇ ಕುಳಿತು ಬೆಳಿಗ್ಗೆ, ಮಧ್ಯಾಹ್ನ, ಸಾಯಂಕಾಲ ಎಂಬುವ ಮೂರು ಸಂಧ್ಯೆಗಳಲ್ಲಿಯೂ, ದೇವ ದೇವರುಗಳ ಯಜಮಾನನಾಗಿ, ಶಂಖ ಚಕ್ರಧಾರಿಯಾಗಿ ಪರದೇವತೆಯಾದ ನಾರಾಯಣನನ್ನು ಮನಸ್ಸಿನಲ್ಲಿಟ್ಟುಕೊಂಡು, ಧ್ಯಾನಿಸುತ್ತಾ ಸಮಾಧಿ ಸ್ಥಿತಿಯನ್ನು ಹೊಂದಿ ಘೋರವಾದ ತಪಸ್ಸನ್ನು ಮಾಡಿದನು. ತನ್ನ ಎರಡು ಪಾದಗಳಿಂದ ಭೂಮಿಯನ್ನಲಂಕರಿಸುತ್ತಲೂ, ಸ್ವರ್ಣ ಸದೃಶವಾದ ತನ್ನ ದೇಹಕಾಂತಿಯಿಂದ ಪ್ರಜ್ವಲಿಸುತ್ತಲೂ ಇರುವ ಕುಮಾರಸ್ವಾಮಿಯು, ಯಾವುದು ಶ್ರೇಷ್ಠವೋ, ಮಹತ್ತಾದುದಕ್ಕಿಂತ ಮಹತ್ತರವೋ, ಅಂಥಹ ಪರಬ್ರಹ್ಮನನ್ನು ಧ್ಯಾನಿಸುತ್ತಿದ್ದನು - ಎಂಬುವುದು, ಕೊನೆಯಲ್ಲಿ ಸುಬ್ರಹ್ಮಣ್ಯನೆಂದು ಮತ್ತೊಂದು ಹೆಸರನ್ನು ಹೊಂದಿದ ಕುಮಾರಸ್ವಾಮಿಯು ಶ್ರೀವೇಂಕಟಾಚಲದಲ್ಲಿ ಅಸದೃಶವಾದ ಒಂದು ಕೊಳದ ಮಗ್ಗುಲಲ್ಲಿ ತಪಸ್ಸು ಮಾಡುತ್ತಿದ್ದನು. ಎಂದು ತಿಳಿಸಲ್ಪಟ್ಟಿರುವುದರಿಂದ, ಸ್ವಾಮಿ ಪುಷ್ಕರಿಣೀ ತಟದಲ್ಲಿರುವ ಈ ದೇವನು ಕುಮಾರ ಸ್ವಾಮಿಯೇ, ತಪಸ್ಸು ಆಚರಣೆ ಮಾಡುತ್ತಿರುವುದರಲ್ಲಿಯೇ ಉತ್ಸಾಹಗೊಂಡ ಇವರಿಂದ, ತಮ್ಮದೇ ಲಾಂಛನವಾದ ಪಾಶಾಂಕುಶಾದಿಗಳು, ಆ ಕಾಲದಲ್ಲಿ (ತಪಸ್ಸನ್ನಾಚರಿಸುವ ಕಾಲದಲ್ಲಿ ಅದಕ್ಕೆ ತಡೆಯುಂಟು ಮಾಡುವುದರಿಂದ ಅವುಗಳು ಕೈ ಬಿಡಲ್ಪಟ್ಟವು, ಆದುದರಿಂದ, ಈ ತರಹದ ಕಾರಣಗಳಿಂದ, ಈ ಬೆಟ್ಟದ ಶಿಖರವು ಶೈವ ಕ್ಷೇತ್ರವೇ ಆಗುತ್ತದೆ, ನಂತರ ಕಾಲದಲ್ಲಿ ಕೆಲವು ವೈಷ್ಣವರುಗಳು ಪುರಾಣ ವಿಷಯವನ್ನು ಬೇರೆ ರೀತಿಯಲ್ಲಿ ವರ್ಣಿಸುತ್ತಾ, ಈ ದೇವನು ವಿಷ್ಣುವೆಂದು ಮನಸೆಳೆದು, ಅರಸನನ್ನೂ ಅನುಮತಿಸುವಂತೆ ಮಾಡಿ, ಪೂಜೆಗಾಗಿಯೇ ಇರುವ ಕೆಲವು ವೈಷ್ಣವ ಬಿಂಬಗಳನ್ನು ದೇವಾಲಯದಲ್ಲಿ ತೂರಿಸಿ, ಉತ್ಸವಾದಿಗಳನ್ನು ನಡೆಸಿಕೊಂಡು ಬರುತ್ತಿದ್ದಾರೆ. ನಿಜವಾಗಿಯೂ ಸ್ಕಂದನು ತಪಸ್ಸನ್ನಾಚರಿಸಿದ ಈ ಸ್ಥಳವು ಶೈವಕ್ಷೇತ್ರವೇ ಆಗಿರಲು ಅರ್ಹವಾಗಿದೆ. ಆದುದರಿಂದ ಈಗ ಇಲ್ಲಿ ಎಲ್ಲಾ ವಿಧಿಗಳೂ ಶೈವಾಗಮರೀತಿಯಲ್ಲಿಯೇ ನಿಮ್ಮಿಂದ (ರಾಜನಿಂದ) ನೆರವೇರಿಸಲ್ಪಡಬೇಕು. (ಎಂದು ಸಮರ್ಥನವನ್ನು ಮಾಡಿದರು).

ಈ ರೀತಿಯಾಗಿ - ಹಿಂದೆ ತಿಳಿಸಿದ ವಾಮನ ಪುರಾಣ - ವೇಂಕಟಾಚಲ ಮಾಹಾತ್ಮ್ಯಭಾಗದ ಅಭಿಪ್ರಾಯವನ್ನು - ಇದಕ್ಕೆ ಮುಂದೂ ಮತ್ತು ಹಿಂದೂ

ಇರುವ ಸಂದರ್ಭಗಳಿಗೂ, ವರಾಹಪುರಾಣ ಮುಂತಾದ ಹಲವಾರು ಪುರಾಣಗಳಲ್ಲಿನ ಸ್ಕಂದನ ತಪಸ್ಸನ್ನು ಹೇಳುವ ಸಂದರ್ಭಗಳಿಗೂ ಹೊಂದುವಂಥಹ ಅಭಿಪ್ರಾಯಗಳನ್ನು ತೋರಿಸದೆ ಅವುಗಳಿಗೆ ವ್ಯತಿರಿಕ್ತವಾಗಿ ತಮ್ಮ ಇಷ್ಟ ಬಂದಂತೆಲ್ಲಾ ಹೇಳುವವರುಗಳೂ, ಮೇಲ್ನೋಟಕ್ಕೆ ವಿಚಾರವಂತರಾಗಿ ತೋರಿಸಿಕೊಂಡು, ಅಸ್ಥಿರವಾದ ಅಭಿಪ್ರಾಯಗಳನ್ನೇ ಹೇಳುತ್ತಾ, ಮನಸೆಳೆಯುವುದರಲ್ಲಿಯೇ ದೃಷ್ಟಿಯನ್ನು ಹೊಂದಿದವರಾಗಿ, ಹಣ ಮತ್ತು ತಾವಿಚ್ಛಿಸುವ ಪದಾರ್ಥಗಳು, ಅರಮನೆಯಲ್ಲಿ ಒಂದು ದೊಡ್ಡ ಪದವಿ, ಇವುಗಳಲ್ಲಿಯೇ ದುರಾಸೆಯನ್ನಿಟ್ಟುಕೊಂಡು ಇರುವವರೂ, ಕ್ಷೇತ್ರವನ್ನು ಆಕ್ರಮಿಸುವುದರಲ್ಲಿಯೇ ದೃಷ್ಟಿ ಇಟ್ಟವರೂ, ಛಲವೊಂದನ್ನೇ ಉಳ್ಳವರೂ ಆದ ಕೆಲವು ಶೈವ ಜನರಿಂದ ತಿಳಿಸಲ್ಪಟ್ಟ ರಾಜನು ಈ ರೀತಿ ಚಿಂತಿಸಿದನು.

**ಯಾದವರಾಜ**

''ಈವರೆವಿಗೂ ಶ್ರೀ ವೇಂಕಟಾಚಲವು ವಿಷ್ಣುವಿನ ಕ್ಷೇತ್ರವೆಂದು ಪ್ರಸಿದ್ಧಿಯಾಗಿರುತ್ತದೆ. ಅಲ್ಲಿ ಯಾವಾಗಲೂ ವಾಸಿಸುತ್ತಿರುವ ದೇವನು ಶ್ರೀ ಮಹಾವಿಷ್ಣುವೆಂದೇ ಪ್ರಸಿದ್ಧಿ ಹೊಂದಿರುತ್ತಾನೆ. ಈ ಸ್ವಾಮಿ ಪುಷ್ಕರಿಣಿಯೂ ಸಹ ಶ್ರೀ ವಿಷ್ಣುವಿನ ತೀರ್ಥವೆಂದೇ ಚೆನ್ನಾಗಿ ಪ್ರಸಿದ್ಧಿ ಹೊಂದಿದೆ. ಶ್ರೀ ವೈಷ್ಣವರುಗಳು ಮಾತ್ರವೇ ಈ ಭಗವಂತನಿಗೆ ಇದುವರೆಗೂ ಆರಾಧನೆ ಮತ್ತು ಉತ್ಸವಗಳನ್ನು ಮಾಡಿಕೊಂಡು ಬರುತ್ತಿದ್ದಾರೆ. ಹೀಗಿರುವಾಗ ಈ ಶೈವರುಗಳಿಂದ ಏಕೆ ಈ ರೀತಿ ಹೇಳಲ್ಪಡುತ್ತದೆ? ಇವುಗಳಲ್ಲಿ ಯಾವುದು ಸತ್ಯ? ಚೆನ್ನಾಗಿ ಶೋಧನೆ ಮಾಡಬೇಕು ಶೋಧಿಸದೆ ಇದ್ದಕ್ಕಿದ್ದಂತೆ ಯಾವುದನ್ನೂ ಬದಲಾಯಿಸುವುದು ಉಚಿತವಲ್ಲ'' ಎಂದು (ಚಿಂತಿಸಿದನು)

ಆ ಸಮಯದಲ್ಲಿ ಅಲ್ಲಿದ್ದ ಶ್ರೀವೈಷ್ಣವರುಗಳು ಪುರಾಣಾರ್ಥಗಳನ್ನು ಇದ್ದ ಹಾಗೆಯೇ ಅರಸನ ಸಭೆಯಲ್ಲಿ ಎತ್ತಿ ತೋರಿಸಿ ತಮ್ಮ ಮತವನ್ನು ಸ್ಥಿರ ಮಾಡಿ ಕೊಳ್ಳುವುದಕ್ಕೆ ಬೇಕಾದ ಸಾಮರ್ಥ್ಯವಿಲ್ಲದುದರಿಂದ, ಶ್ರೀರಂಗ ಕ್ಷೇತ್ರದಲ್ಲಿ, ಶ್ರೀಮನ್ನಾರಾಯಣನ ಮತವನ್ನು ಚೆನ್ನಾಗಿ ಮನದಟ್ಟಾಗುವಂತೆ ಹೇಳಬಲ್ಲ ಆಚಾರ್ಯರಾಗಿಯೂ, ಕಲೆಗಳನ್ನರಿತ ಹಲವರನ್ನು ತಮ್ಮಲ್ಲಿ ಒಟ್ಟಾಗಿ, ಗುಂಪಾಗಿ ಸೇರಿಸಿಕೊಂಡಿರುವವರೂ (ವಿದ್ವದ್ಗೋಷ್ಠಿಯನ್ನುಳ್ಳವರೂ) ಜ್ಞಾನ, ಶೀಲ ಮುಂತಾದ ಸದ್ಗುಣಗಳನ್ನುಳ್ಳವರೂ ಆದ ರಾಮಾನುಜ ಮುನಿವರ್ಯರಿಗೆ ಇಲ್ಲಿನ ಎಲ್ಲಾ ಸಮಾಚಾರಗಳನ್ನೂ ತಿಳಿಸುವ ಒಂದು ಪ್ರಾರ್ಥನಾ ಪತ್ರವನ್ನು ಬರೆದು ಒಡನೆಯೇ ಕಳುಹಿಸಿದರು.

ಆ ಭಗವದ್ರಾಮಾನುಜರು ತಮಗೆ ಬಂದ ಪತ್ರವನ್ನು ಕಂಡು, ಮನೋವ್ಯಾಕುಲದಿಂದ ಶ್ರೀರಂಗ ಕ್ಷೇತ್ರವನ್ನು ಬಿಟ್ಟು ಒಡನೆಯೇ ಹೊರಟರು, ಕೆಲವು ದಿನಗಳಲ್ಲಿಯೇ ಬಹಳ ದೂರವಾಗಿರುವ ದಾರಿಗಳನ್ನು ಕ್ರಮಿಸಿ ವೇಗವಾಗಿ ಶ್ರೀವೇಂಕಟಗಿರಿಯ ಅಡಿ ಭಾಗದಲ್ಲಿರುವ ತಿರುಪತಿಯನ್ನು ಸೇರಿದರು. ನಂತರ ಆ ದೇಶದ ರಾಜನಾದ ಯಾದವರಾಜನ ಬಳಿ ಸಾರಿ, ಆಶೀರ್ವದಿಸಿ, ಕೊಂಡಾಡಿ ತಮ್ಮ ಕರ್ತವ್ಯವೆಲ್ಲವನ್ನೂ ತಿಳಿಸಿದರು. ಕೆಲವು ಶೈವರುಗಳ ಕೆಟ್ಟ ದೃಷ್ಟಿಯಿಂದುಂಟು ಮಾಡಲ್ಪಟ್ಟ ಸಂದೇಹವೆಂಬ ಸಮುದ್ರದಲ್ಲಿ ಮುಳುಗುತ್ತಿರುವ ಯಾದವ ರಾಜನನ್ನು ಯತಿ ರಾಜಯೋಗಿ ಯಾದವರು (ರಾಮಾನುಜರು) ಕೈ ಕೊಟ್ಟು ಮೇಲೆತ್ತಲು ಮನಸ್ಸು ಮಾಡಿ ಹೀಗೆ ಮಾತನಾಡಿದರು.

### ಶ್ರೀರಾಮಾನುಜ ಮುನಿವರ್ಯರು

ಅರಸನೇ! ಶ್ರೀ ವೇಂಕಟಾಚಲ, ಸ್ವಾಮಿ ಪುಷ್ಕರಿಣಿ, ಭಗವಾನ್ ವೇಂಕಟೇಶ ಎಂಬ ಈ ಮೂರು ವಿಷಯಗಳಲ್ಲಿ ಶೈವಜನರುಗಳು ನಿನಗೆ ಯಾವ ಸಂದೇಹಗಳನ್ನುಂಟು ಮಾಡಿರುವರೋ ಅದನ್ನು ಬೇರೊಡನೆ ಕಿತ್ತುಹಾಕಿ ನಿಜವಾದ ಅರಿವನ್ನು ನಿನಗೆ ಉಂಟು ಮಾಡುವುದಕ್ಕಾಗಿಯೇ ಬಹಳ ದೂರದೇಶದಿಂದ ಇಲ್ಲಿಗೆ ನಿನ್ನ ಬಳಿ ನಾವು ಬಂದಿದ್ದೇವೆ. ನಿನಗೆ ಇಂಥಹ ಮಹತ್ತರ ಸಂದೇಹಗಳನ್ನು ಯಾರು ಹುಟ್ಟಿಸಿರುವವರೋ ಅವರುಗಳೆಲ್ಲರೂ ಈಗ ನಿನ್ನ ಸಭೆಯಲ್ಲಿ ಬಂದು ತಮ್ಮಗಳ ವಾದಗಳನ್ನು ನಿಸ್ಸಂಕೋಚವಾಗಿ ಹೇಳಲಿ, ನಂತರ ನಾವು ಆ ವಾದಗಳನ್ನು ಖಂಡಿಸಿ ನಿಜವಾದ ಅರ್ಥಗಳನ್ನು ಸ್ಥಿರಪಡಿಸಿ ನಿನ್ನ ಸಂದೇಹವನ್ನು ನೀಗಿಸುತ್ತೇವೆ (ಎಂದು ಹೇಳಿದರು).

ಈ ರೀತಿ ಶ್ರೀಭಗವದ್ರಾಮಾನುಜಾಚಾರ್ಯರಿಂದ ಸಭೆಯಲ್ಲಿ ತಿಳಿಸಿದುದನ್ನು ಕೇಳಿದ ಯಾದವರಾಜನು ಆಸೆಯಿಂದ, ವಾದ ಮಾಡುವ ಶೈವರನ್ನು ಬರ ಹೇಳಿದನು. ನಂತರ ಅರಸನಾಜ್ಞೆಯಿಂದ ಬರಹೇಳಲ್ಪಟ್ಟ ಆ ಶೈವರುಗಳು, ವಿಭೂತಿಯಿಂದ ಕೂಡಿದ ದೇಹಗಳು, ರುದ್ರಾಕ್ಷಿಯ ಕಂಕಣಗಳು, ಇವುಗಳೊಡನೆ ಗುಂಪಾಗಿ ಸಭೆಯಲ್ಲಿ ಸೇರಿದರು. ಸಭೆಯಲ್ಲಿ ಒಂದು ಕಡೆ ಬಿಳಿಯ ನಾಮದ ಊರ್ಧ್ವಪುಂಡ್ರವಿಟ್ಟ ಶ್ರೀವೈಷ್ಣವ ಸಮೂಹವೂ ಮತ್ತೊಂದು ಕಡೆ ಹೊಗೆಯ ಬಣ್ಣದ ವಿಭೂತಿಧಾರಿಗಳಾದ ಶೈವ ಸಮೂಹವೂ ಸೇರಿದ್ದವು. ನಂತರ ವಾದ ವಿವಾದಗಳು ಪ್ರಾರಂಭಿಸಿ ಒಂದು ಕಡೆ ಶ್ರೀವೈಷ್ಣವರುಗಳೂ ಮತ್ತೊಂದಡೆ ಶೈವರುಗಳೂ ಸೇರಿ ತಮ್ಮ ತಮ್ಮ ವಾದಗಳಿಗೆ ಯುಕ್ತಿಗಳಾದ ಹಗ್ಗವನ್ನು ಸುತ್ತಿ ತಮ್ಮ ತಮ್ಮಗಳೆಡೆಗೆ ಎಳೆಯುತ್ತಿರುವಾಗ, ಹಿಂದೊಂದು ಸಲ ಕ್ಷೀರಸಾಗರವನ್ನು ಮಥಿಸಿದ

ಕಾಲದಲ್ಲಿ ಅಮರರುಗಳೂ ಅಸುರರುಗಳೂ ಎರಡು ಕಡೆಯೂ ನಿಂತು ವಾಸುಕಿ ಎಂಬ ಸರ್ಪವನ್ನು ಹಗ್ಗವಾಗಿ ಸುತ್ತಿಸಿ ತಮ್ಮತಮ್ಮೆಡೆಗೆ ಬಲವಾಗಿ ಎಳೆಯುತ್ತಿರುವಾಗ ಅಲ್ಲಿ ಇಲ್ಲಿ ತಳ್ಳಾಡಿ ಸುತ್ತುತ್ತಿದ್ದ ಮಂದರ ಪರ್ವತದಂತೆ, ತನ್ನ ಮನಸ್ಸೂ ಸುತ್ತುತ್ತಿರುವಂತೆ ಆ ರಾಜನು ಕಂಡನು. ಆ ಸಭೆಯಲ್ಲಿ ಮೊಟ್ಟಮೊದಲು ಶೈವರುಗಳು ವಾದಿಸಿದರು.

**ಶೈವರುಗಳು**

ಶ್ರೀವೇಂಕಟಗಿರಿಯಲ್ಲಿ ಸ್ವಾಮಿ ಪುಷ್ಕರಿಣಿಯ ದಕ್ಷಿಣ ತಟದಲ್ಲಿ ವಿರಾಜಮಾನನಾಗಿರುವ ದೇವನು - ಕುಮರಸ್ವಾಮಿ, ಸುಬ್ರಹ್ಮಣ್ಯ ಮುಂತಾದ ಇತರ ಹೆಸರುಗಳನ್ನು ಹೊಂದಿರುವ ಭಗವಾನ್ ಸ್ಕಂದನೇ ಆಗುತ್ತಾನೆ. ಆವನ ಪಕ್ಕದಲ್ಲಿರುವ ಪುಷ್ಕರಣಿಯು ಸ್ವಾಮಿ ಪುಷ್ಕರಿಣಿಯೆಂದು ಅವನದಾಗಿಯೇ ತಿಳಿಸಲ್ಪಟ್ಟಿರುತ್ತದೆ. ಏಕೆಂದರೆ ಸಂಪೂರ್ಣವಾದ ಹೆಸರಿನ ಒಂದು ಭಾಗದಿಂದ ಪೂರ್ಣ ಅರ್ಥವನ್ನು ತಿಳಿಯಬಹುದೆಂಬ ಸಂಪ್ರದಾಯದಿಂದ ಸ್ವಾಮಿ ಪುಷ್ಕರಿಣಿ ಎಂಬ ಮಾತಿನಲ್ಲುಳ್ಳ ''ಸ್ವಾಮಿ'' ಎಂಬ ಭಾಗದಿಂದ ಕುಮಾರಸ್ವಾಮಿ ಎನ್ನುವ ಪೂರ್ಣ ಹೆಸರುಳ್ಳ ಸ್ಕಂದನನ್ನೇ ತಿಳಿಸುವುದು ಎಂದು ಪುರಾಣ ರಚನಾಕಾರರು ತಿಳಿದು ಕೊಂಡಿರಬಹುದಲ್ಲವೇ ?

ವಾಮನ ಪುರಾಣದ ವೇಂಕಟಾಚಲ ಮಾಹಾತ್ಮ್ಯದ ಭಾಗದಲ್ಲಿ ಎರಡನೆಯ ಅಧ್ಯಾಯದಲ್ಲಿ - ಪಾಪವನ್ನು ಹೋಗಲಾಡಿಸಿ ಶುಭ (ಮಂಗಳ)ವನ್ನುಂಟು ಮಾಡುವ ತನ್ನ ತಂದೆ ಹೇಳಿದ ಮಾತನ್ನು ಕೇಳಿದ ಸ್ಕಂದನು ಬಹಳ ಸಂತೋಷಗೊಂಡು ತತ್ತ್ವವನ್ನರಿತ ತಂದೆಯವರನ್ನು ಕುರಿತು ಮತ್ತೂ ಕೇಳಿದನು - ಎಂದು ಪ್ರಾರಂಭಿಸಿ, ತನ್ನೆರಡು ಪಾದಗಳಿಂದ ಭೂಮಿಯನ್ನಲಂಕರಿಸಿಕೊಂಡು ಚಿನ್ನದಂತಹ ದೇಹ ಕಾಂತಿಯಿಂದ ಫಳ ಫಳನೆ ಹೊಳೆಯುತ್ತಿದ್ದ ಕುಮಾರನು ಯಾವುದು ಪರಾತ್ಪರವೋ, ಮಹತ್ತಾದ ಎಲ್ಲಕ್ಕಿಂತ ಮಹತ್ತರವಾದುದೋ ಅಂಥಹುದಾದ ಪರಬ್ರಹ್ಮನನ್ನು ಧ್ಯಾನಿಸುತ್ತಿದ್ದನು. - ಎಂಬುದು, ಕಡೆಯಲ್ಲಿ ಗ್ರಂಥದ ಭಾಗದಿಂದ, ಕುಮಾರಸ್ವಾಮಿಯು ತನ್ನ ತಂದೆಯ ಮಾತಿನಂತೆಯೇ ಶ್ರೀವೇಂಕಟಗಿರಿಯನ್ನು ಸೇರಿ ಒಂದು ಪುಣ್ಯತೀರ್ಥದ ತಟದಲ್ಲಿ (ತೀರದಲ್ಲಿ) ನಿಂತುಕೊಂಡು ಉಗ್ರವಾದ ತಪಸ್ಸನ್ನಾಚರಿಸಿದನು - ಎಂದು ಕಥೆಯು ವಿವರವಾಗಿ ಹೇಳಲ್ಪಟ್ಟಿರುವುದು ಕಂಡು ಬರುತ್ತಿದೆಯಲ್ಲವೇ?

ಆದರಿಂದ ಆ ಪುರಾಣಗ್ರಂಥದ ರೀತಿಯಂತೆ ಅವನು ತಪಸ್ಸು ಮಾಡಿದ ಸ್ಥಳವಾದ ಸ್ವಾಮಿ ಪುಷ್ಕರಿಣಿ ತೀರದಲ್ಲಿ, ತನ್ನೆರಡು ಪಾದಗಳಿಂದಲೂ ಭೂಮಿಯನ್ನು

ಮೆಟ್ಟಿನಿಂತು ಘೋರವಾದ ತಪಸ್ಸನ್ನಾಚರಿಸುವುದರಲ್ಲಿ, ತನ್ನ ಮನಸ್ಸನ್ನು ಕೊಟ್ಟವನಾಗಿ, ಜಡೆಗಟ್ಟಿದ ಕೂದಲನ್ನುಳ್ಳವನಾಗಿ, ತಪಸ್ಸಿನಾಚರಣೆಗೆ ಪ್ರತಿಬಂಧಕವಾಗಿರುವುದರಿಂದ ತನ್ನದೇ ಆದ ಪಾಶಾಂಕುಶಾದಿ ಆಯುಧಗಳನ್ನು ಬಿಟ್ಟವನಾಗಿ, ಕುಮಾರಸ್ವಾಮಿ, ಸುಬ್ರಹ್ಮಣ್ಯ ಮುಂತಾದ ಇತರ ಹೆಸರುಗಳುಳ್ಳ ಸ್ಕಂದ ಭಗವಂತನೇ ಆ ತಪೋಲಂಕಾರದಿಂದ, ಅರ್ಚಾರೂಪಿಯಾಗಿ (ವಿಗ್ರಹರೂಪಿಯಾಗಿ) ಪ್ರತಿಷ್ಠೆಮಾಡಲ್ಪಟ್ಟು, ತನ್ನನ್ನಾರಾಧಿಸುವ ಜನರಿಗೆ ಇಚ್ಛಿಸಿದ ವರಗಳನ್ನು ಕೊಟ್ಟುಕೊಂಡು ದರ್ಶನವನ್ನೀಯುತ್ತಿದ್ದಾನೆ. ಹೀಗೆ ಸ್ಕಂದನು ತಪಸ್ಸು ಮಾಡಿದ ಪ್ರದೇಶವಾಗಿ ಕೇಳಿಸಲ್ಪಡುವ ಈ ವೇಂಕಟಾಚಲ ಶಿಖರವು ಶೈವಕ್ಷೇತ್ರವಾಗಿರುವುದೇ ಯುಕ್ತವು. ಈ ಭಗವಂತನಲ್ಲಿ ಶಂಖ ಚಕ್ರಾದಿ ದಿವ್ಯಾಯುಧಗಳು (ಆಭರಣಗಳು) ಕಂಡು ಬರದೇ ಇದ್ದರೂ, ಅನ್ಯದೇವತೆಗೇ ಅಸಾಧಾರಣವಾದ ಜಟೆ ನಾಗಾಭರಣ ಇವುಗಳು ಕಾಣಬರುತ್ತಿರುವುದರಿಂದ ವಿಷ್ಣುವೆಂದು ಹೇಳಲು ಯಾವ ರೀತಿಯಲ್ಲಿಯೂ ಸರಿಬರುವುದಿಲ್ಲ. ನಿಜವು ಈ ರೀತಿಯಿದ್ದರೂ, ಒಂದು ಕಾಲದಲ್ಲಿ ಅರಸನು ಅನುಕೂಲವಾಗಿದ್ದುದರಿಂದ, ಬಲಾತ್ಕಾರದಿಂದ ಈ ದೇವಾಲಯವು ಕೆಲವು ವೈಷ್ಣವರುಗಳಿಂದ ತೆಗೆದುಕೊಳ್ಳಲ್ಪಟ್ಟು , ಕೆಲವು ವೈಷ್ಣವ ಬಿಂಬಗಳಿಂದ ತುಂಬಿಸಲ್ಪಟ್ಟು, ವೈಷ್ಣವ ಆಗಮದಂತೆ ನಡೆಸಲ್ಪಡುವ ನಿತ್ಯಪೂಜೆ, ಬ್ರಹ್ಮೋತ್ಸವ ಜಾತ್ರೆ ಮೊದಲಾದುವುಗಳ ಆಚರಣೆಯನ್ನು ಹೊಂದಿರುವುದಾಗಿದೆ. ಇದರಿಂದಲೇ, ಈ ದೇವನು ವೈಷ್ಣವರುಗಳಿಂದ ಆರಾಧಿಸಲ್ಪಟ್ಟು ಬಂದಿರುವ ಈ ಕಾಲದಲ್ಲೂ, ಹಿಂದಿನಿಂದಲೂ ಬಂದ ಸಂಪ್ರದಾಯವನ್ನು ಪಾಲಿಸಿಕೊಂಡು, ಒಂದು ತಿಂಗಳಲ್ಲಿ, ಬೇರೆ ದೇವತೆಗೇ ಮೀಸಲಾದ ಬಿಲ್ವಪತ್ರಗಳಿಂದ ಅರ್ಚನೆ ಮಾಡುವುದು ಇಂದೂ ಮುಂದುವರಿದಿರುವುದು ಕಂಡುಬರುತ್ತದೆ. ಇದರಿಂದ ಶೈವ ಕ್ಷೇತ್ರವಾದ ಈ ವೇಂಕಟಾಚಲ ಶಿಖರದಲ್ಲಿರುವ ಈ ದೇವಾಲಯವು ನಮ್ಮಗಳ ವಶದಲ್ಲೇ ಸ್ಥಾಪಿಸಲ್ಪಡಬೇಕು. ಶೈವಾಗಮವು ಸೂಚಿಸುವ ರೀತಿಯಿಂದಲೇ ಇಲ್ಲಿ ಆರಾಧನೆ ವಿಧಿಗಳೆಲ್ಲವೂ ನೆರವೇರಿಸಲ್ಪಡಬೇಕು - ಎಂದು (ವಾದವನ್ನು ಮಾಡಿದರು).

ನಂತರ ಶ್ರೀ ಭಗವದ್ರಾಮಾನುಜ ಯತಿವರ್ಯರೂ ಸಹ ಪ್ರತಿವಾದವನ್ನು ಮಾಡಿದರು.

**ಶ್ರೀರಾಮಾನುಜ ಯತಿವರ್ಯರು**

ಅರಸನೇ! ಈ ಶೈವರುಗಳು ಮುಂಚೆ ಹೇಳಿದ ವಾಮನ ಪುರಾಣ ವಚನಗಳ ವಿಷಯವನ್ನೂ, ಹಿಂದೂ ಮತ್ತು ಮುಂದೂ ಇರುವ ಸಂದರ್ಭಗಳ

ಅಭಿಪ್ರಾಯಗಳನ್ನೂ, ವಾರಾಹ ಮುಂತಾದ ಹಲವಾರೂ ಪುರಾಣಗಳಲ್ಲಿ ಹೇಳಿರುವ ಸ್ಕಂದನ ತಪಸ್ಸನ್ನು ತಿಳಿಸುವ ಸಂದರ್ಭಗಳ ಅಭಿಪ್ರಾಯವನ್ನೂ ಅರಿಯದೆಯೋ ಅಥವಾ ಅರಿತು ಅವುಗಳನ್ನು ಮರೆಸಿಟ್ಟೋ ಅವುಗಳಿಗೆ ವ್ಯತಿರಿಕ್ತವಾಗಿ ಹೇಳುವವರಾಗಿ, ಧನ, ತಾವು ಅಪೇಕ್ಷಿಸುವ ಇತರ ಪದಾರ್ಥಗಳೂ, ಸರ್ಕಾರದಲ್ಲಿ ಉನ್ನತ ಪದವಿಯನ್ನು ಪಡೆಯುವಿಕೆ - ಮುಂತಾದವುಗಳನ್ನು ಮಾತ್ರವೇ ಧ್ಯೇಯ ವಾಗಿಟ್ಟಿಕೊಂಡು ಈ ಕ್ಷೇತ್ರವನ್ನು ಆಕ್ರಮಿಸಿಕೊಳ್ಳುವುದರಲ್ಲಿ ಇಷ್ಟಗೊಂಡು ನಿನ್ನನ್ನು ಮೋಹಿಸುತ್ತಿದ್ದಾರೆ, ಶ್ರೀ ವೇಂಕಟಗಿರಿಯು ವಿಷ್ಣುಕ್ಷೇತ್ರವೆಂದೇ ಪ್ರಪಂಚದ ದೃಷ್ಟಿಯಲ್ಲೂ ಮತ್ತು ಗ್ರಂಥಗಳ ದೃಷ್ಟಿಯಲ್ಲಿಯೂ ಹೆಚ್ಚು ಪ್ರಸಿದ್ಧವಾಗಿದೆ. ಅಲ್ಲಿ ವಿರಾಜಮಾನನಾಗಿರುವ ಭಗವಂತನು ಶ್ರೀಮನ್ನಾರಾಯಣನೇ, ಶ್ರೀ ಸ್ವಾಮಿ ಪುಷ್ಕರಿಣಿಯೂ ಸಹ ವಿಷ್ಣುತೀರ್ಥವೇ, ಇಲ್ಲಿ ಇತರ ದೈವಗಳ ಮುಖ್ಯತ್ವದ ಬಗ್ಗೆ ಸಂದೇಹಕ್ಕೆ ಸ್ವಲ್ಪವೂ ಎಡೆಯಿಲ್ಲ. ಇದು ವಿಷ್ಣುವಿನ ಸ್ಥಳವೆನ್ನುವುದು ಮುಂಚೆ ಹೇಳಿದ ವಾಮನ ಪುರಾಣದಲ್ಲಿಯೇ ಹೇಳಲ್ಪಟ್ಟಿರುವುದು ಅತಿವಿಶದವಾಗಿ ಕಾಣಲ್ಪಡುತ್ತದೆ.

ಅದರಲ್ಲಿ (ವಾಮನ ಪುರಾಣದಲ್ಲಿ) ಮೊದಲನೆಯ ಅಧ್ಯಾಯದಲ್ಲಿ ಶ್ರೀವೇಂಕಟಾಚಲ ಸ್ಥಳಮಾಹಾತ್ಮ್ಯ ವರ್ಣನೆಗೆ ಪೀಠಿಕೆಯಾಗಿ ಕಂಡು ಬರುವ ನಾರದ -ವಾಲ್ಮೀಕಿ ಸಂಭಾಷಣೆಯಲ್ಲಿ, ''ನಾರದರೇ! ಮೂರು ಲೋಕಗಳಲ್ಲೂ ಅತಿ ಹೆಚ್ಚು ಶ್ರೇಷ್ಠವಾದ ವಿಷ್ಣು ಕ್ಷೇತ್ರವು ಭೂಲೋಕದಲ್ಲಿದೆಯಂತಲ್ಲಾ, ಅದು ಯಾವುದು? ಬ್ರಹ್ಮಲೋಕದ ವರೆಗೆ ಇರುವ ವಿಶೇಷಗಳೆಲ್ಲವನ್ನೂ ನೀವು ನೋಡಿರುತ್ತೀರಿ, ಯಾವ ತೀರ್ಥದಲ್ಲಿ ಎಲ್ಲಾ ತೀರ್ಥಗಳೂ ಸೇರಿವೆ? ಯಾವ ಜಾಗದಲ್ಲಿ ವಾಸಮಾಡುವವರಿಗೆ ಅಂತ್ಯ ವಿಲ್ಲದ ಪುಣ್ಯವುಂಟಾಗುತ್ತದೆ ಎಂದು ಹೇಳಲ್ಪಡುತ್ತದೆ? ಯಾವ ಸ್ಥಳದಲ್ಲಿ ಹಲವು ಸಚ್ಚರಿತ್ರೆಗಳನ್ನುಳ್ಳ ಪುರುಷೋತ್ತಮನಾದ ಶ್ರೀಮನ್ನಾರಾಯಣನು ಶ್ರೀದೇವಿ ಭೂದೇವಿ ಸಮೇತನಾಗಿ ವಿಜಯಗೈದಿರುತ್ತಾನೆ? ಹೇ! ದೇವ ಋಷಿಯೇ ! ಮೂಲೋರ್ಕಗಳಲ್ಲೂ ಪವಿತ್ರವಾದ ಆ ತೀರ್ಥವೂ, ಸ್ಥಳವೂ ಇಂಥಹುದು ಎಂಬುದನ್ನು ಹೇಳಬೇಕೆಂದು ಪ್ರಾರ್ಥಿಸುತ್ತೇನೆ'' ಎಂದು ವಾಲ್ಮೀಕಿ ಮಹರ್ಷಿಗಳು ನಾರದರನ್ನು ಕೇಳಿದ ಪ್ರಶ್ನೆಯಿಂದ ಶ್ರೀ ವೇಂಕಟಗಿರಿಯು ಶ್ರೀಮನ್ನಾರಾಯಣನ ಕ್ಷೇತ್ರವೆಂದೂ ಸಂದೇಹಕ್ಕಾಸ್ಪದ ವಿಲ್ಲದಂತೆ ಅರಿಯಲ್ಪಡುತ್ತದೆ.

ಹೀಗೆ ವಾಲ್ಮೀಕಿ ಮಹರ್ಷಿಯು ಕೇಳಿದ ಪ್ರಶ್ನೆಗೆ ಉತ್ತರ ಹೇಳುವುದಕ್ಕಾಗಿ ಶ್ರೀನಾರದರು ಸ್ಕಂದನಿಗೂ ಮತ್ತು ಮಹಾದೇವನಿಗೂ ನಡೆದ ಸಂಭಾಷಣೆಯೊಂದನ್ನು ಹೇಳುತ್ತಾರೆ - ತಾರಕಾಸುರನನ್ನು ಕೊಂದುದರಿಂದ ತನಗೆ

ಉಂಟಾದ ಬ್ರಹ್ಮಹತ್ಯಾದೋಷವನ್ನು ನೀಗಿಸಲು ಇಷ್ಟಪಟ್ಟ ಸ್ಕಂದನು, ''ನನ್ನ ಪಾತಕವನ್ನು ಹೋಗಲಾಡಿಸುವ ಪುಣ್ಯ ತೀರ್ಥವಾವುದು?'' ಎಂದು ಮಹಾದೇವನನ್ನು ಕೇಳಿದಾಗ, ಅದಕ್ಕೆ ಆ ಮಹಾದೇವನು ದಕ್ಷನ ತಲೆಯನ್ನು ಕಡಿದುಹಾಕಿದುದರಿಂದ ತನ್ನ ಕೈಯಲ್ಲಿ ಅಂಟಿಕೊಂಡ ಅವನ (ದಕ್ಷನ) ಕಪಾಲವನ್ನೂ, ಅದರಿಂದುಂಟಾದ ಬ್ರಹ್ಮಹತ್ಯಾ ದೋಷವನ್ನೂ ''ಪ್ರಯಾಗ'' ಎನ್ನುವ ವಿಷ್ಣುಕ್ಷೇತ್ರದ ಮಹಿಮೆಯಿಂದ ತಾನು ಹೋಗಲಾಡಿಸಿಕೊಂಡ ಸಮಾಚಾರವನ್ನು ಹೇಳಲು, ನಂತರ ಸ್ಕಂದನು ತನ್ನ ಪಾತಕವನ್ನು ಹೋಗಲಾಡಿಸುವ ಪುಣ್ಯ ಕ್ಷೇತ್ರವು ಯಾವುದು? ಎಂದು ಕೇಳಿದ ಪ್ರಶ್ನೆಯಲ್ಲಿ ಶ್ರೀವೇಂಕಟಗಿರಿಯು ವಿಷ್ಣುಕ್ಷೇತ್ರವಾಗಿಯೇ ಅರಿಯಲ್ಪಡುತ್ತದೆ. ಅದು ಹೀಗೆ ಕೆಳ ಕಂಡಂತಿದೆ.

ಮುಂಚೆ ತೋರಿಸಿದ ವಾಮನ ಪುರಾಣದಲ್ಲಿ ಎರಡನೆಯ ಅಧ್ಯಾಯದಲ್ಲಿ, ಪಾಪವನ್ನು ಹೋಗಲಾಡಿಸಿ ಶುಭವನ್ನು (ಒಳ್ಳೆಯದನ್ನು) ತರುವಂಥಹ ತನ್ನ ತಂದೆಯಮಾತನ್ನು ಕೇಳಿದ ಸ್ಕಂದನು ಅತ್ಯಂತ ಸಂತೋಷದಿಂದ, ತತ್ವಜ್ಞಾನಿಯಾದ ತಂದೆಯವರನ್ನು ಕುರಿತು, ''ಸ್ವಾಮಿ, ತಪಸ್ಸನ್ನು ಮಾಡಲು ಆಶಿಸುವ ನನಗೆ ಯಾವ ಪ್ರದೇಶದಲ್ಲಿ ಪ್ರತಿಬಂಧಗಳು ಏರ್ಪಡುವುದಿಲ್ಲವೋ, ಅಂಥಹ ತಪಸ್ಸಿಗೆ ಯೋಗ್ಯವಾದ, ಶುಭದಿಂದ ಕೂಡಿದ ಕ್ಷೇತ್ರ ಎಂಥಹುದು ಎಂದು ವಿಸ್ತರಿಸಿ ತಿಳಿಸಿ. ಸಂಸಾರ ದುಃಖ ನಿವಾರಕರೇ, ಆ ಕ್ಷೇತ್ರಕ್ಕೆ ನಿಮ್ಮ ಅಪ್ಪಣೆಯನ್ನು ಪಡೆದು ತಪಸ್ಸು ಮಾಡಲು ತೆರಳುವೆನು, ಯೋಗಿ ಶ್ರೇಷ್ಠರುಗಳು ವಂದಿಸುವ ಪಾದಗಳನ್ನುಳ್ಳವರೇ, ಹೇ ಶಂಕರನೇ! ಅಂಥಹ ಉತ್ತಮ ವಿಷ್ಣು ಕ್ಷೇತ್ರವನ್ನು ತಾವು ಉಪದೇಶಿಸಬೇಕು'' ಎಂದು ಮತ್ತೂ (ಪುನಃ) ಕೇಳಿದನು - ಎಂದಿದೆ.

ಇದಕ್ಕೆ ಉತ್ತರವಾಗಿ ಮಹಾದೇವನು ಹೇಳಿದ ಗ್ರಂಥ ಭಾಗದಲ್ಲೂ ಈ ವೇಂಕಟಗಿರಿಯು ಶ್ರೀಮನ್ನಾರಾಯಣನ ಸ್ಥಳವೆಂದು ತಿಳಿಯಾಗಿ ಕಂಡು ಬರುತ್ತದೆ, ಅದು ಹೇಗೆಂದರೆ-

ಹಿಂದೆ ತಿಳಿಸಿದ ಅದೇ ಎರಡನೆಯ ಅಧ್ಯಾಯದಲ್ಲಿ ಸಿದ್ಧರುಗಳ ಮತ್ತು ಋಷಿಗಳ ಸಮುದಾಯಗಳು ಆ ಬೆಟ್ಟದಲ್ಲಿ ಯಾವಾಗಲೂ ತಪಸ್ಸನ್ನಾಚರಿಸುತ್ತಲೇ ಇರುವರು, ಪಂಚಮರೂ. ಯವನರೂ ಮುಂತಾದ ಅವೈದಿಕರುಗಳೂ, ನಾಸ್ತಿಕರುಗಳಿಂದ ಆ ಪುಣ್ಯವಾದ, ಶ್ರೇಷ್ಠವಾದ ಪರ್ವತವನ್ನು ಹತ್ತಲು ಸಾಧ್ಯವಿಲ್ಲ. ಶುಕಮಹರ್ಷಿ ಮುಂತಾದ ಋಷಿಗಳು, ಭೃಗು ಮುಂತಾದ ತಪೋಧನರುಗಳು, ಪ್ರಹ್ಲಾದ ಮುಂತಾದ ಪುಣ್ಯ ಪುರುಷರುಗಳು, ಅಂಬರೀಷಾದಿಗಳಾದ ಅರಸರುಗಳು ಆ ವೇಂಕಟಾಚಲವನ್ನು ವಿಷ್ಣುವಿನ ಮತ್ತೊಂದು ದಿವ್ಯ ಶರೀರವೆಂದೇ ತಿಳಿದು ಅದರ ಮೇಲೆ ಪಾದವಿಟ್ಟು ಹತ್ತಲು ಅಂಜಿ ಅದರ ಸುತ್ತ ಮುತ್ತಲೂ ವಾಸಿಸುತ್ತಿದ್ದು,

ದರಿಂದ ಉದ್ಭವವಾಗಿ ಬರುವ ನದಿಗಳಲ್ಲಿ (ತೀರ್ಥ) ನೀರಾಡಿ, ತರ್ಪಣವನ್ನು ಟ್ಟು ಜನಾರ್ಧನನಾದ ಶ್ರೀಮನ್ನಾರಾಯಣನನ್ನು ಕಣ್ಣಿನಿಂದ ನೋಡಲು ಆಸೆಪಟ್ಟು ಪಸ್ಸನ್ನಾಚರಿಸುತ್ತಿದ್ದಾರೆ. ಯಾವುದರ ಶೃಂಗವನ್ನು ನೋಡಿದ ಮಾತ್ರಕ್ಕೇ ೞರವಾದ ಪಾಪಗಳು ನಾಶವಾಗುತ್ತದೆಯೋ ಅಂಥಹ ನಿತ್ಯವಾದ (ಶಾಶ್ವತವಾದ) ುದ್ಧತ್ವವನ್ನು ಆ ಗಿರಿರಾಜನು ಹೊಂದಿರುವನು. ಅಲ್ಲಿ ಶ್ರೀ ಮಹಾವಿಷ್ಣುವು ದಿವರಾಹ ಮೂರ್ತಿಯಾಗಿ ತಾನು ಉದ್ಧರಿಸಿದ ಧರಣಿ ದೇವಿ (ಭೂದೇವಿ) ಯನ್ನು ನ್ನ ಮಡಿಲಿನಲ್ಲಿ ಕೂರಿಸಿ ಆಲಂಗಿಸಿ ಕೊಂಡಿರುವ ರೂಪದಲ್ಲಿ ಸೇವೆಯನ್ನು ೧ಡುತ್ತಿದ್ದಾನೆ. ತ್ರಿಸಂಧ್ಯೆಗಳಲ್ಲೂ, ಪೂರ್ಣನಂಬಿಕೆಯಿಂದ, ಮುನಿಶ್ರೇಷ್ಠರುಗಳ ಮುದಾಯದಿಂದ ಪೂಜಿಸಲ್ಪಡುತ್ತಿದ್ದಾನೆ. ಅಂದಿನಿಂದ ಆ ಪುಣ್ಯಕ್ಷೇತ್ರವು ವರಾಹ ೀತ್ರವೆಂದು ಕರೆಯಲ್ಪಡುತ್ತಾ ಬರುತ್ತಿದೆ. ವರಾಹಸ್ವಾಮಿಯು ರಾಜಮಾನನಾಗಿರುವ ಅತ್ಯಂತ ಪುನೀತವಾದ ಆ ವೇಂಕಟಗಿರಿಯಲ್ಲಿ, ಭೂವರಾಹ ಸ್ವಾಮಿಯ ದೇವಾಲಯದಲ್ಲಿ, ನಿತ್ಯವ್ರತಗಳೊಡನೆ ಶಾಸ್ತ್ರದಲ್ಲಿ ವಿಧಿಸಿರುವ ಟ್ಟಳೆಯಂತೆ ಪವಿತ್ರವಾದ ವರಾಹಮಂತ್ರವನ್ನು ಎಡೆ ಬಿಡದೆ ಒಂದು ತಿಂಗಳಕಾಲ, ುನಸ್ಸನ್ನು ಹತೋಟಿಯಲ್ಲಿಟ್ಟುಕೊಂಡು ಜಪವನ್ನು ಮಾಡುವವರಿಗೆ ಮನೆ, ಭೂಮಿ ುಂತಾದುವುಗಳನ್ನು ಆಶಿಸುವವರಿಗೆ ಫಲಗಳು ಒಡನೆಯೇ ಕೈಗೂಡುವುದೆಂದು ದೆ.

ಇಲ್ಲಿ ''ವಿಷ್ಣುವಿನ ಬೇರೊಂದು ಶರೀರವಾಗಿಯೇ ಆ ಬೆಟ್ಟವನ್ನು ಾವಿಸಿದರು'' ಎಂದು - ಪ್ರಹ್ಲಾದ, ಅಂಬರೀಷ ಮೊದಲಾದ ಗವದ್ಭಕ್ತರುಗಳಿಂದಲೂ ಆ ರೀತಿ ಭಾವಿಸಲ್ಪಟ್ಟಿದೆ ಎಂದು ತಿಳಿಯಲ್ಪಟ್ಟ ಈ ೀಂಕಟಾಚಲವನ್ನು ಅಲ್ಪಜ್ಞರೂ ಕೂಡ ತಿಳಿಯಾಗಿ ''ಇದು ವಿಷ್ಣುಕ್ಷೇತ್ರವೇ ಸರಿ'' ಂದು ತಿಳಿದು ಕೊಳ್ಳುವಾಗ ಉನ್ಮತ್ತನಲ್ಲದ (ಮನೋವ್ಯಾಧಿಯಿಲ್ಲದ) ಯಾವೊಬ್ಬನೂ ಶೈವ ಕ್ಷೇತ್ರವೆಂದು ಕರೆಯಲಾರನು.

ಮೇಲೂ ಪ್ರಳಯಾರ್ಣವದಲ್ಲಿ ಮುಳುಗಿದ ಭೂ ದೇವಿಯನ್ನು ಎತ್ತಿ ಅವಳನ್ನು ಮಡಿಲಿನಲ್ಲಿ ಕೂರಿಸಿಕೊಂಡು ಆಲಂಗಿಸಿಕೊಂಡು, ಈ ವೇಂಕಟಾಚಲದಲ್ಲಿ ವರಾಹ ಸ್ವಾಮಿಯು ವಿರಾಜಮಾನನಾಗಿರುವ ಕಾರಣದಿಂದ, ಈ ಗಿರಿಯನ್ನು ವರಾಹ ಕ್ಷೇತ್ರವೆಂದೇ ಇಲ್ಲಿ ಹೇಳಲ್ಪಟ್ಟಿರುವುದರಿಂದ, ''ಇದು ಶೈವ ಕ್ಷೇತ್ರವೋ?'' ಂದು ಸಂದೇಹಿಸುವುದಕ್ಕೆ ಸ್ವಲ್ಪವೂ ಎಡೆಯಿಲ್ಲ.

ಮೇಲೂ, ತನ್ನ ತಂದೆಯಾದ ಮಹಾದೇವನು ದಕ್ಷನ ತಲೆಯನ್ನು ಕಡಿದು ಎಸೆದುದರಿಂದ, ತನಗುಂಟಾದ ಬ್ರಹ್ಮಹತ್ಯೆ ಮುಂತಾದ ದೋಷಗಳು ಪ್ರಯಾಗ ನ್ನು ವಿಷ್ಣುಕ್ಷೇತ್ರವನ್ನು ಸೇರಿ ಅದರ ಪ್ರಭಾವದಿಂದ ವಿಮುಕ್ತಿಹೊಂದಿದ ಕಥೆಯನ್ನು,

ಆ ಮಹಾದೇವನೇ ಹೇಳಿದುದನ್ನು ಕೇಳಿ, ಆ ರೀತಿಯೇ ತಾನೂ ತಾರಕಾಸುರವಧೆಯಿಂದ ತನಗುಂಟಾದ ಬ್ರಹ್ಮಹತ್ಯೆ ಮುಂತಾದ ದೋಷಗಳನ್ನು, ವಿಷ್ಣುವನ್ನು ಪೂಜಿಸಿ ಆದರಿಂದ ಹೋಗಲಾಡಿಸಿಕೊಳ್ಳುವುದಕ್ಕೆ ಇಷ್ಟಪಟ್ಟು ತಂದೆಯಾದ ಮಹಾದೇವನಿಂದ ಒಂದು ವಿಷ್ಣುಮಂತ್ರವನ್ನು ಉಪದೇಶವಾಗಿ ಸ್ವೀಕರಿಸಿ, ಅತ್ಯಂತ ಪುಣ್ಯವಾದ ವಿಷ್ಣುಸ್ಥಳವಾದ, ಆ ಮಹಾದೇವನಿಂದಲೇ ಉಪದೇಶಿಸಲ್ಪಟ್ಟ ಶ್ರೀವೇಂಕಟಾಚಲವನ್ನು ಸೇರಿ ತಪಸ್ಸನ್ನಾಚರಿಸಿದನು ಎಂಬುದೇ ಪುರಾಣದಿಂದ ತಿಳಿಯಬರುವುದರಿಂದ, ಈ ವೇಂಕಟಾಚಲವು ವಿಷ್ಣುಕ್ಷೇತ್ರವೆಂದು ಅತ್ಯಂತ ವಿಶಾಲವಾಗಿ ತಿಳಿಯಲ್ಪಡುತ್ತದೆ. ''ಶಂಕರರೇ! ಉತ್ತಮವಾದ ವಿಷ್ಣುಕ್ಷೇತ್ರವನ್ನು ದಾಸನಿಗೆ ಉಪದೇಶಿಸಬೇಕು'' ಎಂದು ಮುಂಚೆ ತಿಳಿಸಿದ ವಾಕ್ಯದಲ್ಲಿ , ವಿಷ್ಣು ಕ್ಷೇತ್ರವೇ ತಪಸ್ಸನ್ನಾಚರಿಸಲು ಕುಮಾರಸ್ವಾಮಿಯಿಂದ ಕೇಳಲ್ಪಟ್ಟಿತೆಂಬುದು ಅತ್ಯಂತ ತಿಳಿಯಾಗಿದೆ.

ಈ ಹಿಂದೆ ಹೇಳಿದ ವಾಮನ ಪುರಾಣದ ಎರಡನೆಯ ಅಧ್ಯಾಯದಲ್ಲಿಯೇ ''ಹೇ ಶಂಭುವೇ! ವೈಷ್ಣವ ಮಂತ್ರಗಳಲ್ಲಿ ಎಲ್ಲಕ್ಕಿಂತಲೂ ಉತ್ತಮವಾದುದೂ, ವರಗಳನ್ನು ಕೊಡುವುದೂ, ಆ ವಿಷ್ಣುವನ್ನೇ ಹೊಂದಲು ಉಪಾಯವೂ ಆಗಿರುವ ವಿಷ್ಣುಮಂತ್ರವನ್ನು ನನಗೆ ಉಪದೇಶಿಸಬೇಕು'' ಎಂದು ಮೇಲ್ಕಂಡ ಕೆಲಸ (ತಪಸ್ಸು)ವು ಕ್ಲೇಶ ವಿಲ್ಲದಂತೆ ಮಾಡಿ ಮುಗಿಸುವ ಕುಮಾರಸ್ವಾಮಿಯಿಂದ ಪ್ರಾರ್ಥಿಸಲ್ಪಟ್ಟ ಶಂಭು ಆದವರು, ಒಡನೆಯೇ ಮಂತ್ರ ಗ್ರಂಥದಲ್ಲಿ ಕಂಡ ವಿಧಿಯಿಂದ ಶ್ರೀರಾಮಕಾರಕ ಮಂತ್ರವನ್ನುಪದೇಶಿಸಿದರು. ಸ್ಕಂದನೂ ಸಹ ತನ್ನ ತಂದೆಯಿಂದ ಆ ಮಹಾಮಂತ್ರವನ್ನು ಪಡೆದು ಆನಂದಿಸಿದನು - ಎಂಬ ವಾಕ್ಯಗಳಿಂದ ತಪಸ್ಸುಮಾಡುವ ಸಂದರ್ಭದಲ್ಲಿ ಜಪಿಸುವ ಮಂತ್ರವಾಗಿ ವಿಷ್ಣುಮಂತ್ರವೇ ಮಹಾದೇವನಿಂದ ಉಪದೇಶಿಸಲ್ಪಟ್ಟು ಕುಮಾರ ಸ್ವಾಮಿಯಿಂದ ಸ್ವೀಕರಿಸಲ್ಪಟ್ಟಿತೆಂಬುದೂ ಅತಂತ ತಿಳವಾಗಿದೆ.

ಈ ಶ್ರೀವೇಂಕಟಾಚಲವು ಕುಮಾರಸ್ವಾಮಿಯು ತಪಸ್ಸು ಮಾಡಲು ಉಪಯೋಗಿಸಲ್ಪಟ್ಟಿತು ಎಂಬುದನ್ನೇ ಆಧರಿಸಿ ಇದು ಅವನದೇ ಸ್ಥಳವೆಂದು ಹೇಳಿದರೆ, ಇದಕ್ಕೆ ಮುಂಚೆ, ಬಹಳಕಾಲದ ಮುಂಚೆ, ಅತಿ ಉಗ್ರವಾದತಪಸ್ಸನ್ನಾಚರಿಸಿದ ವಾಯುದೇವನ ಸ್ಥಳವಾಗಿಯೇ ಇದು ಏಕೆ ಆಗಬಾರದು?

ಹಲವು ರೀತಿ ಹೇಳಿಕೆ ನೀಡಿ ಪ್ರಯೋಜನವೇನು? ಶ್ರೀ ವೇಂಕಟನಾಥನಾದ ಭಗವಾನ್ ಶ್ರೀನಿವಾಸನು ಇಲ್ಲಿ ನೆಲೆಸುವುದಕ್ಕೆ ಮುಂಚೆಯೇ ಆ ಭಗವಂತನನ್ನು ಕುರಿತು ಈ ಬೆಟ್ಟದಲ್ಲಿ ಚತುರ್ಮುಖ ಬ್ರಹ್ಮನೂ, ಪರಮ ಶಿವನೂ, ಇಂದ್ರನೂ

ುಂತಾದ ಎಲ್ಲಾದೇವತೆಗಳೂ, ಎಲ್ಲಾಋಷಿಗಳೂ, ಯಕ್ಷ, ರಾಕ್ಷಸ, ಗಂಧರ್ವ, ನ್ನರರುಗಳೂ, ಶಂಖ, ದಶರಥ ಮುಂತಾದ ರಾಜ ಋಷಿಗಳೂ ತಪಸ್ಸನ್ನು ಇಲ್ಲಿ ಚರಿಸಿದ್ದರು ಎಂಬುದು ಪುರಾಣಗಳಿಂದ ವಿಶದವಾಗಿ ತಿಳಿದು ಬರುವುದರಿಂದ, ಈ ರೀತಿ ತಪಸ್ಸು ಮಾಡಿದ ಅನೇಕರಿರುವಲ್ಲಿ, ಅವರುಗಳಲ್ಲಿ ಒಬ್ಬನಾದ ಕುಮಾರ ಸ್ವಾಮಿಯದೇ ಈ ಸ್ಥಳವೆಂದು ತಲೆಕೆಟ್ಟವನಲ್ಲದೇ ಬೇರೊಬ್ಬನೂ ಹೇಳಲಾರನು.

ಹೀಗೆ ಅದೇ ವಾಮನ ಪುರಾಣದ ಹದಿನಾಲ್ಕನೆಯ ಅಧ್ಯಾಯದಲ್ಲಿ 33 ಂಬ ಸಂಖ್ಯಾ ಸೂಚಕ ವಚನದಲ್ಲಿ, ಅಗಸ್ತ್ಯ ಋಷಿ ಮುಂತಾದವರುಗಳೂ, ಉಪರಿಚರವಸ್ಸೂ ಮುಂತಾದವರೂ ಶ್ರೀವೇಂಕಟಾಚಲದಲ್ಲಿ ಒಬ್ಬರನ್ನೊಬ್ಬರು ಂಧಿಸಿ ಒಟ್ಟಾಗಿ ಸೇರಿ ಸ್ವಾಮಿ ಪುಷ್ಕರಿಣಿಯಕಡೆಗೆ ಹೋಗುವಾಗ ಇದು ರ್ವೋತ್ತಮ ವಿಷ್ಣುಕ್ಷೇತ್ರವೆಂದು ಹೇಳಿದರೆಂದು ತಿಳಿದುಬರುತ್ತದೆ. ಅದು ೆಳಕಂಡಂತೆ ಹೀಗಿದೆ:- ಮಹಾರಾಜರುಗಳೂ, ಋಷಿಗಳಲ್ಲಿ ಶ್ರೇಷ್ಠರುಗಳೂ ಮಾರ್ಗವನ್ನು ಕ್ರಮಿಸುತ್ತಾ ಈ ವೇಂಕಟಾದ್ರಿಯನ್ನು ಕಂಡು ಅತ್ಯಂತ ಸಂತೋಷದಿಂದ ಒಬ್ಬರಿಗೊಬ್ಬರು - ಹಲವಾರು ಮರಗಳಿಂದ ತುಂಬಿದ, ಭೂಮಿಯಲ್ಲಿರುವ ಈ ಗಿರಿಯು ಪ್ರಪಂಚವನ್ನು ಸೃಷ್ಟಿಸಿದ ಶಾರ್ಙ್ಗಪಾಣಿಯಾದ ವಾಸುದೇವನಿಗೆ ಯಾವಾಗಲೂ ಅತ್ಯಂತ ಪ್ರಿಯವಾದುದಲ್ಲವೇ? ಹಿಂದಿನ ಋಷಿಗಳು ಈ ಗಿರಿಯನ್ನು ಹತ್ತಿ ಹುಟ್ಟುಸಾವುಗಳಲ್ಲದ ಪುರಾಣ ಪುರುಷನಾದ ದೇವಾಧಿದೇವನನ್ನು ಕಂಡರಲ್ಲವೇ? ಪ್ರಪಂಚವನ್ನು ಪೋಷಿಸುವ ಪುರುಷೋತ್ತಮನ ಭಕ್ತರುಗಳು ಅವನನ್ನು ಸ್ತುತಿಸುತ್ತಲೇ ಈ ದಿವ್ಯ ಗಿರಿಯನ್ನು ಹತ್ತಿ ಆ ದೇವನನ್ನು ದರ್ಶಿಸುತ್ತಾರಲ್ಲವೇ? ಶ್ರೀಮನ್ನಾರಾಯಣನು ವಿರಾಜಮಾನನಾಗಿರುವ ಸ್ಥಳಗಳಲ್ಲಿ ಇದನ್ನು ಬಿಟ್ಟರೆ ಬೇರೊಂದಿಲ್ಲವೆಂಬುವುದನ್ನು ''ನಾರಾಯಣಾದ್ರಿ'' ಎಂಬ ಇದರ ಹೆಸರೊಂದೇ ಹೇಳುತ್ತದೆಯಲ್ಲವೇ? ಎಂದು ಪರಸ್ಪರ ಸಂಭಾಷಿಸಿಕೊಂಡುದು ಹೇಳಲ್ಪಟ್ಟಿದೆ.

ಈ ರೀತಿ, ಈ ವಾಮನ ಪುರಾಣದಲ್ಲಿಯೇ, ವರಾಹ ಮೂರ್ತಿ, ಶ್ರೀನಿವಾಸ ಇವರುಗಳ ಅವಿರ್ಭಾವ, ಅವರುಗಳು ಒಬ್ಬರನ್ನೊಬ್ಬರು ಅಗಲದಿರುವಿಕೆ, ವಿಷ್ಣು ಭಕ್ತರೆಲ್ಲರಿಂದಲೂ ಆ ಇಬ್ಬರೂ ಆರಾಧಿಸಲ್ಪಡುತ್ತಿರುವಿಕೆ ಮುಂತಾದ - ಬೇರೆ ಅರ್ಥ ನೀಡಿ ಮೋಹಿಸಲು ಸಾಧ್ಯವಾಗದೇ, ಅತ್ಯಂತ ಪ್ರಬಲವಾದ, ಅಲ್ಲಲ್ಲೇ ತಿಳಿದುಬರುವ ಸಾಕ್ಷ್ಯಗಳು - ಮುಂತಾದುವುಗಳಿಂದ ಈ ಗಿರಿಯು ಮಹಾವಿಷ್ಣುವಿನ ಸ್ಥಳವೇ ಎಂಬುವುದು, ಮರೆ ಮಾಚಿಸಲೋ ಅಥವಾ ಅಲ್ಲಗಳೆಯಲೋ ಸಾಧ್ಯವಿಲ್ಲವೆಂಬುದು ಗೊತ್ತಾಗುತ್ತದೆ.

ಹೀಗೆಯೇ ಶ್ರೀ ವೇಂಕಟಾಚಲ ಮಾಹಾತ್ಮ್ಯವನ್ನು ಹೇಳುವ ಎಲ್ಲಾ ಪುರಾಣಗಳ ಭಾಗಗಳಲ್ಲೂ ಈ ಮಹಾಗಿರಿಯು ಶ್ರೀಮಹಾವಿಷ್ಣುವಿನ ಸ್ಥಳವೆಂದೇ ಚೆನ್ನಾಗಿ ತಿಳಿದು ಬರುತ್ತದೆ.

ವರಾಹ ಪುರಾಣದ ವೇಂಕಟಾಚಲ ಮಾಹಾತ್ಮ್ಯದ ಮೊದಲನೆಯ ಅಧ್ಯಾಯದ ಪ್ರಥಮ ಭಾಗದಲ್ಲಿ ೩೩ ಎಂದು ಸೂಚಿಸಿರುವ ಸಂಖ್ಯೆಯ ವಚನದಲ್ಲಿ ವೇಂಕಟಾಚಲ ಮಾಹಾತ್ಮ್ಯಕ್ಕೆ ಮುನ್ನುಡಿಯಾಗಿ ಆಗಿರುವ ಋಷಿಯ ಪ್ರಶ್ನೆ - (ಋಷಿಗಳು) - ''ವೇದವ್ಯಾಸರ ಕೃಪೆಗೆ ಪಾತ್ರರಾದ, ಸಕಲಧರ್ಮಗಳನ್ನೂ ಅರಿತ ಹೇ ಸೂತ ಭಗವನ್! ಎಲ್ಲಾ ವಿಷ್ಣುಸ್ಥಳಗಳಲ್ಲಿಯೂ, ಯಾವ ಸ್ಥಳದಲ್ಲಿ ವಿಷ್ಣುವಿಗೆ ಪ್ರಿಯವು ಹೆಚ್ಚಾಗಿದೆಯೋ, ಯಾವ ಸ್ಥಳದಲ್ಲಿ ಎಲ್ಲ ಶುಭಕರ್ಮಗಳೂ ಸಿದ್ಧಿಯನ್ನು ಪಡೆಯುತ್ತವೆಯೋ, ಅತ್ಯಂತ ಆಶ್ಚರ್ಯವಾದ ವಿಷ್ಣುವಿನ ಲೀಲೆಗಳು ಎಲ್ಲಿ ನಡೆಯುತ್ತದೆಯೋ, ಎಲ್ಲಿ ವಾಸಮಾಡುವ ಜನರಿಗೆ ಶ್ರೀಹರಿಯ ಸಾಕ್ಷಾತ್ಕಾರ ಉಂಟಾಗುತ್ತದೆಯೋ, ಯಾವ ಸ್ಥಳದಲ್ಲಿ ಕೇಳಿ ಬರುವ ಸಮಾಚಾರಗಳು ಕಿವಿಗಳಿಗೆ ಇಂಪಾಗಿ ಸಂತೋಷವನ್ನುಂಟುಮಾಡತ್ತದೆಯೋ, ಮತ್ತು ಯಾವ ಸಂಗತಿಯನ್ನು ಕೇಳಿದನಂತರ ಬೇರೇನನ್ನೂ ಕಿವಿಯಿಂದ ಕೇಳಲು ಬೇಡವಾಗಿರುವುದೋ, ಕಣ್ಣಿಂದ ಕಾಣಲು ಸುಂದರವೂ, ಆಶ್ಚರ್ಯಜನಕವೂ ಆಗಿರುವ ಅಂಥಹ ವಿಷ್ಣುಕ್ಷೇತ್ರವನ್ನು ನಮಗೆ ಕೃಪೆಮಾಡಿ ತಿಳಿಸಬೇಕು,'' ಎಂದಿದೆ.

ವರಾಹ ಪುರಾಣದಲ್ಲಿರುವ, ಭೂದೇವಿ ಮತ್ತು ವರಾಹ ಸಂಭಾಷಣೆಯೆಂದು ಪ್ರಖ್ಯಾತವಾದ ಎರಡನೆಯ ಭಾಗದಲ್ಲೂ ಪ್ರಥಮ ಅಧ್ಯಾಯದಲ್ಲಿ, ''ಶ್ರೀವೇಂಕಟಾಚಲವೆಂದು ಪ್ರಸಿದ್ಧಿಹೊಂದಿದ ಶ್ರೇಷ್ಠವಾದ ವಾಸುದೇವಾಲಯವು ಇದೆ'' (ಶ್ಲೋಕ - ೪೨) ಎಂದು ಪ್ರಸಿದ್ಧವಾದುದಂತೆ ತೋರಿಸಿರುವುದರಿಂದ ವಿಷ್ಣುಕ್ಷೇತ್ರ ವೆಂಬ ಈ ಕ್ಷೇತ್ರದ ಇರುವಿಕೆಯು ಹೇಳಲ್ಪಟ್ಟಿತು.

ಪದ್ಮ ಪುರಾಣ ಭಾಗದಲ್ಲೂ ಪ್ರಥಮ ಅಧ್ಯಾಯದಲ್ಲಿ ೨೪ ಎಂಬ ಸಂಖ್ಯೆಯಿಂದ ಸೂಚಿಸಲ್ಪಟ್ಟಿರುವ ವಚನದಲ್ಲಿ, ಮೇರು ಪರ್ವತದ ಶೃಂಗದಲ್ಲಿ ಬ್ರಹ್ಮದೇವನ ಸಭೆಯಲ್ಲಿ (ಋಷಿ ಮುನಿಗಳು ಪುಣ್ಯಕ್ಷೇತ್ರಗಳ ಹಿರಿಮೆಗಳನ್ನು ಕೊಂಡಾಡಿ ಸಂಭಾಷಿಸುತ್ತಿರುವ ಘಟ್ಟದಲ್ಲಿ) - 'ಕಥೆಯ ಪ್ರಾರಂಭದಲ್ಲಿ ಮಹರ್ಷಿಯು, ಈ ಸಭೆಯಲ್ಲಿ ನಾರಾಯಣ ಗಿರಿಯ ಅತ್ಯಂತ ಹಿರಿಮೆಯನ್ನೂ, ಅಲ್ಲಿ ಶಾರ್ಙ್ಗವೆಂಬ ಧನುಸ್ಸನ್ನು ಹೊಂದಿರುವ ಶ್ರೀನಿವಾಸನ ದಿವ್ಯಮಂಗಳ ವಿಗ್ರಹದ ಇರುವಿಕೆಯನ್ನೂ ಕೇಳಿ, ಆ ಗಿರಿಯನ್ನು ಕಾಣಲು ಆಸೆಯನ್ನೂ, ಶೀಘ್ರವಾಗಿ ಕಾಣುವ ಇಷ್ಟವನ್ನೂ ಹೊಂದಿ, ಬ್ರಹ್ಮದೇವನಿಗೆ ಬಿನ್ನವಿಸಿ, ಅವರನ್ನು ನಾಲ್ಕು

ದಿಕ್ಕುಗಳಿಗೂ ಹೋಗಿ ನಮಸ್ಕರಿಸಿ, ಅನುಮತಿಯನ್ನು ಪಡೆದು, ದಕ್ಷಿಣ ದಿಕ್ಕನ್ನು ಕುರಿತು ಪ್ರಯಾಣಿಸಿದರು. ಬ್ರಹ್ಮಜ್ಞಾನವನ್ನು ಹೊಂದಿರುವ ಆ ಮುನಿಯು ಅತ್ಯಂತ ಪ್ರಾಚೀನರಾದ (ಪುರಾಣ ಪುರುಷನಾದ) ಪುರುಷೋತ್ತಮನೆಂದು ಕರೆಯಲ್ಪಡುವ ವಾಸುದೇವನಲ್ಲಿ ಭಕ್ತಿಯನ್ನಿಟ್ಟು ಹಸನ್ಮುಖಿಯಾಗಿ ಪ್ರಯಾಣಿಸಿ ಅಲ್ಲಿ ನಾರಾಯಣನು ವಾಸಿಸುತ್ತಿರುವ ನಾರಾಯಣಗಿರಿಯನ್ನು ಕಂಡರು'' ಎಂದು - ವಿಷ್ಣುಭಕ್ತೋತ್ತಮರುಗಳು ಪಡೆಯಲು ಯೋಗ್ಯವಾದ ವಿಷ್ಣುಕ್ಷೇತ್ರವಿದು ಎಂಬುದೇ ಈ ಗಿರಿಗೆ ಇದೆ ಎಂದು ಹೇಳಲ್ಪಟ್ಟಿತು.

ಗಾರುಡ ಪುರಾಣಕ್ಕೆ ಸೇರಿದ ವೇಂಕಟಾಚಲ ಮಾಹಾತ್ಮ್ಯವನ್ನು ಹೇಳುವ ೬೩ ಎಂಬ ಸಂಖ್ಯೆಯಿಂದ ಸೂಚಿಸಿರುವ ಅಧ್ಯಾಯದಲ್ಲಿ, ಅರುಂಧತಿ - ವಸಿಷ್ಠ ಸಂವಾದ ಪ್ರಕರಣದಲ್ಲಿ - ''ಅತ್ಯಂತ ಹಿರಿಮೆಯನ್ನು ಪಡೆದಿರುವ ವಿಷ್ಣುಕ್ಷೇತ್ರದಲ್ಲಿ, ಒಂದು ಪುಣ್ಯ ತೀರ್ಥದಲ್ಲಿ, ಕೆಲವುದಿನಗಳು ವಿಷ್ಣುವನ್ನು ಕುರಿತು ತಪಸ್ಸನ್ನು ಮಾಡಿ ಅದರ ಫಲದಿಂದ, ಪ್ರಪಂಚದ ಜನರಿಗಾಗಿ ಆತನ ದಿವ್ಯವಾಣಿಯಿಂದ ಎಲ್ಲಾ ಧರ್ಮಗಳಿಗಿಂತ ಅತ್ಯಂತ ಶ್ರೇಷ್ಠವಾದ ಧರ್ಮವು ಯಾವುದು ಎಂಬುದನ್ನು ಹೊರಬರುವಂತೆ ಮಾಡಿ, ಆ ಹಿರಿಧರ್ಮವನ್ನು ಜನರಿಗೆ ತೋರಿಸಿಕೊಡಬೇಕು ಎಂಬುದು ನನ್ನ ಅಭಿಲಾಷೆ. ಸ್ತ್ರೀಯರಿಗೆ ಅವರುಗಳ ಪತಿಗಳಿಂದ ಅನುಮತಿಪಡೆದು ತಪಸ್ಸನ್ನು ಮಾಡುವುದು ಉತ್ತಮವಲ್ಲವೇ? ಅಂಥಹ ವಿಷ್ಣುಕ್ಷೇತ್ರವನ್ನೂ, ಉತ್ತಮ ತೀರ್ಥವನ್ನೂ ಉಪದೇಶಿಸಬೇಕು'' - ಎಂದು ಅರುಂಧತೀದೇವಿಯು ಕೇಳಿದ ಪ್ರಶ್ನೆಯಿಂದಲೂ, ಅದಕ್ಕೆ ವಸಿಷ್ಠರು, ''ಸುವರ್ಣಮುಖೀ ನದಿಯ ತಟದಲ್ಲಿ ಎಲ್ಲ ಗಿರಿಕುಲಗಳಲ್ಲೂ ಉತ್ತಮವಾದ, ವೇಂಕಟಾಚಲವೆಂದು ಹೆಸರನ್ನು ಹೊಂದಿದ ಗಿರಿಯೊಂದಿದೆ. ಆ ಗಿರಿಯಲ್ಲಿ ಮಹಾವಿಷ್ಣುವಿಗೆ ಶ್ವೇತದ್ವೀಪ (ಕ್ಷೀರಸಾಗರಕ್ಕೆ ಸೇರಿದ ಪ್ರದೇಶ) ಶ್ರೀವೈಕುಂಠ ಮತ್ತು ಸೂರ್ಯ ಮಂಡಲಗಳ ನಡುಪ್ರದೇಶ ಮುಂತಾದುವುಗಳಿಗಿಂತ ಅಧಿಕವಾದ ಪ್ರೀತಿ ಉಂಟು-'' ಎಂದು ಉತ್ತರ ನೀಡಿರುವುದರಿಂದಲೂ, ಈ ಗಿರಿಯು ವಿಷ್ಣುವಿನ ಸ್ಥಳವಾದ ತಿರುಪತಿ ಎಂಬ ಸ್ಥಿತಿಯು ಹೊರಪಡಿಸಲ್ಪಟ್ಟಿತು.

ಬ್ರಹ್ಮಾಂಡ ಪುರಾಣದಲ್ಲಿನ ವೇಂಕಟಾಚಲ ಮಾಹಾತ್ಮ್ಯಭಾಗದಲ್ಲಿಯೂ, ಮೊದಲನೆಯ ಅಧ್ಯಾಯದಲ್ಲಿರುವ ನಾರದ - ಭೃಗು ಸಂಭಾಷಣೆಯಲ್ಲಿ - ಭೃಗು ಮಹರ್ಷಿಯು, ''ಪೂಜನೀಯರಾದ ನಾರದ ಮಹರ್ಷಿಗಳೇ! ತಾವು (ಪ್ರಪಂಚವನ್ನೆಲ್ಲಾ) ಎಲ್ಲ ಲೋಕಗಳನ್ನೂ ಸುತ್ತಿರುವುದರಿಂದ (ತ್ರಿಲೋಕ ಸಂಚಾರಿ), ಲೋಕ ವ್ಯವಹಾರಗಳನ್ನೆಲ್ಲಾ, ಇತಿಹಾಸಗಳನ್ನೆಲ್ಲಾ ಅರಿತಿರುವಿರಿ. ಈ ಲೋಕದಲ್ಲಿರುವ ಕ್ಷೇತ್ರಗಳೆಲ್ಲವುಗಳಿಗಿಂತ ಶ್ರೇಷ್ಠವಾದ ಕ್ಷೇತ್ರವೂ, ತೀರ್ಥಗಳಲ್ಲೆಲ್ಲಾ

ಉತ್ತಮವಾದ ತೀರ್ಥವು ಇರುವುದಾದಲ್ಲಿ, ತಪಸ್ಸನ್ನೇ ನಿಧಿಯನ್ನಾಗಿ ಹೊಂದಿರುವ ಬ್ರಾಹ್ಮಣಾಗ್ರೇಸರರೇ! ಅದನ್ನು ದಾಸನಾದ ನನಗೆ ಹೇಳಬೇಕು, ಎಲ್ಲಿ ಮನಸ್ಸಿನಿಂದಲೂ ಚಿಂತಿಸಲಸಾಧ್ಯವಾದ ಹಿರಿಮೆಯನ್ನು ಹೊಂದಿದ ಭಗವಂತನಾದ ವಿಷ್ಣುವು ಶ್ರೀದೇವಿಯೊಂದಿಗೆ ಕ್ರೀಡಿಸುತ್ತಾ ಎಲ್ಲ ಜನರಿಗೂ ಸಾಕ್ಷಾತ್ಕಾರನಾಗಿ ವರಗಳನ್ನು ನೀಡುತ್ತಾ ಬಿಜಯಗೈದಿಹನೋ ಆ ಸ್ಥಳವನ್ನು ತಿಳಿಸಬೇಕು," - ಎಂಬಿವೇ ಮೊದಲಾದ ಪ್ರಶ್ನೆಗಳನ್ನು ಕೇಳಿದುದರಿಂದಲೂ, ಅದನ್ನು ಕೇಳಿದ ನಾರದಮಹರ್ಷಿಯು, "ಬ್ರಾಹ್ಮಣೋತ್ತಮರೇ! ಕ್ಷೇತ್ರದಲ್ಲಿ ಅತಿ ಮಿಗಿಲಾದ ಕ್ಷೇತ್ರದ ಬಗ್ಗೆ ಸಾವಧಾನವಾಗಿ ಕೇಳಿ. ಭೂಲೋಕದಲ್ಲಿ ವೇಂಕಟಗಿರಿಯೆಂಬ ಪ್ರಸಿದ್ಧವಾದ ಪುಣ್ಯಕ್ಷೇತ್ರವಿದೆ. ಎಲೈ ಮಹಾಮುನಿಯೇ! ಶ್ರೀರಮಣನು ಯಾವ ಬೆಟ್ಟದಲ್ಲಿ, ತನ್ನ ವೈಕುಂಠಧಾಮವನ್ನೂ ಬಿಟ್ಟು ಬಂದು ಶ್ರೀದೇವಿಯೊಡನೆ ಕೂಡಿ ಸಂತೋಷದಿಂದ ಇದ್ದುಕೊಂಡು ಸಮಸ್ತದೇವತೆಗಳಿಂದಲೂ ಆರಾಧಿಸಲ್ಪಟ್ಟು ಇರುತ್ತಿದಾನೆಯೋ, ಆ ಪುಣ್ಯವಾದ ಶ್ರೀ ಗಿರಿಯು, ಸಮಸ್ತಪಾತಕಗಳನ್ನೂ ಹೋಗಲಾಡಿಸಿ ಪುಣ್ಯವನ್ನು ಒಂದಕ್ಕೆ ಹತ್ತರಂತೆ ಉತ್ಪತ್ತಿಮಾಡತಕ್ಕದ್ದು. ಅದರ ಹಿರಿಮೆಯನ್ನು (ಮಹಿಮೆ) ದೇವತೆಗಳಿಂದಲೂ, ಬ್ರಹ್ಮದೇವನಿಂದಲೂ ವರ್ಣಿಸಲು ಸಾಧ್ಯವಿಲ್ಲವಾದುದು. ಅಷ್ಟೇ ಏಕೆ? ಅದು ಇಂಥಹುದು ಎಂದು ಮನಸ್ಸಿನಿಂದಲೂ ನೆನೆದುಕೊಳ್ಳಲು ಅಸಾಧ್ಯವಾದದು" - ಎಂಬಿವೇ ಮೊದಲಾದ ಉತ್ತರಗಳನ್ನು ನೀಡಿರುವುದರಿಂದ ಈ ಕ್ಷೇತ್ರವು ವಿಷ್ಣುವಿನ ಕ್ಷೇತ್ರವೆಂದೇ ತಿಳಿಯಲ್ಪಡುತ್ತದೆ.

ಹೀಗೆ ವೇಂಕಟಾಚಲ ಮಾಹಾತ್ಮ್ಯವನ್ನು ಹೇಳುವ ಇತರ ಪುರಾಣವಿಭಾಗಗಳಲ್ಲಿಯೂ, ಶ್ರೀವೇಂಕಟಾಚಲವು ವಿಷ್ಣುಸ್ಥಳವೆಂದೇ ಹೇಳಿರುವುದನ್ನು ಕಾಣತಕ್ಕದ್ದು. ಈ ರೀತಿಯೇ ಪುರಾಣಗಳಲ್ಲಿ ಈ ಬೆಟ್ಟವು ವೈಕುಂಠ ಲೋಕದಿಂದ ಗರುಡ ನಿಂದ ತರಲ್ಪಟ್ಟ ಕ್ರೀಡಾಸ್ಥಳವೆಂದೂ, ಆದಿಶೇಷನ ಅವತಾರ ರೂಪವೆಂದೂ ಹೇಳಲ್ಪಡುವುದರಿಂದಲೂ, ವೈಕುಂಠಾಚಲ, ಶೇಷಾದ್ರಿ, ಗರುಡಾಚಲ ಎಂಬ ಹೆಸರುಗಳಿಂದ ಗುರುತಿಸಲ್ಪಟ್ಟಿರುವುದರಿಂದಲೂ, ಇದು ವಿಷ್ಣುಕ್ಷೇತ್ರವೆಂಬ ನಿರೂಪಣೆಯು ವಿಸ್ತಾರವಾಗಿ ತಿಳಿಯಲ್ಪಡುತ್ತದೆ.

ವೈದಿಕರಾದ ಬ್ರಾಹ್ಮಣರುಗಳೆಲ್ಲರೂ, ವೇದ ಮತ್ತು ಧರ್ಮ ಶಾಸ್ತ್ರಗಳಲ್ಲಿ ಹೇಳಿರುವ ನಿತ್ಯಕರ್ಮಗಳನ್ನು ಅನುಷ್ಠಾನ ಮಾಡುವಾಗ, ದೇಶಕಾಲಗಳನ್ನು ತಿಳಿಸುವ ಸಂದರ್ಭಗಳಲ್ಲಿ ಇದನ್ನು ವರಾಹ ಕ್ಷೇತ್ರವೆಂದು ತಿಳಿಸುವವರಾಗಿ ಕಂಡುಬರುತ್ತಾರೆ.

ಹಲವನ್ನು ಹೇಳಿ ಪ್ರಯೋಜನ ವೇನು? ಆದ್ಯಂತವಿಲ್ಲದ ಸತತವಾಗಿ, ವಿಭಿನ್ನವಾಗಿ, ಧಾರಾಕಾರವಾಗಿ ಪಠಿಸಲ್ಪಟ್ಟು ಬರುವುದಾದ ಅಪೌರುಷೇಯವಾದ (ಪುರುಷನಾವನಿಂದಲೂ ರಚಿಸಲ್ಪಡದ) ಅಜ್ಞಾನ, ಸಂದೇಹ, ಕಾಮ, ಮದ,

ಮಾತ್ಸರ್ಯ ಮುಂತಾದ ಯಾವ ದೋಷವೂ ಕಿಂಚಿತ್ತೂ ಇಲ್ಲದ ವೇದವೂ ಸಹ ವೇಂಕಟಾಚಲವನ್ನು ವಿಷ್ಣುಕ್ಷೇತ್ರವೆಂದೇ ತಿಳಿಸುತ್ತದೆ.

ಋಗ್ವೇದದ ಎಂಟನೆಯ ಅಷ್ಟಕ, ಎಂಟನೆಯ ಅಧ್ಯಾಯ, ಹದಿಮೂರನೆಯ ವರ್ಗದಲ್ಲಿ, ''ಅರಾಯಿ ಕಾಣೇ ವಿಕಟೇ ಗಿರಿಂಗಚ್ಛ ಸದಾನ್ವೇ ಶ್ರಿಂಬಿಠಸ್ಯ ಸತ್ವಭಿಃ ತೇಭಿಷ್ಟ್ವಾ ಛಾದಯಾಮಸಿ'' ಎಂಬ ಮೊದಲನೆಯ ಋಕ್ (ಮಂತ್ರ). ಶ್ರೀವೇಂಕಟಾಚಲದ ಬಗ್ಗೆ, ಭವಿಷ್ಯೋತ್ತರ ಪುರಾಣಕ್ಕೆ ಸೇರಿದ ವೇಂಕಟಾಚಲ ಮಾಹಾತ್ಮ್ಯದ ನಾಲ್ಕನೆಯ ಅಧ್ಯಾಯದಲ್ಲಿ, ''ಅರಾಯಿಕಾಣೇ ವಿಕಟೇ ಶ್ರಿಂಗಚ್ಛ'' ಎಂದು ಪ್ರಾರಂಭಿಸುವ ಋಗ್ವೇದಮಂತ್ರದಿಂದ ಶ್ರೀವೇಂಕಟಾಚಲವು ಗುರುತಿಸಲ್ಪಟ್ಟಿದೆ ಎಂದು ಹಿರಿಯರು ತಿಳಿದಿರುತ್ತಾರೆ. ಆದಿಶೇಷ ಪರ್ವತವಾಗಿರುವ ಈ ಉತ್ತಮ ಪರ್ವತವು (ವೇದವು ಹೇಳಿರುವುದರಿಂದ) ವೇದಮಯವಾಗಿದೆ - ಎಂದು ವಿವರಿಸಲ್ಪಟ್ಟಿದೆ. (ವೇದದಲ್ಲಿ ಸಂದೇಹವುಂಟಾದಾಗ ಪುರಾಣವನ್ನು ಕೊಂಡಲ್ಲವೇ ಅರ್ಥೈಸುವುದು ಎಂದು ಬಾರ್ಹಸ್ಪತ್ಯ ಸ್ಮೃತಿಯಲ್ಲಿರುವದನ್ನು ಗಮನಿಸತಕ್ಕದ್ದು).

ಈ ವೇದ ಮಂತ್ರಕ್ಕೆ ಈ ರೀತಿ ಅರ್ಥವಿವರಣೆಯನ್ನು ತಿಳಿದುಕೊಳ್ಳಬಹುದು - ವೇದ ಪುರುಷನು ಧರ್ಮ, ಅರ್ಥ, ಕಾಮ ಮತ್ತು ಮೋಕ್ಷಗಳೆಂಬ ಚತುರ್ವಿಧ ಪುರುಷಾರ್ಥಗಳನ್ನು (ಮಾನವರು ಆಶಿಸುವ ಫಲಗಳನ್ನು) ಹೊಂದಲಿಚ್ಛಿಸುವ ಜೀವಾತ್ಮಗಳನ್ನು ಕರೆದು, ಅವುಗಳನ್ನು ಪಡೆಯಲು ಅನುಸರಿಸಬೇಕಾದ ಉಪಾಯಗಳನ್ನು ಉಪದೇಶಿಸುತ್ತಾನೆ. ಈ ಮಂತ್ರದಲ್ಲಿ ಸರಿಯಾದ ಜಾಗವನ್ನು ಗುರುತಿಸಿ ''ತ್ವಯಿ'' ಎಂಬ ಒಂದು ಪದವನ್ನು ಸೇರಿಸಿಕೊಳ್ಳಬೇಕು.

(೧) (ಎಲೈಮಗುವೇ, ಜೀವನೇ!) ತ್ವಯಿ ಅರಾಯೇ ಸತಿ = ನೀನು ಈ ಲೋಕದ ಸಂಪತ್ತು, ಸ್ವರ್ಗಾದಿ ಮೇಲಿರುವ ಲೋಕಗಳ ಸಂಪತ್ತು ಇಲ್ಲದನಾಗಿದ್ದರೆ, ತ್ವಯಿ ಕಾಣೇ ಸತಿ = ನೀನು ಬಾಹ್ಯ ಚಕ್ಷುಷಗಳನ್ನೋ ಅಥವಾ ಅಂತಃ ಚಕ್ಷುಷಗಳನ್ನೋ ಇಲ್ಲದವನಾಗಿದ್ದರೆ, ತ್ವಯಿ ವಿಕಟೇ ಸತಿ = ನೀನು ಆಧ್ಯಾತ್ಮಿಕ (ಶರೀರದಲ್ಲಿ ಉಂಟಾಗುವ ಈತಿ ಬಾಧೆಗಳು), ಆದಿ ಭೌತಿಕ (ಮಾನವ, ಪ್ರಾಣಿ ಮುಂತಾದುವುಗಳಿಂದುಂಟಾಗುವ ತೊಂದರೆಗಳು), ಆದಿ ದೈವಿಕ (ಸಿಡಿಲು, ಮಿಂಚು, ಉಷ್ಣ ಮುಂತಾದ ದೇವತೆಗಳಿಂದ ಉಂಟಾಗುವ ತೊಂದರೆಗಳು) ಗಳೆಂಬ ಅತ್ಯಂತ ದುಃಖಗಳನ್ನು ಪಡೆದಿರುವವನಾಗಿದ್ದರೆ, ತ್ವಯಿ ಸದಾನ್ವೇ ಸತಿ = ಮೇಲೆ ತಿಳಿಸಿದ ಪುರುಷಾರ್ಥಗಳನ್ನು ಹೊಂದಲಾರದಂತೆ ತಡೆಯುವ (ಅಸುರರುಗಳಂತೆ) ಶತ್ರುಗಳನ್ನು ಹೊಂದಿದ್ದರೆ, ಶ್ರಿಂ ಪಿಠಸ್ಯ = (ಶ್ರಿಂ ಪೀಠಸ್ಯ) ಶ್ರೀದೇವಿಗೆ ತನ್ನವಕ್ಷಃಸ್ಥಳವನ್ನೇ ಪೀಠವನ್ನಾಗಿ ಕೊಟ್ಟ ಶ್ರೀನಿವಾಸನ ಗಿರಿಂ= ಬೆಟ್ಟವನ್ನು

ಕುರಿತು, ಶ್ರಿಂ ಬಿಠಸ್ಯ ಸತ್ತ್ವಭಿಃ=ಶ್ರೀನಿವಾಸನ ಪ್ರಾಣಿಗಳೊಂದಿಗೆ (ಭಕ್ತರುಗಳೊಂದಿಗೆ) ಗಚ್ಛ = (ಹಿಂದೆ ತಿಳಿಸಿದ ಆಪತ್ತುಗಳನ್ನೆಲ್ಲಾ ತೀರಿಸಿಕೊಳ್ಳುವುದಕ್ಕಾಗಿ) ಹೋಗಿ ಸೇರು. (ಸೇರಿ) ತೇಭಿ = ಅವರುಗಳ (ಆ ಭಕ್ತರುಗಳ) ಮೂಲಕ ತ್ವಾ = ನೀನು ಶಿರಿಂ ಪಿಠಂ ಛಾದಯಾಮಸಿ = ಶ್ರೀನಿವಾಸನನ್ನು ಪ್ರಾರ್ಥಿಸಿಕೊಳ್ಳಲು ಅರ್ಹತೆಯನ್ನು ಹೊಂದಿರುವೆ. ಆದುದರಿಂದ ಮುಂಚೆ ತಿಳಿಸಿದ ಸಂಪತ್ತುಗಳು ಇಲ್ಲದಿರುವಿಕೆಯಿಂದಲೂ, ಧಾರಾಕಾರವಾಗಿ ಬರುತ್ತಿರುವ ದುಃಖಗಳು ಉಂಟಾದಾಗ ಶ್ರೀನಿವಾಸನ ದಿವ್ಯಗಿರಿಯನ್ನು (ವೇಂಕಟಗಿರಿಯನ್ನು) ಕುರಿತು, ಅವನ ಭಕ್ತರುಗಳೊಡನೆ ಹೋಗಿ, ಅವರುಗಳನ್ನು ಮುಂದಿಟ್ಟುಕೊಂಡು, ಅವರಿಂದ ನಿನಗೆ ಬೇಕಾದ ಫಲವನ್ನು ಯಾಚಿಸತಕ್ಕವನಾಗಿರುತ್ತೀಯೆ, ಎಂದು ವೇದಪುರುಷನ ಉಪದೇಶವನ್ನು ನೋಡಿ.

(೨) ಹಾಗಲ್ಲದಿದ್ದರೆ, ಸಂಸ್ಕೃತ ಭಾಷೆಯಲ್ಲಿ ಕ್ರಿಯಾಪದಗಳಿಗೆ ಹಲವು ಅರ್ಥಗಳು ಇರುವುದರಿಂದ, ಛಾದಯಾಮಸಿ ಎಂಬುವುದಕ್ಕೆ ''ಸಮರ್ಪಿಸಲು ಅರ್ಹತೆಯನ್ನು ಹೊಂದಿರುತ್ತೀಯೆ'' ಎಂಬ ಅರ್ಥವನ್ನು ಕೊಳ್ಳುವುದು ಸರಿಯಾಗುತ್ತದೆ, ಶಿರಿಂ ಪಿಠಸ್ಯ ತ್ವಾ ತೇಭಿಃ ಛಾದಯಾಮಸಿ = ಶ್ರೀವಾಸನಿಗೆ ನಿನ್ನನ್ನು ಆ ಭಕ್ತರುಗಳ ಮೂಲಕ (ಕಾಣಿಕೆಯನ್ನಾಗಿ) ಸಮರ್ಪಿಸಲು ಅರ್ಹತೆಯನ್ನು ಹೊಂದಿರುತ್ತೀಯೆ ಎನ್ನುವುದು ಪ್ರತಿಪದಾರ್ಥ. ಆದ್ದರಿಂದ ಮುಂಚೆ ತಿಳಿಸಿದ ದುಃಖಗಳು ಸಂಭವಿಸಿದಾಗ, ''ಶ್ರೀನಿವಾಸನ ತಿರುಪತಿ ಬೆಟ್ಟವನ್ನು ಕುರಿತು, ಅವನ ಭಕ್ತರುಗಳೊಡನೆ ಹೋಗಿ ಸೇರಿ, ಅವರುಗಳನ್ನು ಮುಂದಿಟ್ಟುಕೊಂಡು, ನಿನ್ನನ್ನು ಸಮರ್ಪಿಸಲು ಅರ್ಹನಾಗಿರುತ್ತೀಯೆ'' ಎಂದು ವೇದ ಪುರುಷನು ಉಪದೇಶಿಸಿರುತ್ತಾನೆ, ಎಂದೂ ತಿಳಿಯಿರಿ.

(ಶ್ರೀನಿವಾಸನನ್ನು ಪ್ರಾರ್ಥಿಸಿಕೊಂಡರೆ) ಅಥವಾ ಶ್ರೀನಿವಾಸನಿಗೆ ನಿನ್ನನ್ನೇ ಅರ್ಪಿಸಿಕೊಂಡರೆ, ಸಂಕಟಗಳು ನೀಗಿ ಧರ್ಮ ಮುಂತಾದ ಚತುರ್ವಿಧ ಪುರುಷಾರ್ಥಗಳೂ ಪ್ರಾಪ್ತವಾಗುತ್ತದೆ ಎಂಬುದು ಆಂತರಿಕವಾದ ಅಭಿಪ್ರಾಯ.

ಮಂತ್ರದಲ್ಲಿರುವ ಕೆಲವು ಪದಗಳ ಬಗ್ಗೆ ಕೆಲವಿವರಣೆಗಳು ಹೀಗಿವೆ- ಅರಾಯಿ ಎಂದರೆ ಸಂಪತ್ತು ವಿಕಟೇ - ಕಟಂ ಎಂದರೆ ದಾಹ - ತಾಪ, ಸದ್ವಾನೇ - ವೇದದಲ್ಲಿ 'ದಾರವಂ' ಎಂಬುದು 'ದಾರ್ವ್ವಂ' ಎಂದು ಬದಲಾವಣೆ ಹೊಂದಿರುವಂತೆ, 'ದಾನವಃ' ಎಂಬುದು 'ದಾನ್ವಃ' ಎಂದು ಬದಲಾವಣೆ ಹೊಂದಿ, 'ಶಿರಿಂ ಬಿಠಸ್ಯ' - 'ತ್ರಯಂಬಕಃ ಎಂಬುದು ''ತ್ರಿಯಂಬಕಃ ''ಎಂದೂ 'ಸ್ವಃ' ಎಂಬುದು 'ಸುವಃ' ಎಂದು ವ್ಯತ್ಯಾಸಗೊಂಡಂತೆ, ''ಶ್ರೀಂ'' ಎಂಬುದು 'ಶಿರಿಂ'

ಎಂದು ವ್ಯತ್ಯಾಸಗೊಂಡಿತು. 'ಪೀಠಃ' ಎಂಬುದು 'ಬಿಠಃ' ಎಂದು ಬದಲಾಗಿದೆ. ಅಲ್ಲದೆ ವಿಶೇಷವಾಗಿ (ಸ್ಥಿರವಾಗಿ) ಇರುವಸ್ಥಳವೆಂದೂ ವ್ಯತ್ಯಾಸಗೊಂಡಿರುವುದಾಗಿಯೂ ತೆಗೆದುಕೊಳ್ಳಬಹುದು 'ವಿಭ್ರಾಜಮಾನಃ' ಎಂಬುವುದು 'ಬಿಭ್ರಾಜಮಾನಃ' ಎಂದು ಬದಲಾಯಿಸಿತೆಂದು ತಿಳಿದುಕೊಳ್ಳುವಂತೆ ಇದನ್ನೂ ತಿಳಿದುಕೊಳ್ಳಬಹುದು.

ಮುಂಚೆ ತಿಳಿಸಿದ ಮೊದಲ ಅರ್ಥದಲ್ಲಿ 'ಶಿರಿಂ ಬಿಠಸ್ಯ' (ಶ್ರೀನಿವಾಸನ) ಎನ್ನುವ ಷಷ್ಠೀವಿಭಕ್ತಿಯ ಪದವು, 'ಸತ್ವಭಿಃ' (ಭಕ್ತರುಗಳೊಡನೆ) - ಗಿರಿಂ (ಬೆಟ್ಟವನ್ನು ಕುರಿತು) ಎಂಬ ಎರಡು ಪದಗಳೊಂದಿಗೆ ಸೇರುವಾಗ ಸಾಧಾರಣವಾಗಿ ಸೇರುವಂತೆಯೇ ಸೇರುತ್ತದೆ. 'ಛಾದಯಾಮಸಿ' (ಯಾಚಿಸುವವನಾಗು) ಎಂಬುದರೊಂದಿಗೆ ಸೇರುವಾಗ ಮಾತ್ರ ಅರ್ಥಕ್ಕೆ ತಕ್ಕಂತೆ 'ಶ್ರಿಂ ಬಿಠಂ' (ಶ್ರೀನಿವಾಸನನ್ನು) ಎಂದು ದ್ವಿತೀಯಾ ವಿಭಕ್ತಿಯ ಅರ್ಥವನ್ನು ಕೊಂಡು ಸೇರುತ್ತದೆ. ಎರಡನೆಯ ಅರ್ಥದಂತೆ ಆದಲ್ಲಿ, 'ಛಾದಯಾಮಸಿ' (ಸಮರ್ಪಿಸಲು ಅರ್ಹತೆಯನ್ನು ಹೊಂದಿರುತ್ತೀಯೆ) ಎಂಬುದರೊಂದಿಗೆ 'ಶ್ರಿಂಬಿಠಸ್ಯ' ಎಂಬುದು ಸೇರುವಾಗ, ಶ್ರೀನಿವಾಸನಿಗೆ ಎಂಬ ಅರ್ಥವುಂಟಾಗಿ ಷಷ್ಠೀವಿಭಕ್ತಿ ಪದವಾಗಿಯೇ ಇದ್ದು ಸೇರುತ್ತದೆ. 'ಸತ್ತ್ವೈಃ' ಎಂಬುದು 'ಸತ್ತ್ವಭಿಃ ಎಂದೂ 'ತೈಃ' ಎಂಬುವುದು 'ತೇಭಿಃ' ಎಂದೂ ವ್ಯತ್ಯಾಸಗೊಂಡಿದೆ. ಮೊದಲನೆಯ ಅರ್ಥವನ್ನು ಸೂಚಿಸುವಾಗ ದ್ವಿತೀಯಾ ವಿಭಕ್ತಿಯ ಪದವಾದ 'ತ್ವಾ' ಎಂಬುವುದು 'ನೀನು' ಎಂಬರ್ಥವನ್ನು ಸೂಚಿಸಬೇಕಾದುದರಿಂದ ಪ್ರಥಮಾವಿಭಕ್ತಿಯ ಅರ್ಥವನ್ನು ಸೂಚಿಸುವ ಶಬ್ದವಾಗಿ ಮಾರ್ಪಟ್ಟಿದೆ. 'ಸಹಸ್ರ ಶೀರ್ಷೋ ದೇವಃ' ಎಂದು ಪ್ರಥಮಾ ವಿಭಕ್ತಿಯ ಅರ್ಥವನ್ನು ಕೊಡುವ 'ಸಹಸ್ರ ಶೀರ್ಷಂ ದೇವಂ' ಎಂದು ದ್ವಿತೀಯಾ ವಿಭಕ್ತಿಯ ಪದಗಳಾಗಿ ಮಾರ್ಪಟ್ಟಿರುವುದನ್ನು ಇದಕ್ಕೆ ಉದಾಹರಣೆಯಾಗಿ ತೆಗೆದುಕೊಳ್ಳಬಹುದು. ಎರಡನೆಯ ಅರ್ಥದಲ್ಲಿ, 'ನಿನ್ನನ್ನು' ಎಂದು ಹೇಳಬೇಕಾದುದರಿಂದ 'ತ್ವಾ' ಎಂಬುದು ಯಥಾವತ್ತಾಗಿಯೇ ದ್ವಿತೀಯಾ ವಿಭಕ್ತಿಯ ಪದವಾಗಿ ಸೇರುತ್ತದೆ. ಇವೆಲ್ಲವೂ ಛಾಂದಸವಾದ (ವೇದದಲ್ಲುಳ್ಳ) ಮೋಡಿಗಳು. ಪದ್ಯಗಳಲ್ಲಿ (ಶ್ಲೋಕಗಳಲ್ಲಿ) ವಿಕಾರವಿರುವುದು ಸ್ವಾಭಾವಿಕವಲ್ಲವೇ?

ಈ ಮಂತ್ರದಲ್ಲಿ ಶ್ರೀನಿವಾಸನ ಧಾಮವಾದ ಶ್ರೀ ವೇಂಕಟಾದ್ರಿಯನ್ನೂ, ಶ್ರೀನಿವಾಸನನ್ನೂ ಅವನ ಭಕ್ತರುಗಳನ್ನು ಮುಂದಿಟ್ಟುಕೊಂಡು ಪಡೆಯಬಹುದಾದ ನಿಲುವನ್ನು ಸ್ಪಷ್ಟವಾಗಿ ವೇದವು ಘೋಷಿಸಿರುವುದರಿಂದ ಈ ದಿವ್ಯವಾದ ವೇಂಕಟಗಿರಿಯು ವಿಷ್ಣು ಕ್ಷೇತ್ರವೇ ಎನ್ನುವುದು ಅಲ್ಲಗಳೆಯಲಸಾಧ್ಯವಾಗಿ ಸ್ಥಿರಪಟ್ಟಿರುತ್ತದೆ.

ಈ ರೀತಿ ಭಗವದ್ರಾಮಾನುಜರು ಮಾಡಿದ ಅತ್ಯಂತ ಅದ್ಭುತವಾದ, ಪ್ರಬಲವಾದ, ನಿಪುಣವಾದ. ನಿರೂಪಣೆಯಿಂದ ಕೂಡಿದ ವಾದದಿಂದ ಯಾದವರಾಜನು. ಶ್ರೀವೇಂಕಟಾಚಲದ ಬಗ್ಗೆ 'ಇದು ಶಿವಕ್ಷೇತ್ರವೇನೋ' ಎಂಬ ಸಂದೇಹದಿಂದ ವಿಮುಕ್ತನಾದನು.

ಈ ರೀತಿ ಯತಿರಾಜರಾದ ಶ್ರೀರಾಮಾನುಜ ಮುನಿಯವರು ಒಳ್ಳೆಯ ಹಲವು ಯುಕ್ತಿಗಳನ್ನು ಹೇಳಿ ಪಂಡಿತ ಮನೋಹರವಾಗಿ ಮಾಡಿದ ನಿರೂಪಣೆಗಳಿಂದ ಅರಸನ ಸಂದೇಹವು, ಹೇಗೆ ಸೂರ್ಯನ ಪ್ರಖರವಾದ ಬೆಳಕಿನಿಂದ ಕಾರ್ಗತ್ತಲೆಯು ನೀಗಿಹೋಗುವುದೋ ಆ ರೀತಿ ನೀಗಿತಲ್ಲವೇ?

ಶ್ರೀ ಅನಂತಾರ್ಯರು ಪೋಣಿಸಿದ ಶ್ರೀವೇಂಕಟಾಚಲ ಇತಿಹಾಸ ಮಾಲೆಯಲ್ಲಿ 'ಶ್ರೀವೇಂಕಟಗಿರಿಯು ಅನ್ಯದೇವತೆಗಳಿಗೆ ಸೇರಿದ ಕ್ಷೇತ್ರವೋ' ಎಂಬ ಸಂದೇಹವನ್ನು ಸಮೂಲಾಗ್ರವಾಗಿ ತುಂಡರಿಸಿದ ಮೊದಲನೆಯ ಪುಷ್ಪಗುಚ್ಛವು ಸಂಪೂರ್ಣಗೊಂಡಿತು.

ಶ್ರೀಮತೇ ರಾಮಾನುಜಾಯ ನಮಃ



# ಎರಡನೆಯ ಪುಷ್ಪಗುಚ್ಛ

ಇದಾದ ನಂತರ ಶ್ರೀ ಭಗವದ್ರಾಮಾನುಜ ಯೋಗಿವರ್ಯರು ಪುನಃ ಯುಕ್ತಿಗಳಿಂದ ಕೂಡಿದ ತಮ್ಮ ಮಾತುಗಳಿಂದ ಅರಸನನ್ನು ತೃಪ್ತಿಗೊಳಿಸಲು ಇಷ್ಟಪಟ್ಟು, ''ಎಲೈ ಯಾದವ ರಾಜನೇ! ಸ್ವಾಮಿ ಪುಷ್ಕರಿಣಿಯ ಬಗ್ಗೆ ಶೈವರುಗಳಿಂದ ನಿನ್ನಲ್ಲಿ ಉಂಟು ಮಾಡಲ್ಪಟ್ಟ ಮೋಹ (ಸಂದೇಹ)ವನ್ನು ಬೇರೊಂದಿಗೆ ಕಿತ್ತು ಹಾಕುತ್ತೇನೆ. ಕೇಳುವವನಾಗು'' ಎಂದು ಹೇಳಿದರು.

## ಶ್ರೀರಾಮಾನುಜ ಮುನಿವರ್ಯರು

ಸ್ವಾಮಿಪುಷ್ಕರಿಣಿ ಎಂಬುವ ಶಬ್ದದ್ವಯದಿಂದ ಕೂಡಿದ ಪೂರ್ಣ ಹೆಸರಿನಲ್ಲಿ ಇರುವ 'ಸ್ವಾಮಿ' ಎಂಬುವ ಶಬ್ದವು - ಪೂರ್ಣ ಹೆಸರಿನಲ್ಲಡಗಿರುವ ಒಂದು ಭಾಗದಿಂದ ಆ ಒಟ್ಟು ಹೆಸರಿನ ಅರ್ಥವನ್ನು ಸೂಚಿಸುವುದೆಂಬ ವಾದದಂತೆ - ಕುಮಾರ ಸ್ವಾಮಿಯನ್ನು ಸೂಚಿಸುವುದೆಂದೂ, ಸ್ವಾಮಿ ಪುಷ್ಕರಿಣಿಯ ತಟದಲ್ಲಿ ಕುಮಾರ ಸ್ವಾಮಿಯು ತಪಸ್ಸನ್ನಾಚರಿಸಿದನೆಂದೂ, ಅದರಿಂದಲೇ ಆ ಪುಷ್ಕರಿಣಿಯು ಅವರದಾಗಿಯೇ ಸ್ವಾಮಿ ಪುಷ್ಕರಿಣಿ ಎಂದು ಕರೆಯಲ್ಪಡುವುದಾಗಿಯೂ, ಇದನ್ನನುಸರಿಸಿ ಅದು ಅನ್ಯ ದೇವತೆಗಳ ತೀರ್ಥವು, ವಿಷ್ಣುವಿನ ತೀರ್ಥವಲ್ಲ ಎಂದು ಶೈವರುಗಳು ಹೇಳಿದುದು ಸರಿಯಲ್ಲ. ಅದು ಕೂಡದು. ಎಲ್ಲಾ ತೀರ್ಥಗಳಿಗೂ ಸ್ವಾಮಿ ಎಂಬ ಅರ್ಥವನ್ನು ಕೊಂಡು ಸ್ವಾಮಿಯಾದ ಪುಷ್ಕರಿಣಿ ಸ್ವಾಮಿ ಪುಷ್ಕರಿಣಿ ಎಂದು ಕರ್ಮಧಾರಯ ಸಮಾಸವನ್ನು ಅನುಸರಿಸಿಯೇ ಸ್ವಾಮಿ ಪುಷ್ಕರಿಣಿ ಎಂಬ ಹೆಸರು ಬಂದಿತೆಂದು ಪುರಾಣಗಳು ವಿವರಿಸಿರುವುದೂ, 'ಕುಮಾರ ಸ್ವಾಮಿ' ಎಂಬ ಒಟ್ಟು ಪದಗಳಲ್ಲದೇ 'ಸ್ವಾಮಿ' ಎಂಬ ಪ್ರತ್ಯೇಕ ಶಬ್ದವು ಕುಮಾರ ದೇವರನ್ನು ಸೂಚಿಸುವುದಾಗಿ ಯಾವ ಗ್ರಂಥದಲ್ಲೂ ಉಪಯೋಗಿಸದ ಕಾರಣ ಒಟ್ಟು ಹೆಸರಿನಲ್ಲಿರುವ ಒಂದು ಭಾಗದಿಂದ ಆ ಹೆಸರಿನ ಅರ್ಥವನ್ನು ಸೂಚಿಸುತ್ತದೆಂಬ ವಾದವು ಇಲ್ಲಿ ಸರಿ ಹೊಂದುವುದಿಲ್ಲದುದರಿಂದಲೂ, ಅದಕ್ಕೆ ಪ್ರತಿಯಾಗಿ, ಎಲ್ಲಾ ಲೋಕಗಳಿಗೂ ನಾಯಕನಾದ (ಸ್ವಾಮಿಯಾದ) ಶ್ರೀಮನ್ನಾರಾಯಣನನ್ನೇ ಬಿಡಿ

ಪದದಿಂದ "ಸ್ವಾಮಿ"ಯು ಸೂಚಿಸುತ್ತದೆ ಎಂಬುದು ಸರಿಯಾಗಿ ಹೊಂದುವ ಕಾರಣದಿಂದ, ಸ್ವಾಮಿಯ ಪುಷ್ಕರಿಣಿ ಎಂಬ ಷಷ್ಠಿ ವಿಭಕ್ತಿಯ ಪದಗುಚ್ಛವಾಗಿದೆ ಎಂದು ಅಭಿಪ್ರಾಯ ಪಟ್ಟರೂ ಸಹ ಆ ಹೆಸರಿನಿಂದ ಆ ಪುಷ್ಕರಿಣಿಯು ವಿಷ್ಣುತೀರ್ಥವೆಂದೇ ಸ್ಥಿರಪಡುವುದರಿಂದಲೂ, ಇವುಗಳೇ ಶೈವರುಗಳ ವಾದಗಳ ಅನರ್ಹತೆಗೆ ಕಾರಣಗಳಾಗುತ್ತವೆ, ಅದರ ತಟದಲ್ಲಿ ಇತರ ಅನೇಕ ಮಹನೀಯರಂತೆ ಸ್ಕಂದ ದೇವನೂ ಕೆಲವು ದಿನಗಳು ತಪಸ್ಸನ್ನಾಚರಿಸಿದುದನ್ನುಕೊಂಡು, ಆ ಪುಷ್ಕರಿಣಿಯು ಕುಮಾರ ಸ್ವಾಮಿಯದೇ ಎಂದು ಹೇಳುವುದು ಹೊಂದುವುದಿಲ್ಲ.

ವಾದ ಮಾಡುವ ಶೈವರುಗಳಿಂದ ತಮ್ಮ ಪಕ್ಷಕ್ಕೇ ಅನುಕೂಲವಾದ (ಅವರುಗಳ) ಅಭಿಮಾನಕ್ಕೆ ಪಾತ್ರವಾದ ವಾಮನ ಪುರಾಣದಲ್ಲಿಯೇ ೨೫ನೇ ಅಧ್ಯಾಯದಲ್ಲಿ ೪೪ ಎಂಬ ಸಂಖ್ಯೆಯಿಂದ ಸೂಚಿಸಿರುವ ವಚನಗಳಲ್ಲಿ - "ತಮಿಳುನಾಡಿನಲ್ಲಿ ಅತ್ಯಂತ ಪುಣ್ಯವಾದುದೂ, ದೇವತೆಗಳಿಂದ ಸೇವೆ ಮಾಡಲ್ಪಟ್ಟದ್ದೂ, ಪರ್ವತಗಳಲ್ಲಿ ಅತ್ಯಂತ ಘನವಾದದ್ದೂ, ವೇಂಕಟವೆಂಬ ಪ್ರಸಿದ್ಧಿ ಹೊಂದಿದ ಒಂದು ಪರ್ವತವಿದೆ. ಅದರ ಶಿಖರದಲ್ಲಿ ಪಾಪಗಳನ್ನು ಹೋಗಲಾಡಿಸುವುದೂ, ಪುಣ್ಯಗಳನ್ನು ಕೊಡುವುದೂ, ಎಲ್ಲಾ ಕೋರಿಕೆಗಳನ್ನೂ ನೆರವೇರಿಸುವುದೂ, ಸ್ವಾಮಿ ಪುಷ್ಕರಿಣಿಯೆಂಬ ಪ್ರಸಿದ್ಧಿ ಹೊಂದಿರುವುದೂ ಆದ ಅತಿ ದೊಡ್ಡ ಕೊಳವೊಂದಿದೆ. ಬ್ರಾಹ್ಮಣರೇ! ಅದು ಮೂರು ಲೋಕಗಳಲ್ಲಿ ಕಂಡ ತೀರ್ಥಗಳಿಗೆಲ್ಲಾ ಸ್ವಾಮಿಯಲ್ಲವೇ?" - ಎಂದೂ, "ಮಾರ್ಕಂಡೇಯರೇ! ಯಾವ ಕಾರಣದಿಂದ ಇದು ಎಲ್ಲಾ ತೀರ್ಥಗಳಿಗೂ ಸ್ವಾಮಿಯಾಯಿತೋ ಅದರಿಂದಲೇ ಸ್ವಾಮಿ ಪುಷ್ಕರಿಣೀ ಎಂಬ ದಿವ್ಯ ನಾಮವು ಇದಕ್ಕೆ ಉಂಟಾಯಿತು" ಎಂದು (ಬ್ರಹ್ಮದೇವನಿಂದ ಮಾರ್ಕಂಡೇಯರಿಗೆ) ಹೇಳಲ್ಪಟ್ಟಿದೆ.

ವರಾಹಪುರಾಣದ ಮೊದಲನೆಯ ಭಾಗದ ಆರನೆಯ ಅಧ್ಯಾಯದಲ್ಲಿನ ೩೮ ಎಂಬ ಸಂಖ್ಯೆಯಾಗಿ ಉಳ್ಳ ವಚನಗಳಿಂದ ಸ್ವಾಮಿ ಪುಷ್ಕರಿಣಿ ಎಂಬ ಪದವು ಆ ಕೊಳಕ್ಕೆ ವ್ಯುತ್ಪತ್ತಿಯಿಂದ ಬಂದ ಹೆಸರು. ತೀರ್ಥಗಳಿಗೆಲ್ಲಾ ಸ್ವಾಮಿಯಾದುದರಿಂದ ಸ್ವಾಮಿ ಪುಷ್ಕರಿಣೀಯೆಂದೇ ಹಿರಿಯರಿಂದ ಹಿಂದಿನಿಂದಲೂ ಆ ಪದವು ಕಾರಣಾರ್ಥಕ ಹೆಸರಾಗುತ್ತದೆಂದು ಹೇಳಲ್ಪಟ್ಟಿರುತ್ತದೆ. ಈಗ ಭಗವಂತನಿಂದ ಇದಕ್ಕೆ ತೀರ್ಥಗಳಲ್ಲೆಲ್ಲಾ ಸ್ವಾಮಿಯಾಗಿರುವುದು ವರವಾಗಿ ಹೇಳಲ್ಪಟ್ಟಿರುವುದರಿಂದ ಇದು ಕಾರಣಾರ್ಥಕ ಹೆಸರೆಂಬುವುದು ಭಗವಂತನಿಗೂ ಸಮ್ಮತವಾಯಿತು - ಎಂದು ಹೇಳಿದೆ.

ಅದರಲ್ಲಿಯೇ ಹದಿನೆಂಟನೆಯ ಅಧ್ಯಾಯದಲ್ಲಿ ೫೦ ಎಂಬ ಸಂಖ್ಯೆಯಿಂದ ಸೂಚಿಸಲ್ಪಟ್ಟ ವಚನದಲ್ಲಿ - ಲೋಕಪಿತಾಮಹನಾದ ಬ್ರಹ್ಮದೇವನೇ! ಈ ಕೊಳವು ತೀರ್ಥಗಳೆಲ್ಲವಕ್ಕೂ ನಾಯಕನಾಗಿ (ಪ್ರಧಾನವಾಗಿ) ರುವುದರಿಂದ ಸ್ವಾಮಿ ಪುಷ್ಕರಿಣಿ ಎಂಬ ಅರ್ಥದೊಂದಿಗೆ ಹೊಂದಿಕೊಂಡಿರುವ ಹೆಸರಿನಿಂದ ಕರೆಯಲ್ಪಡುತ್ತದೆ. ಈ ಭೂಮಂಡಡದಲ್ಲಿ ಯಾವ ಗಂಗೆ ಮೊದಲಾದ ಪ್ರಸಿದ್ಧ ತೀರ್ಥಗಳಿರುತ್ತವೆಯೋ ಅವುಗಳೆಲ್ಲವೂ ಈ ತೀರ್ಥದಿಂದಲೇ ಉಂಟಾದುವು. ಪಿತಾಮಹನೇ ! 'ಐರಮ್ಮದ ತಟಾಕ'ವೆಂದು ಶ್ರೀ ವೈಕುಂಠದಲ್ಲಿ ಯಾವ ತೀರ್ಥವು ಇರುವುದೋ, ಅದೇ ಇಲ್ಲಿ ಸ್ವಾಮಿ ಪುಷ್ಕರಿಣಿ ಎಂದು ಹೇಳಲ್ಪಡುತ್ತದೆ - ಎಂದು ಇದೆ.

ಅದರಲ್ಲಿಯೇ ಇಪ್ಪತ್ತೊಂಭತ್ತನೆಯ ಅಧ್ಯಾಯದಲ್ಲಿ ೬೧ ಎಂಬ ಸಂಖ್ಯೆಯಿಂದ ಸೂಚಿಸಿರುವ ಶ್ರೀ ವೇಂಕಟೇಶ ಅಷ್ಟೋತ್ತರ ಶತನಾಮಾವಳಿಯಲ್ಲಿ - ತೀರ್ಥಗಳಿಗೆಲ್ಲಾ ಸ್ವಾಮಿಯಾದ ಈ (ಸ್ವಾಮಿ) ಪುಷ್ಕರಿಣಿಯಲ್ಲಿ (ಕೊಳ್ಳದಲ್ಲಿ) ಸ್ನಾನ ಮಾಡಿದ ಜನಗಳಿಗೆ ಅವರುಗಳು ಕೋರಿದ ವರಗಳನ್ನು ನೀಡುವ ವೇಂಕಟೇಶನಿಗೆ ನಮಸ್ಕಾರಗಳು - ಎಂದು ಹೇಳಲ್ಪಟ್ಟಿದೆ.

ಹೀಗೆಯೇ ಪಾದ್ಮಪುರಾಣದ ೩೨ ಎಂಬ ಸಂಖ್ಯೆಯಿಂದ ಸೂಚಿಸಿರುವ ವಚನದಲ್ಲಿ ಪಾಪಿಗಳ ಪಾಪಗಳನ್ನು ಹೋಗಲಾಡಿಸಬಲ್ಲ ಪ್ರಾಯಶ್ಚಿತ್ತಕ್ಕೆ ತಕ್ಕುದಾದ, ಪರಮಪಾವನವಾದ ಪುಣ್ಯತೀರ್ಥವು ಸ್ವಾಮಿ ಪುಷ್ಕರಿಣಿ ಎಂಬುದನ್ನು ಧೃಡಪಡಿಸುವ ಒಂಭತ್ತನೆಯ ಅಧ್ಯಾಯದಲ್ಲಿ - ಈ ಭೂತಲದಲ್ಲುಳ್ಳ ದಿವ್ಯವಾದ ಪುಷ್ಕರಿಣಿಗೆಲ್ಲಾ ಇದು ನಾಯಕ ಸ್ಥಾನವನ್ನು ಹೊಂದಿರುವುದಲ್ಲವೇ? ಆದುದರಿಂದ ಸ್ವಾಮಿ ಪುಷ್ಕರಿಣಿಯೆಂದು ಕರೆಯಲ್ಪಡುತ್ತದೆ - ಎಂದು ವಾಮದೇವ ಋಷಿವರ್ಯರಿಂದ ಹೇಳಲ್ಪಟ್ಟಿತು.

ಮಾರ್ಕಂಡೇಯ ಪುರಾಣ ಭಾಗದಲ್ಲೂ ಮೂರನೆಯ ಅಧ್ಯಾಯದಲ್ಲಿ ಸ್ವಾಮಿ ಪುಷ್ಕರಿಣಿಯು ಎಲ್ಲಾ ತೀರ್ಥಗಳಿಗೂ ಸ್ವಾಮಿಯಾಗಿ (ಕಂಡುಬರುತ್ತಿದೆ) ಇದೆ ಎಂದು ಹೇಳಲ್ಪಟ್ಟಿದೆ.

ಹೀಗೆಯೇ ಬ್ರಹ್ಮಪುರಾಣದ ಎರಡನೆಯ ಅಧ್ಯಾಯದಲ್ಲಿ ಸರಸ್ವತೀ ದೇವಿಯು, ಎಲ್ಲಾ ತೀರ್ಥಗಳಿಗಿಂತಲೂ ತನಗೆ ಹಿರಿಮೆ (ಶ್ರೇಷ್ಠತೆ) ಯು ಬೇಕೆಂದು ಆಸೆಗೊಂಡು ನದಿಯಾಗಿ ರೂಪುಗೊಂಡು ಬ್ರಹ್ಮಾವರ್ತವೆಂಬ ಒಂದು ದೇಶದಲ್ಲಿ ಹರಿಯುತ್ತಿರುವಾಗ ಪುಲಸ್ತ್ಯರ ಶಾಪದಿಂದ ತಾನು ಆಸೆಪಟ್ಟ ಆ ಹೆಸರು ಸಿಕ್ಕದೇ

ಹೋಗಲು ದುಃಖದಿಂದ ಶ್ರೀ ಮಹಾವಿಷ್ಣುವನ್ನು ತನ್ನ ತಪಸ್ಸಿನಿಂದ ಸಂತೋಷಗೊಳಿಸಿ, ಅವರಿಂದ ಕೊಳದ ರೂಪದಲ್ಲಿರುವ ಸ್ಥಿತಿಯಲ್ಲಿ, ಆ ಹೆಸರು ಸಿಕ್ಕುವಂತೆ ವರವನ್ನು ಪಡೆದು, ಶ್ರೀ ವೇಂಕಟಾಚಲದಲ್ಲಿ ಸ್ವಾಮಿ ಪುಷ್ಕರಿಣಿಯಾಗಿ ಕಂಡು ಬಂದಳು - ಎಂದು ಹೇಳಲ್ಪಡುವುದರಿಂದ ಸ್ವಾಮಿ ಪುಷ್ಕರಿಣಿ ಎಂಬ ಹೆಸರಿನ 'ಸ್ವಾಮಿ' ಎಂಬ ಶಬ್ದದಿಂದ ತೀರ್ಥಗಳಿಗೆಲ್ಲಕ್ಕೂ ನಾಯಕನಾಗಿರುವ ಸ್ಥಿತಿಯನ್ನು ಅಂದರೆ ಸ್ವಾಮಿತ್ವವನ್ನು ಈ ಪುಷ್ಕರಿಣಿಯ ವಿಷಯದಲ್ಲಿ ಹೇಳಲ್ಪಟ್ಟಿದೆ.

''ಹಿಂದೆ ಸರಸ್ವತೀ ದೇವಿಯು ತೀರ್ಥಗಳೆಲ್ಲಕ್ಕೂ ಪ್ರಧಾನವಾದ ನಾಯಕಿಯಾಗಿರುವುದಕ್ಕೆ ಆಸೆಪಟ್ಟು ಸರಸ್ವತೀ ನದಿಯೆಂದು ಪ್ರಸಿದ್ಧಿ ಹೊಂದಿ ಬ್ರಹ್ಮಾವರ್ತವೆಂಬ (ದೆಹಲಿಗೆ ಈಶಾನ್ಯ ದಿಕ್ಕಿನಲ್ಲಿರುವ) ಒಂದು ದೇಶದಲ್ಲಿ ಅವತರಿಸಿದಳು'' ಎಂದು ಪ್ರಾರಂಭಿಸಿ, ''ಮೂರು ಲೋಕಗಳಲ್ಲುಳ್ಳ ಮೂರೂವರೆ ಕೋಟಿ ತೀರ್ಥಗಳೂ ತಮ್ಮ ತಮ್ಮ ಪಾಪಗಳನ್ನು ಕಳೆದುಕೊಳ್ಳುವುದಕ್ಕಾದ ದಾರಿಯನ್ನು ನನ್ನಲ್ಲಿ ಯಾಚಿಸಲು ಬರುತ್ತಾರೆ. ಮಂಗಳಕರವಾದವಳೇ! (ಮಂಗಳೆಯೇ) ಅವುಗಳ ಪಾಪಗಳು ನಾಶವಾಗುವುದಕ್ಕಾಗಿ ನಿನ್ನಲ್ಲಿ ಸ್ನಾನ ಮಾಡುವಂತೆ ನಾನು ಅವುಗಳಿಗೆ ವರವನ್ನು ನೀಡುತ್ತೇನೆ. ಮಾರ್ಗಶಿರ (ಮಾರ್ಗಳಿ) ಶುಕ್ಲಪಕ್ಷ ದ್ವಾದಶಿಯಂದು ಅರುಣೋದಯ ಕಾಲದಲ್ಲಿ ನಿನ್ನಲ್ಲಿ ಸ್ನಾನ ಮಾಡಿ ಬರುವ ತೀರ್ಥಗಳೆಲ್ಲವೂ ನಿನ್ನ ಅಧಿಕಾರಕ್ಕೆ ಒಳಪಟ್ಟು ದಾಸಿಯರಾಗಿ (ಸೇವಕರಾಗಿ) ಆಗುತ್ತಾರೆ. ಆಗ ಅವುಗಳು ನಿನಗೆ ಪಟ್ಟಾಭಿಷೇಕವನ್ನು ಮಾಡುವರು'' ಎಂದು ಸರಸ್ವತಿಯು ಶ್ರೀ ಮಹಾವಿಷ್ಣುವಿನಿಂದ ವರವನ್ನು ಪಡೆದುದಾಗಿ ಬ್ರಹ್ಮ ಪುರಾಣದಲ್ಲಿ ಹೇಳಿರುವುದನ್ನು ನೋಡಿ, ತೀರ್ಥಗಳಿಗೆ ನಾಯಕಿ ಎಂಬ ಅರ್ಥವನ್ನು ಹೇಳುವ ಮತ್ತು ಅಲ್ಲಲ್ಲಿ ಹೇಳಿರುವ ಪುರಾಣ ವಾಕ್ಯಗಳು ಹಲವನ್ನೂ ಇಲ್ಲಿ ಜ್ಞಾಪಿಸಿಕೊಳ್ಳ ತಕ್ಕುದಾಗಿದೆ.

ಎಲ್ಲಾ ಲೋಕಗಳಿಗೂ ಸ್ವಾಮಿಗಳಾದ (ನಾಯಕರುಗಳಾದ) ವರಾಹಮೂರ್ತಿ ಮತ್ತು ಶ್ರೀನಿವಾಸದೇವ ಇವರುಗಳ ಸಮೀಪದಲ್ಲಿರುವ ಪುಷ್ಕರಿಣಿ ಎಂಬುವ ಕಾರಣದಿಂದಲೂ ಸಹ ಸ್ವಾಮಿ ಪುಷ್ಕರಿಣಿ ಎಂಬ ಹೆಸರುಂಟಾಯಿತು ಎಂಬ ಅರ್ಥವನ್ನು ಪಡೆದ ಕೆಲವು ಶ್ಲೋಕಗಳೂ ಸಹ ಕಂಡು ಬರುತ್ತವೆ. ಸ್ಕಂದ ಪುರಾಣದ ಮೊದಲನೆಯ ಭಾಗ ಮೊದಲನೆಯ ಅಧ್ಯಾಯದಲ್ಲಿ ಸುವರ್ಣಮುಖೀ ನದಿಯ ತೀರದಲ್ಲಿ, ಎಲ್ಲಾ ಲೋಕದಲ್ಲೂ ಪೂಜಿಸಲ್ಪಟ್ಟದ್ದೂ, ಶ್ರೀ

ವೇಂಕಟಗಿರಿಯೆಂಬ ಪ್ರಸಿದ್ಧಿಯನ್ನು ಪಡೆದುದೂ ಆದ ಶ್ರಿಯಃಪತಿಯು ಕ್ರೀಡಿಸುವ (ವಿಹರಿಸುವ) ಭಾಗವೊಂದಿದೆ. ಬ್ರಹ್ಮಹತ್ಯೆ, ಸುರಾಪಾನ ಮಾಡುವುದು, ಚಿನ್ನವನ್ನು ಕದಿಯುವುದು ಮುಂತಾದುವುಗಳಿಂದುಂಟಾದ ಮಹಾಪಾತಕಗಳನ್ನು ಹೋಗಲಾಡಿಸುವುದು, ದೇವತೆಗಳಿಂದಲೂ ಮತ್ತು ಅಸುರರುಗಳಿಂದಲೂ ನಮಸ್ಕರಿಸಲ್ಪಡುವ ಆ ಪುಣ್ಯವಾದ ಶೇಷ ಪರ್ವತದಲ್ಲಿ ಸಮಸ್ತ ಪಾಪಗಳನ್ನೂ ನೀಗಿಸಬಲ್ಲ, ಸ್ವಾಮಿ ಪುಷ್ಕರಿಣಿ ಎಂಬ ಉತ್ತಮವಾದ ಒಂದು ಕೊಳವು ಶ್ರೀನಿವಾಸನಿಗೆ ಉತ್ತರ ಭಾಗದಲ್ಲಿದೆ. ಆ ಬೆಟ್ಟಕ್ಕೆ ಹೋಗಿ, ಮಂಗಳವನ್ನುಂಟು ಮಾಡುವ ಆ ಕೊಳದಲ್ಲಿ ಸಂಕಲ್ಪವನ್ನು ಮಾಡಿ, ನೀರಾಡಿ, ಅದರ ಪಶ್ಚಿಮ ಭಾಗದ ತೀರದಲ್ಲಿರುವ ಶ್ರೀ ಹರಿಯಾದ ವರಾಹ ಮೂರ್ತಿಯನ್ನು ಸೇವೆ ಮಾಡಿ ಅಲ್ಲಿಂದ ದೇವಸ್ಥಾನಕ್ಕೆ ಹೋಗಿ,ಸ್ವರ್ಣ ಪರ್ವತ (ಚಿನ್ನದ ಬೆಟ್ಟ) ದಲ್ಲಿ ವಾಸ ಮಾಡುವವನೂ, ಭಕ್ತರುಗಳಿಗೆ ಅಭಯವನ್ನು ನೀಡುವವನೂ, ಶಂಖ ಚಕ್ರಗಳನ್ನು ಧರಿಸಿರುವವನೂ, ವನಮಾಲೆಯನ್ನು ಧರಿಸಿರುವವನೂ, ಪರದೇವತೆಯೂ ಆದ ಶ್ರೀನಿವಾಸ ದೇವನನ್ನು ದರ್ಶಿಸಿದರೆ ನೀನು ಪಾಪಗಳನ್ನು ಕಳೆದುಕೊಂಡವನಾಗಿ ಆಗುತ್ತೀಯೆ. ಎಲೈ ಬ್ರಾಹ್ಮಣನೇ! ಸಂದೇಹಗೊಳ್ಳಬೇಡ - ಎಂದು ಕಶ್ಯಪರನ್ನು ಕುರಿತು ಶಾಕಲ್ಯರಿಂದ ಹೇಳಲ್ಪಟ್ಟಿರುವುದನ್ನು ಇಲ್ಲಿ ಕಾಣತಕ್ಕದ್ದು.

ಸ್ಕಂದ ಪುರಾಣದ ಎರಡನೆಯ ಭಾಗದಲ್ಲಿ ೩೭ನೆಯ ಅಧ್ಯಾಯದಲ್ಲಿಯೂ - ವೈಕುಂಠದಿಂದ ವಿಷ್ಣುವಿನ ದೊಡ್ಡದೊಂದು ಕ್ರೀಡಾಪರ್ವತವು, ವೇಗವಾಗಿ ಚಲಿಸುವ ಪಕ್ಷಿಯಾದ ಗರುಡನಿಂದ ತರಲ್ಪಟ್ಟು ದೇವತೆಗಳ ಸಮೂಹದಿಂದಲೂ, ಋಷಿಗಣಗಳಿಂದಲೂ ಪೂಜಿಸಲ್ಪಟ್ಟು ಮಂಗಳವಾದ ಸುವರ್ಣಮುಖೀ ನದಿಯ ತೀರದಲ್ಲಿದೆ. ಆ ವೇಂಕಟಾಚಲದಲ್ಲಿ ಸಾಕ್ಷಾತ್ ನಾರಾಯಣನು ಶ್ರೀದೇವಿ, ಭೂದೇವಿ ಮತ್ತು ನೀಳಾದೇವಿಯರೊಂದಿಗೆ ಸೇರಿ ವೇಂಕಟೇಶನೆಂಬ ಹೆಸರನ್ನು ಪಡೆದು ಮೋಕ್ಷವನ್ನು ಕೊಡುವವನಾಗಿ ದರ್ಶನವನ್ನು ಕೊಡುತ್ತಿದ್ದಾನೆ ಎಂದೂ, ಪದ್ಮನಾಭನೆಂಬ ಬ್ರಾಹ್ಮಣೋತ್ತಮನು ಅತ್ಯಂತ ಪಾಪಿಯಾದ ಕೇಶವನೆಂಬ ತನ್ನ ಮಗನೊಡನೆ ಶ್ರೀ ವೇಂಕಟಾಚಲಕ್ಕೆ ಹೋಗಿ, ಸ್ವಾಮಿ ಪುಷ್ಕರಿಣಿಯಲ್ಲಿ ವಿಧಿವತ್ತಾಗಿ ಸ್ನಾನ ಮಾಡಿ ವರಾಹ ಮೂರ್ತಿಯನ್ನುಸೇವೆ ಮಾಡಿ, ಶ್ರೀನಿವಾಸನ ದೇವಾಲಯವನ್ನು ಸೇರಿ, ವಿಮಾನವನ್ನು ಪ್ರದಕ್ಷಿಣೆ ಮಾಡಿ ನಮಸ್ಕರಿಸಿದನು - ಎಂದೂ ಇದೆಯೆಂಬುದನ್ನು ನೋಡಿಕೊಳ್ಳಿ.

ಇಲ್ಲಿ ಶ್ರೀ ವೇಂಕಟಾಚಲವು ವಿಷ್ಣುಕ್ಷೇತ್ರವೆಂದೂ, ಸ್ವಾಮಿ ಪುಷ್ಕರಿಣಿಯ ಬಳಿ ಪ್ರಪಂಚಕ್ಕೆಲ್ಲಾ ಸ್ವಾಮಿಗಳಾದ ವರಾಹ - ಶ್ರೀನಿವಾಸ ದೇವರುಗಳು

ಬಿಜಯಗೈದಿದಾರೆಂದೂ ಹೇಳಿರುವುದರಿಂದ ಸ್ವಾಮಿ ಪುಷ್ಕರಿಣಿ ಎಂಬ ದ್ವಿಪದ ಹೆಸರಿನಸ್ವಾಮಿ ಎಂಬ ಪದದಿಂದ ಆ ಎರಡೂ ದೇವರಗಳನ್ನು ಸೂಚಕವಾಗಿ ತೋರಿಸಲ್ಪಟ್ಟಿರುವುದರಿಂದ ಸ್ವಾಮಿಗಳ ಪುಷ್ಕರಿಣಿ ಎಂದು ವಿಸ್ತರಿಸಿ, ಈ ಪದವನ್ನು ಷಷ್ಠಿ ತತ್ಪುರುಷ ಸಮಾಸವನ್ನಾಗಿಯೂ ತೆಗೆದುಕೊಳ್ಳಬಹುದೆಂಬ ಅರ್ಥವೂ ತಿಳಿಯಲ್ಪಡುತ್ತದೆ. ಹೀಗೆಯೇ ಈ ಅರ್ಥವನ್ನು ತಿಳಿಸುವ ಅನೇಕ ಪದ್ಯಗಳೂ ಅಲ್ಲಲ್ಲಿ ಇರುವುದನ್ನು ಕಾಣಬಹುದು.

ಹೀಗೆಯೇ - ಸ್ವಾಮಿ ಪುಷ್ಕರಿಣಿಯು ಶ್ರೀ ವೈಕುಂಠದಿಂದ ತರಲ್ಪಟ್ಟ ಶ್ರಿಯಃ ಪತಿಯ ಜಲಕ್ರೀಡಾ ತಟಾಕ (ನಡೆಬಾವಿ) ವೆಂದು ಸೂಚಿಸಲ್ಪಟ್ಟಿರುವುದರಿಂದಲೂ, ಇದು ವಿಷ್ಣು ತೀರ್ಥವೇ ಎಂಬುದು ತಿಳಿಯಲ್ಪಡುತ್ತದೆ. ವರಾಹ ಪುರಾಣದ ಪ್ರಥಮ ಭಾಗದ ಮೂರನೆಯ ಅಧ್ಯಾಯದ ೩೫ ಎಂಬ ಸಂಖ್ಯೆಯಿಂದ ಸೂಚಿಸಲ್ಪಟ್ಟಿರುವ ವಚನದಲ್ಲಿ - ಶ್ರೀ ದೇವಿಯಿಂದಲೂ, ಭೂದೇವಿಯಿಂದಲೂ ಆಸೆಯಿಂದ ಕಾಪಾಡಲ್ಪಟ್ಟದ್ದೂ, ದಿವ್ಯವಾದ ತೀರ್ಥವನ್ನುಹೊಂದಿರುವುದೂ, ಒಳ್ಳೆಯ ಪರಿಮಳವನ್ನು ಬೀಸುತ್ತಿರುವುದೂ ಅತ್ಯಂತ ಸುಂದರವಾದುದೂ, ಗಂಗೆ ಮುಂತಾದ ಎಲ್ಲ ತೀರ್ಥಗಳಿಗೂ ಜನ್ಮಸ್ಥಳವಾದುದೂ, ಮಂಗಳಮಯವಾದ ತೀರ್ಥವನ್ನುಳ್ಳದ್ದೂ, ವೈಕುಂಠಲೋಕದಲ್ಲುಳ್ಳದ್ದೂ ಆದ ಶ್ರಿಯಃ ಪತಿಯು ಕ್ರೀಡಿಸುವ ನಡೆಬಾವಿಯೇ ಗರುಡನಿಂದ ತರಲ್ಪಟ್ಟು, ಎಲ್ಲ ಪಾಪಗಳನ್ನೂ ಹೋಗಲಾಡಿಸಿ ಪುಣ್ಯಮಯವನ್ನುಂಟುಮಾಡುವ ಸ್ವಾಮಿ ಪುಷ್ಕರಿಣಿ ಎಂಬ ಹೆಸರುಳ್ಳದಾದ, ವೇಂಕಟೇಶನು ಕ್ರೀಡಿಸುವ ಸಲುವಾಗಿ ಶ್ರೀವೇಂಕಟಾಚಲದಲ್ಲಿದೆ - ಎಂದುಹೇಳಲ್ಪಟ್ಟದೆ.

ಇಲ್ಲಿ ಭಗವಂತನು ಕ್ರೀಡಿಸುವ ಭಾವಿಯೆಂದು ಸೂಚಿಸಲ್ಪಡುವುದರಿಂದ ಸ್ವಾಮಿ ಪುಷ್ಕರಿಣಿ ಎಂಬ ಪದಗುಚ್ಛದಲ್ಲಿ ಸ್ವಾಮಿಯೆಂಬ ಪದವು ಭಗವಂತನನ್ನು ಸೂಚಿಸುವುದು ಸ್ಪಷ್ಟವಾಯಿತು. ಹೀಗೆಯೇ ಸ್ವಾಮಿ ಪುಷ್ಕರಿಣಿಯಲ್ಲಿ ಸ್ನಾನ ಮಾಡುವುದು ಮೊದಲಾದುವುಗಳಿಂದ ವಿಷ್ಣುಸಾಯುಜ್ಯ (ಜ್ಞಾನ, ಆನಂದ ಮುಂತಾದುವುಗಳಿಂದುಂಟಾಗುವ, ವಿಷ್ಣುವಿನೊಂದಿಗೆ ಅವನಂತೆಯೇ ಇರುವ ಸ್ಥಿತಿ) ಮುಂತಾದ ಫಲಗಳು ಹೇಳಲ್ಪಡುವುದರಿಂದಲೂ, ಅದು ವಿಷ್ಣುವಿನ ತೀರ್ಥವೆಂದೇ ತಿಳಿಯಲ್ಪಡುತ್ತದೆ. ಆದುದರಿಂದ ಶ್ರಿಯಃ ಪತಿಯಾದ ನಾರಾಯಣನು ಎಲ್ಲಾ ಲೋಕಗಳಿಗೂ ಸ್ವಾಮಿಯಾಗಿರುವ ರೀತಿಯಲ್ಲಿ ಈ ಪುಷ್ಕರಿಣಿಯೂ ಸಹ ಎಲ್ಲಾ ತೀರ್ಥಗಳಿಗೂ ಸ್ವಾಮಿಯಾದುದರಿಂದಲೂ, ಶ್ರಿಯಃ

ಪತಿಯೊಡನೆ ಸಂಬಂಧ ಪಟ್ಟಿರುವುದರಿಂದಲೂ, (ಈ ಎರಡು ಕಾರಣಗಳನ್ನು ಮುಂದಿಟ್ಟುಕೊಂಡು) ಸ್ವಾಮಿ ಪುಷ್ಕರಿಣಿ ಎಂಬ ಹೆಸರುಂಟಾಯಿತು ಎಂಬುದು ಕಂಡು ಬರುವುದರಿಂದ ಈ ಸ್ವಾಮಿ ಪುಷ್ಕರಿಣಿಯು ವಿಷ್ಣು ತೀರ್ಥವೇ ಎಂಬುದು ಸ್ಥಿರವಾಗುತ್ತದೆ.

ಕುಮಾರ ಸ್ವಾಮಿಯ ಹೆಸರೊಂದಿಗೆ ಸೇರಿದುದಾಗಿ ಸೂಚಿಸಲ್ಪಡುವ ತೀರ್ಥವು ಕುಮಾರ ಧಾರೆ ಎಂಬ ತೀರ್ಥವೇ ಆಗುತ್ತದೆ. ಅಲ್ಲಿಯೇ ಕುಮಾರ ದೇವನು ಕಲ್ಪಕಾಲ ಮುಗಿಯುವವರೆಗೂ ವಾಸಿಸುತ್ತಿರುವಂತೆ ಪುರಾಣಗಳಿಂದ ತಿಳಿದು ಬರುತ್ತದೆ. ಅದೂ ಸಹ ಶ್ರಿಯಃ ಪತಿಯಾದ ವಿಷ್ಣುವಿನ ತೀರ್ಥವೇ. ಬೇರೆ ಹಲವು ತೀರ್ಥಗಳೂ ಆಯಾಯಾ ಋಷಿಗಳು ವಾಸ ಮಾಡುತ್ತಿದ್ದುದನ್ನು ಕೊಂಡು (ಕಪಿಲ ತೀರ್ಥ, ಜಾಬಾಲಿ ತೀರ್ಥ ಎಂದು) ಅವರುಗಳ ಹೆಸರುಗಳೊಂದಿಗೆ ಸೇರಿರುವಂತೆ ಕುಮಾರ ಧಾರೆ ಎಂಬ ತೀರ್ಥವೂ ಕುಮಾರ ಸ್ವಾಮಿಯು ಅಲ್ಲಿ ವಾಸ ಮಾಡಿದುದನ್ನು ಮಾತ್ರವೇ ಕೊಂಡು ಕುಮಾರ ಎಂಬ ಹೆಸರೊಂದಿಗೆ ಸೇರಿರುವುದೇ ಆದರೂ, ಶ್ರೀ ವೇಂಕಟಾಚಲ ಪ್ರದೇಶವೆಲ್ಲವೂ ಪೂರ್ತಿಯಾಗಿ ಶ್ರಿಯಃ ಪತಿಯೊಂದಿಗೆ ಸಂಬಂಧ ಹೊಂದಿರುವುದು ಅರಿಯಲ್ಪಟ್ಟಿರುವುದರಿಂದ ಇದನ್ನು ಆ ರೀತಿ ತಿಳಿಯಬಹುದು. ಆದುದರಿಂದ ಸ್ವಾಮಿ ಪುಷ್ಕರಿಣಿಗೆ ಶ್ರಿಯಃ ಪತಿಯನ್ನು ಬಿಟ್ಟು ಬೇರಾವ ದೇವತೆಯೊಂದಿಗೂ ಸಂಬಂಧವಿರಲು ಸ್ವಲ್ಪವೂ ಅವಕಾಶವಿರುವುದಿಲ್ಲ.

ಈ ರೀತಿಯಾಗಿ ಭಗವದ್ರಾಮಾನುಜ ಮುನಿಗಳು ನೀಡಿದ ಸಂಶೋಧನಾತ್ಮಕ ನಿರೂಪಣೆಯನ್ನು ಕೇಳಿ ಯಾದವ ರಾಜನು ನಂಬಿಕೆಯೊಂದಿಗೆ ತಲೆದೂಗಿ, ಸ್ವಾಮಿ ಪುಷ್ಕರಿಣಿಯು ಪರಮ ಪವಿತ್ರವಾದ, ಶ್ರಿಯಃ ಪತಿಗೆ ಸೇರಿದ ಪುರಾತನ ತೀರ್ಥವೇ ಎಂಬುದನ್ನು ಚೆನ್ನಾಗಿ ಒಪ್ಪಿಕೊಂಡನು.

ಶ್ರೀಮದ್ರಾಮಾನುಜಾಚಾರ್ಯರು ಅತ್ಯಂತ ಚೆನ್ನಾಗಿ ತರ್ಕ ರೀತಿಯಲ್ಲಿ ಹೇಳಿದ ಒಳ್ಳೆಯ ನುಡಿಮುತ್ತುಗಳಿಂದ ಕೂಡಿ ಉಕ್ಕಿ ಬಂದ ಅಮೃತವನ್ನು ಯಾದವ ರಾಜನು ತನ್ನ ಎರಡು ಕಿವಿಗಳಿಂದ ಪಾನ ಮಾಡಿ ಸಂತೋಷಗೊಂಡನು. ಆ ಮಾತುಗಳಲ್ಲಿ ನಂಬಿಕೆಯನ್ನೂ ಮತ್ತು ಹೆಚ್ಚಾದ ಆಶ್ಚರ್ಯವನ್ನೂ ಪಡೆದನು. ಅಲ್ಲಿದ್ದ ಶೈವರುಗಳನ್ನು ಯಾವ ಪ್ರಯೋಜನವೂ ಇಲ್ಲದೆ ಸುಮ್ಮನೆ ಕೂಗಾಡುವವರೆಂದೂ ಮತ್ತು ವಿತಂಡಾವಾದಿಗಳು (ಏನನ್ನು ಹೇಳಿದರೂ ಅದಕ್ಕೆ ವಿರೋಧಿಸುವುದೊಂದನ್ನೇ ವೃತ್ತಿಯಾಗಿ ಕೊಂಡವರು) ಎಂದು ತಿಳಿದುಕೊಂಡನು.

ಶ್ರೀಮದನನ್ತಾರ್ಯರು ಪ್ರೋಣಿಸಿದ ಶ್ರೀವೇಂಕಟಾಚಲ ಇತಿಹಾಸಮಾಲೆಯಲ್ಲಿ ಸ್ವಾಮಿ ಪುಷ್ಕರಿಣಿಯು ದೇವತಾಂತರಗಳಿಗೆ (ಬೇರೆ ದೇವತೆಗಳಿಗೆ) ಸೇರಿದ ತೀರ್ಥವೆಂಬ ವಾದಕ್ಕೆ ಪ್ರತಿವಾದವಾದ ಎರಡನೆಯ ಪುಷ್ಪಗುಚ್ಛವು ಸಂಪೂರ್ಣವಾಯಿತು.

ಶ್ರೀಮತೇ ರಾಮಾನುಜಾಯ ನಮಃ



## ಮೂರನೆಯ ಪುಷ್ಪಗುಚ್ಛ

ಈ ರೀತಿ ಯತಿರಾಜ ರಾಮಾನುಜಾಚಾರ್ಯರು ಹೇಳಿದ ಮಾತುಗಳಿಗೆ ವಶಪಟ್ಟ ಮನಸ್ಸನ್ನು ಹೊಂದಿದವನಾಗಿ ಅತ್ಯಂತ ಸಂತೋಷವನ್ನೂ ಆಶ್ಚರ್ಯವನ್ನೂ ಹೊಂದಿದ ಯಾದವ ರಾಜನನ್ನು ಶೈವರುಗಳು ಅಸೂಯೆಯಿಂದ ನೋಡಿದರು. ರಾಮಾನುಜ ಮುನಿವರ್ಯರ ಸಾಮರ್ಥ್ಯವಾದ ನಿರೂಪಣಾತ್ಮಕ ಭಾಷಣವನ್ನು ಕೇಳುವುದರಲ್ಲಿ ಆದರವನ್ನು ಹೊಂದಿದವನೂ, ಸ್ವಲ್ಪ ಸ್ವಲ್ಪವಾಗಿ ಈ ಮುನಿಗಳು ನಂಬಿಕೆಗೆ ಪಾತ್ರರು ಎಂಬ ಮನಸ್ಸು ಹೊಂದಿದವನೂ ಆಗಿರುವವನನ್ನು ನೋಡಿ ಶೈವರುಗಳು ಅಸೂಯೆಯಿಂದ ರಾಜನನ್ನು ನೋಡಿ ಹೀಗೆ ಹೇಳಲುಪಕ್ರಮಿಸಿದರು.

### ಶೈವರುಗಳು

ಎಲೈ ಅರಸನೇ! ವರಾಹ ಭಗವಂತನು ಬಿಜಯಗೈದಿರುವುದರಿಂದ ಈ ವೇಂಕಟಾಚಲವು ವಿಷ್ಣುಕ್ಷೇತ್ರವೆನ್ನುವುದನ್ನು ಹೇಗೆ ಅಲ್ಲಗಳೆಯಲಾಗುವುದಿಲ್ಲವೋ ಹಾಗೆಯೇ ಸ್ಕಂದನು ಇಲ್ಲಿ ಬಿಜಯಗೈದುದರಿಂದ ಶೈವಕ್ಷೇತ್ರವೆಂಬುದನ್ನೂ ಸಹ ಅಲ್ಲಗಳೆಯಲಾಗದು. ಮೇಲೂ ಸ್ವಾಮಿ ಪುಷ್ಕರಿಣಿಗೆ ಸ್ಕಂದನ ಸಂಬಂಧವಿದ್ದಾಗ್ಯೂ ಸ್ವಾಮಿಯಾಗಿರುವಿಕೆ ಅದಕ್ಕೆ ಹೊಂದುವುದರಲ್ಲಿ ತಡೆಯಾವುದೂ ಇಲ್ಲದಿರುವುದರಿಂದ, ಸ್ವಾಮಿ ಪುಷ್ಕರಿಣಿ ಎನ್ನುವ ಹೆಸರಿನಲ್ಲಿ ಸ್ವಾಮಿಯಾದ ಪುಷ್ಕರಿಣಿ ಎಂದು ಹೇಳಿದ ಮಾತ್ರಕ್ಕೆ ಅದು ವಿಷ್ಣು ತೀರ್ಥವೆಂಬುವುದು ಕೊನೆಯಾಗಲಾರದು. ಆದರಿಂದ ಇದರ ದಕ್ಷಿಣ ತೀರದಲ್ಲಿ ಕಂಡು ಬರುವ ದೇವನಿಗೆ ಸ್ಕಂದನಾಗಿರುವ ಸಾಧ್ಯತೆಯು ಅಲ್ಲಗಳೆಯಲಾರದೆ ಇರುವವರೆಗೂ, ಈ ಬೆಟ್ಟಕ್ಕೂ, ಈ ಪುಷ್ಕರಿಣಿಗೂ ಸ್ಕಂದನ ಸಂಬಂಧವಿಲ್ಲವೆಂದು ಹೇಳಲಾಗದು. ಹೀಗಿರುವಾಗ ಇದಕ್ಕೆ ಬೇರೆಯಾಗಿ ಈ ಮುನಿಗಳು ಹೇಳುವ ಮಾತುಗಳಿಂದ ಏನು ಪ್ರಯೋಜನ? ಈ ಬೆಟ್ಟದಲ್ಲಿ ವರಾಹ ಭಗವಂತನು ಇರುವುದ್ದನ್ನೂ, ಇದು ವರಾಹ ಕ್ಷೇತ್ರವೆಂಬುದನ್ನೂ, ವಿಷ್ಣು ಭಕ್ತರುಗಳಿಂದ ಆರಾಧಿಸಲ್ಪಡುತ್ತಿರುವುದನ್ನೂ ನಾವುಗಳು ಸಂಪೂರ್ಣವಾಗಿ ಅಲ್ಲಗಳೆಯುತ್ತಿಲ್ಲ. ಮತ್ತೇನೆಂದರೆ, ಸ್ವಾಮಿ ಪುಷ್ಕರಿಣಿಯ ದಕ್ಷಿಣ ತೀರದಲ್ಲಿ ವಿರಾಜಮಾನನಾಗಿರುವ ಸ್ವಾಮಿಯು ಸ್ಕಂದನೆಂದೂ ಆದರಿಂದಲೇ ಈ ಗಿರಿಗೆ

ಮತ್ತು ಪುಷ್ಕರಿಣಿಗೆ ಸ್ಕಂದನ ಸಂಬಂಧವುಂಟೆಂದೂ ಹೇಳುತ್ತಿದ್ದೇವೆ. ಆ ದೇವನು ಲಕ್ಷ್ಮೀಪತಿಯಲ್ಲ. ಬೇರೆ ದೈವವೇ ಎಂದು -ಸಬೂಬು -ಗಿಬೂಬುಗಳನ್ನು ಹೇಳಲಾಗದಂಥಹ, ಮುಂಚೆ ಹೇಳಿದ ಆಧಾರಗಳಿಂದ ಅಲ್ಲಗಳೆಯಲಾರದ ಸ್ಥಿತಿಯನ್ನು ಹೊಂದಿದೆ. ಆದ್ದರಿಂದ ಯೋಚಿಸಿ ನೋಡದೆ ದಿಢೀರನೆ ಈ ರಾಮಾನುಜಮುನಿಯವರ ವಾದವನ್ನು ಸಮಂಜಸವಾಗಿದೆಯೆಂದು ನಿಶ್ಚಯಮಾಡಿಬಿಡಬೇಡ. (ಎಂದು ಹೇಳಿದರು.)

ಈ ರೀತಿ ಶೈವರುಗಳು ಹೇಳಲು ಯಾದವ ರಾಜನು ಆ ಶೈವರುಗಳು ಅಲ್ಲಗಳೆಯಲಾರದಂತೆ ಉತ್ತರ ಕೊಟ್ಟನು.

**ಯಾದವ ರಾಜ**

ಶೈವರುಗಳೇ! ನೀವುಗಳು ಹೇಳುವ ವಿಷಯವನ್ನು ಸಮಂಜಸವಾದುದೆಂದು ನಾವು ತೆಗೆದುಕೊಳ್ಳಲಾರೆವು. ಏಕೆಂದರೆ, ತಾರಕಾಸುರನನ್ನು ಸಂಹರಿಸಿದುದರಿಂದ ಉಂಟಾದ ಪಾಪವನ್ನು ಹೋಗಲಾಡಿಸಿಕೊಳ್ಳುವ ಸಲುವಾಗಿ ತಪಸ್ಸನ್ನು ಮಾಡಿದುದಕ್ಕಾಗಿ ಸ್ಕಂದನು ಬಂದು ಸೇರಿದ ಈ ಗಿರಿಯು ಉತ್ತಮವಾದ ವಿಷ್ಣು ಕ್ಷೇತ್ರವೆಂದು ಪುರಾಣ ವಚನಗಳು ಸಾರುತ್ತವೆ ಎಂಬುದೇ ಇದಕ್ಕೆಕಾರಣವು. ಮೇಲೂ ಶ್ರೀ ವೇಂಕಟಾಚಲವು ವೈಕುಂಠ ಲೋಕದಿಂದ ಗರುಡನಿಂದ ತರಲ್ಪಟ್ಟ ದಿವ್ಯವಾದ, ಶ್ರಿಯಃ ಪತಿಯ ಕ್ರೀಡಾ ವಿಹಾರ ಬೆಟ್ಟವೆಂದೂ, ಸ್ವಾಮಿ ಪುಷ್ಕರಿಣಿಯು ಅಲ್ಲಿಂದ, ಆ ಗರುಡನಿಂದಲೇ ತರಲ್ಪಟ್ಟ ದಿವ್ಯವಾದ ತೀರ್ಥ ಸಮೃದ್ಧಿಯನ್ನು ಹೊಂದಿದ, ಆ ಭಗವಂತನು ಜಲಕ್ರೀಡೆ ಮಾಡುವ ನಡೆಬಾವಿಯೆಂದೂ ಹೇಳಲ್ಪಡುತ್ತದೆ. ಈಗಾಗಲೇ ಪ್ರಸಿದ್ಧವಾದ ಹೆಸರನ್ನುಳ್ಳದ್ದೂ, ಸ್ವಾಮಿ ಪುಷ್ಕರಿಣಿ ಎಂಬ ಹೆಸರಿನಿಂದ ಲೋಕಗಳೆಲ್ಲವೂ ಅರಿತಿರುವುದೂ ಆದ ಈ ಪುಷ್ಕರಿಣಿಯ ತಟವು ತಪಸ್ಸು ಮಾಡುವುದಕ್ಕಾಗಿ ಸ್ಕಂದನಿಂದ ಆರಿಸಲ್ಪಟ್ಟಿತೆಂದು ತಿಳಿಸಲ್ಪಟ್ಟಿರುವುದರಿಂದ, ಸ್ಕಂದನ ಸಂಬಂಧದಿಂದ ಸ್ವಾಮಿ ಪುಷ್ಕರಿಣಿ ಎಂಬ ಹೆಸರು ಇದಕ್ಕೆ ಉಂಟಾಯಿತೆಂದು ಹೇಳುವುದು ಸೂಕ್ತವಾಗಲಾರದು.

ಈ ರೀತಿಯಾದ ಹಲವು ಕಾರಣಗಳನ್ನು ತೆಗೆದುಕೊಂಡು ಶ್ರೀ ವೇಂಕಟಾಚಲಕ್ಕೂ, ಸ್ವಾಮಿ ಪುಷ್ಕರಿಣಿಗೂ ಬೇರೆ ದೇವರುಗಳೊಂದಿಗೆ ಸಂಬಂಧವಿದೆಯೆಂಬುದನ್ನು ಪ್ರತಿಭಟಿಸಿ, ಶ್ರಿಯಃ ಪತಿಯೊಂದಿಗೇ ಅವುಗಳ ಸಂಬಂಧವಿದೆಯೆಂದು ಹೇಳುತ್ತಿರುವ ಶ್ರೀರಾಮಾನುಜ ಮುನಿಗಳನ್ನು ಕುರಿತು, ಆ ಎರಡಕ್ಕೂ ಅನ್ಯ ದೇವತೆಗಳ ಸಂಬಂಧವಿದೆ ಎಂಬುದನ್ನು ಸ್ಥಿರಪಡಿಸಲು ತಕ್ಕ ಉತ್ತರವನ್ನು ನಿಮ್ಮಗಳಿಂದ ನೀಡಲಾಗಲಿಲ್ಲ. ಶ್ರೀರಾಮಾನುಜ ಮುನಿವರು ಮಾಡಿದ

ನಿರೂಪಣಾತ್ಮಕ ಭಾಷಣವು ಅವರ ವಾದವನ್ನು ಸ್ಥಿರಪಡಿಸಲು ಬೇಕಾದ ಆಧಾರಗಳೆಂದು ನಾವು ನಂಬುತ್ತೇವೆ. ಆದುದರಿಂದ ಈಗ ಸ್ವಾಮಿ ಪುಷ್ಕರಿಣಿಯ ದಕ್ಷಿಣ ತೀರದಲ್ಲಿ ವಿರಾಜಮಾನನಾದ ದೇವನು ಶ್ರಿಯಃ ಪತಿಯಾದ ನಾರಾಯಣನೇ ಅಥವಾ ಸ್ಕಂದನೇ ಎಂಬ ಈ ಅಂಶವೊಂದನ್ನು ಮಾತ್ರ ಪರಿಶೀಲಿಸಿ ತೀರ್ಮಾನಿಸಬೇಕಾದುದಾಗಿ ಉಳಿದಿದೆ. ಅದನ್ನು ಮಾತ್ರ ಶ್ರೀರಾಮಾನುಜ ಮುನಿವರ್ಯರಲ್ಲಿ ಕೇಳುತ್ತೇನೆ - ಎಂದು ಹೇಳಿ ಸಭೆಯಲ್ಲಿದ್ದ ಶೈವರುಗಳನ್ನು ಅಲ್ಲಗಳೆದು ಯಾದವ ರಾಜನು ರಾಮಾನುಜ ಮುನಿಯವರನ್ನು ಕುರಿತು ಗೌರವದಿಂದಲೂ ಮತ್ತು ಭಕ್ತಿಯಿಂದಲೂ ಈ ರೀತಿ ಹೇಳಿದನು.

**ಯಾದವ ರಾಜ :**

ಪೂಜ್ಯ ರಾಮಾನುಜ ಮುನಿವರ್ಯರೇ! ಶ್ರೀ ವೇಂಕಟಾಚಲವು ವಿಷ್ಣುವಿನ ಕ್ಷೇತ್ರವೇ ಎಂದೂ, ಸ್ವಾಮಿ ಪುಷ್ಕರಿಣಿಯು ವಿಷ್ಣು ತೀರ್ಥವೇ ಎಂದು ತಾವುಗಳು ವಾದಿಸಿದ ನಿರೂಪಣಾತ್ಮಕ ಭಾಷಣವು ತಮ್ಮ ನಿಲುವನ್ನು ಸ್ಥಿರಪಡಿಸಲು ಸಾಕಾದ, ಅತ್ಯಂತ ಪ್ರಬಲವಾದ, ಸಮಂಜಸವಾದ ಆಧಾರಗಳೆಂದು ನಾವು ಭಾವಿಸುತ್ತೇವೆ. ಈಗ ಸ್ವಾಮಿ ಪುಷ್ಕರಿಣಿಯ ದಕ್ಷಿಣ ತೀರದಲ್ಲಿ ಪ್ರಕಾಶಿಸುತ್ತಿರುವ ದೇವನು ಶ್ರಿಯಃ ಪತಿಯೇ ಹೊರತು ಬೇರೆ ದೇವತಾಂತರಗಳಲ್ಲ ಎಂಬ ಈ ಭಾಗ ಮಾತ್ರವೇ ತಮ್ಮಿಂದ ಶೋಧಿಸಲ್ಪಟ್ಟು ಹೇಳಲ್ಪಡಬೇಕು - ಎಂದು ಯಾದವರಾಜನಿಂದ ಕೇಳಲ್ಪಟ್ಟ ಯತಿರಾಜರು ಆ ರಾಜನನ್ನು ಪ್ರಮಾಣಗಳಿಂದಲೂ ಯುಕ್ತಿಗಳಿಂದಲೂ ತೃಪ್ತಿಹೊಂದುವಂತೆ ಮಾಡುತ್ತಲೇ ಹೇಳಿದರು.

**ಶ್ರೀ ರಾಮಾನುಜಾಚಾರ್ಯರು**

ಹೇ ರಾಜನ್! ನನ್ನ ಮಾತನ್ನು ಸಾವಧಾನವಾಗಿ ಕೇಳು. ಅತ್ಯಂತ ವಿಶದವಾಗಿಯೂ ಮತ್ತು ತಿಳಿಯಾಗಿಯೂ ಇರುವ ಈ ವಿಷಯದಲ್ಲಿ ಪ್ರಬಲವಾದ ಸಂಶೋಧನೆಯ ಅಗತ್ಯವೇ ಇರುವುದಿಲ್ಲ. ಹಲವಾರು ಪ್ರಮಾಣಗಳಿಂದಲೂ ವಿಮರ್ಶೆಗಳಿಂದಲೂ ಅತ್ಯಂತ ವಿಸ್ತಾರವಾದ, ಸಾಟಿಯಿಲ್ಲದ ತನ್ನ ಮಹಿಮೆಯಿಂದಲೂ, ಒಪ್ಪದೇ ಇರಲು ಸಾಧ್ಯವಿಲ್ಲದ ನಿಜಸ್ಥಿತಿಯನ್ನು ಹೊಂದಿರುವ ಈ ವೇಂಕಟೇಶ ಭಗವಂತನು ಮಧುಸೂದನನಾದ (ಮಧುವೆಂಬ ರಾಕ್ಷಸನನ್ನು ಸಂಹರಿಸಿದವನು) ದೇವನೇ ಆಗುತ್ತಾನೆ. ಇವನು ದೇವನೆಂಬ ಹೆಸರನ್ನು ಹೊಂದಿದ ಮಾತ್ರಕ್ಕೆ ಕಡಿಮೆಯಾದ ಶಕ್ತಿ ಪಡೆದಿರುವ ಬೇರೆ ದೇವರೆಂದು ಸ್ವಲ್ಪವೂ ಸಂದೇಹ ಪಡತಕ್ಕವನಲ್ಲ. ''ಖದ್ಯೋತಮ್'' ಎಂಬ ಹೆಸರಿನಿಂದ ಕರೆದ ಮಾತ್ರಕ್ಕೆ ಸಹಸ್ರ ಕಿರಣ ಮಾಲೆಗಳುಳ್ಳ, ನಿವಾರಿಸಲಸಾಧ್ಯವಾದ (ಸಹಿಸಲಸಾಧ್ಯವಾದ) ತೇಜಃ ಪುಂಜಗಳನ್ನೇ ಶರೀರವನ್ನಾಗಿಯುಳ್ಳ ಸೂರ್ಯ ಭಗವಂತನನ್ನು ನೋಡಿದ

ಯಾವೊಬ್ಬನಿಗೂ ''ಇದು ಅಲ್ಪವಾದ ತೇಜಸ್ಸನ್ನು ಹೊಂದಿರುವ ಜ್ಯೋತಿಯುಳ್ಳ ಮಿಂಚುಹುಳು'' ಎಂಬ ಮನೋಭಾವವು ಉಂಟಾಗುವುದಿಲ್ಲವಲ್ಲವೇ? (ಖದ್ಯೋತ ಶಬ್ದವು ಸೂರ್ಯನನ್ನೂ ಸೂಚಿಸುತ್ತದೆ ಮತ್ತು ಮಿಂಚುಹುಳುವನ್ನೂ ಸೂಚಿಸುತ್ತದೆ) ಈಗ ಇಲ್ಲಿ ವಿದ್ವಾಂಸರುಗಳಿಂದ ವಿಶೇಷವಾಗಿ ವಾಚಿಸಲ್ಪಡುತ್ತಿರುವ ವೇಂಕಟೇಶ ಮಾಹಾತ್ಮ್ಯ ಪುರಾಣ. ಭಾಗಗಳೆಲ್ಲವೂ ಕೈ ಎತ್ತಿ ''ಸ್ವಾಮಿ ಪುಷ್ಕರಿಣಿಯ ದಕ್ಷಿಣ ತೀರದಲ್ಲಿ ಪ್ರಕಾಶಿಸುತ್ತಿರುವ ಈ ದೇವರು ಶ್ರಿಯಃ ಪತಿಯಾದ ಭಗವಾನ್ ನಾರಾಯಣನೇ'' ಎಂದು ಉಚ್ಚ ಕಂಠದಿಂದ ಘೋಷಿಸುತ್ತಿವೆ.

ಅವುಗಳಲ್ಲಿ, ''ಆಶ್ಚರ್ಯವಾದ - ಸದ್ಗುಣ ಸಚ್ಚರಿತ್ರೆ ಸತ್ಕ್ರಿಯೆಗಳನ್ನು ಹೊಂದಿದವನೂ, ಅಪರಿಮಿತ ಆನಂದವನ್ನು ಹೊಂದಿರುವವನೂ ಆದ ಶ್ರಿಯಃ ಪತಿಯು ಅತಿ ಶ್ರೇಷ್ಠವಾದ ವೈಕುಂಠ ಲೋಕವನ್ನು ಬಿಟ್ಟು ಸ್ವಾಮಿ ಪುಷ್ಕರಿಣಿಯ ತಟದಲ್ಲಿ ಮಹಾಲಕ್ಷ್ಮಿಯೊಂದಿಗೆ ಆನಂದದಿಂದ ಕೂಡಿ ಇರುತ್ತಾನೆ'' ಎಂದು ಅನೇಕವಾಗಿ ಎಲ್ಲಾ ಪುರಾಣಗಳಲ್ಲಿಯೂ ಘೋಷಿಸಲ್ಪಟ್ಟಿರುತ್ತದೆ. ಈ ಮಾತು - ನಿಜವಾಗಿಯೂ ಸ್ವಾಮಿ ಪುಷ್ಕರಿಣಿಯ ಪಶ್ಚಿಮ ತಟದಲ್ಲಿಯೂ, ದಕ್ಷಿಣ ತಟದಲ್ಲಿಯೂ ಕ್ರಮವಾಗಿ ಬಿಜಯಗೈದಿರುವ ಶ್ರೀವರಾಹ ಸ್ವಾಮಿ ಮತ್ತು ಶ್ರೀನಿವಾಸ ಇವರುಗಳಲ್ಲಿ ಶ್ರೀನಿವಾಸನ ಬಗ್ಗೆಯೇ ಇರುತ್ತದೆ. ಶ್ರೀನಿವಾಸನ ಆವಿರ್ಭಾವವನ್ನು (ಅವತರಣ) ವರ್ಣಿಸುವ ಘಟ್ಟಗಳಲ್ಲಿ (ಗ್ರಂಥಗಳ ಭಾಗಗಳಲ್ಲಿ) ಯೇ ಈ ಮಾತು ಇರುವುದು ಇದಕ್ಕೆ ಕಾರಣವಾಗುತ್ತದೆ. ಭೂಮಿದೇವಿಯೊಂದಿಗೆ ಕೂಡಿದವನಾಗಿಯೇ ತಿಳಿಯಲ್ಪಟ್ಟ ವರಾಹ ಭಗವಂತನಿಗೆ ಮಹಾಲಕ್ಷ್ಮಿಯೊಂದಿಗೆ ಕೂಡಿಯಿರುವ ಸ್ಥಿತಿಯು ಯಾವ ಗ್ರಂಥದಲ್ಲಿಯೂ ಪತ್ತೆಯಾಗದಿರುವ ಕಾರಣದಿಂದಲೂ, ಈ ಕಲ್ಪದ ಆದಿಯಲ್ಲಿ ಪ್ರಳಯಾರ್ಣವದಲ್ಲಿ ಮುಳುಗಿ ಹೋದ ಭೂಮಿಯನ್ನುದ್ಧರಿಸಿ ಮುಂಚೆ ಇದ್ದ ಸ್ಥಿತಿಯಲ್ಲಿಯೇ ಇರುವಂತೆ ಮಾಡಿ ಅದರ ಅಭಿಮಾನ ದೇವತೆಯಾದ ಭೂಮಿದೇವಿಯೊಡನೆ ಮೇರು ಪರ್ವತ ಶಿಖರದಿಂದ ಒಡನೆ ಹೊರಟು ಬಂದು ಸುವರ್ಣಮುಖೀ ನದೀತೀರದಲ್ಲಿರುವ ವೇಂಕಟಾದ್ರಿಯಲ್ಲಿ ನೆಲೆಸಿದುದು ತಿಳಿಯಬರುವುದರಿಂದಲೂ, ಈ ಮಾತಿನಲ್ಲಿ ಹೇಳಲ್ಪಟ್ಟಿರುವ - ಮಧ್ಯ ಕಾಲದಲ್ಲಿ ವೈಕುಂಠವನ್ನು ಬಿಟ್ಟು ಬರುವುದು, ಮಹಾಲಕ್ಷ್ಮಿಯೊಡನೆ ಸೇರಿರುವುದೂ ಆದ ಈ ಎರಡೂ ವರಾಹ ಭಗವಂತನ ಬಗೆಗಿನದಾಗಿರಲು ಸಾಧ್ಯವಿಲ್ಲವೆಂಬುದು ಮತ್ತೊಂದು ಕಾರಣವಾಗುತ್ತದೆ.

(ಹರಿವಂಶಕ್ಕೆ ಸೇರಿದ) ಶೇಷ ಧರ್ಮ ಪುರಾಣದಲ್ಲಿರುವ ವೇಂಕಟಾಚಲ ಮಾಹಾತ್ಮ್ಯೆಯನ್ನು ಹೇಳುವ ನಲವತ್ತೆಂಟನೆಯ ಅಧ್ಯಾಯದಲ್ಲಿಯೋ ಎಂದರೆ, ''ಮಹಾನುಭಾವನೇ, ಗಂಗಾನದಿಯ ಸುಪುತ್ರನೇ, ಭೀಷ್ಮ ಪ್ರಭುವೇ, ಶ್ರೀನಿವಾಸನ

ನನ್ನು ನಮ್ಮಗಳಿಗೆ ಹೇಳಿ. ವಾಕ್ಚತುರರೇ, ವೈಕುಂಠದಲ್ಲಿ ವಾಸಿಸುವವನೂ, ಲ್ಲರಿಗೂ ಸ್ವಾಮಿಯೂ, ಸರ್ವವ್ಯಾಪಿಯೂ, ಸರ್ವಜ್ಞನೂ ಆಗಿರುವ ತಿಯು ಈ ಶ್ರೀ ವೇಂಕಟಾಚಲಕ್ಕೆ ಹೇಗೆ ಬಂದನು ಎಂಬುದರ ಬಗೆಗೆ ು ಕರುಣೆಗೊಂಡು ತಿಳಿಸಿ'' ಎಂದು ಧರ್ಮಪುತ್ರನು (ಧರ್ಮರಾಜನು) ಪ್ರಶ್ನಿಸಿದುದಾಗಿ ಪ್ರಾರಂಭಿಸಿ, ''ವೈಕುಂಠ ಲೋಕದಲ್ಲಿ ಕಂಡು ಬಂದ ವನವಾದ ಒಂದು ಮಾತನ್ನು ಕೇಳಿದೆ. ಸದ್ಗುಣಿಗಳೇ, ಆ ಕಥೆಯನ್ನು ಳುತ್ತೇನೆ. ಪರಮಾನಂದ ಸ್ವರೂಪನೂ, ಆಶ್ಚರ್ಯವಾದ ಸದ್ಗುಣಗಳನ್ನು ಾವವನೂ, ವಿಚಿತ್ರ ಶಕ್ತಿಯುಳ್ಳವನೂ ಆದ ಶ್ರಿಯಃ ಪತಿಯು ಮವಾದ ಶ್ರೀ ವೈಕುಂಠವನ್ನು ಬಿಟ್ಟು ಸ್ವಾಮಿ ಪುಷ್ಕರಿಣಿಯ ತಟದಲ್ಲಿ ಯೊಂದಿಗೆ ಸಂತೋಷದಿಂದ ಕೂಡಿ ಇರುತ್ತಿದಾನೆ - ಎಂಬ ರ್ಮಮಯವಾದ ಮಾತುಗಳನ್ನು ಕೇಳಿ ಇಂದ್ರನೂ ಮರುದ್ಗಣಗಳೂ ಲ್ಲ ತಂದೆಯಾದ ಶ್ರಿಯಃ ಪತಿಯನ್ನು ಶ್ರೀ ವೇಂಕಟಾಚಲದಲ್ಲಿ ದರ್ಶಿಸಲು ರು. ನಾನೂ ಸಹ ಪ್ರಯತ್ನಿಸಿದೆ.'' ಎಂದು ನಾರದರ ಬಾಯಿನಿಂದ ೇಕದಲ್ಲಿ ಜನಿಸಿದ ಮಾತುಗಳನ್ನು ಕೇಳಿ ತಕ್ಷಣವೇ ಅವರೊಂದಿಗೆ ್ರನೇ ಮುಂತಾದವರು ಶ್ರೀ ವೇಂಕಟಾಚಲದಲ್ಲಿ ಶ್ರೀ ಶ್ರೀನಿವಾಸನನ್ನು ್ರಯತ್ನಿಸಿದುದನ್ನು ಹೇಳಿ, ''ಕೋಟಿ ಸೂರ್ಯನೋಪಾದಿಯಲ್ಲಿ ವನೂ ಕೋಟಿ ಚಂದ್ರರೋಪಾದಿಯಲ್ಲಿ ತಂಪನ್ನು ಹೊಂದಿರುವವನೂ ಿವಿ ನಾಥನು ದರ್ಶನವನ್ನು ಕೊಟ್ಟನು. (ಆವಿರ್ಭವಿಸಿದನು), ಸ್ವಾಮಿ ತಟದಲ್ಲಿ ಸೂರ್ಯಮಂಡಲ ಸದೃಶ ವಿಮಾನದಲ್ಲಿ ಸರ್ವಜ್ಞನಾದ ದೇವತೆಗಳಿಂದ ನಮಸ್ಕರಿಸಲ್ಪಟ್ಟು ವಾಸವನ್ನು ಮಾಡಿದನು.'' ಎಂದು ಸ್ವಾಮಿ ಪುಷ್ಕರಿಣಿಯ ತಟದಲ್ಲಿ ಶ್ರೀನಿವಾಸನ ಆವಿರ್ಭಾವವು ಹೇಳಲ್ಪಟ್ಟಿತು.

ಹ ಪುರಾಣದ ಮೊದಲನೆಯ ಭಾಗದ ಹತ್ತನೆಯ ಅಧ್ಯಾಯದಲ್ಲಿ ಸಂಖ್ಯೆಯಿಂದ ಸೂಚಿಸಲ್ಪಟ್ಟ ವಚನದಲ್ಲಿ ಭಗವಂತನು ಶ್ರೀ ಲದಲ್ಲಿ ಈಗ ಕೃಷ್ಣವರ್ಣ ಬೆಟ್ಟದಂತಿರುವ ಶರೀರ ಕಾಂತಿಯನ್ನು ಲ್ಲರ ಕಣ್ಣಳಿಗೂ ಗೋಚರಿಸುತ್ತಾ, ಯಾರೆಂಬ ವ್ಯತ್ಯಾಸವನ್ನು ೀ, ಎಲ್ಲರಿಗೂ ಅವರು ಕೋರಿದ ಫಲವನ್ನು ನೀಡುವವನಾಗಿ ುವನಲ್ಲವೇ? ಇಂಥಹ ಪುಣ್ಯವಾದ ಸೌಂದರ್ಯಶ್ರೀಯಿಂದ ಕೂಡಿದ ಾವ ಪುಣ್ಯಾತ್ಮನಿಗೆ ಭಗವಂತನಿಂದ ತೋರಿಸಲ್ಪಟ್ಟಿತು? - ಎಂದು ಆವಿರ್ಭಾವದ ಕಥೆಯನ್ನು ಪ್ರಾರಂಭಿಸುತ್ತಾ - ಅಸುರರುಗಳಿಂದ ಳಗಾಗಿಸಲ್ಪಟ್ಟ ದೇವತೆಗಳೂ ಮತ್ತು ಋಷಿಗಳೂ ಭಗವಂತನನ್ನು

ಶರಣು ಹೊಂದುವುದಕ್ಕಾಗಿ ಕ್ಷೀರ ಸಾಗರಕ್ಕೆ ಹೋಗಿ ಪ್ರಾರ್ಥಿಸುವಾಗ, ಆ ಸಂದರ್ಭದಲ್ಲಿ, ಭಗವಂತನ ಭಕ್ತ ಸಮೂಹದಲ್ಲಿ ಒಬ್ಬನು, ಶಂಖ ಚಕ್ರ ಗದೆಗಳನ್ನು ಧರಿಸಿಕೊಂಡು, ಆಕಾಶದಲ್ಲಿ ತೋರಿ, ''ಎಲೈ ಮುನಿಗಳೇ! ಕೇಳಿರಿ ವಿಚಿತ್ರ ಶಕ್ತಿಗಳನ್ನು ಹೊಂದಿರುವ ಲಕ್ಷ್ಮೀರಮಣನು ಭೂಲೋಕದಲ್ಲಿ ಎಲ್ಲಿಯೋ ಒಂದು ಬೆಟ್ಟದಲ್ಲಿ ವಾಸಿಸುತ್ತಿದ್ದಾನೆ. ಸನಕಾದಿ ಸತ್ಪುರುಷರುಗಳಾದ ನೀವುಗಳು ಇಲ್ಲಿಗೇಕೆ ಬಂದಿರಿ? ಆ ಬೆಟ್ಟಕ್ಕೇ ಹೋಗಿರಿ'' ಎಂದು ಹೇಳಿ ಹಿಂತಿರುಗಿ ಹೋದನು ಎಂಬ ಮಾತು ಭಕ್ತನ ಬಾಯಿಯಿಂದ ಹೊರಬಂದಿತೆಂದೂ, ಹೀಗೆಯೇ ನಾರದ ಋಷಿಯು ವೈಕುಂಠ ಲೋಕಕ್ಕೆ ಹೋದ ಸಂದರ್ಭದಲ್ಲಿ ಅಲ್ಲಿ ಒಬ್ಬ ಪುರುಷನ ಬಾಯಿಯಿಂದ, ''ಭೂಮಿಯಲ್ಲಿ ಎಲ್ಲಿಯೋ ಒಂದು ಬೆಟ್ಟದಲ್ಲಿ ಶ್ರಿಯಃ ಪತಿಯು ಶ್ರೀದೇವಿಯೊಡಗೂಡಿ ಕ್ರೀಡಿಸುತ್ತಿದ್ದಾನೆ'' ಎಂಬ ಮಾತು ಹೊರಬಂದಿತೆಂದೂ ಕಂಡುಬರುವುದರಿಂದ, ಇದೇ ರೀತಿಯಲ್ಲಿ ಬೇರೆ ಕಡೆಗಳಲ್ಲಿಯೂ ಶ್ರೀನಿವಾಸನ ಆವಿರ್ಭಾವವನ್ನು ಹೇಳುವ ಸಂದರ್ಭಗಳಲ್ಲಿಯೇ ಈ ರೀತಿಯ ಮಾತುಗಳು ಉಂಟಾದುವೆಂದು ಹೇಳುವುದು ಕಂಡುಬರುವುದರಿಂದಲೂ, ಮುಂಚೆ ಹೇಳಿದ ಮಾತು ಶ್ರೀನಿವಾಸನನ್ನು ಕುರಿತೇ (ವರಾಹ ಭಗವಂತನನ್ನಲ್ಲ) ಎಂದು ತಿಳಿಯಲು ಸುಲಭವಾಗುತ್ತದೆ. ''ಕರಿಯ ಬೆಟ್ಟದಂತೆ ಶರೀರವನ್ನು ಹೊಂದಿರುವವನಾಗಿ ಆವಿರ್ಭವಿಸಿದಾನೆ'' ಎಂಬ ಪ್ರಾರಂಭದ ವಾಕ್ಯಗಳನ್ನು ಶೋಧಿಸಿದಾಗಲೂ, ಈ ವಾಕ್ಯವು ಬಿಳಿಯ (ಶ್ವೇತ) ವರ್ಣವುಳ್ಳ ವರಾಹ ಭಗವಂತನನ್ನಲ್ಲ ವೆಂದು ತಿಳಿಯಲಾಗುತ್ತದೆ.

ಇದೇ ರೀತಿ ವರಾಹ ಪುರಾಣದ ಮೊದಲನೆಯ ಭಾಗದ ಎರಡನೆಯ ಅಧ್ಯಾಯದಲ್ಲಿ ೩೪ ಎಂಬ ಸಂಖ್ಯೆಯಿಂದ ಸೂಚಿಸಿರುವ ವಚನದಲ್ಲಿ - ''ನಂತರ ಶ್ವೇತ ವರ್ಣದ (ಬಿಳಿಯ ಬಣ್ಣದ) ವರಾಹ ಭಗವಂತನು ಭೂಮಿಯನ್ನೆತ್ತಿ, ಸಪ್ತ ಸಮುದ್ರಗಳನ್ನೂ, ಸಪ್ತ ಲೋಕಗಳನ್ನೂ ಮುಂಚಿನಂತೆಯೇ ಸ್ಥಿರ ಪಡಿಸಿ'' - ಎಂದು ಪ್ರಾರಂಭಿಸಿ, ಕಲ್ಪಕಾಲಕ್ಕೆ ಮೊದಲು ವರಾಹ ಭಗವಂತನು ಸಮುದ್ರದೊಂದಿಗೆ ಕೂಡಿದ ಭೂಮಿಯೇ ಮುಂತಾದ ಲೋಕಗಳನ್ನು ಹಿಂದಿನಂತೆಯೇ ಪ್ರತಿಷ್ಠಾಪಿಸಿದ ಬಗ್ಗೆ ತಿಳಿಸಿ, ನಂತರ ಶ್ರೀ ವೇಂಕಟಾಚಲದಲ್ಲಿ ಬಿಜಯಗೈದು ಶ್ವೇತವರಾಹರಾದ ಹರಿಯು, ಸ್ವಾಮಿ ಪುಷ್ಕರಿಣಿಯ ಪಶ್ಚಿಮದ ತೀರದಲ್ಲಿ ಇರುವ ಪುನೀತವಾದ ವನದಲ್ಲಿ ಸ್ಥಿರವಾಗಿದ್ದರು'' ಎಂದು ಆರಂಭಿಸಿ - ''ಆಗಲೇ ಗರುಡನಿಂದ, ವೈಕುಂಠ ಲೋಕದಿಂದ ತರಲ್ಪಟ್ಟು ಸ್ಥಾಪಿಸಿದ, ವೇಂಕಟವೆಂದು ಹೆಸರನ್ನು ಪಡೆದ ಕ್ರೀಡಾ ಪರ್ವತದಲ್ಲಿ, ಸ್ವಾಮಿ ಪುಷ್ಕರಿಣಿಯ ಮೇಲ್ಭಾಗದ ಅಂಚಿನಲ್ಲಿ ಶ್ವೇತ ವರಾಹ ಭಗವಂತನು ದಿವ್ಯ ವಿಮಾನದಲ್ಲಿ ನಿಂತರು'' ಎಂದು ಹೇಳಿದ ನಂತರ - ''ಹಿಂದೆ ಒಂದು ಕಾಲದಲ್ಲಿ ಸ್ವಾಮಿ ಪುಷ್ಕರಿಣಿಯ

ದಕ್ಷಿಣದ ತಟದಲ್ಲಿ, ಪುಂಡರೀಕಾಕ್ಷನೂ, ದೇವತೆಗಳ ಸ್ವಾಮಿಯೂ ಸರ್ವೋತ್ತಮನೂ ಶಂಖ ಚಕ್ರ ಗದಾಧಾರಿಯೂ ಆದ ಶ್ರೀನಿವಾಸನು ವಿಮಾನದ ನಡುವೆ ನಿಂತು ದರ್ಶನವನ್ನು ಕೊಟ್ಟನು'' - ಎಂಬುದಾಗಿಯೂ ನಂತರ ಕೆಲವು ಕಾಲಗಳು ಕಳೆದ ಮೇಲೆ ಶ್ರೀನಿವಾಸನು ಸ್ವಾಮಿ ಪುಷ್ಕರಿಣಿಯ ದಕ್ಷಿಣ ಪಾರ್ಶ್ವದಲ್ಲಿ ದಿವ್ಯವಾದ ವಿಮಾನದಲ್ಲಿದ್ದುದಾಗಿ ಹೇಳಲ್ಪಡುವುದರಿಂದ, ಶ್ರೀ ವರಾಹಮೂರ್ತಿಯೂ ಶ್ರೀನಿವಾಸನೂ ಭಗವಂತನ ಬೇರೆ ಬೇರೆ ಅವತಾರಗಳಾಗಿ, ಬೇರೆ ಬೇರೆ ಆಲಯಗಳಲ್ಲಿದ್ದುಕೊಂಡು, ಬೇರೆ ಬೇರೆಯಾದ ದಿವ್ಯ ಗುಣ ಚರಿತ್ರೆಗಳನ್ನುಳ್ಳವರಾಗಿ ಶೋಭಿಸುತ್ತಿದ್ದಾರೆ ಎಂದು ಸ್ಪಷ್ಟವಾಗಿಯೇ ತಿಳಿಯಲ್ಪಡುತ್ತದೆ.

ಆದುದರಿಂದ ಈ ಪುಣ್ಯವಾದ ಗಿರಿಯಲ್ಲಿ, ಶ್ರೀ ವರಾಹಮೂರ್ತಿ ಎಂಬ ಒಂದು ಶ್ರಿಯಃ ಪತಿಯ ವಿಗ್ರಹವನ್ನು ಮಾತ್ರವೇ ಒಪ್ಪಿಕೊಂಡು, ಸ್ವಾಮಿ ಪುಷ್ಕರಿಣಿಯ ದಕ್ಷಿಣ ತಟದಲ್ಲಿ ಪುರಾಣಗಳಿಂದ ಅರಿಯಲ್ಪಟ್ಟ ಶ್ರೀನಿವಾಸ ದೇವನನ್ನು ಮತ್ತೊಂದು ಶ್ರಿಯಃ ಪತಿಯ ವಿಗ್ರಹವಲ್ಲವೆಂದು ಮಾಡಿ, ಆ ಜಾಗದಲ್ಲಿ ತಪಸ್ಸು ಮಾಡಲು ಬಂದ ಸ್ಕಂದನೇ ಅಲ್ಲಿ (ಅರ್ಚಾಮೂರ್ತಿಯಾಗಿ) ಸ್ಥಾಪಿಸಲ್ಪಟ್ಟಿರುತ್ತಾನೆ ಎಂದು ಕಲ್ಪನೆ ಮಾಡುವುದು ಯಾವ ವಿಧದಲ್ಲಿಯೂ ಸರಿಯಲ್ಲವೆಂದಾಗುತ್ತದೆ.

ವರಾಹ ಪುರಾಣದ ಎರಡನೆಯ ಭಾಗದಲ್ಲಿನ ಮೊದಲನೆಯ ಅಧ್ಯಾಯದಲ್ಲಿ, ಕಲ್ಪಾದಿಯಲ್ಲಿ ಪ್ರಳಯಾರ್ಣವದಲ್ಲಿ ಮುಳುಗಿದ ಭೂಮಿಯನ್ನೆತ್ತಿ ಮುಂಚಿನಂತೆಯೇ ಸ್ಥಾಪಿಸಿ ಮೇರು ಪರ್ವತದ ಶೃಂಗದಲ್ಲಿ ಇದ್ದ ವರಾಹ ಭಗವಂತನಲ್ಲಿ, ಭೂಮಿಗೆ ಅಧಿದೇವತೆಯಾದ ಭೂದೇವಿಯು ಬಂದುದನ್ನು ಹೇಳಿ, ಆ ಇಬ್ಬರಿಗೂ ನಡೆದ ಸಂಭಾಷಣೆಯಲ್ಲಿ, ಸ್ವಾಮಿ ಪುಷ್ಕರಿಣಿಯ ಬಗೆಗಿನ ಪ್ರಶಂಸೆಯಲ್ಲಿ ''ಈ ತೀರ್ಥಗಳೆಲ್ಲೆಲ್ಲಾ ಶ್ರೇಷ್ಠವಾದ ತೀರ್ಥವಾದವಳು ನಲ್‌ದೇವಿಯಾದ ಸ್ವಾಮಿ ಪುಷ್ಕರಿಣಿ. ಇದರ ಪಶ್ಚಿಮ ತಟದಲ್ಲಿ ನಿನ್ನೊಡನೆ ಸೇರಿ ಈ ಕಲ್ಪ ಮುಗಿಯುವವರೆಗೂ ನಾನಿರುತ್ತೇನೆ. ಇದರ ದಕ್ಷಿಣ ತಟದಲ್ಲಿ ಜಗತ್ಪತಿಯಾದ ಶ್ರೀನಿವಾಸನು ಕಲ್ಪ ಮುಗಿಯುವವರೆಗೂ ಇರುತ್ತಾರೆ - ಎಂದು ಸ್ವಾಮಿ ಪುಷ್ಕರಿಣಿಯ ಪಶ್ಚಿಮ ಮತ್ತು ದಕ್ಷಿಣ ದಿಕ್ಕುಗಳಲ್ಲಿ ಕ್ರಮವಾಗಿ ಭೂಮಿದೇವಿಯೊಂದಿಗೆ ವರಾಹ ಮೂರ್ತಿಯೂ, ಶ್ರೀದೇವಿ ಭೂದೇವಿಗಳೊಂದಿಗೆ ಕೂಡಿದ ಶ್ರೀನಿವಾಸನೂ ಶ್ರಿಯಃ ಪತಿಯಾದ ಶ್ರೀಮನ್ನಾರಾಯಣನ ಅವತಾರಗಳು ಎರಡೂ ಒಂದೊಂದು ಕಲ್ಪದಲ್ಲಿಯೂ ಬಿಡದೆ ವಾಸ ಮಾಡುವುದನ್ನು ವರಾಹ ಮೂರ್ತಿಯು ಹೇಳುವುದಾಗಿ ತಿಳಿಸಿ, ನಂತರ ಆ ಇಬ್ಬರ ಸಂಭಾಷಣೆಯ ಅಂತ್ಯದಲ್ಲಿ ಶ್ರೀ ವರಾಹ ಭಗವಂತನು ಭೂಮಿದೇವಿಯನ್ನು ಎತ್ತಿ ತನ್ನ ಬಾಹುಗಳಿಂದಾಲಂಗಿಸಿ, ಅವಳ ದಿವ್ಯ ಮುಖವನ್ನು ಆಘ್ರಾಣಿಸಿ ಅವಳನ್ನು ತನ್ನ ಎಡತೊಡೆಯ ಮೇಲೆ

ಕೂರಿಸಿಕೊಂಡು ಗರುಡಾರೂಢನಾಗಿ ಶ್ರೀ ವೇಂಕಟಾಚಲಕ್ಕೆ ತೆರಳಿದರು. ಭೂದೇವಿನಾಥನಾದ ಆ ಭಗವಂತನು ನಾರದಾದಿ ಮುನಿಗಳಿಂದ ಸ್ತುತಿಸಲ್ಪಡುತ್ತಾ, ಪ್ರಪಂಚದವರೆಲ್ಲರೂ ಪೂಜಿಸುವ ಸ್ವಾಮಿ ಪುಷ್ಕರಿಣಿಯ ಪಶ್ಚಿಮ ತಟದಲ್ಲಿ ಮುನಿಶ್ರೇಷ್ಠರುಗಳಿಂದ ಆರಾಧಿಸಲ್ಪಟ್ಟು ಅಂದಿನಿಂದ ವಾಸಿಸುತ್ತಾ ಬರುತ್ತಿದ್ದಾರೆ - ಎಂದು ಭೂಮಿದೇವಿಯಿಂದ ಕೂಡಿ, ಆ ಕ್ಷಣವೇ ಗರುಡಾರೂಢನಾಗಿ ಬಂದ ವರಾಹ ಮೂರ್ತಿಯು ಸ್ವಾಮಿ ಪುಷ್ಕರಿಣಿಯ ಪಶ್ಚಿಮ ತಟದಲ್ಲಿರುವುದನ್ನು ಹೇಳಿದ ನಂತರವೇ ಎರಡನೆಯ ಅಧ್ಯಾಯದ ಅಂತ್ಯದಲ್ಲಿ- ''ವರಾಹ ಭಗವಂತನೇ! ಜಗನ್ನಾಥನೂ, ದೇವಾಧಿದೇವನೂ, ಜನಾರ್ಧನನೂ, ನಿರ್ಮಲನೂ ಆದ ಶ್ರೀನಿವಾಸ ದೇವನು ವೇಂಕಟವೆಂದು ಹೆಸರು ಪಡೆದ ದೊಡ್ಡದಾದ ಬೆಟ್ಟಕ್ಕೆ ಯಾವಾಗ ಬಿಜಯಗೈಯ್ಯುತ್ತಾರೆ? ಕಲ್ಪಕಾಲ ಮುಗಿಯುವವರೆಗೂ ಹೇಗಿರುವರು? ಇದನ್ನು ಕೇಳಿ ತಿಳಿಯಲು, ಬಹಳ ಆಸೆಯುಂಟಾಗಿದೆ. ಇದನ್ನು ಹೇಳಿರಿ'' - ಎಂದು ಕೇಳಿದ ಭೂಮಿದೇವಿಯ ಪ್ರಶ್ನೆಗೆ, ಮೂರನೆಯ ಅಧ್ಯಾಯದಲ್ಲಿ - ''ಎಲೈ ಪುಣ್ಯಶೀಲಳೇ! ದೇವಿಯೇ! ಮುಂದಿನ ಕಲ್ಪಕ್ಕೆ ಸೇರಿದ ಕೃತಯುಗದಲ್ಲಿ, ವೈವಸ್ವತ ಮನುವಿನ ಆಡಳಿತ ಕಾಲದಲ್ಲಿ ಶ್ರೀ ಭೂದೇವಿಗಳಿಂದ ಕೂಡಿದ ಭಗವಾನ್ ಶ್ರೀನಿವಾಸನು, ವಾಯುದೇವನು ಒಂದು ಮಹಾ ತಪಸ್ಸು ಮಾಡುವುದನ್ನು ಕಂಡು ಸ್ವಾಮಿ ಪುಷ್ಕರಿಣಿಯ ದಕ್ಷಿಣ ತಟಕ್ಕೆ ಬಂದರು. ಪುಣ್ಯವಾದ ಆ ತಟದಲ್ಲಿ 'ಆನಂದ' ಎಂಬ ಹೆಸರನ್ನು ಪಡೆದ ಅತ್ಯಂತ ಪುಣ್ಯವಾದ ಒಂದು ವಿಮಾನದಲ್ಲಿ ವಾಯುದೇವನಿಗೆ ಪ್ರೀತಿಯನ್ನುಂಟುಮಾಡುವ ಶ್ರೀ ಹರಿಯು ವಾಸಿಸುವರು. ಹೃಷೀಕೇಶನಾದ ಆ ಭಗವಂತನು ಅಲ್ಲಿಗೆ ಬಂದ ದಿನದಿಂದ ಯಾವಾಗಲೂ ಸ್ಕಂದನಿಂದ ಪೂಜಿಸಲ್ಪಡುವವರಾಗಿದ್ದುಕೊಂಡು ಕಲ್ಪ ಮುಗಿಯುವವರೆಗೂ ಯಾರೂ ನೋಡಲಾಗದ ಈ ವಿಮಾನದಲ್ಲಿ ವಾಸವನ್ನು ಮಾಡುವವರಾಗುತ್ತಾರೆ - ಎಂದು ಮುಂದಿನ ಕಲ್ಪವನ್ನು ಉದಾಹರಣೆಯಾಗಿ ತೋರಿಸಿ ಮುಂಬರುವ ಕಾಲಗಳಲ್ಲಿಯೂ, ಕೆಲವು ದಿನಗಳು ಕಳೆದು, ವಾಯುದೇವನ ತಪಸ್ಸಿನ ಫಲವಾಗಿ ಶ್ರೀ ಭೂದೇವಿಗಳಿಂದ ಕೂಡಿದ ಶ್ರೀನಿವಾಸನು ಬಂದು ಸ್ವಾಮಿ ಪುಷ್ಕರಿಣಿಯ ದಕ್ಷಿಣ ತಟದಲ್ಲಿ ಸ್ಕಂದನಿಂದ ಆರಾಧಿಸಲ್ಪಟ್ಟು, ಕಲ್ಪ ಮುಗಿಯುವರೆಗೂ ವಾಸಿಸುವರು ಎಂಬುದಾಗಿ ವರಾಹಮೂರ್ತಿಯೇ ಪ್ರತ್ಯುತ್ತರವನ್ನು ಕೊಟ್ಟಂತೆ ಹೇಳಲ್ಪಟ್ಟಿರುವುದರಿಂದ ಶ್ರೀನಿವಾಸ ಭಗವಂತನನ್ನು ಇಲ್ಲವೆಂದು ಮಾಡಿ ಸ್ಕಂದನನ್ನು ಕಲ್ಪನೆ ಮಾಡಲು ಯಾವ ಅವಕಾಶವೂ ಕಂಡು ಬರುತ್ತಿಲ್ಲ.

ಇದಕ್ಕೆ ವಿರುದ್ಧವಾಗಿ ತಾರಕಾಸುರನನ್ನು ಕೊಂದ ದೋಷವನ್ನು ಹೋಗಲಾಡಿಸಲು ತಪಸ್ಸನ್ನು ಮಾಡಲು ಬಂದ ಸ್ಕಂದನು ಶ್ರೀನಿವಾಸನನ್ನು ಪೂಜೆ ಮಾಡುವವನಾಗಿಯೇ ಪುರಾಣಗಳಿಂದ ತಿಳಿಯಲ್ಪಟ್ಟವನು. ಹಾಗೆಯೇ ಇರಲು

ಯೋಗ್ಯತೆಯನ್ನು ಹೊಂದಿದವನಾದುದರಿಂದ, ಪೂಜಿಸಲ್ಪಡುವ ದೇವತೆಯ ಮೂರ್ತಿಯೊಂದಿಗೆ ಅವನು ಇರುವುದಾಗಿ ಕಲ್ಪಿಸುವುದು - ಅವನ ಬರುವಿಕೆಗೆ ಫಲವಾದ, ಪಾಪವನ್ನು ಹೋಗಲಾಡಿಸಿಕೊಳ್ಳುವುದೆನ್ನುವ ಕಾರ್ಯಕ್ಕೆ ವಿರುದ್ಧವಾಗಿರುವುದರಿಂದ ಸ್ವಲ್ಪವೂ ಸರಿಯಾಗಿ ಕಂಡು ಬರುವುದಿಲ್ಲ.

ಈ ರೀತಿಯಾಗಿ ಹೆಚ್ಚಾಗಿ ವೇಂಕಟಾಚಲ ಮಾಹಾತ್ಮ್ಯೆಯನ್ನು ಹೇಳುವ ಪುರಾಣ ಭಾಗಗಳಲ್ಲಿ, ಸ್ವಾಮಿ ಪುಷ್ಕರಿಣಿಯ ಪಶ್ಚಿಮ ಮತ್ತು ದಕ್ಷಿಣ ತಟಗಳಲ್ಲಿ (ಕ್ರಮವಾಗಿ) ಶ್ರೀ ವರಾಹ ಭಗವಂತನೂ ಮತ್ತು ಶ್ರೀನಿವಾಸ ಭಗವಂತನೂ ಬೇರೆ ಬೇರೆಯಾಗಿ ಬಿಜಯಗೈದಿರುವುದು ತಿಳಿಯಲ್ಪಡುತ್ತದೆ.

ಶ್ರೀ ಪದ್ಮಪುರಾಣದಲ್ಲಿಯೂ ನಾಲ್ಕನೆಯ ಅಧ್ಯಾಯದಲ್ಲಿ ೨೭ ಎಂಬ ಸಂಖ್ಯೆಯಿಂದ ಸೂಚಿಸಲ್ಪಟ್ಟಿರುವ ವಚನದಲ್ಲಿ ಒಂದುಸಮಯ ಷಾಡ್ಗುಣ್ಯ ಪರಿಪೂರ್ಣನಾದ ಪುಣ್ಯ ಚಿತ್ತವನ್ನು ಕೊಂಡ ವಿಷ್ಣು ಭಗವಂತನು ತನ್ನ ಕಾರುಣ್ಯದಿಂದ, ಸಕಲ ಲೋಕಗಳಿಗೂ ತನ್ನ ದರ್ಶನವನ್ನು ನೀಡಲು ಪ್ರತ್ಯಕ್ಷನಾಗಿ - ಎಂದು ಪ್ರಾರಂಭಿಸಿ - ಪರಮ ಪುರುಷನಾದ ಭಗವಂತನು ಭಕ್ತರುಗಳಲ್ಲಿ ದಯೆಯುಳ್ಳವನಾಗಿ, ಸ್ವಾಮಿ ಪುಷ್ಕರಿಣಿಯ ತಟದಲ್ಲಿ ಶ್ರೀನಿವಾಸನಾಗಿ ಕಾಣಲ್ಪಟ್ಟನು (ಆವಿರ್ಭವಿಸಿದನು) - ಎಂಬುದು ಕೊನೆಯದಾಗಿ ಶ್ರೀನಿವಾಸನ ಆವಿರ್ಭಾವವನ್ನು ತೋರಿಸಿ ನಂತರ ಐದನೆಯ ಅಧ್ಯಾಯದ ೨೮ನೇ ಸಂಖ್ಯೆಯ ವಚನದಲ್ಲಿ - ಸಿಂಹಪರ್ವತ (ಸಿಂಹಾದ್ರಿ) ವೇಂಕಟಗಿರಿಯ ಒಳಭಾಗದಲ್ಲಿ ಸ್ವಾಮಿ ಪುಷ್ಕರಿಣಿಯ ತಟದಲ್ಲಿ ಶ್ವೇತವರಾಹ ಭಗವಂತನ ಆವಿರ್ಭಾವವು ಹೇಗೆ ಉಂಟಾಯಿತೆಂದು ಪ್ರಾರಂಭಿಸಿ, ಶ್ರೀ ವರಾಹ ಭಗವಂತನ ಆವಿರ್ಭಾವವನ್ನು ಶ್ರೀನಿವಾಸನ ಆವಿರ್ಭಾವಕ್ಕಿಂತ ಬೇರ್ಪಟ್ಟುದುದಾಗಿ ಸ್ಪಷ್ಟವಾಗಿ ಹೇಳಿ ಮುಗಿಸಿ, ಅಂದಿನಿಂದ ಅತ್ಯಂತ ಬಲವನ್ನು ಹೊಂದಿದವರಾಗಿ ಆದ ದೇವತೆಗಳ ನಾಯಕನು (ಇಂದ್ರ) ಪಾತಾಳ ಲೋಕವನ್ನು ಬಿಟ್ಟು, ಈ ಭೂಲೋಕದ ವಿಷಯದಲ್ಲಿ ಕುತೂಹಲ ಹೆಚ್ಚಿದವನಾಗಿ, ಸ್ವಾಮಿ ಪುಷ್ಕರಿಣಿಯ ಪಶ್ಚಿಮ ತೀರದಲ್ಲಿ - ಎಂದು ಪ್ರಾರಂಭಿಸಿ, ಎಲ್ಲಲ್ಲಿಯೂ ಸ್ವಾಭಾವಿಕವಾಗಿಯೇ ಸ್ನೇಹವನ್ನುಳ್ಳವನೂ, ದಿವ್ಯವಾದ ಶರೀರ ಸಂಪತ್ತುಳ್ಳವನೂ ಆದ ವರಾಹ ಭಗವಂತನು, ಜ್ಞಾನಾನಂದಗಳಿಂದ ತುಂಬಿದ ದೇವತೆಗಳನ್ನೂ ಮತ್ತಿತರ ಮಾನವರನ್ನೂ ಸಂತೋಷಗೊಳಿಸುತ್ತಾ ಬಿಜಯಗೈದಿರುತ್ತಾನೆ - ಎಂಬುವುದೂ, ಕೊನೆಯಲ್ಲಿ, ವರಾಹ ಸ್ವಾಮಿಯು ಸ್ವಾಮಿ ಪುಷ್ಕರಿಣಿ ತಟದಲ್ಲಿರುವುದನ್ನೂ ಆರನೆಯ ಅಧ್ಯಾಯದ ೨೯ ಎಂಬ ಸಂಖ್ಯೆಯಿಂದ ಸೂಚಿಸಿರುವ ವಚನದಲ್ಲಿ - ತನ್ನಿಚ್ಛೆಯಂತೆ ತಾನೇ ತೋರಿ ಬರುವ (ಆವಿರ್ಭವಿಸುವ) ದೇವತೆಗಳ ಸ್ವಾಮಿಯೂ, ನಿತ್ಯ ಸೂರಿಗಳಿಗೆ ಆರಾಧ್ಯನೂ,

ವರಾಹ ರೂಪವನ್ನು ಕೊಂಡ ಸುಂದರನಾದ ಭಗವಂತನು ಆದಿಶೇಷಬೆಟ್ಟದ (ಶೇಷಾದ್ರಿಯ) ಶೃಂಗದಲ್ಲಿ ಸ್ವಾಮಿ ಪುಷ್ಕರಿಣಿಯ ತಟದಲ್ಲಿ, ಒಳಗೆ ಮರೆಸಲ್ಪಟ್ಟ ಶ್ರೀ ಪಾದಗಳನ್ನುಳ್ಳವನಾಗಿ ಭೂಮಿದೇವಿಯೊಂದಗೆ ಕೂಡಿ ಇತರರಿಯದಂತೆ ಸುಖವಾಗಿ ವಾಸಿಸುತ್ತಿದ್ದಾನೆ - ಎಂದು ವರಾಹ ಭಗವಂತನಿರುವುದನ್ನು ಹೇಳಿ, ಒಡನೆಯೇ - ಶ್ರೀನಿವಾಸನೂ ಶೇಷ ಪರ್ವತದಲ್ಲಿ (ಶೇಷಾದ್ರಿಯಲ್ಲಿ) ಸ್ವಾಮಿ ಪುಷ್ಕರಿಣಿಯ ತಟದಲ್ಲಿ ವಾಸಿಸುತ್ತಾ, ಕೆಳಗಿನ ಲೋಕಗಳ ಜನಗಳನ್ನು ಸ್ವಾಭಾವಿಕವಾದ ಸಂತೋಷವುಳ್ಳವರನ್ನಾಗಿ ಮಾಡಲಿಚ್ಛಿಸಿ - ಎಂದು ಪ್ರಾರಂಭಿಸಿ - ಈ ಪ್ರಪಂಚಕ್ಕೆ ಹೊರಗಿನವನೂ, ಪುರಾಣ ಪುರುಷನೂ, ನಮ್ಮನ್ನು ಸೃಷ್ಟಿಸಿದವನೂ ಆದ ಪರಮ ಪುರುಷನು, ತಾನು ಮುಂಚೆ ಇದ್ದ ಸ್ಥಾನವಾದ ವೈಕುಂಠವನ್ನು ಬಿಟ್ಟು ಈಗ ಇಲ್ಲಿ ಇರುತ್ತಿದ್ದಾನೆ - ಎಂಬುದು - ಅಂತಿಮವಾಗಿ ಸ್ವಾಮಿ ಪುಷ್ಕರಿಣಿಯ ತಟದಲ್ಲಿ ವರಾಹ ಭಗವಂತನು ಬಿಜಯಗೈಸಿದ ನಂತರ ಕೆಲ ದಿನಗಳು ಕಳೆದ ಮೇಲೆ ಶ್ರೀ ವೈಕುಂಠದಿಂದ ಬಂದು ಆ ಪುಷ್ಕರಿಣಿಯ ತಟದಲ್ಲಿ ವರಾಹ ಸ್ವಾಮಿಗಿಂತಲೂ ಬೇರಾದ ಶ್ರೀನಿವಾಸ ದೇವರು ಬಿಜಯಗೈಸಿರುವುದನ್ನೂ ಹೇಳಿರುವುದರಿಂದ, ಶ್ರೀ ಮಹಾವಿಷ್ಣುವಾದವರು ಶ್ರೀ ವರಾಹ ಮತ್ತು ಶ್ರೀನಿವಾಸರೆಂಬ ಎರಡು ರೂಪಗಳನ್ನು ಕೊಂಡು ಸ್ವಾಮಿ ಪುಷ್ಕರಿಣಿಯ ತಟದಲ್ಲಿ ಯಾವಾಗಲೂ ದರ್ಶನವನ್ನು ಕೊಡುತ್ತಿದ್ದಾರೆ ಎಂಬುದು ಚೆನ್ನಾಗಿ ತಿಳಿದು ಬರುತ್ತದೆ.

ಪದ್ಮಪುರಾಣದ ಹತ್ತನೆಯ ಅಧ್ಯಾಯದಲ್ಲಿ ೩೩ನೆಯ ಸಂಖ್ಯೆಯಿಂದ ಸೂಚಿಸಿರುವ ವಚನದಲ್ಲಿ ಸ್ವಾಮಿ ಪುಷ್ಕರಿಣಿಯ ಪಶ್ಚಿಮ ದಂಡೆಯಲ್ಲಿ, ಹೊಸದು ಹೊಸದಾದ ರೂಪವುಳ್ಳದ್ದೂ, ಕಳಂಕರಹಿತವಾದುದೂ, ಆನಂದದಾಯಕವಾದ ಒಂದು ವಿಮಾನವು ಕಂಡು ಬಂದಿತು - ಎಂದು ಶ್ರೀನಿವಾಸನ ವಿಮಾನವನ್ನೂ, ಅದಾದ ನಂತರ - ಅಧಿಕ ಸಂಪತ್ತನ್ನು ಹೊಂದಿದ ಸ್ವಾಮಿ ಪುಷ್ಕರಿಣಿಯ ಪಶ್ಚಿಮ ದಂಡೆಯಲ್ಲಿ ದೇವಗಣಗಳ ಪ್ರಾರ್ಥನೆಗೆ ಸಮ್ಮತಿಸಿ ಲೋಕರಕ್ಷಕನಾದ ಭಗವಾನ್ ಪರಮ ಪುರುಷನು ಆವಿರ್ಭವಿಸಿದನು - ಎಂದು ಶ್ರೀನಿವಾಸನೂ ಸ್ವಾಮಿ ಪುಷ್ಕರಿಣಿಯ ಪಶ್ಚಿಮ ತಟದಲ್ಲಿ ಆವಿರ್ಭವಿಸಿದುದಾಗಿ ಹೇಳಲ್ಪಟ್ಟಿದೆ. ಇತರ ಪುರಾಣಗಳಲ್ಲಿ ದಕ್ಷಿಣತಟದಲ್ಲಿ ಆವಿರ್ಭವಿಸಿದುದಾಗಿ ಹೇಳಲ್ಪಟ್ಟಿರುವುದರಿಂದ ಈ ವಿಷಯದಲ್ಲಿ ಸ್ವಲ್ಪ ವ್ಯತ್ಯಾಸವು ಕಂಡು ಬರುತ್ತದೆ. ಆದರೂ ಶ್ರೀನಿವಾಸನೂ ಅವನ ವಿಮಾನವೂ ಸ್ವಾಮಿ ಪುಷ್ಕರಿಣಿಯ ನೈಋತ್ಯ ದಿಕ್ಕಿನಲ್ಲಿಯೇ ಕಂಡು ಬಂದುದರಿಂದ ಆ ಜಾಗವು ಆ ಪುಷ್ಕರಿಣಿಗೆ ದಕ್ಷಿಣವಾಗಿಯೂ, ಪಶ್ಚಿಮವಾಗಿಯೂ ಸೂಚಿಸತಕ್ಕುದಾದುದರಿಂದ, ಯಾವ ವ್ಯತ್ಯಾಸವೂ, ಸ್ವಲ್ಪವೂ ಇಲ್ಲವೆಂದು ಅರಿಯತಕ್ಕದಾಗಿದೆ.

ಮಾರ್ಕಂಡೇಯ ಪುರಾಣದಲ್ಲಿಯೂ ಮೊದಲನೆಯ ಅಧ್ಯಾಯದಲ್ಲಿ - ''ಆ ಶ್ರೀಗಿರಿಯ ವೈಭವವನ್ನು ಪುನಃ ಹೇಳುತ್ತೇನೆ. ಅಲ್ಲಿ ಎಲ್ಲಾ ಪುಣ್ಯ ತೀರ್ಥಗಳೂ ಇವೆ. ಅವುಗಳಲ್ಲಿ 'ಸ್ವಾಮಿ' ಎಂಬ ಹೆಸರನ್ನು ಹೊಂದಿರುವ ಒಂದು ಶ್ರೇಷ್ಠವಾದ ದಿವ್ಯವಾದ ಕೊಳವು ಪ್ರಧಾನ ತೀರ್ಥವಾಗಿದೆ. ಅದರ ಪಶ್ಚಿಮ ಭಾಗದಲ್ಲಿ ಭೂವರಾಹ ಸ್ವಾಮಿಯು ಭೂದೇವಿಯಾದ ತನ್ನ ಮಹಿಷಿಯನ್ನು ಆಲಂಗಿಸಿದಂತೆಯೇ ಸುಂದರವಾದ ಶರೀರ ಸಂಪತ್ತನ್ನುಳ್ಳವನಾಗಿಯೂ, ಎಲ್ಲರಿಗೂ ವರಗಳನ್ನು ನೀಡುವವನಾಗಿಯೂ ಕಂಡು ಬರುತ್ತಿದ್ದಾನೆ. ಅಂದವಾದ ಅದರ ದಕ್ಷಿಣ ಭಾಗದ ತೀರದಲ್ಲಿ ವೈಕುಂಠ ಲೋಕನಾಥನಾದ ಶ್ರಿಯಃ ಪತಿಯು ಲಕ್ಷ್ಮೀಸಮಾಲಿಂಗಿತ ದೇಹವುಳ್ಳವನಾಗಿ ಎಲ್ಲರಿಗೂ ವರಗಳನ್ನು ನೀಡಿಕೊಂಡೇ ಬಹಳ ದಿನಗಳಿಂದ ವಾಸಿಸುತ್ತಿದ್ದಾರೆ.

''ಈ ಕೊಳದ ಮಹಿಮೆಯನ್ನು ನನ್ನಿಂದ ಹೇಗೆ ಹೇಳಲು ಸಾಧ್ಯ?'' ಎಂದು ಗರುಡನು ಮಾರ್ಕಂಡೇಯನಿಗೆ ಹೇಳಿದುದಾಗಿಯೂ, ಭವಿಷ್ಯೋತ್ತರ ಪುರಾಣದ ಮೂರನೇಯ ಅಧ್ಯಾಯದಲ್ಲಿ - ಈ ರೀತಿ ಆ ಬೆಟ್ಟದಲ್ಲಿ ಇರುವುವುಗಳಲ್ಲಿ ಪುಣ್ಯವಾದ ಸ್ವಾಮಿ ಪುಷ್ಕರಿಣಿಯು ಉತ್ತಮವಾದುದು. ಅದರ ಪಶ್ಚಿಮ ದಿಕ್ಕಿನ ಕಡೆಗೆ ಅರಳೀ ಮರದಿಂದ ಅಲಂಕರಿಸಲ್ಪಟ್ಟ ಹುತ್ತದಲ್ಲಿ ವರಾಹ ಮುಖವನ್ನು ಹೊಂದಿದ ಶ್ರಿಯಃ ಪತಿಯು ಭೂಮಿದೇವಿಯನ್ನು ಆಲಂಗಿಸಿಕೊಂಡಿರುತ್ತಿದ್ದಾರೆ. ತಾನು ಮರೆಯಾಗಿ, ಯಾವ ಜಾಗದಲ್ಲಿ ವಾಸಿಸುವ ಎಂದು ಚಿಂತಿಸುತ್ತಿರುವ ಸಮಯದಲ್ಲಿ ಸ್ವಾಮಿ ಪುಷ್ಕರಿಣಿಯ ದಕ್ಷಿಣ ಭಾಗದ ತೀರದಲ್ಲಿ, ಹುಣಸೆಯ ಮರದಡಿಯಲ್ಲಿ ಇರುವ, ದೋಷ ರಹಿತವಾದ, ಸುಂದರವಾದ ಹುತ್ತವನ್ನು ಪರಮಾನಂದದಿಂದ ಕಂಡ ಲೋಕನಾಯಕನಾದ ಶ್ರಿಯಃ ಪತಿಯು ಅದನ್ನೇ ಅತ್ಯಂತ ಶ್ರೇಷ್ಠವಾದ ತಂಗುದಾಣವಾಗಿ ಕಂಡು ಅದರೊಳಗೆ ಮರೆಯಾಗಿದ್ದನು - ಎಂದು ಜನಕ ಮಹಾರಾಜನಿಗೆ ಸದಾನಂದರು ಹೇಳಿದುದಾಗಿಯೂ ಇರುವುದರಿಂದ, ಭಗವಂತನು ಎರಡು ಶರೀರಗಳಿಂದ ಎರಡು ಜಾಗಗಳಲ್ಲಿರುವುದು ವಿವರವಾಗಿ ಹೇಳಲ್ಪಟ್ಟಿತು.

ಸ್ಕಂದ ಪುರಾಣದ ಮೊದಲ ಭಾಗದಲ್ಲಿ ಏಳನೆಯ ಅಧ್ಯಾಯದಲ್ಲಿಯೂ ಮುಂಚೆ ಹೇಳಿದ ಮಾರ್ಕಂಡೇಯ ಪುರಾಣದಲ್ಲಿರುವ ಪದಗುಚ್ಛಗಳು ಹಾಗೆಯೇ ಕಾಣಲ್ಪಡುತ್ತವೆ. ಆ ಸ್ಕಂದ ಪುರಾಣದಲ್ಲಿಯೇ ಮೊದಲನೆಯ ಅಧ್ಯಾಯದಲ್ಲಿರುವ, ಇದಕ್ಕೆ ಮುಂಚಿನ ಎರಡನೆಯ ವಿಭಾಗದಲ್ಲಿ ಹದಿನಾಲ್ಕನೆಯ ವಾಕ್ಯದಲ್ಲಿ ಉದಾಹರಣೆಯಂತೆ ತೋರಿಸಲ್ಪಟ್ಟ ವಚನಗಳಿಂದಲೂ, ಸ್ಕಂದ ಪುರಾಣದ ಎರಡನೆಯ ಭಾಗವಾದ ಮೂವತ್ತೇಳನೆಯ ಅಧ್ಯಾಯದಲ್ಲಿ ಉಳ್ಳ, ''ಬ್ರಾಹ್ಮಣ

ಶ್ರೇಷ್ಠನಾದ ಪದ್ಮನಾಭನು, ಕೆಟ್ಟ ನಡತೆಯನ್ನುಳ್ಳ ತನ್ನ ಮಗ ಕೇಶವನೊಡನೆ ಆ ವೇಂಕಟಾಚಲಕ್ಕೆ ಹೋಗಿ, ವಿಧಿವತ್ತಾಗಿ, ಸ್ವಾಮಿ ಪುಷ್ಕರಿಣಿಯ ನೀರಿನಲ್ಲಿ ಸ್ನಾನ ಮಾಡಿದನು. ನಂತರ ವರಾಹ ಸ್ವಾಮಿಯನ್ನು ನಮಸ್ಕರಿಸಿ, ತದನಂತರ ಶ್ರೀನಿವಾಸನ ದೇವಸ್ಥಾನಕ್ಕೆ ಹೋಗಿ ಪ್ರದಕ್ಷಿಣೆ ಮಾಡಿ, ವಿಮಾನವನ್ನು ನಮಸ್ಕರಿಸಿ ಬ್ರಹ್ಮಹತ್ಯೆ ಮುಂತಾದ ದೋಷಗಳನ್ನು ಹೋಗಲಾಡಿಸುವಂಥಹ ಕಟಾಹ ತೀರ್ಥವನ್ನು ಸ್ವೀಕರಿಸಿದನು'' ಎಂಬ ವಚನಗಳಿಂದಲೂ, ಶ್ರೀವೇಂಕಟಗಿರಿಯಲ್ಲಿ ಸ್ವಾಮಿ ಪುಷ್ಕರಿಣಿಯ ದಡದಲ್ಲಿ ಎರಡು ಮೂರ್ತಿಗಳನ್ನು ಹೊಂದಿ, ಭಗವಂತನು ಬೇರೆ ಬೇರೆಯಾಗಿ ಬಿಜಯಗೈದಿರುವಿಕೆಯನ್ನು ಅತ್ಯಂತ ವಿಸ್ತಾರವಾಗಿ ಪ್ರತಿಪಾದಿಸುತ್ತವೆ.

ಹೀಗೆಯೇ ಬ್ರಹ್ಮೋತ್ತರ ಖಂಡದ ಐವತ್ತನೆಯ ಅಧ್ಯಾಯದಲ್ಲಿ ಸ್ವಾಮಿ ತೀರ್ಥವೆಂಬ ಪ್ರಸಿದ್ಧವಾದ ತೀರ್ಥವು ಉತ್ಕೃಷ್ಟವಾದ ಎಲ್ಲಾ ತೀರ್ಥಗಳಿಗಿಂತಲೂ ಶ್ರೇಷ್ಠತಮವಾದುದು. ಆದರ ದಕ್ಷಿಣ ದಂಡೆಯಲ್ಲಿ ವಿಷ್ಣುವು ಲಕ್ಷ್ಮೀದೇವಿಯೊಡನೆ ಕೂಡಿ ರಮಿಸುತ್ತಿದ್ದಾನೆ - ಎಂಬಿರುವ ವಚನಗಳಿಂದ ಸ್ವಾಮಿ ಪುಷ್ಕರಿಣಿಯ ತೀರದಲ್ಲಿ ಶ್ರೀನಿವಾಸನು ಶ್ರೀದೇವಿಯೊಂದಿಗೆ ಇರುವುದೂ, ವಾಮನ ಪುರಾಣದ ಹದಿನೆಂಟನೆಯ ಅಧ್ಯಾಯದಲ್ಲಿ ೩೭ ಎಂಬ ಸಂಖ್ಯೆಯಿಂದ ಸೂಚಿಸಲ್ಪಟ್ಟ ವಚನದಲ್ಲಿ - (ಜನಕರಾಜನಿಗೆ ಶತಾನಂದರು ಹೇಳಿದುದಾಗಿ) ಆರಸನೇ, ಆ ಮುನಿವರ್ಯರುಗಳು ಭಗವಂತನು ಹೇಳಿದ ಆ ಮಾತುಗಳನ್ನು ಕೇಳಿದ ಕೂಡಲೇ, ಲೋಕ ಪ್ರಸಿದ್ಧವಾದ ಸ್ವಾಮಿ ಪುಷ್ಕರಿಣಿಯ ದಕ್ಷಿಣ ತಟದಲ್ಲಿ ಇರುವುದೂ, ದೊಡ್ಡದೂ, ನಾಶ ರಹಿತವಾದದ್ದೂ, ಆಶ್ಚರ್ಯ ಜನಕವಾದುದೂ, ಶ್ರಿಯಃ ಪತಿಯ ಸಾನ್ನಿಧ್ಯವನ್ನುಳ್ಳದ್ದೂ ಸೂರ್ಯನಂತೆ ನಿರ್ಮಲವಾದದ್ದೂ ಆದ ಒಂದು ದಿವ್ಯ ವಿಮಾನವನ್ನು ಕಂಡರು - ಎಂದಿರುವ ವಚನದಿಂದ, ಅಲ್ಲಿ ವಿಮಾನದೊಡನೆ ಶ್ರೀನಿವಾಸನು ಇರುವುದು ಸ್ಪಷ್ಟವಾಗಿ ತಿಳಿದು ಬರುತ್ತದೆ.

ಈ ರೀತಿ ಸ್ಕಂದ ಪುರಾಣ ಭಾಗಗಳೆರಡರಲ್ಲೂ, ಇತರ ಪುರಾಣ ಭಾಗಗಳಲ್ಲಿಯೂ, ಶ್ವೇತವರಾಹ ಸ್ವಾಮಿ ಮತ್ತು ಶ್ರೀನಿವಾಸ ಸ್ವಾಮಿ ಎಂಬೀರ್ವರ ಇರುವಿಕೆಗಳನ್ನು ಬೇರೆ ಬೇರೆಯಾಗಿ ಹೇಳಲ್ಪಟ್ಟಿರುವುದನ್ನು ನೋಡತಕ್ಕುದು.

ಈ ರೀತಿಯಾಗಿ ಭವಿಷ್ಯೋತ್ತರ ಪುರಾಣ ಮೊದಲಾದುವುಗಳಲ್ಲಿ ಭಗವಾನ್ ಶ್ರೀ ವರಾಹಮೂರ್ತಿಯೂ, ಭಗವಾನ್ ಶ್ರೀನಿವಾಸನೂ, ಒಬ್ಬರಿಗೊಬ್ಬರು ಸಂವಾದ ಮಾಡಿಕೊಳ್ಳುವುದೂ, ಶ್ರೀನಿವಾಸನು ಆಕಾಶ ರಾಜನ ಮಗಳನ್ನು ವಿವಾಹ ಮಾಡಿಕೊಳ್ಳುವುದೂ, ಅದಕ್ಕಾಗಿ ಶ್ರೀನಿವಾಸನು ವರಾಹ ಸ್ವಾಮಿಯನ್ನು ಆಹ್ವಾನಿಸುವುದೂ ಎಂಬಿವೇ ಮೊದಲಾದ ವಿಚಿತ್ರವಾಗಿಯೂ ವಿಸ್ತಾರವಾಗಿಯೂ ಹೇಳಲ್ಪಡುವ ಹಲವು ಚರಿತ್ರೆಗಳು ಎರಡು ರೂಪಗಳನ್ನು ಕಂಡು ಭಗವಂತನು ಶ್ರೀ

ವೇಂಕಟಾಚಲದಲ್ಲಿ, ಸ್ವಾಮಿ ಪುಷ್ಕರಿಣಿಯ ದಂಡೆಯಲ್ಲಿ ಬೇರೆ ಬೇರೆಯಾಗಿ ವಾಸಿಸುತ್ತಿರುವುದನ್ನು ತಿಳಿಸುತ್ತವೆಯಾದುದರಿಂದ ಶ್ರೀನಿವಾಸಭಗವಂತನನ್ನು ಇಲ್ಲವೆಂದು ಮಾಡುವುದು ಯಾರಿಂದಲೂ ಸಾಧ್ಯವಾಗದ ಕೆಲಸವಾಗುತ್ತದೆ.

ಹೀಗೆಯೇ ಪ್ರಥಮ ಪುಷ್ಪಗುಚ್ಛದಲ್ಲಿ ಹೇಳಲ್ಪಟ್ಟಿರುವ ''ಅರಾಯಿಕಾಣೇ'' ಎಂದು ಪ್ರಾರಂಭಿಸುವ ವೇದವಾಕ್ಯದಲ್ಲಿ ಶ್ರೀನಿವಾಸನನ್ನು ಹೇಳುವ ''ಶ್ರಿಂಪಿಠಸ್ಯ'' ಎಂಬ ಶಬ್ದವೂ ಈ ಬೆಟ್ಟದಲ್ಲಿ ವರಾಹ ಭಗವಂತನಿಗಿಂತಲೂ ಬೇರೆಯವರಾದ ಶ್ರೀನಿವಾಸ ಭಗವಂತನು ಬಿಜಯಗೈದಿದಾರೆ ಎಂಬುದಕ್ಕೆ ಸಾಕಾದ ಆಧಾರವಾಗುತ್ತದೆ.

ಇನ್ನು ಈ ಭಗವಂತನಲ್ಲಿ ಕಂಡು ಬರುತ್ತಿರುವ ಗುರುತುಗಳಿಂದಲೂ, ಈ ಮೂರ್ತಿಯು ಸ್ಕಂದನಾಗಿರದೆ ವಿಷ್ಣುಮೂರ್ತಿಯೇ ಆಗಿರುತ್ತಾನೆ ಎಂಬುದು ವಿವರಿಸಲ್ಪಡುತ್ತದೆ. ಸ್ವಾಮಿ ಪುಷ್ಕರಿಣಿಯ ದಕ್ಷಿಣ ದಂಡೆಯಲ್ಲಿ ಈಗ ಬಿಜಯಗೈದಿರುವ ಭಗವಂತನಿಗೆ ನಾಲ್ಕು ಭುಜಗಳಲ್ಲವೇ ಕಂಡು ಬರುತ್ತಿರುವುದು? ನಾಲ್ಕು ತೋಳುಗಳನ್ನು ಹೊಂದಿರುವ ಹಕ್ಕು ವಿಷ್ಣುವಿಗೇ ಎಂಬುದು ಪ್ರಸಿದ್ಧವಾದುದು. ಸ್ಕಂದನಿಗೆ ಇರುವುದಾಗಿ ಎಲ್ಲಿಯೂ ಪ್ರಸಿದ್ಧವಾಗಿಲ್ಲ. ಆದುದರಿಂದ ಈ ದೇವನು ಸ್ಕಂದನಲ್ಲ. ವಾಮನ ಪುರಾಣದ ಎರಡನೆಯ ಅಧ್ಯಾಯದಲ್ಲಿ ೨೧ ಎಂಬ ಸಂಖ್ಯೆಯಿಂದ ಸೂಚಿಸಲ್ಪಟ್ಟ ವಚನದಲ್ಲಿ ಬೃಹಸ್ಪತಿಯು ಸ್ತೋತ್ರ ಮಾಡಿದ ಸ್ಕಂದ ಸ್ತುತಿಯಲ್ಲಿ, ಪುರುಷರುಗಳಲ್ಲಿ ಶ್ರೇಷ್ಠನೂ, ಪರ್ವತ ರಾಜಕುಮಾರಿಯ ಪ್ರೀತಿಯನ್ನು ಹೆಚ್ಚಿಸುವವನೂ ಆದ ಕುಮಾರನು ಒಂದು ಮುಖವನ್ನೂ ಮತ್ತು ಎರಡು ಭುಜಗಳನ್ನೂ ಹೊಂದಿದವನು. ತಾಯಿಯ ಪ್ರೀತಿಯಿಂದ ಆರು ಮುಖಗಳನ್ನು ಹೊಂದಿದವನಾದನು - ಎಂದು ಹೇಳಲ್ಪಟ್ಟಿದೆ. ಇಲ್ಲಿ, ಸ್ವಾಭಾವಿಕವಾಗಿ ಒಂದು ಮುಖವೂ ಎರಡು ಭುಜಗಳೂ ಇರುವುದನ್ನು ತಿಳಿಸಿ ಸ್ತನ್ಯಪಾನವನ್ನು ಮಾಡಿಸುವ ಆರುತಾಯಿಯರ ಉತ್ಕಟ ಪ್ರೀತಿಯಿಂದ ಆರು ಮುಖಗಳು ಉಂಟಾದುವೆಂದೂ ಮುಖಗಳ ಹೆಚ್ಚಳವನ್ನು ಅಸ್ವಾಭಾವಿಕವಾಗಿ ಹೇಳಿ ಆರು ಮುಖಗಳಿರುವುದಕ್ಕೆ ಹೊಂದುವಂತೆ'' ಹನ್ನೆರಡು ಕೈಗಳಿಂದಲೂ ತೋರುವ ಸೇನಾಧಿಪತಿಯೇ'' ಎಂದು ಕೃತಕವಾಗಿಯಾದರೂ ತೋಳುಗಳ ಸಂಖ್ಯೆಯ ಹೆಚ್ಚಳವು ಹನ್ನೆರಡೆಂದು ಹೇಳಲ್ಪಟ್ಟಿತೇ ವಿನಹ ನಾಲ್ಕು ಎಂದು ಹೇಳಲ್ಪಡಲಿಲ್ಲವಲ್ಲವೇ?

ಇದಕ್ಕೆ ಮುಂಚೆ ಈ ಭಗವಂತನನ್ನು ಸ್ಕಂದನೆಂದು ತಿಳಿದು, ತಪಸ್ಸು ಮಾಡುವಾಗ ಆಯುಧಗಳನ್ನು ತ್ಯಜಿಸಿದುದರಿಂದ ಅವುಗಳಿಲ್ಲದೆಯೇ ಬರಿಕೈಗಳಿಂದಿರುವುದು ಸರಿಯೆಂದೂ, ಹೊಂದಾಣಿಕೆ ಆಗುವ ದಾರಿಯೊಂದು (ಶೈವರುಗಳಿಂದ) ಹೇಳಲ್ಪಟ್ಟಿತು. ಒಂದು ಅಧಿಕಾರದಲ್ಲಿರುವವನಿಗೆ

ತಪಸ್ಸನ್ನಾಚರಿಸಲು ಕಾಡಿಗೆ ಹೋಗುವ ಸ್ಥಿತಿಯಲ್ಲಿಯೂ, ಕ್ರೂರ ಮೃಗಗಳನ್ನು ಹೊಡೆದೋಡಿಸುವುದಕ್ಕಾಗಿ, ತನ್ನ ಅಧಿಕಾರಕ್ಕೆ ಸರಿ ಕಾಣುವ ಆಯುಧಗಳನ್ನು ಇಟ್ಟುಕೊಂಡಿರುವುದು ತಪ್ಪಾಗಲಾರದಾದುದರಿಂದಲೂ, ಅವು ಅತ್ಯವಶ್ಯಕವಾದುದರಿಂದಲೂ, ದೇವ ಸೇನಾಧಿಪತಿಯೆಂಬ ಒಳ್ಳೆಯ ಅಧಿಕಾರವನ್ನುಳ್ಳ ಈ ಸ್ಕಂದನು ಆಯುಧಗಳನ್ನು ತ್ಯಜಿಸಿರುವುದು ಸರಿಯಾಗಿ ಕಾಣುವುದಿಲ್ಲವಾದುದರಿಂದ ಅವರುಗಳ ವಾದವು ಸರಿಯಲ್ಲವೆಂದೂ, ಶ್ರೀರಾಮಾಯಣ ಮಹಾಭಾರತ ಗ್ರಂಥಗಳಲ್ಲೂ, ರಾಮ, ಲಕ್ಷ್ಮಣ, ಭರತ, ಅರ್ಜುನ ಮುಂತಾದವರುಗಳು ಜಟೆಗಳನ್ನು ಧರಿಸುವುದೂ ಮೊದಲಾದ ತಪಸ್ಸಿನ ಅಲಂಕಾರವನ್ನು ಮಾಡಿಕೊಂಡು, ಆ ಸ್ಥಿತಿಯಲ್ಲಿಯೇ ತಮ್ಮ ಅಧಿಕಾರಕ್ಕೆ ತಕ್ಕುದಾದ ಆಯುಧಗಳನ್ನು ಧಾರಣೆ ಮಾಡಿರುವುದು ಹೇಳಲ್ಪಟ್ಟಿದೆಯಲ್ಲವಾ?

ಹಿಂದೆ ತಿಳಿಸಿದ ವಾಮನ ಪುರಾಣದಲ್ಲಿ ಎರಡನೆಯ ಅಧ್ಯಾಯದಲ್ಲಿನ ೨೨ನೇ ಸಂಖ್ಯೆಯುಳ್ಳ ವಚನದಲ್ಲಿ - ತಪಸ್ಸು ಮಾಡುವುದಕ್ಕೋಸ್ಕರ ಶ್ರೀ ವೇಂಕಟಾಚಲಕ್ಕೆ ಹೊರಟ ಸ್ಕಂದನು ಆಯುಧ ಧಾರಿಯಾಗಿರುವುದು ಹೇಳಲ್ಪಟ್ಟಿದೆ. ಅವುಗಳನ್ನು ತ್ಯಜಿಸಿದುದನ್ನು ಎಲ್ಲಿಯೂ ತಿಳಿಸಲಿಲ್ಲ. ಅಲ್ಲಿ ಸ್ವರ್ಣಕಾಂತಿ ಯುಕ್ತವಾದ ಸ್ಕಂದನು ದೇವಸೇನೆಯೊಂದಿಗೆ ಕೂಡಿ, ಧನುಸ್ಸನ್ನೂ ಶಕ್ತ್ಯಾಯುಧವನ್ನೂ ಧರಿಸಿ ತಪಸ್ಸನ್ನಾಚರಿಸಲು ಹೋದಾಗ - ಎಂದಿದೆ. ಇದರ ನಂತರದ ಭಾಗಗಳಲ್ಲಿ ಎಲ್ಲಿಯೂ, ಸ್ಕಂದನು ಆಯುಧಗಳನ್ನು ತ್ಯಜಿಸಿದ್ದಾನೆ ಎಂಬುವುದು - ಪುರಾಣದಿಂದ ತಿಳಿಸಲ್ಪಡಲಿಲ್ಲ.

ಈ ಭಗವಂತನೋ (ಶ್ರೀನಿವಾಸನೋ) ಎಂದರೆ ಆಯುಧಗಳನ್ನು ಧಾರಣೆ ಮಾಡಬೇಕಾದ ರೀತಿಯಲ್ಲಿ ಮೇಲ್ಮುಖವಾಗಿರುವ ಎರಡು ಕೈಗಳೊಂದಿಗೂ, ಕೆಳಮುಖವಾಗಿರುವಂತೆ ವರ ಪ್ರಧಾನ ಮಾಡಲು ಇಷ್ಟಪಟ್ಟು, ತನ್ನ ಪಾದ ಪದ್ಮಯುಗಳವನ್ನು ಎಲ್ಲರಿಗೂ ಪಡೆಯುವ ಫಲವಾಗಿ, ಅದನ್ನು ಪಡೆಯುವ ರೀತಿಯನ್ನು ತೋರಿಸುವ ಹಾಗೆ ಬಲಗೈಯೊಂದಿಗೂ, ಸೊಂಟದಲ್ಲಿ ತೂಗುಬಿಟ್ಟ ಕೈ ಇಡಲ್ಪಟ್ಟು, ತನ್ನನ್ನು ಶರಣು ಹೊಂದಿದವರಿಗೆ ಸಂಸಾರ ಸಾಗರವು ಸೊಂಟದಷ್ಟೇ ಆಳವಾಗಿರುವಂತೆ ಒತ್ತಿಸಿಕೊಡುತ್ತದೆ ಎಂಬುದನ್ನು ಸೂಚಿಸುವ ಎಡಗೈಯಿಂದ ಕೂಡಿದವನಾಗಿ ತನ್ನ ರೂಪವನ್ನು ತೋರಿಸುತ್ತಿದ್ದಾನೆ. ಇಂಥಹ ಅವಯವ ಲಕ್ಷಣಗಳನ್ನುಳ್ಳ ಶಂಖ ಚಕ್ರಗಳನ್ನು ಧರಿಸುವವನಾಗಿ ಸಂಸಾರ ಸಾಗರವನ್ನು ದಾಟಿ ಮೋಕ್ಷ ಸಾಮ್ರಾಜ್ಯವನ್ನು ಅಪೇಕ್ಷಿಸುವವರಿಂದ ಧ್ಯಾನಿಸಲು ತಕ್ಕದಾದ ಪರಿಶುದ್ಧವಾದ ಶ್ರೀ ಪಾದ ಪಂಕಜ ದ್ವಯಗಳನ್ನು ಉಳ್ಳವನಾಗಿ, ಪ್ರಪಂಚದ ಜನರೆಲ್ಲರಿಂದಲೂ ಆರಾಧಿಸಲು ತಕ್ಕ ಶರೀರಾಲಂಕಾರ ಸೌಂದರ್ಯವನ್ನುಳ್ಳವನೂ ಆಗಿರುವ ಸ್ಥಿತಿಯು

ಭಗವಾನ್ ನಾರಾಯಣನೊಬ್ಬನಿಗೇ ಇರುವುದು. ತನ್ನ ಪಾತಕವನ್ನು ಹೋಗಲಾಡಿಸಿಕೊಳ್ಳುವುದಕ್ಕೋಸ್ಕರ ತಪಸ್ಸನ್ನು ಮಾಡುವುದರಲ್ಲಿಯೇ ತದೇಕಚಿತ್ತನಾಗಿ ಪೂಜೆ ಮಾಡುವ ವೇಷಕ್ಕೆ ಸೀಮಿತವಾಗಿರಬೇಕಾದ ಸ್ಕಂದನಿಗೆ ಈ ಅವಯವಗಳ ಜೋಡಣೆಯು, ಯಾವ ರೀತಿಯಲ್ಲೂ, ಹೇಗೆ ನೋಡಿದರೂ ಹೊಂದುವುದಕ್ಕೆ ದಾರಿಯಿಲ್ಲ.

ಅಧಿಕವಾಗಿ ಹೇಳುವ ಆವಶ್ಯಕತೆಯೇ ಇಲ್ಲ. ಈ ಭಗವಂತನ ಬಲಭಾಗದ ಎದೆಯಲ್ಲಿ ಕಾಣಲ್ಪಡುವ, ಶ್ರಿಯಃ ಪತಿಯೊಬ್ಬನಿಗೇ ಗುರುತಾಗಿರುವ ಶ್ರೀದೇವಿಯ ಮೂರ್ತಿ ಇರುವಿಕೆಯೊಂದರಿಂದಲೇ ಈ ವಿಗ್ರಹ ರೂಪಿ ಭಗವಂತನು ಶ್ರೀ ಮಹಾವಿಷ್ಣುವೆಂದು ನಿಶ್ಚಯಿಸುವುದು ಬುದ್ಧಿಹೀನನಾದವನಿಗೂ ಸುಲಭವಾಗುತ್ತದೆ.

ಪುರಾಣಗಳಲ್ಲಿ ಶ್ರೀನಿವಾಸನ ಪ್ರತಿಮೆಯನ್ನು ತಿಳಿಸುವ ಘಟ್ಟಗಳಲ್ಲಿಯೂ, ಶ್ರೀನಿವಾಸನಿಗೆ ಮುಂಚೆ ಹೇಳಿದ ರೀತಿಯಲ್ಲಿಯೇ ಕಾಣಲ್ಪಡುತ್ತಿರುವ ಅವಯವಗಳ ಜೋಡಣೆ ಮುಂತಾದುವು ಅಧಿಕವಾಗಿಯೂ, ವಿವರವಾಗಿಯೂ ಗೊತ್ತಾಗುತ್ತದೆ.

ವರಾಹ ಪುರಾಣದ ಪೂರ್ವಭಾಗದ ಹದಿನೈದನೆಯ ಅಧ್ಯಾಯದಲ್ಲಿ ೪೭ ಎಂಬ ಸಂಖ್ಯೆಯಿಂದಸೂಚಿಸಲ್ಪಟ್ಟ ವಚನದಲ್ಲಿ - ಹಲವು ಬಗೆಯ ತೋಳ್ಬಳೆಗಳನ್ನು ಧರಿಸಿಕೊಂಡಿರುವ ದುಂಡಾದ ಮತ್ತು ದೀರ್ಘವಾದ ನಾಲ್ಕು ದಿವ್ಯವಾದ ಬಾಹುಗಳನ್ನುಳ್ಳವನೂ, ಜ್ವಾಲೆಯೊಡನೆ ಕೂಡಿ ಸಾವಿರ ಆರಗಳಿಂದ (ಚಕ್ರದಲ್ಲಿರುವ ಆರೆಪಟ್ಟಿಗಳು) ಕೂಡಿದ ಚಕ್ರಾಯುಧ (ಸುದರ್ಶನ) ವನ್ನುಳ್ಳವನೂ, ಶರತ್ಕಾಲದ ಚಂದ್ರನಂತಿರುವ ಶಂಖ (ಪಾಂಚಜನ್ಯ) ವನ್ನು ಧರಿಸಿದವನೂ, ನಿರಂತರವಾಗಿ (ಆಯಾಸರಹಿತವಾಗಿ, ಅಖಂಡವಾಗಿ) ವರವನ್ನು ನೀಡುವುದರಲ್ಲಿಯೇ ಉತ್ಸಾಹಗೊಂಡ ತಾವರೆಯಂತಿರುವ ಬಲ ಶ್ರೀಹಸ್ತವನ್ನುಳ್ಳವನೂ, ಸೊಂಟದಲ್ಲಿ ಅಂದವಾಗಿಟ್ಟ ಕಮಲದಂತಿರುವ ವಾಮ (ಎಡ) ಶ್ರೀ ಹಸ್ತವನ್ನುಳ್ಳವನೂ, ಉತ್ತಮೋತ್ತಮನೂ, ಮಂಗಳವನ್ನು ಕೊಡುವವನೂ ಆದ ಶ್ರೀನಿವಾಸ ಭಗವಂತನನ್ನು ಬ್ರಹ್ಮನೇ ಮುಂತಾದವರು ಕಂಡರು - ಎಂದು ಹೇಳಲ್ಪಟ್ಟಿದೆ. ಇದರಲ್ಲಿ ''ದಿವ್ಯಬಾಹು ನಾಲ್ಕನ್ನುಳ್ಳವನು'' ಎಂದು ಮುಂಚೆ ತಿಳಿಸಲ್ಪಟ್ಟ ನಾಲ್ಕು ಬಾಹುಗಳನ್ನುಳ್ಳವನೆಂದು ಹೇಳಿದುದರಿಂದ ಮತ್ತು ಬೇರೆ ಬೇರೆ ರಚನೆಯನ್ನು ತೋರಿಸುವುದಕ್ಕೋಸ್ಕರ ''ಜ್ವಾಲೆಯೊಡನೆ ಕೂಡಿ'' ಎಂದು ಪ್ರಾರಂಭಿಸುವ ಅನಂತರದ ಭಾಗವು ಉಂಟಾಗಬೇಕಾಯಿತು.

ಪದ್ಮಪುರಾಣದ ಹತ್ತನೆಯ ಅಧ್ಯಾಯದ ೩೩ ಎಂಬ ಸಂಖ್ಯೆಯಿಂದ ಸೂಚಿಸುವ ವಚನದಲ್ಲಿ - ನಾಲ್ಕು ದಿವ್ಯ ಹಸ್ತಗಳನ್ನುಹೊಂದಿದವರೂ, ನಾಲ್ಕು ದಿವ್ಯ ಹಸ್ತಗಳಲ್ಲಿ ಶಂಖ, ಚಕ್ರ, ವರ, ಅವನತ ಇವುಗಳನ್ನು ಹೊಂದಿರುವವರೂ,

ವಕ್ಷಃಸ್ಥಲದಲ್ಲಿ (ಎದೆಯಲ್ಲಿ) ಶ್ರೀ ವತ್ಸವೆಂಬ ಮಚ್ಚೆ ಮತ್ತು ಕೌಸ್ತುಭ ಮಣಿಯನ್ನು ಧರಿಸಿದವರೂ, ವೈಜಯಂತೀ ಎಂಬ ವನಮಾಲೆಯಿಂದ ಕಾಣಲ್ಪಟ್ಟವರೂ - ಎಂದು ಹೇಳಲ್ಪಟ್ಟಿದೆ. ಇಲ್ಲಿ ಶ್ರೀನಿವಾಸನ ಆಕೃತಿಯು ತಿಳಿಸಲ್ಪಡುವ ಇತರ ಪುರಾಣಗಳೊಂದಿಗೆ ವ್ಯತ್ಯಾಸ ಪಡದೇ ಇರುವುದಕ್ಕಾಗಿ ''ವರಂ'' ಎಂಬುದರಿಂದ ವರ ನೀಡುವುದನ್ನು ಸೂಚಿಸುವ ಬಲ ಹಸ್ತವನ್ನೂ, ''ಅವನತ'' ಎಂಬುದರಿಂದ ಕೆಳಗೆ ಸೊಂಟದಲ್ಲಿಟ್ಟ ಎಡ ಹಸ್ತದ ರಚನೆಯನ್ನೂ ಹೇಳುವುದಾಗಿ ತಿಳಿದುಕೊಳ್ಳಿ.

ಗಾರುಡ ಪುರಾಣದ ಅರವತ್ತೂರನೆಯ ಅಧ್ಯಾಯದಲ್ಲಿ - ಪರಮ ಭಾಗ್ಯವತಿಯಾದ ಅರುಂಧತಿಯು, ಶ್ರೀದೇವಿಯಿಂದಾಲಂಗಿಸಲ್ಪಟ್ಟ ವಕ್ಷಃಸ್ಥಳ (ಎದೆ) ವುಳ್ಳವನೂ, ಪಾಪವನ್ನು ಹೋಗಲಾಡಿಸುವವನೂ ಆದ ಶ್ರೀ ವೇಂಕಟನಾಥನನ್ನು ಆನಂದದಿಂದ ಕಂಡು ನಮಸ್ಕರಿಸಿದಳು - ಎಂದಿರುವ ವಾಕ್ಯಗಳಿಂದಲೂ ಮೇಲ್ಕಂಡ ಅರುಂಧತಿಯ ಸ್ತುತಿಯಲ್ಲಿ ಪ್ರಪಂಚಕ್ಕೆಲ್ಲಾ ಮಂಗಳವುಂಟು ಮಾಡುವ ಶ್ರೀದೇವಿಯು ಯಾರ ವಕ್ಷ ಸ್ಥಳದಲ್ಲಿ, ಯಾವಾಗಲೂ ಕಂಡುಬರುತ್ತಾಳೆಯೋ, ಯಾರ ಶ್ರೀ ಪಾದಗಳನ್ನು ತೊಳೆದ ತೀರ್ಥವನ್ನು ತ್ರಿಪುರ ಸಂಹಾರಿಯಾದ ಪರಮಶಿವನು ತನ್ನ ಶಿರದಲ್ಲಿ ಯಾವಾಗಲೂ ಧರಿಸಿಕೊಂಡಿರುತ್ತಾನೆಯೋ, ಶ್ರೀ ವೇಂಕಟಾಚಲವನ್ನೇ ಯಾವಾಗಲೂ ತಮ್ಮ ವಾಸಸ್ಥಾನವನ್ನಾಗಿ ಮಾಡಿಕೊಂಡು ಇರುವ ದೇವಾಧಿದೇವನಾದ ಅಂಥಹ ಆತ್ಮನಲ್ಲದೆ, ಈ ಪ್ರಪಂಚದಲ್ಲಿ ದೃಷ್ಟಾದೃಷ್ಟಫಲಗಳನ್ನು ಕೊಡಬಲ್ಲ ದೇವರು ಮತ್ತೊಂದು ಕಾಣಲ್ಪಡಲಿಲ್ಲ - ಎಂಬ ವಚನದಿಂದಲೂ, ಶ್ರೀ ವೇಂಕಟನಾಥನನ್ನು ತನ್ನ ಕಣ್ಣು ಮುಂದೆಯೇ ಸ್ತುತಿಸುವ ಅರುಂಧತಿಯಿಂದ, ಆ ಭಗವಂತನು ಪದ್ಮಜೆಯಿಂದಾಲಂಗಿಸಲ್ಪಟ್ಟ ವಕ್ಷಃಸ್ಥಳವನ್ನು ಹೊಂದಿದ ವೇಷದಿಂದ ಕಾಣಿಸಲ್ಪಟ್ಟನೆಂಬುವುದು ಸ್ಪಷ್ಟವಾಗಿ ತಿಳಿಯುತ್ತದೆ.

ಬ್ರಹ್ಮಾಂಡ ಪುರಾಣದ ಒಂಭತ್ತನೆಯ ಅಧ್ಯಾಯದಲ್ಲಿ ಚೋಳರಾಜನ ಪುತ್ರನಾದ ಚಕ್ರವರ್ತಿ ಎಂಬ ಅರಸನು ಶ್ರೀನಿವಾಸನನ್ನು ಕಣ್ಣ ಮುಂದೆಯೇ ಕಂಡದ್ದಾಗಿ ಹೇಳುವ ಘಟ್ಟದಲ್ಲಿ - ನೀಲಮೇಘದಂತಿರುವವನೂ, ಶ್ರೀಮಹಾಲಕ್ಷ್ಮಿಗೆ ವಾಸಸ್ಥಳವಾದವನೂ, ತನ್ನಲ್ಲಿ ಶರಣು ಹೊಂದಿದವರನ್ನು ಕಾಪಾಡುವವನೂ, ಎದೆಯಲ್ಲಿ ಶ್ರೀವತ್ಸವೆಂಬ ಮಚ್ಚೆಯನ್ನುಳ್ಳವನೂ, ಕಮಲದಂತೆ ದೀರ್ಘವಾದ ಕಣ್ಣುಗಳುಳ್ಳವನೂ, ಎರಡು ಹಸ್ತಗಳಿಂದ (ಮೇಲೆತ್ತಿರುವ) ಶಂಖ ಚಕ್ರಗಳನ್ನು ಧರಿಸಿರುವವನೂ, (ಕೆಳಗಿರುವ) ಬಲ ಹಸ್ತದಿಂದ ವರಪ್ರದಮಾಡುವವನೂ (ವರ ಕೊಡುವುದನ್ನು ಸೂಚಿಸುವ) ಎಡ ಹಸ್ತದಿಂದ ಸೊಂಟವನ್ನು ಮುಟ್ಟಿದವನೂ, ಚಿನ್ನದ ಪೋಷಾಕನ್ನು ಧರಿಸಿದವನೂ, ಕಿರೀಟದ ತುದಿಯಲ್ಲಿನ ಮಣಿಗಳಿಂದ

ಶೋಭಿಸುವವನೂ, ಶಾಂತ ಸ್ವರೂಪಿಯೂ, ನಾಶರಹಿತನೂ, ದೇವತೆಗಳಿಂದ ನಮಸ್ಕರಿಸಲ್ಪಡುವವನೂ, ವಾಸುದೇವನೂ ಆದ ಶ್ರೀನಿವಾಸನನ್ನು ಆ ಅರಸನು ಕಂಡನು - ಎಂಬಿರುವ ಸುದ್ದಿಯಿಂದ, ಚಕ್ರವರ್ತಿಯು, ಶ್ರೀ ವಕ್ಷಃಸ್ಥಳದಲ್ಲಿನ ಗುರುತುಗಳನ್ನೂ, ಶಂಖ ಚಕ್ರಗಳನ್ನು ಧರಿಸಿರುವುದೂ, ವರವನ್ನು ಕರುಣಿಸುವುದೂ, ಸೊಂಟದಲ್ಲಿ ಹಸ್ತವನ್ನಿಟ್ಟಿರುವುದೂ ಆದ ನಾಲ್ಕು ಹಸ್ತಗಳ ಲಕ್ಷಣಗಳನ್ನು ಭಗವಂತನಲ್ಲಿ ಕಂಡನೆಂದೂ - ಆ ಪುರಾಣದಲ್ಲಿಯೇ ವಸಿಷ್ಠ - ನಾರದ ಸಂವಾದವೆಂಬ ಪ್ರತ್ಯೇಕವಾದ ಶ್ರೀ ವೇಂಕಟೇಶ ಸಹಸ್ರನಾಮಾಧ್ಯಾಯದಲ್ಲಿಯೂ ಧ್ಯಾನ ಮಾಡಲು ತಕ್ಕುದಾದ ಶ್ರೀನಿವಾಸನ ರೂಪವನ್ನು ವರ್ಣಿಸುವ ಸಂದರ್ಭದಲ್ಲಿ - ಯಾರ ಊರ್ಧ್ವಮುಖವಾಗಿರುವ ಎರಡು ಕೈಗಳು ದೇವತೆಗಳ ಶತ್ರುಗಳನ್ನು ನಾಶಗೊಳಿಸುವ ಶಂಖ ಚಕ್ರಗಳನ್ನು ಧರಿಸುತ್ತವೆಯೋ, ಯಾರ ಕೆಳಗಿರುವ ಬಲಹಸ್ತವು ತನ್ನ ಶ್ರೀಪಾದಗಳನ್ನು ಸೇವೆ ಮಾಡತಕ್ಕುದೆಂದು ಸೂಚಿಸುತ್ತದೆಯೋ, ತೊಡೆಯನ್ನು ಮುಟ್ಟಿದ ಎಡಹಸ್ತವು ಭಕ್ತರುಗಳಿಗೆ ಸಂಸಾರ ಸಾಗರವು ತೊಡೆಯಷ್ಟೇ ಎಂದು ತಿಳಿಸುತ್ತದೆಯೋ, ಯಾರ ವಕ್ಷಃ ಸ್ಥಳದಲ್ಲಿ ಶ್ರೀವತ್ಸವೆಂಬ ಮಚ್ಚೆಯೂ ಮತ್ತು ಶ್ರೀದೇವಿಯೂ ಕಂಡು ಬರುತ್ತಾರೆಯೋ ಅಂಥಹ ಶ್ರೀ ವೇಂಕಟಾಚಲಪತಿಯನ್ನು ಧ್ಯಾನಿಸುತ್ತೇನೆ - ಎಂಬ ವಾರ್ತೆಗಳಿಂದ, ಇಲ್ಲಿ ಹೇಳಲ್ಪಟ್ಟ ಶ್ರಿಯಃ ಪತಿಯಾದ ನಾರಾಯಣನಿಗೆ ಅಸಾಧಾರಣವಾದ, ಎಲ್ಲಾ ಲಕ್ಷಣಗಳಿಂದ ಕೂಡಿದ ವೇಷಗಳಿಂದಲೇ ಶ್ರೀನಿವಾಸನನ್ನು ಧ್ಯಾನಿಸತಕ್ಕದೆಂದು ವಿವರವಾಗಿ ಹೇಳಲ್ಪಟ್ಟಿರುವುದನ್ನು ನೋಡಿ.

ಶ್ರೀನಿವಾಸ ಭಗವಂತನು ಯಾವ ರೂಪದಿಂದ ಚಕ್ರವರ್ತಿಯಿಂದ ಕಾಣಲ್ಪಟ್ಟನೋ, ಅದೇ ರೂಪದಿಂದ ಅಲ್ಲಿ ಎಲ್ಲರಿಂದಲೂ ಸೇವಿಸತಕ್ಕವನಾಗಿರಬೇಕೆಂದು, ಆ ಚಕ್ರವರ್ತಿಯು ಬೇಡಿಕೊಂಡುದುದರಿಂದ ಹಾಗೆಯೇ ಭಗವಂತನು ಒಪ್ಪಿಕೊಂಡುದುದಾಗಿ, ಮುಂಚೆ ಹೇಳಿದ ಒಂಭತ್ತನೆಯ ಅಧ್ಯಾಯದಲ್ಲಿ ತಿಳಿಸಲ್ಪಟ್ಟಿತು. ''ಯೋಗಿಗಳ ನಾಯಕನಿಗೂ ಕಾಣಲಸಾಧ್ಯವಾದ ಯಾವ (ನಿನ್ನ) ಸುಂದರವಾದ ರೂಪವು ನನ್ನಿಂದ ದರ್ಶಿಸಲ್ಪಟ್ಟಿತೋ, ಅಂಥಹ ಇದೇ ರೂಪವು ಎಲ್ಲರಿಂದಲೂ ದರ್ಶಿಸಲ್ಪಡತಕ್ಕುದಾಗಿ ಆಗಬೇಕು. ಎಲ್ಲಾ ಮಾನವರ ಒಳ್ಳೆಯದಕ್ಕಾಗಿ ನೀವು ಯಾವಾಗಲೂ ಇಲ್ಲಿ ವಾಸಮಾಡಬೇಕು'' ಎಂದು ರಾಜನು ಪ್ರಾರ್ಥಿಸಿಕೊಂಡದ್ದರಿಂದ, ಭಗವಂತನು ಹಾಗೆಯೇ ಆಗಲಿ ಎಂದು ಹೇಳಿ ಅರಸನನ್ನು ಕುರಿತು, ''ನೀನು ನನ್ನ ಭಕ್ತನು. ನಿನಗೆ ಸಮಾನನಾದವನು ಮತ್ತೊಬ್ಬನಿಲ್ಲ'' ಎಂದು ಹೇಳಿದನು ಎಂದಿರುವುದನ್ನು ಕಾಣಿರಿ.

ಮಾರ್ಕಂಡೇಯ ಪುರಾಣದ ಎರಡನೆಯ ಅಧ್ಯಾಯದಲ್ಲಿ ವಿಮಾನದೊಡನೆ ಕೂಡಿದ ಶ್ರೀನಿವಾಸನು ಕಂಡು ಬಂದುದನ್ನು ಹೇಳುವ ಘಟ್ಟದಲ್ಲಿ - ಆ ವಿಮಾನದ

ಮಧ್ಯದಲ್ಲಿ ಇರುವವನೂ, ಅತ್ಯಂತ ಸುಂದರವಾದ ರೂಪವನ್ನು ಹೊಂದಿದವನೂ, ಪರಮ ಶ್ರೇಷ್ಠನೂ, ಮೇಲೆತ್ತಿರುವ ಹಸ್ತಗಳಿಂದ ಶಂಖ ಚಕ್ರಗಳನ್ನು ಧರಿಸುವವನೂ, ಬಲಹಸ್ತದಿಂದ ತನ್ನ ಶ್ರೀ ಪಾದಯುಗ್ಮಗಳು ಸೇವೆ ಮಾಡಲ್ಪಡತಕ್ಕದ್ದೆಂದು ಎಲ್ಲರಿಗೂ ತಿಳಿಸುವವನೂ, ಎಡ ತೊಡೆಯಲ್ಲಿಡಲ್ಪಟ್ಟ ಎಡಹಸ್ತದಿಂದ ತನ್ನ ಶ್ರೀಪಾದದ್ವಯಗಳನ್ನು ಶರಣು ಹೊಂದಿದ ಮಾನವರಿಗೆ ಈ ಸಂಸಾರ ಸಾಗರವು ಕೇವಲ ತೊಡೆಯಷ್ಟೇ ಎಂದು ತೋರಿಸುವವನೂ, ಭಕ್ತರು ಕೋರಿದ ವರಗಳೆಲ್ಲವನ್ನೂ ಕೊಡಲು ಕುತೂಹಲಗೊಂಡ ಆಯುಧಗಳನ್ನುಳ್ಳವನೂ, ಶ್ರೀದೇವಿಯು ವಾಸಿಸುವಂಥಹ ವಕ್ಷಃಸ್ಥಳವನ್ನು ಹೊಂದಿದವನೂ, ಮುಗುಳು ನಗೆಯನ್ನು ಸೂಚಿಸುವ ಮುಖಾರವಿಂದವನ್ನುಳ್ಳವನೂ, ಆಭರಣಗಳನ್ನು ಅಧಿಕವಾಗಿ ಧರಿಸಿರುವವನೂ (ಅಧಿಕವಾಗಿ ಉಳ್ಳವನೂ) ಆದ ಶ್ರೀ ವೇಂಕಟೇಶನನ್ನು ಎಲ್ಲರೂ ದರ್ಶಿಸಿದರು - ಎಂದಿರುವುದರಿಂದ ಹಿಂದೆ ತಿಳಿಸಿದ ರೀತಿಯೇ ಅವಯವಗಳ ರಚನೆಯೊಂದಿಗೆ ಕೂಡಿದ ಶ್ರೀನಿವಾಸನನ್ನು ಚತುರ್ಮುಖ ಬ್ರಹ್ಮನೇ ಮೊದಲಾದ ಎಲ್ಲರೂ ದರ್ಶಿಸಿದರು - ಎಂದು ಹೇಳಲ್ಪಟ್ಟಿತು.

ಅದರಲ್ಲೇ ನಾಲ್ಕನೆಯ ಅಧ್ಯಾಯದಲ್ಲಿ ಸ್ಕಂದನಿಗಾಗಿ ಶ್ರೀನಿವಾಸನು ಆವಿರ್ಭವಿಸಿದುದನ್ನು ಹೇಳುವ ಸಂದರ್ಭದಲ್ಲಿ - ಎರಡು ಕೈಗಳಿಂದ ಶಂಖ ಚಕ್ರಗಳನ್ನು ಧರಿಸಿರುವವನೂ, ತೊಡೆಯ ಸಮೀಪವಿಡಲ್ಪಟ್ಟಿರುವ ಹಸ್ತದಿಂದ ಫಲವನ್ನು ತೋರಿಸುವ ಎಡತೊಡೆಯನ್ನುಳ್ಳವನೂ, ತಾವರೆಯಂಥಹ ಬಲಹಸ್ತದಿಂದ ''ಇವುಗಳು ನಿಮ್ಮಗಳಿಂದ ಪಡೆಯತಕ್ಕವುಗಳು'' ಎಂದು ತನ್ನ ಪಾದಗಳನ್ನು ತೋರಿಸುವವನೂ ಆಗಿರುವ ಶ್ರೀನಿವಾಸನನ್ನು ಸ್ಕಂದನು ಕಂಡು ನಮಸ್ಕರಿಸಿ ಸ್ತುತಿಸಿದನು - ಎಂದು ಅಂಥಹ ಅಂಗಗಳ ರಚನೆಯು ಭಗವಂತನಿಂದ ಸ್ಕಂದನಿಗೆ ತೋರಿಸಲ್ಪಟ್ಟಿತು ಎಂದೂ, ಭವಿಷ್ಯೋತ್ತರ ಪುರಾಣದಲ್ಲಿ ಹದಿಮೂರನೆಯ ಅಧ್ಯಾಯದ ಅಂತ್ಯದಲ್ಲಿ - ಕಮಲವನ್ನೇ ಆಲಯವನ್ನಾಗಿ ಕೊಂಡವಳೂ, ಶ್ರೇಷ್ಠವಾದ ಪದ್ಮಾಸನದಲ್ಲಿರುವವಳೂ, ಉತ್ತಮವಾದ ನಯನಗಳನ್ನುಳ್ಳವಳೂ ಆದ ಪದ್ಮಾವತಿಯನ್ನು ತನ್ನ ವಕ್ಷಃಸ್ಥಳದಲ್ಲಿಟ್ಟುಕೊಂಡು, ಶಂಖ ಚಕ್ರಗಳಿಲ್ಲದವನಾಗಿ, ಸೊಂಟದಲ್ಲಿಟ್ಟ ಶ್ರೇಷ್ಠವಾದ ಹಸ್ತವುಳ್ಳವನಾಗಿ, ಬಲಹಸ್ತದಿಂದ ತನ್ನ ಪಾದ ಕಮಲಗಳನ್ನು ಆಶ್ರಯಿಸಿದ ಮಾನವರಿಗೆ ಸಂಸಾರ ಸಾಗರವು ಸೊಂಟದವರೆಗೆ ಬತ್ತಿಹೋಗುವುದೆಂದು ತೋರಿಸಿಕೊಂಡೂ, ಶ್ರಿಯಃ ಪತಿಯಾದ ವೇಂಕಟೇಶ ಭಗವಂತನು ಈಗಲೂ ಕಂಡು ಬರುತ್ತಿದಾನೆ - ಎಂದಿರುವ ಈ ವಾಕ್ಯಗಳಿಂದ ಭಗವಂತನಿಗೆ ಈಗಿರುವ ರೂಪವು ಇಂಥಹುದೆಂದು ಸ್ಪಷ್ಟವಾಗಿ ತಿಳಿಸಲ್ಪಟ್ಟಿದೆ.

ವಾಮನ ಪುರಾಣದ ಇಪ್ಪತ್ತೊಂದನೆಯ ಅಧ್ಯಾಯದ ೪೦ ಎಂಬ ಸಂಖ್ಯೆಯಿಂದ ಸೂಚಿತವಾದ ವಾಚಕದಲ್ಲಿ - ಯಾವ ಸ್ವಾಮಿ'ಪುಷ್ಕರಿಣಿಯ ದಕ್ಷಿಣ ದಂಡೆಯಲ್ಲಿ ಯಾವ ಶ್ರೀನಿವಾಸನು ಆವಿರ್ಭವಿಸಿ ಬ್ರಹ್ಮದೇವನೇ ಮುಂತಾದವರ ಕಣ್ಣಿಗೆ ವಿಷಯವಾದನೋ, ಆ ಜಾಗದಲ್ಲಿಯೇ ಆ ಭಗವಂತನು ವೈಕುಂಠದಿಂದ ಬಂದ ತನ್ನ ವಿಮಾನವು ಮರೆಯಾದುದರಿಂದ, ತಾನು ಮಾತ್ರ ಕಾಣಿಸಿಕೊಂಡೇ ಮಾನವರು ನಿರ್ಮಿಸಿದ ವಿಮಾನದಲ್ಲಿ ಬಿಜಯ ಮಾಡಿಕೊಂಡಿರುತ್ತಾನೆಂದು ಅಗಸ್ತ್ಯ ಮಹರ್ಷಿಗಳು ಮುನಿಶ್ರೇಷ್ಠರುಗಳೊಡನೆ ಹೇಳಿದುದರಿಂದಲೂ, ''ತಾವು ಎಲ್ಲರ ಕಣ್ಣುಗಳಿಗೂ ಕಾಣಿಸುತ್ತಾ ಇಲ್ಲಿಯೇ ಇರಬೇಕು'' ಎಂದು ಅಗಸ್ತ್ಯ ಮಹರ್ಷಿ ಮತ್ತಿತರು ಪ್ರಾರ್ಥಿಸಲು, ಭಗವಂತನೂ ''ಇಲ್ಲಿ ಯಾವಾಗಲೂ ಇರುತ್ತೇನೆ'' ಎಂದು ಒಪ್ಪಿದುದಾಗಿ ಅಲ್ಲಲ್ಲೇ ಪುರಾಣಗಳಲ್ಲಿ ಹೇಳಿರುವುದು ಗೊತ್ತಾಗಿರುವುದರಿಂದಲೂ ಈ ಭಗವಂತನು ಶ್ರೀನಿವಾಸನೇ ಎಂದು ಸ್ಪಷ್ಟವಾಗಿ ತಿಳಿಯಲ್ಪಡುವುದರಿಂದ ಇಲ್ಲಿ ಸ್ಕಂದನು ವಾಸಿಸುತ್ತಾನೆಂದು ಕಲ್ಪನೆಯನ್ನು ಮಾಡಿ ಶ್ರೀನಿವಾಸನನ್ನು ಇಲ್ಲವೆಂದು ಮಾಡುವುದು ಸಾಧ್ಯವಿಲ್ಲದ ಕೆಲಸವು.

ಮುಂಚೆ ತಿಳಿಸಿದ ವಾಮನ ಪುರಾಣಾಧ್ಯಾಯದಲ್ಲಿ ಸರ್ವಜ್ಞನಾದ ಶ್ರಿಯಃ ಪತಿಯು, ಲೋಕ ಪಾವನ ಮಾಡಲು ಯಾವ ವಿಮಾನವನ್ನು ತೋರಿಸಿದನೋ, ಆ ಪೂಜಾರ್ಹವಾದ ವಿಮಾನವು ಈ ಹಿರಿದಾದ ಬೆಟ್ಟದಲ್ಲಿಯೇ ಮರೆಯಾಗಿದೆ. ನಿಜವಾಗಿ ಯಾರೂ ಅದನ್ನು ನೋಡಲಾರರು. ಒಂದೊಂದು ಯುಗದಲ್ಲೂ ಯಾವೊಬ್ಬನೂ ಶ್ರಿಯಃ ಪತಿಯನ್ನು ತಪಸ್ಸು ಮಾಡಿ ಧ್ಯಾನಿಸುತ್ತಾನೆಯೋ ಅವನು ಆ ಭಗವಂತನ ಕಟಾಕ್ಷದಿಂದ ಆ ವಿಮಾನವನ್ನು ನೋಡುತ್ತಾನೆ ಎಂಬುದು ನಿಶ್ಚಯವು. ಇನ್ನು ಬರಲಿರುವ ಕಲಿಯುಗವು ಬಂದಾಗ ಪುಣ್ಯವಾದುದೂ, ಶ್ರೇಷ್ಠವಾದುದೂ, ಸಕಲ ಪಾಪಗಳನ್ನು ಹೋಗಲಾಡಿಸುವುದೂ, ನೋಡುವವರೆಲ್ಲರಿಗೂ ಸಂತೋಷವನ್ನುಂಟು ಮಾಡುವುದೂ, ಮಂಗಳವನ್ನುಂಟು ಮಾಡುವುದೂ, ದೇವರ್ಷಿಗಳು, ದೇವತೆಗಳು, ಅಸುರರುಗಳು, ಗಂಧರ್ವರು, ಸಿದ್ಧರು ಇವರುಗಳಿಂದ ಸೇವೆ ಮಾಡಲ್ಪಟ್ಟುದುದೂ, ಯಾವಾಗಲೂ ಶ್ರಿಯಃ ಪತಿಯು ಬಿಜಯಗೈದಿರುವ ವಿಮಾನವು ಆಶ್ಚರ್ಯಪಡುವಂತೆ ಒಳ್ಳೆಯ ಲಕ್ಷಣಗಳಿಂದ ಕೂಡಿದುದಾಗಿ ವಿಷ್ಣು ಭಕ್ತರುಗಳಾದ ಮಾನವರಿಂದಲೇ ನಿರ್ಮಾಣವಾಗಲಿದೆ. ಮುನಿಶ್ರೇಷ್ಠರುಗಳೇ! ಇದರಲ್ಲಿ ಯಾವ ಸಂದೇಹವೂ ಇಲ್ಲ. ಯಾವುದೇ ಕೊರತೆಯಿಲ್ಲದ ಆಸಕ್ತಿಯನ್ನು ಹೊಂದಿದವರೂ, ಸದ್ಗುಣ ಭರಿತರೂ, ಎಲ್ಲೆಲ್ಲೂ ವ್ಯಾಪಕರಾಗಿರುವವರೂ, ಪ್ರಪಂಚಕ್ಕೆಲ್ಲಾ ನಾಯಕರೂ, ಮುಂಚೆ ಕಂಡು ಬಂದವರೂ ಆದ ಶ್ರಿಯಃ ಪತಿಯವರು, ನಾಲ್ಕು ತೋಳುಗಳನ್ನುಳ್ಳ ರೂಪವಂತರಾಗಿ, ಶಂಖಚಕ್ರಗಳನ್ನು ಧರಿಸಿಯೂ, ಶ್ರೀದೇವಿಯನ್ನು

ವಕ್ಷಃಸ್ಥಳದಲ್ಲಿಟ್ಟುಕೊಂಡೂ, ಆ ವಿಮಾನದಲ್ಲಿಯೇ ಬಿಜಯಗೈದಿರುತ್ತಾರೆ. ಬ್ರಾಹ್ಮಣೋತ್ತಮರುಗಳೇ! ಪಾಪ ಸಮೂಹಗಳನ್ನು ನಾಶಮಾಡುವುದೂ, ಮೂರು ಲೋಕಗಳಿಗೂ ತಿಲಕ ಪ್ರಾಯವಾದ ಆ ವಿಮಾನವು ಈ ಪ್ರಪಂಚದಲ್ಲಿ ಪ್ರಸಿದ್ಧವಾಗಿರಲಿದೆ - ಎಂದು ಪೂಜನೀಯರಾದ ಅಗಸ್ತ್ಯ ಋಷಿಗಳು ಮುನಿಶ್ರೇಷ್ಠರುಗಳಿಗೆ ತಿಳಿಸಿದರೆಂದೂ ಹೇಳಲ್ಪಟ್ಟಿದೆ. ಈ ವಿಷಯವು ಇನ್ನೂ ಹಲವು ಪುರಾಣಗಳಲ್ಲಿ ಅಲ್ಲಲ್ಲೇ ಇರುವುದನ್ನು ಕಾಣತಕ್ಕುದು.

ಸ್ಕಂದನೋ ಎಂದರೆ, ಕುಮಾರಧಾರಾ ತೀರ್ಥದಲ್ಲಿಯೇ ನಿತ್ಯವಾಸವನ್ನು ಮಾಡುತ್ತಾ ಅಡಿಗಡಿಗೆ ಸ್ವಾಮಿ ಪುಷ್ಕರಿಣಿ ದಡದಲ್ಲಿ ವಿರಾಜಮಾನನಾದ ಶ್ರೀನಿವಾಸ ಭಗವಂತನನ್ನು ಆರಾಧಿಸಿಕೊಂಡು ಬೆಟ್ಟದಲ್ಲಿ ಇರುತ್ತಾನೆ ಎಂದು ಮುಂಚೆ ತಿಳಿಸಿದ ವಾಮನ ಪುರಾಣದಲ್ಲಿಯೇ ಐದನೆಯ ಅಧ್ಯಾಯದಲ್ಲಿ ೨೪ ಎಂಬ ಸಂಖ್ಯೆಯಿಂದ ಸೂಚಿಸಿರುವ ವಚನದಲ್ಲಿ ಪಾರ್ವತಿಯೊಂದಿಗೆ ಪರಮ ಶಿವನು ಹೇಳಿದುದಾಗಿ ಇರುವುದರಿಂದ, ಸ್ವಾಮಿ ಪುಷ್ಕರಿಣಿಯ ದಕ್ಷಿಣ ತೀರದಲ್ಲಿ ವಿರಾಜಮಾನನಾದ ದೇವರು ಸ್ಕಂದನಲ್ಲ. ಅವನಿಂದ ಆರಾಧಿಸಲ್ಪಡುವವನಾದ ಶ್ರೀನಿವಾಸ ದೇವರೇ ಎಂದು ಸ್ಪಷ್ಟವಾಗಿಯೇ ತಿಳಿಯುತ್ತದೆ.

ಅದೇ ಅಧ್ಯಾಯದಲ್ಲಿ (ಪಾರ್ವತಿಯನ್ನು ಕುರಿತು ಪರಮ ಶಿವನು ಹೇಳಿದುದಾಗಿ) ಎಲೈ ದೋಷರಹಿತಳೇ! ಶ್ರೀದೇವಿ ಭೂದೇವಿ ಸಮೇತನಾದ ಶ್ರಿಯಃ ಪತಿಯು ಬೆಟ್ಟದ ಶಿಖರದಲ್ಲಿ ಸಂತೋಷವಾಗಿ ವಿಹರಿಸುತ್ತಲೇ, ತಾನೂ ತನ್ನ ದೇಗುಲವೂ ಯಾರ ಕಣ್ಣಿಗೂ ಕಾಣಿಸದಂತೆ ವೇಂಕಟಾಚಲದಲ್ಲಿರುತ್ತಿದ್ದಾರೆ. ಹಲವು ಬಗೆಯಾದ ಮರಗಳೂ, ಲತೆಗಳೂ ಮುಂತಾದುವುಗಳಿಂದ ತುಂಬಿಸಲ್ಪಟ್ಟು ಎಲ್ಲಾ ಋತುಗಳ ಫಲಗಳಿಂದ ಕೂಡಿದುದಾದ ಸ್ವಾಮಿ ಪುಷ್ಕರಿಣಿಯನ್ನು ಸೇರಿದ ಪ್ರದೇಶದಲ್ಲಿ ಕೋಟಿ ಮನ್ಮಥರುಗಳಂತೆ ಇರುವ ರೂಪ ಸೌಂದರ್ಯವನ್ನು ಹೊಂದಿದವರೂ, ಹದಿನಾರು ವರ್ಷದ ತರುಣರೂ ಆದ ಆ ಭಗವಂತನು ಪದ್ಮಜೆಯೊಂದಿಗೂ, ಭೂಮಿಜೆಯೊಂದಿಗೂ ಸೇರಿ ಸಂತೋಷಗೊಂಡಿರುತ್ತಾರೆ. ಮಯೂರ ವಾಹನನಾದ ಸ್ಕಂಧನು ಚೈತ್ರ (ಮೇಷ) ಮಾಸದಲ್ಲಿ ಒಂದು ಶುಭ ತಿಥಿಯಂದು ಆ ಭಗವಂತನನ್ನು ಆರಾಧಿಸಿಕೊಂಡು, ದೇವ ಗಂಧರ್ವ ಕಿನ್ನರರುಗಳಿಂದ ನರ್ತಿಸಲ್ಪಟ್ಟ ನೃತ್ಯಗಳಿಂದಲೂ, ದೇವಲೋಕದ ಸ್ತ್ರೀಯರ ಸಂಗೀತ ವಾದ್ಯ ಧ್ವನಿಗಳಿಂದಲೂ, ಶ್ರೀದೇವಿ ನಾಥನನ್ನು ಸಂತೋಷ ಪಡಿಸಿಕೊಂಡೂ, ಬೆಟ್ಟದ ಉತ್ತರ ವಲಯದ ಕಣಿವೆಯಲ್ಲಿ ಕುಮಾರಧಾರೆ ಎಂದು ಪ್ರಸಿದ್ಧವಾದ ಮಂಗಳಕರವಾದ ಜಲಪಾತದ ದಡದಲ್ಲಿ ವಾಸಿಸುತ್ತಿದ್ದಾನೆ. ಸಹಿಸಲಸಾಧ್ಯವಾದುದೂ, ಘೋರವಾದ ರೂಪವನ್ನು ಹೊಂದಿರುವುದೂ ಆದ

ಅವನನ್ನು ಹಿಡಿದ ಬ್ರಹ್ಮಹತ್ಯೆಯ ದೋಷವು, ಶ್ರೀ ವೇಂಕಟಗಿರಿಯ ಶಿಖರವನ್ನು ಕಂಡ ಮಾತ್ರದಲ್ಲಿ, ಬೆಟ್ಟದ ಹೊರಗೇ ನಿಂತುಬಿಟ್ಟಿತು. ದೇವಿಯೇ! ಷಣ್ಮುಖನು ಶೇಷಗಿರಿಯಲ್ಲಿ ಶ್ರಿಯಃ ಪತಿಯ ನಿತ್ಯ ಸೇವೆಯನ್ನು ಇಚ್ಛಿಸುವವನಾಗಿ ಮರಳಿ ಬರುವುದರ ಬಗ್ಗೆ ಇಷ್ಟ ಪಡಲೇ ಇಲ್ಲ - ಎಂದು ಹೇಳಲ್ಪಟ್ಟಿದೆ.

ಹೀಗೆ ವೇಂಕಟೇಶನನ್ನು ಪೂಜೆ ಮಾಡುವವನಾಗಿ ವೇಂಕಟಗಿರಿಯಲ್ಲಿ ವಾಸಿಸಲು ಇಷ್ಟಪಟ್ಟ ಈ ಸ್ಕಂದನು, ಇತರರಿಂದ ಪೂಜಿಸಲ್ಪಡುವ ಸ್ಥಿತಿಯಲ್ಲಿ ಇಲ್ಲಿ ವಾಸಿಸುತ್ತಾರೆ ಎಂಬ ಹೇಳಿಕೆಯು ಸರಿ ಹೊಂದುವುದಿಲ್ಲ. ಮೇಲೂ, ಈ ಪುರಾಣಗಳಲ್ಲಿ ಎಲ್ಲಿಯೂ ಆ ರೀತಿ ಹೇಳಲ್ಪಟ್ಟಿಲ್ಲ. ಅದಕ್ಕೆ ಪ್ರತಿಯಾಗಿ ಶ್ರೀ ವೈಕುಂಠದಿಂದ ಬಂದ ಶ್ರೀಮನ್ನಾರಾಯಣನ ಕ್ರೀಡಾಗಿರಿಯಲ್ಲಿ ಪಂಚಭೂತಗಳ ಸಂಯೋಗದಿಂದುಂಟಾದ ದೇಹವನ್ನು ಹೊಂದಿದವರುಗಳಿಗೆ ಆರಾಧಿಸಲ್ಪಡುವ ಸ್ಥಿತಿಯಲ್ಲಿ ವಾಸಿಸುವುದೆಂಬುದು ಅಲ್ಲಗಳೆಯಲ್ಪಟ್ಟ ಹಾಗೆಯೇ ತಿಳಿಯಲ್ಪಡುತ್ತದೆ. ಸ್ಕಂದನಿಗಿಂತ ಶ್ರೇಷ್ಠನಾದ ಅವನ ತಂದೆಯಾದ ಪರಮಶಿವನು ಈ ಬೆಟ್ಟದಲ್ಲಿಯೇ ಭಗವಂತನೊಂದಿಗೆ ಸೇರಿ ವಾಸಿಸಲಿಷ್ಟಪಟ್ಟಾಗ, ಭಗವಂತನು ಅದನ್ನು ಒಪ್ಪಿಕೊಳ್ಳದೆ ಇದರ ತಪ್ಪಲಿನಲ್ಲಿ ಆತನ ವಾಸವನ್ನು ಒಪ್ಪಿಕೊಂಡುದುದರಿಂದ ಇದು ಗೊತ್ತಾಗುತ್ತದೆ.

ವರಾಹಪುರಾಣದ ಮೊದಲನೆಯ ಭಾಗ ಹದಿನೆಂಟನೆಯ ಅಧ್ಯಾಯ ೫೦ ಎಂಬ ಸಂಖ್ಯೆಯಿಂದ ಸೂಚಿಸಿರುವ ವಚನದಲ್ಲಿ ಕಪಟವಿಲ್ಲದ ನಗುವಿನಿಂದ ಶೋಭಿಸುವ ಅರವಿಂದಾಕ್ಷನು (ವೇಂಕಟೇಶನು) ಶಿವನನ್ನು ಕುರಿತು, ''ಶಂಕರನೇ! ನೀನು ಇಲ್ಲಿಗೆ ಬಂದ ಕಾರ್ಯವನ್ನು ಶೀಘ್ರವಾಗಿ ಹೇಳು'' ಎಂದು ಕೇಳಲು, ''ಸ್ವಾಮಿ ವೇಂಕಟೇಶ ಭಗವಂತ! ವೃಷಗಿರೀಶ! ನೀವಿರುವ ಜಾಗದಲ್ಲಿಯೇ ನಾನಿರಬೇಕು.'' ಎಂದು ಶಿವನು ಹೇಳಿದಾಗ, ನೀಲ ಮೇಘದಂತೆ ರೂಪಲಾವಣ್ಯವನ್ನು ಪಡೆದ ಶ್ರೀ ವೇಂಕಟಾಚಲ ಪತಿಯು - ''ಸ್ವಾಮಿ! ಮಹಾದೇವ! ಪಾರ್ವತಿ ಪತಿಯೇ! ಈ ವೇಂಕಟಾಚಲದಲ್ಲಿ ಈ ಕಲ್ಪ ಮುಗಿಯುವವರೆಗೆ ವಾಸ ಮಾಡುತ್ತೇನೆ. ಈಶ್ವರನೇ! ಈ ಬೆಟ್ಟದ ತಪ್ಪಲಲ್ಲಿ (ಕೆಳಭಾಗದಲ್ಲಿ) ಈಶಾನ್ಯ ದಿಕ್ಕಿನಲ್ಲಿ ನೀನೂ ವಾಸ ಮಾಡುವವನಾಗು'' ಎಂದು ಹೇಳಿದರು ಎಂಬುದಾಗಿ ಹೇಳಲ್ಪಟ್ಟಿದೆ.

ಈ ರೀತಿ ಈ ವೇಂಕಟಾಚಲದಲ್ಲಿ ಜನರು ಪೂಜಿಸುವ ರೀತಿಯಲ್ಲಿ ಇರುವಿಕೆಯು ಮಹಾದೇವನಾದ ಪರಮಶಿವನಿಗೇ ಇಲ್ಲದಿರುವಾಗ, ಸ್ಕಂದನು ಇತರರಿಂದ ಪೂಜಿಸಲ್ಪಡುವವನಾಗಿ ಇಲ್ಲಿ ವಾಸಿಸುವುದೆಂಬುದು ಸರಿ ಹೊಂದುವುದಿಲ್ಲ ಎಂದು ಬಿಡಿಸಿ ಹೇಳಬೇಕೇ? ಆದ್ದರಿಂದ ಸ್ವಾಮಿ ಪುಷ್ಕರಿಣಿಯ

ದಕ್ಷಿಣ ತೀರದಲ್ಲಿ, ಶ್ರೀನಿವಾಸ ಭಗವಂತನು, ದೇವತೆಗಳೇ ಮುಂತಾದವರ ಕಣ್ಣಳಿಗೆ ಹೇಗೆ ಯಾವ ರೀತಿಯಲ್ಲಿ ಕಾಣಿಸಿದನೋ ಹಾಗೆಯೇ ಅಲ್ಲಿ ದರುಶನವನ್ನು ಕೊಡಬೇಕೆಂದು ಅಗಸ್ತ್ಯರೇ ಮುಂತಾದವರು ಪ್ರಾರ್ಥಿಸಿದಂತೆ, ಆ ರೂಪದೊಡನೆಯೇ ಯಾವಾಗಲೂ ಇರುತ್ತಿದಾನೆ. ಅವನೇ ಆರ್ಚಾರೂಪಿಯಾಗಿ (ವಿಗ್ರಹ ರೂಪಿ) ಈಗಲೂ ಎಲ್ಲರೂ ಕಾಣುವಂತೆ ತೋರಿ ಬರುತ್ತಿದಾನೆಯಾದುದರಿಂದ, ಸ್ಕಂದನೇ ಇವನು ಎಂದು ಹೇಳುವುದಕ್ಕೆ ಸ್ವಲ್ಪವೂ ಅವಕಾಶವಿಲ್ಲ.

ಈ ರೀತಿಯಾಗಿಯೇ ಬ್ರಹ್ಮಪುರಾಣದ ಮೂರನೆಯ ಅಧ್ಯಾಯದಲ್ಲಿ - ಭಗವಂತನಾದ ಶ್ರೀನಿವಾಸನ ಅಪ್ಪಣೆಯಿಂದ ಶಂಖನೆಂಬುವ ಅರಸನು ತಾನು ಕಂಡ ರೀತಿಯಲ್ಲಿಯೇ ಶ್ರೀನಿವಾಸನಿಗೆ ವಿಮಾನ ಮತ್ತು ಆರ್ಚಾರೂಪ ಮುಂತಾದುವುಗಳನ್ನು ನಿರ್ಮಿಸಿದನು - ಎಂದು ಹೇಳಲ್ಪಟ್ಟಿದೆ. ಅಲ್ಲಿ - ''ಪುರುಷೋತ್ತಮನಾದ, ಮಹಾಭಾಗ್ಯಶಾಲಿಯಾದ ಶಂಖರಾಜನೇ! ನನ್ನ ವಿಮಾನವನ್ನೂ ವಿಗ್ರಹವನ್ನೂ ನೀನು ಕಂಡ ರೀತಿಯಲ್ಲಿಯೇ ನಿರ್ಮಾಣ ಮಾಡುವವನಾಗು. ಆದರಿಂದ ನಿನಗೆ ಸದ್ಗತಿಯುಂಟಾಗುತ್ತದೆ'' ಎಂದು ಹೇಳಿ ಎಲ್ಲರೂ ನೋಡುತ್ತಿರುವಂತೆಯೇ ಭಗವಂತನು ಅಂತರ್ಧಾನನಾದನು. ನಂತರ ಶಂಖರಾಜನು, ಭಗವಂತನು ಹೇಳಿದಂತೆಯೇ ಉತ್ತಮವಾದ, ಪುಣ್ಯವಾದ ವಿಮಾನವನ್ನೂ, ಭಗವಂತನ ಪವಿತ್ರವಾದ ವಿಗ್ರಹ ರೂಪವನ್ನೂ ರೂಪಿಸಿ ಮನುಷ್ಯಲೋಕದಲ್ಲಿ ಪ್ರಸಿದ್ಧಿ ಪಡಿಸಿ ನಂತರ ವಿಷ್ಣುವಿನ ನಾಶ ರಹಿತವೂ ಮಂಗಳಕರವೂ ಆದ ಪರಮಪದ (ಶ್ರೀ ವೈಕುಂಠ)ವನ್ನು ಹೊಂದಿದನು- ಎಂದಿರುವುದನ್ನು ನೋಡಿ.

ಈ ಭಗವಾನ್ ಶ್ರೀನಿವಾಸನಿಗೆ ಅಲ್ಲಲ್ಲಿ ಹೇಳಲ್ಪಟ್ಟಿರುವ ಶಂಖ, ಚಕ್ರ, ವರ ಕೊಡುವ ಸೂಚನೆಯನ್ನು ತೋರಿಸುವ ಮತ್ತು ಸೊಂಟದ ಮೇಲಿಟ್ಟಿರುವುದೇ ಆದ ನಾಲ್ಕು ವಿಧ ಗುರುತುಗಳನ್ನು (ಚಿಹ್ನೆ) ಧರಿಸುವ ನಾಲ್ಕು ಕೈಗಳಿರುವಿಕೆಯನ್ನೂ, ಶ್ರೀದೇವಿಯಿಂದಲೂ, ಶ್ರೀವತ್ಸದಿಂದಲೂ ಗುರುತು ಮಾಡಲ್ಪಟ್ಟ ವಕ್ಷಃ ಸ್ಥಳವಿರುವಿಕೆಯಿಂದಲೂ ಇವರು ಬೇರೆ ದೇವತೆಯಲ್ಲವೆಂಬುದನ್ನು ಧೃಡಪಡಿಸುವುದರಿಂದ ಇವುಗಳು ಅಲ್ಲವೆಂದು ಹೇಳಲಾಗದ ಪ್ರಮಾಣಗಳಾಗುತ್ತವೆ.

ಇದರಿಂದಲ್ಲವೇ ಪರಮೈಕಾಂತಿಗಳ (ಶ್ರೀಯಃ ಪತಿಯಾದ ಶ್ರೀಮನ್ನಾರಾಯಣನೇ ಪರಮ ಪುರುಷಾರ್ಥ. ಪರಮ ಪದವನ್ನು ಹೊಂದುವುದೇ ಆತನಿಂದ ಇಚ್ಛಿಸುವ ಫಲ ಎಂದು ತಿಳಿದಿರುವವರು)ಲ್ಲಿ ಪ್ರಪ್ರಥಮರಾಗಿ, ಅತ್ಯಂತ ಪ್ರಾಚೀನರುಗಳಾದ ನಮ್ಮಾಳ್ವಾರ್ (ಶಠಕೋಪಸೂರಿ) ತಿರುಮಂಗೈಯಾಳ್ವಾರ್

(ಕಲಿಯನ್) ಮುಂತಾದ ಆಳ್ವಾರುಗಳಿಂದ, ತಮಿಳು ವೇದಗಳು (ದ್ರಾವಿಡ ವೇದಗಳು), ಅವುಗಳ ಅಂಗಗಳು, ಉಪಾಂಗಗಳೂ ಆದ ನಮ್ಮ ದಿವ್ಯ ಪ್ರಬಂಧಗಳಲ್ಲಿ (ಭಕ್ತಿ ಗೀತೆಗಳಲ್ಲಿ) ಈ ವೇಂಕಟನಾಥನು ಶ್ರಿಯಃ ಪತಿಯಾದ ಶ್ರೀ ಮಹಾವಿಷ್ಣುವೆಂದೂ, ಈ ಸ್ಥಳವು ವಿಷ್ಣುವಿನ ಸ್ಥಳ (ತಿರುಮಾಲ್ ತಿರುಪ್ಪತಿ)ವೆಂದೂ, ಹೇಳಿ ಸ್ತೋತ್ರವನ್ನೂ, ಧ್ಯಾನವನ್ನೂ ಮಾಡಿರುವುದೂ ಕಂಡು ಬರುತ್ತದೆ.

ಪ್ರಾಪಂಚಿಕ ವಿಷಯಗಳಲ್ಲಿ ಅನಾಸಕ್ತರಾದವರಲ್ಲಿ ಮೊದಲಿಗರಾದ ಈ ಆಳ್ವಾರ್‌ಗಳು (ಸಂತರುಗಳು) ಈ ಭಗವಂತನು ಬೇರೆ ದೇವತೆಯಾಗಿ ಇದ್ದಾಗ್ಯೂ, ಬಹಳವಾಗಿ ಶ್ರಮಪಟ್ಟು ಅವನಲ್ಲಿಲ್ಲದ ವಿಷ್ಣುವಿನ ಗುಣಗಳನ್ನು ಕಂಡುಕೊಂಡು ಉಪಾಸನೆ ಮಾಡುವುದಾಗಿ ಕಪಟವೇಷವನ್ನು ಹಾಕಲಾರರು. ಅನ್ಯ ಪದಾರ್ಥಗಳಲ್ಲಿ ತಮ್ಮ ಮನಸ್ಸನ್ನು ಹೋಗಬಿಡದೆ ನಿಜವಾದ (ಸತ್ಯವಾದ) ಮನೆ (ಶ್ರೀವೈಕುಂಠ - ಪರಮ ಪದ) ಯನ್ನು ಹೊಂದುವುದರಲ್ಲೇ ತಮ್ಮ ಮನಸ್ಸನ್ನಿಟ್ಟವರಾದ ಇವರುಗಳಿಗೆ, ಹಣ, ಪ್ರಸಿದ್ಧಿ ಮುಂತಾದುವುಗಳಲ್ಲಿ ಆಸೆಯ ಕಾರಣದಿಂದ ಇಂಥಹ ಕಪಟವಾದ ಯತ್ನವು ಅವರಿಂದ ಆಗಿದೆಯೆಂದು ಯಾವ ರೀತಿಯಿಂದಲೂ ಹೇಳಲಾಗದ ವಿಷಯವಾಗುತ್ತದೆ.

ಇವರುಗಳು ಮಾಡಿದ ಸ್ತುತಿಯೂ ಧ್ಯಾನವೂ ವರಾಹಮೂರ್ತಿಯೊಬ್ಬರನ್ನು ಕುರಿತೇ ಆಗಿದೆ ಎಂದು ಸ್ಥಿರ ಪಡಿಸಲೂ ಸಾಧ್ಯವಿಲ್ಲ. ಅಧಿಕ ಉದ್ದವಾದ, ದೊಡ್ಡದಾದ ಕಿರೀಟವನ್ನು ಧರಿಸಿರುವಿಕೆಯೂ, ಶಂಖ ಚಕ್ರವನ್ನು ಧರಿಸಿರುವಿಕೆಯೂ, ಶ್ರೀದೇವಿಯಿಂದಾಲಂಗಿಸಲ್ಪಟ್ಟ ವಕ್ಷಃಸ್ಥಳವನ್ನು ಹೊಂದಿರುವಿಕೆಯೂ, ನಾಲ್ಕು ಹಸ್ತಗಳ ರಚನೆ ಮುಂತಾದುವುಗಳೂ ವರಾಹಮೂರ್ತಿಗೆ ಇಲ್ಲದೆ ಶ್ರೀನಿವಾಸನಿಗೆ ಇರುವ ಚಿಹ್ನೆಗಳನ್ನು ಇವರುಗಳು ಹೇಳಿರುವುದನ್ನು ಕಂಡು ಇದು ತಿಳಿಯಲ್ಪಡುತ್ತದೆ.

ದ್ರಾವಿಡ ಬ್ರಹ್ಮಸಂಹಿತೆಯಲ್ಲಿ (ತಮಿಳು ಭಾಷೆಯಲ್ಲಿ ರಚಿಸಲ್ಪಟ್ಟು ಬ್ರಹ್ಮವೆಂಬ ಶ್ರೀಮನ್ನಾರಾಯಣನನ್ನುಹೇಳುವ ರಹಸ್ಯ ಗ್ರಂಥವಾದ ತಿರುವಾಯ್ಮೊಳಿ (ಸಹಸ್ರಗೀತೆ)) ಶ್ರೀ ಶಠಗೋಪರೆಂಬ ನಮ್ಮಾಳ್ವಾರ್‌ರವರಿಂದ (ಪರಾಂಕುಶರಿಂದ) ಶ್ರೀವೇಂಕಟಾಚಲದ ಬಗೆಗಿನ ಆರನೆಯ ಶತಕದಲ್ಲಿ ಹತ್ತನೆಯ ದಶಕ, ಮತ್ತು ಮೂರನೆಯ ಶತಕದಲ್ಲಿ ಮೂರನೆಯ ದಶಕ ಎಂಬುವ ಎರಡರಲ್ಲಿ, ಹಿಂದಿನ ದಶಕದಲ್ಲಿ ಶ್ರೀನಿವಾಸನಿಗೇ ಇರುವ ಚಿಹ್ನೆಗಳು ಚೆನ್ನಾಗಿ ಗುರುತಿಸಲ್ಪಟ್ಟಿವೆ.

ಆ ದಶಕ (೩ನೇ ಶತಕದ ೩ನೇ ದಶಕ) ದ ಎರಡನೆಯ ಪದ್ಯ (ಪಾಶುರ) ದಲ್ಲಿ ಜಾಜ್ವಲ್ಯವಾದ ಚಕ್ರಾಯುಧವನ್ನು ಮೇಲೆತ್ತಿರುವ ಬಲಗೈಯಿಂದ ಧರಿಸಿರುವಿಕೆಯನ್ನೂ, ಚಕ್ರವೆಂಬ ಹೆಸರಿನಿಂದ (ಉಪಲಕ್ಷಣ ರೀತ್ಯಾ) ಇತರ ಆಯುಧಗಳ ಇರುವಿಕೆಯನ್ನೂ, ಹತ್ತನೆಯ ಪದ್ಯದಲ್ಲಿ ಶ್ರೀದೇವಿಯು ಯಾವಾಗಲೂ

ನೆಲೆಸಿರುವ ವಕ್ಷಃಸ್ಥಳವನ್ನು ಹೊಂದಿರುವುದನ್ನೂ, ಕೊನೆಯ (೧೧ನೇ ಪದ್ಯ) ಪದ್ಯದಲ್ಲಿ ಕಮಲದಂತಿರುವ ತನ್ನ ಎರಡು ಪಾದಗಳನ್ನು ಉಪಾಯ (ಪ್ರಯೋಜನ)ವಾಗಿಯೂ, ಅದನ್ನು ಪಡೆಯುವ ರೀತಿಯಾಗಿಯೂ ತೋರಿಸುವ ಕೆಳಗಿನ ಬಲಗೈನ ರಚನೆ (ಇರುವಿಕೆ), ತನ್ನ ಪಾದ ಕಮಲಗಳನ್ನು ಶರಣು ಹೊಂದುವವರಿಗೆ ಸಂಸಾರ ಸಾಗರವು ಕೇವಲ ಮೊಣಕಾಲುದ್ದದವರೆಗೆ ಬತ್ತಿಹೋಗಿ ಅದನ್ನು ದಾಟಲು ಸುಲಭವಾಗಿರುತ್ತದೆ ಎಂಬುದನ್ನು ತೋರಿಸಿಕೊಡುವುದರ ಮೂಲಕ, ಪರಮ ಪದವನ್ನು ಸೂಚಿಸುವ ಕೆಳ ಎಡಗೈನ ರಚನೆ (ಇರುವಿಕೆ)ಯೂ, ಶ್ರೀನಿವಾಸ ಭಗವಂತನಿಗೆ ಇರುವುದಾಗಿ ಜ್ಞಾನ ಭಕ್ತಿಗಳಿಂದ ತುಂಬಿದ ಶ್ರೀ ಪರಾಂಕುಶ (ನಮ್ಮಾಳ್ವಾರ್)ರು ಹೊರ ಪಡಿಸಿ ತಿಳಿಸಿದರು. (ಅದು ಹೀಗೆ ಕೆಳಗೆ ತಿಳಿಸಿದಂತಿದೆ).

ಎಂಟನೆಯ ಪಾಶುರ (ಪದ್ಯ)ದಲ್ಲಿ (ಶೀರಾ ಎರಿಯುಂ ತಿರುನೇಮಿ ವಲವಾ) ಕೋಪಿಸಿಕೊಂಡೇ ಜ್ವಾಲೆಯಿಂದ ಕೂಡಿ ಉರಿಯುತ್ತಿರುವ ಶ್ರೀನೇಮಿ (ಚಕ್ರಾಯುಧ)ಯನ್ನುಳ್ಳ ಬಲಭಾಗವನ್ನು ಹೊಂದಿದವನೇ - ಎಂದೂ, ಹತ್ತನೆಯ ಪದ್ಯದಲ್ಲಿ (ಅಗಲಹಿಲ್ಲೇನ್ ಇರೈಯುಮೆನ್ರು ಅಲರ್‌ಮೇಲ್‌ಮಂಗೈ ಉರೈಮಾರ್ಬಾ) (ನಿನ್ನನ್ನು ಒಂದು ಕ್ಷಣವೂ) ನಾನು ಬಿಟ್ಟಿರಲಾರೆ. ಎಂದು ಹೇಳಿಕೊಂಡು ಹೂವಿನ ಮೇಲೆ ಇರುವ ನಾರೀಮಣಿಯಾದ ಶ್ರೀ ಮಹಾಲಕ್ಷ್ಮಿಯು ಯಾವಾಗಲೂ ಬಿಟ್ಟಿರದೇ ಇರುವ ವಕ್ಷಃಸ್ಥಳವನ್ನುಳ್ಳವನೇ - ಎಂದೂ, ಕೊನೆಯ ಪದ್ಯದಲ್ಲಿ (ಅಡಿಕ್ಕೀಳ್ ಅಮರ್‌ನ್ದು ಪುಗುನ್ದು ಅಡಿಯೀರ್‌ವಾಳ್‌ಮಿನ್ ಎನ್ರೆನ್ರು ಅರುಳ್‌ಕೊಡುಕ್ಕುಂಪಡಿಕ್ಕೇಳಿಲ್ಲಾ ಪೆರುಮಾನೇ) - ''ನನ್ನ ಪಾದಗಳಲ್ಲಿ ತಕ್ಕ ರೀತಿಯಲ್ಲಿ (ಅಂದರೆ - ಬೇರಾವ ಫಲವನ್ನೂ ಬೇಕೆಂದು ಕೇಳದೆ ಪಾದಗಳನ್ನೇ ಫಲವೆಂದು ತಿಳಿದು) ಶರಣು ಹೊಂದಿ ನನ್ನನ್ನಾಶ್ರಯಿಸಿದವರೇ! ಈ ಪಾದಗಳನ್ನೇ ನಂಬಿ ಜೀವಿಸಿ ಕೃತಕೃತ್ಯರಾಗಿ'' ಎಂದು ವರವನ್ನು ಕೊಡುವವನೂ, ತನಗೆ ಉಪಮಾನವಿಲ್ಲದವನೂ, ಆದ ಶ್ರೇಷ್ಠನು (ಉತ್ತಮನು) ಎಂದು ಹೇಳಲ್ಪಡುತ್ತದೆ. ಇಲ್ಲಿ ಕೊನೆಯ ಪದ್ಯದಲ್ಲಿ ಶ್ರೀಪಾದಗಳನ್ನು ಶರಣುಹೋಗುವಿಕೆಯು, ಅದರಿಂದ ಜೀವನದಲ್ಲಿ ಕೃತಕೃತ್ಯರಾಗುವಿಕೆಯನ್ನೂ ತೋರಿಸಿದ್ದಾದರೂ, ನಂತರ ಭಗವಂತನಿಗೆ ಇರುವುದಾದ ಮತ್ತು ಇತರರಿಗೆ ಇಲ್ಲದ ನಿಸ್ಸಮಾನತ್ವವನ್ನು ಹೇಳಿದುದರಿಂದಲೂ, ಬಲಗೈ ಮತ್ತು ಎಡಗೈಗಳ ಮುದ್ರೆಗಳು (ರಚನೆ) (ಹಸ್ತವಿನ್ಯಾಸ ರೂಪ ಮುದ್ರಾದ್ವಯ) ನಿರೂಪಿಸಲ್ಪಟ್ಟಿತೆಂದು ತಿಳಿಯಬರುವುದನ್ನು ಕಾಣತಕ್ಕದ್ದು.

ಈ ವಿಧವಾದ ಇತರ ವಿಷ್ಣು ಲಕ್ಷಣಗಳು ಆಯಾಯಾ ಆಳ್ವಾರ್‌ಗಳಿಂದ ಅಲ್ಲಲ್ಲಿ ಹೇಳಲ್ಪಟ್ಟಿರುವುದನ್ನು ಕಾಣಬಹುದು. ಇಲ್ಲಿ ಸೊಂಟಕ್ಕೂ ತೊಡೆಗೂ ಮಧ್ಯದಲ್ಲಿಟ್ಟ ಭಗವಂತನ ಎಡಹಸ್ತದ ಮುದ್ರೆಯು, ಕೆಲವು ಪುರಾಣಗಳಲ್ಲಿ ಸಂಸಾರ

ಸಾಗರವು ಕೇವಲ ಮೊಣಕಾಲುದ್ದದ ಆಳ ಮಾತ್ರ ಎದು ತೋರಿಸುವುದಾಗಿ ವರ್ಣಿಸಿರುವಿಕೆಯು ಹೇಗೆ ಅನ್ವಯಿಸುತ್ತದೆ ಎಂದರೆ, ಸೊಂಟದಿಂದ ಕೆಳಗೆ ಇಟ್ಟ ಹಸ್ತವು ದೂರದಲ್ಲಿದ್ದುಕೊಂಡು ದಿಕ್ಕನ್ನು ತೋರಿಸುವ ರೀತಿಯಲ್ಲಿ ಮೊಣಕಾಲನ್ನು ತೋರಿಸಿರುವುದು ಸರಿಯಾಗುತ್ತದೆಂದು ಕಾಣಿರಿ.

ಆದುದರಿಂದ ಆಳ್ವಾರ್‌ಗಳು ಶ್ರೀನಿವಾಸನನ್ನು ಸ್ತುತಿ ಮಾಡಿರುವುದೂ, ಧ್ಯಾನಿಸಿರುವುದೂ, ಶ್ರೀನಿವಾಸನು ಶ್ರಿಯಃ ಪತಿಯೇ ಎಂಬುವುದಕ್ಕೆ ಅತ್ಯಂತ ಪ್ರಬಲವಾದ ಪ್ರಮಾಣವಾಗುತ್ತದೆ.

ಶ್ರೀ ಶ್ರೀನಿವಾಸ ಭಗವಂತನು ದುರ್ಜಯರಾದ ಶತ್ರುಗಳನ್ನು ನಾಶ ಮಾಡಲಿಚ್ಛಿಸಿದ ತನ್ನ ಪರಮ ಭಕ್ತನಾದ ತೊಂಡಮಾನ್ ಚಕ್ರವರ್ತಿಗೆ ತನ್ನ ಶಂಖ ಚಕ್ರ ಮುಂತಾದ ದಿವ್ಯಾಯುಧಗಳನ್ನು ಕೊಟ್ಟು ಸಹಾಯ ಮಾಡಿದುದನ್ನು ಸೂಚಿಸಬೇಕೆಂದು ಸಂಕಲ್ಪ ಮಾಡಿಕೊಂಡೇ ತನ್ನ ಹಸ್ತಗಳಲ್ಲಿ ದಿವ್ಯಾಯುಧಗಳಿಲ್ಲದೆಯೇ ಇರುತ್ತಿದಾನೆ - ಎಂಬುವುದು ಪುರಾಣ ವಚನಗಳಿಂದ ವಿಶದವಾಗಿ ಕಂಡು ಬರುತ್ತದೆ.

ಬ್ರಹ್ಮ ಪುರಾಣದ ಏಳನೆಯ ಅಧ್ಯಾಯದಲ್ಲಿ - ಭಕ್ತರುಗಳಲ್ಲಿ ತನಗಿರುವ ಅತ್ಯಂತ ಹೆಚ್ಚಿನ ಪ್ರೀತಿಯನ್ನು ತೋರಿಸಬೇಕೆಂದು ಮನಸ್ಸು ಮಾಡಿ ಯಾವ ಶ್ರೀನಿವಾಸನು ತನ್ನ ಕೈಗಳಲ್ಲಿದ್ದ ಶುಭಪ್ರದವಾದ ಶಂಖ ಚಕ್ರಗಳನ್ನು ಚಕ್ರವರ್ತಿಯೆಂದು ಪ್ರಸಿದ್ಧಿ ಪಡೆದ ರಾಜಾಧಿರಾಜ (ತೊಂಡಮಾನ್) ನಿಗೆ ಕೊಟ್ಟುಬಿಟ್ಟನೋ, ಆ ಕಾರಣದಿಂದಲೇ ಪರಮಾತ್ಮನಾದ ಆ ಭಗವಂತನ ಅರ್ಚಾಮೂರ್ತಿ (ಶಿಲಾವಿಗ್ರಹ) ಯಲ್ಲಿರುವ ಹಸ್ತಗಳು ಶಂಖ ಚಕ್ರಗಳಿಲ್ಲದೆಯೇ ಕಂಡುಬರುತ್ತಿದೆ ಎಂದು ಚಕ್ರ ಮತ್ತು ಶಂಖಗಳಿಲ್ಲದಿರುವಿಕೆಯ ಕಾರಣವನ್ನು ಹೇಳಲಾರಂಭಿಸಿ ನಂತರ ಅದೇ ಅಧ್ಯಾಯದ ಅಂತ್ಯದಲ್ಲಿ - ಶ್ರೀನಿವಾಸನ ಸನ್ನಿಧಿಯಲ್ಲಿ ತೊಂಡಮಾನ್ ರಾಜನಿರುವಾಗ ಶತ್ರುಗಳು ಅತಿ ದೊಡ್ಡ ಸೈನ್ಯದಿಂದ ಕೂಡಿ ಅವನ ನಗರವನ್ನು ಮುತ್ತಿಗೆ ಹಾಕಿದರು. ಸಮುದ್ರದಂತೆ ಇರುವ ಪ್ರಬಲವಾದ ಶತ್ರುವಿನ ಸೈನ್ಯವು ಎದುರಿಸಿ ಬರುವುದನ್ನು ಕೇಳಿದ ಆ ರಾಜನು, ಅಂಜದೆ ಯುದ್ಧ ಮಾಡಲು ಹೋಗಿ ಮತ್ತೊಂದು ಬಾರಿಯೂ ಶತ್ರುಗಳಿಂದ ಸೋಲಿಸಲ್ಪಟ್ಟನು. ನಂತರ ಮನೋವ್ಯಾಕುಲ ಗೊಂಡ ಆ ಅರಸನು ಗುಹೆಯ ದ್ವಾರದ ಮೂಲಕ ಹೋಗಿ ದೇವಾಧಿದೇವನಾದ ಶ್ರೀನಿವಾಸನ ಚರಣಕಮಲಗಳನ್ನು ಹಿಡಿದುಕೊಂಡು, ತನ್ನನ್ನು ಕಾಪಾಡಬೇಕೆಂದು ಪ್ರಲಾಪಿಸಿ ಆ ಭಗವಂತನನ್ನು ಶರಣು ಹೊಂದಿದನು. ವಿಗ್ರಹರೂಪಿಯಾದ ಶ್ರೀನಿವಾಸ ಭಗವಂತನು - ಮಗುವೇ ಅಂಜಬೇಡ, ನಿನಗೆ ಒಳ್ಳೆಯದಾಗುತ್ತದೆ. ಶಂಖ ಚಕ್ರಗಳನ್ನು ನಿನಗೆ ಕೊಡುತ್ತೇನೆ. ಅವುಗಳ ಜೊತೆಗೂಡಿ

ನಿನ್ನ ನಗರಕ್ಕೆ ಹೋಗು. ಶತ್ರುಗಳನ್ನು ಅವುಗಳೇ (ಶಂಖ ಚಕ್ರಗಳೇ) ನಾಶಮಾಡಲಿ - ಎಂದು ಹೇಳಿ ಆ ದಿವ್ಯಾಯುಧಗಳನ್ನು ಕೊಟ್ಟನು. ರಾಜನೂ, ಭಗವಂತನು ಹೇಳಿದಂತೆಯೇ ಆಯುಧಗಳಿಂದ ತನ್ನ ನಗರಕ್ಕೆ ಹೋದ ಕೂಡಲೇ, ಅವುಗಳು ಶತ್ರುಗಳನ್ನು ನಾಶ ಮಾಡಿದುವು. ಅರಸನ ಆಳ್ವಿಕೆಯು ಶತ್ರು ರಹಿತವಾಯಿತು. ಅರಸನೊಂದಿಗೆ ಆ ದಿವ್ಯಾಯುಧಗಳು ಮರಳಿ ಭಗವಂತನಲ್ಲಿ ಬಂದು ಸೇರಿದುವು. ಹಲವು ರೀತಿಯಾದ ಸ್ತುತಿಗಳಿಂದ ಸ್ತೋತ್ರ ಮಾಡಿ ನಮಸ್ಕರಿಸಿದ ಆ ಅರಸನನ್ನು ಶ್ರೀನಿವಾಸನು ತನ್ನಲ್ಲಿ ವರವನ್ನು ಕೇಳಿಕೊಳ್ಳುವಂತೆ ಹೇಳಿದನು. ''ದೇವಾಧಿದೇವಾ! ನನ್ನ ದೇವರೇ, ದಾಸನಾದ ನನಗೆ ಆಯುಧಗಳನ್ನು ದಯಪಾಲಿಸಿದುದು ಲೋಕದಲ್ಲಿ ಪ್ರಸಿದ್ಧಿಯಾಗುವುದಕ್ಕೋಸ್ಕರ, ತಾವು ಶಿಲಾರೂಪವಾದ ಈ ಅರ್ಚರೂಪದಲ್ಲಿ ಶಂಖ ಚಕ್ರಗಳನ್ನು ಧಾರಣೆ ಮಾಡದೆ ಇರಲು ಕೇಳಿಕೊಳ್ಳುತ್ತೇನೆ'' ಎಂದು ಅರಸನು ವರವನ್ನು ಕೇಳಲು ಅದರಂತೆಯೇ ಭಗವಂತನು ಪುನಃ ಅವುಗಳನ್ನು (ಆಯುಧಗಳನ್ನು) ತನ್ನ ಹಸ್ತಗಳಲ್ಲಿ ಧರಿಸಲಿಲ್ಲ. ಆ ಎರಡು ಶತ್ರು ಸಂಹಾರಿಕ ಆಯುಧಗಳೂ ಶಾರ್ಙ್ಗಪಾಣಿಯಾದ ಆ ಶ್ರೀನಿವಾಸನ ಪಕ್ಕದಲ್ಲಿಯೇ ನಮ್ಮ ಕಣ್ಣಿಗೆ ಗೋಚರವಾಗದಂತೆ ಮರೆಯಾಗಿವೆ - ಎಂದು ಕೊನೆಯಾಗಿ, ಶ್ರೀಹಸ್ತಗಳಲ್ಲಿ ಶಂಖ ಚಕ್ರಗಳಿಲ್ಲದಿರುವಿಕೆಗೆ ತಕ್ಕ ಕಾರಣವು ವಿವರದೊಂದಿಗೆ ಹೇಳಲ್ಪಟ್ಟಿತು.

ಇಲ್ಲಿ ಭಕ್ತನಲ್ಲಿ ತೋರಿಸಿದ ತನ್ನ ಅತ್ಯಂತವಾದ ಔದಾರ್ಯಗುಣಕ್ಕೆ ನೆನಪು ಮೂಡಿಸುವ ಚಿಹ್ನೆಯಾಗಿ - ಎಲ್ಲರ ಕಣ್ಣಿಗೂ ಕಾಣಿಸುವಂತೆ ದಿವ್ಯಾಯುಧಗಳನ್ನು ಧರಿಸಲು ಕೂಡದೆಂಬುವುದು ಮಾತ್ರವೇ ಚಕ್ರವರ್ತಿಯು ಬೇಡಿದುದರಿಂದ, ಆ ರೀತಿಯೇ ಅವುಗಳನ್ನು ಧರಿಸದೆಯೇ ಇದ್ದಾಗ್ಯೂ, ತನಗೇ ಅಸಾಧಾರಣವಾದ, ಯಾವಾಗಲೂ ತನ್ನ ಬಳಿಯೇ ಇರುವ ದಿವ್ಯಾಯುಧಗಳೊಂದಿಗೆ ಕೂಡಿ ಇರುವ ಸ್ಥಿತಿಯು ಯಾವ ಕಾಲದಲ್ಲಿಯೂ ಇದೆ ಎಂಬುದು ತೋರಿಸಲ್ಪಟ್ಟಿತು.

ಹೀಗೆಯೇ ಬ್ರಹ್ಮಾಂಡ ಪುರಾಣದ ಹನ್ನೊಂದನೆಯ ಅಧ್ಯಾಯದಲ್ಲಿ - ಮಧುಸೂದನನಾದ ಭಗವಂತನು, ''ಧೀಮಂತನೇ ನಿನಗೆ ನಂತರ ಒದಗಲಿರುವ ಸಾಯುಜ್ಯ ಮೋಕ್ಷವನ್ನು (ಮೋಕ್ಷ ಹೊಂದುವವರು ವಿಷ್ಣುವಿನಂತೆಯೇ ಆಗುತ್ತಾರೆ ಎಂಬುವುದನ್ನು) ಗುರುತಿಸುವ ಶಂಖ, ಚಕ್ರ, ಗದೆ ಬಿಲ್ಲು, ಕತ್ತಿ ಇವುಗಳನ್ನು ನಿನಗಾಗಿ ಕೊಡುತ್ತೇನೆ. ಈ ಐದು ಆಯುಧಗಳನ್ನೂ ಧರಿಸಿ ರಣರಂಗಕ್ಕೆ ಹೋಗಿ ದುಷ್ಟನಾದ ಅಸುರನನ್ನು, (ಅವನ) ಮಂತ್ರಿಗಳೊಡನೆ, ಸ್ನೇಹಿತರುಗಳೊಡನೆ ಮತ್ತು ಬಂಧುಗಳೊಡನೆ ಸಂಹರಿಸುವವನಾಗು'' ಎಂದು ಹೇಳಿ ಪರಿಶುದ್ಧ ಭಕ್ತನಾದ ಚಕ್ರವರ್ತಿ (ತೊಂಡಮಾನ್)ಗೆ ಐದು ಆಯುಧಗಳನ್ನೂ ಕೊಟ್ಟನು - ಎಂದೂ - ಸಿಂಹಾದನೆಂಬ ಅಸುರನನ್ನು ವಧಿಸುವ ಸಲುವಾಗಿ ಚಕ್ರವರ್ತಿಗೆ

ಪಂಚಾಯುಧಗಳನ್ನು ನೀಡಿದುದನ್ನು ಹೇಳಿ, ನಂತರ ಆ ಅಧ್ಯಾಯದ ಕೊನೆಯಲ್ಲಿ - ನಂತರ ಸಿಂಹಾದನನ್ನು ಕೊಂದು ರಾಜಕುಮಾರನಾದ ಚಕ್ರವರ್ತಿ ಎಂಬ ಅರಸನು ತಾನು ಶತ್ರುವನ್ನು ನಾಶಪಡಿಸಿದ ಕಥೆಯನ್ನೆಲ್ಲಾ ವೆಂಕಟೇಶ ಭಗವಂತನಿಗೆ ನಿವೇದಿಸಿ, ಆ ಆಯುಧಗಳೈದನ್ನೂ ಹರಿಯಾದ ವೇಂಕಟೇಶನಲ್ಲಿ ಪುನಃ ಸಮರ್ಪಿಸಿದನು. ಶ್ರೀದೇವಿರಮಣನಾದ ಭಗವಂತನು ಅರಸನನ್ನೂ ಪಂಚಾಯುಧಗಳನ್ನೂ ಕುರಿತು, ''ಅರಸನೇ ನಿನ್ನಿಂದ ಗೆಲ್ಲಲಾಗದ ಯುದ್ಧದಲ್ಲಿ ನೀನು ಯಾವಾಗ ಗೆಲುವನ್ನು ಇಚ್ಛಿಸುತ್ತೀಯೋ, ಆವಾಗ ಈ ಆಯುಧಗಳು ನಿನಗೆ ಹೆಚ್ಚಿನ ರೀತಿಯಲ್ಲಿ ಸಹಾಯ ಮಾಡಲಿ'' ಎಂದು ಮೇಘ ಘರ್ಜನೆಯಂತೆಯೂ, ಗಂಭೀರವಾಗಿಯೂ ಇರುವ ಧ್ವನಿಯೊಂದಿಗೆ ಮಾತನಾಡಿದನು - ಎಂದಿದೇ ಮೊದಲಾಗಿ, ಸಿಂಹಾದನೆಂಬ ಅಸುರನ ವಧೆಯ ನಂತರ ಚಕ್ರವರ್ತಿಯು ಮರಳಿಸಿದ ಆಯುಧಗಳನ್ನು ಆಗಾಗ ಸಹಾಯ ಮಾಡುವುದಕ್ಕಾಗಿ ಚಕ್ರವರ್ತಿಯೊಂದಿಗೇ ಇರುವಂತೆ ಅಪ್ಪಣೆ ಇಟ್ಟು, ತಾನು ಕೆಲವು ದಿನಗಳವರೆಗೆ ಹಲವರಿಗೆ ಕಾಣಿಸುವ ರೀತಿಯಲ್ಲಿ ಆಯುಧಗಳನ್ನು ಧರಿಸುವುದಿಲ್ಲವೆಂದೂ, ನೆನೆದುಕೊಂಡ ತಕ್ಷಣವೇ ತನ್ನ ಬಳಿ ಬಂದು ಸೇರುವುವು ಎಂದು ಒಪ್ಪಿಕೊಂಡು, ಅದಾದ ನಂತರ, ಕೆಲಕಾಲ ಕಳೆದ ನಂತರ - ಕಲಿಯುಗದಲ್ಲಿ ವಿಮಾನ ಮುಂತಾದುವುಗಳಂತೆ ಆಯುಧಗಳನ್ನೂ ಭಕ್ತರುಗಳು ತಯಾರಿಸಿ ಸಮರ್ಪಿಸಿದರೆ, ಅವರುಗಳ ಸಂತೋಷಕ್ಕಾಗಿ ಅವುಗಳನ್ನು ಸ್ವೀಕರಿಸುತ್ತೇನೆ - ಎಂದು ಚಕ್ರವರ್ತಿಯೊಂದಿಗೆ ಆ ಭಗವಂತನೇ ಹೇಳಿದುದಾಗಿ ತಿಳಿಸಿರುವುದರಿಂದ, ಈ ಶ್ರೀನಿವಾಸ ಭಗವಂತನು, ಈಗ ತನ್ನದೇ ಆದ ಆಯುಧಗಳಿಲ್ಲದೆಯೇ ದರ್ಶನವನ್ನು ಕೊಡುತ್ತಿರುವುದು ಸರಿಯಾಗಿಯೇ ಇರುವಂತಾಗುತ್ತದೆ.

ಹೀಗೆ ಪುರಾಣಗಳಲ್ಲಿ ಎಲ್ಲಿಯೂ, ಸ್ಕಂದನು ತನಗೇ ಅಸಾಧಾರಣವಾದ ಆಯುಧಗಳನ್ನು ಬಿಟ್ಟಿರುವುದಕ್ಕೆ ಕಾರಣವೋ, ಅರ್ಚಾರೂಪಿಯಾಗಿ ಪ್ರತಿಷ್ಠೆ ಮಾಡಿರುವುದೋ ಹೇಳಲ್ಪಟ್ಟಿಲ್ಲ. ಆದುದರಿಂದ ಈ ಭಗವಂತನು ''ಸ್ಕಂದನಾಗಿರಬಾರದೇಕೆ?'' ಎಂಬ ಸಂದೇಹ ಪಡುವುದಕ್ಕೆ ತಕ್ಕವನಲ್ಲ.

ವಾದಿಸುತ್ತಿರುವ ಶೈವರುಗಳು, ಈ ದೇವರು ಶ್ರೀ ವೈಷ್ಣವರುಗಳಿಂದ ಪೂಜಿಸಲ್ಪಡುವ ಈ ಸ್ಥಿತಿಯಲ್ಲಿಯೂ, ಪ್ರಾಚೀನ ಪದ್ಧತಿಯಂತೆ ಬೇರೆ ದೇವತೆಗೇ ಮೀಸಲಾದ ಬಿಲ್ವಪತ್ರೆಗಳಿಂದ ಒಂದು ತಿಂಗಳು ಅರ್ಚಿಸಲ್ಪಡುವುದು ಇನ್ನೂ ಮುಂದುವರೆಯುತ್ತಿರುವುದು ಕಾಣಲ್ಪಡುತ್ತಿದೆ. ಇದು ಈ ದೇವರು ವಿಷ್ಣುವಲ್ಲ. ಬೇರೆ ದೇವನೇ ಎಂದು ಸ್ಥಿರ ಪಡಿಸತಕ್ಕ ಕಾರಣವು (ಅನುಮಾನ ರೀತಿ) ಆಗುತ್ತದೆ ಎಂದೂ, ಅವರಿಗೇ ಮೀಸಲಾದ ಆಯುಧಗಳಿಲ್ಲದಿರುವಿಕೆಯೂ, ಬೇರೆ ದೇವತೆಗೇ

ಇರುವ ಜಟೆ, ನಾಗಾಭರಣ ಮುಂತಾದುವುಗಳು ಈ ದೇವನಲ್ಲಿರುವಿಕೆಯು ಯಾವ ರೀತಿಯಲ್ಲಿಯೂ ಸರಿ ಹೊಂದುತ್ತಿಲ್ಲವೆಂದು ಅಭಿಪ್ರಾಯ ಪಡುತ್ತಾರೆ. ಅವರುಗಳ ಅಭಿಪ್ರಾಯವು - ನಮ್ಮ ಕಣ್ಣುಗಳಿಗೆ ಕಾಣುವಂತೆ ಆಯುಧಗಳನ್ನು ಧರಿಸದಿರುವಿಕೆಗೆ ಪುರಾಣದಲ್ಲಿ ಕಾರಣವು ವಿವರವಾಗಿ ಹೇಳಲ್ಪಟ್ಟಿರುವುದರಿಂದ ಒಪ್ಪಿಕೊಳ್ಳತಕ್ಕದೆಂದು ತಳ್ಳಲ್ಪಟ್ಟಿತು. ಹಲವು ನೂರಾರು ಕಡೆಗಳಲ್ಲಿ ಪುರಾಣಗಳಲ್ಲಿ ಶ್ರೀನಿವಾಸನು ವೈಕುಂಠನಾಥನಾದ ಮಹಾವಿಷ್ಣುವಿನ ಒಂದು ಅವತಾರವೆನ್ನುವುದು ಅತ್ಯಂತ ವಿಶದವಾಗಿ ಹೇಳಲ್ಪಟ್ಟಿರುವುದರಿಂದ, ಈ ಪುರಾಣ ವಚನಗಳಾದ ಶಬ್ದ ಪ್ರಮಾಣವನ್ನು (ಆಗಮುಗಳನ್ನು) ಅನುಮಾನ ಪ್ರಮಾಣ (ಇವನು ವಿಷ್ಣುವಲ್ಲವೆನ್ನುವುದನ್ನು ಊಹಿಸಿ ತಿಳಿಯುವುದಕ್ಕೆ ಕಾರಣವಾಗಿರುವ ಬಿಲ್ವಾರ್ಚನೆ ಮುಂತಾದ ಮುಂಚೆ ಹೇಳಲ್ಪಟ್ಟ ಅಭಿಪ್ರಾಯಗಳು) ತಡೆಯಾಗಲಾರದಾದುದರಿಂದಲೂ ಶೈವರುಗಳ ಅಭಿಪ್ರಾಯಗಳು ತಳ್ಳಲ್ಪಟ್ಟವು.

ಹಿಂದೆ ಹೇಳಿದ ಪ್ರಮಾಣ ಗ್ರಂಥಗಳಾದ ಪುರಾಣಗಳಲ್ಲುಳ್ಳ, ಈ ದೇವನು ವಿಷ್ಣುವೇ ಎಂದು ತಿಳಿಸುವ ಶ್ರುತಿಯನ್ನು (ಮಾತುಗಳನ್ನು) ಯಾವ ವಿಧವಾದ ಕಾರಣಗಳಿಂದಲೂ ಬೇರೆ ಅರ್ಥವಿರುವುದಾಗಿ ಕಲ್ಪಿಸುವುದು ಆಗದು ಎಂಬುದು ಮುಂಚೆ ಮಾಡಿದ ನಿರೂಪಣೆಯಿಂದಲೇ ವೇದ್ಯವಾಗುತ್ತದೆ.

ಶೈವರುಗಳು ಹೇಳುವ ಲಿಂಗವೂ (= ಪರಮಶಿವನಿಗೇ ಮೀಸಲಾದ ಸ್ವತ್ತು ಎಂಬರ್ಥವನ್ನು ಹೊಂದಿದ ಬಿಲ್ವಾರ್ಚನೆ ಮುಂತಾದುವುಗಳು) ನಂಬತಕ್ಕುದಲ್ಲ. ಅವು ಪರಮಶಿವನಿಗೇ ಮೀಸಲು ಎಂಬುದು ಸತ್ಯವಲ್ಲವಾದುದರಿಂದ, ತುಳಸೀ ದೇವಿಗೆ ಇಷ್ಟವಾದುದರಿಂದ ಶ್ರೀ ತುಳಸಿಯು ಹೇಗೆ ಶ್ರಿಯಃ ಪತಿಗೆ ಇಷ್ಟವೋ ಅದೇ ರೀತಿ ಬಿಲ್ವ ವೃಕ್ಷವು ಶ್ರೀದೇವಿಗೆ ಪ್ರಿಯವಾದುದರಿಂದ ಬಿಲ್ವ ಪತ್ರಗಳೂ ಶ್ರಿಯಃ ಪತಿಗೆ ಪ್ರಿಯವಾಗಿ ಅರ್ಚನೆಗೆ ತಕ್ಕುದೆಂದು ಗ್ರಂಥಗಳಿಂದ ತಿಳಿಸಲ್ಪಟ್ಟಿರುವುದು ಪ್ರಸಿದ್ಧವಲ್ಲವೇ? ಬಿಲ್ವ ವೃಕ್ಷವು ಶ್ರೀದೇವಿಗೆ ಇಷ್ಟವಾದುದೆಂಬುದು ''ಆದಿತ್ಯ ವರ್ಣೇ ತಪಸೋಧಿಜಾತೋ ವನಸ್ಪತಿಸ್ತವ ವೃಕ್ಷೋಥಬಿಲ್ವಃ (ಸೂರ್ಯನ ಹಾಗೆ ಕೆಂಪುವರ್ಣವನ್ನುಳ್ಳ ಶ್ರೀದೇವಿಯೇ, ನಿನ್ನ ಸಂಕಲ್ಪದಿಂದ ಮರಗಳಲ್ಲಿ ಶ್ರೇಷ್ಠವಾದ ಬಿಲ್ವ ವೃಕ್ಷವು ಸರ್ವಮಂಗಳಕ್ಕಾಗಿ ಉತ್ಪತ್ತಿಯಾಯಿತು) ಎಂಬ ಶ್ರೀ ಸೂಕ್ತದಲ್ಲಿರುವ ಮಂತ್ರದಿಂದ ತಿಳಿಯಲ್ಪಡುತ್ತದೆ. ಆದುದರಿಂದಲೇ ಬಿಲ್ವ ಪತ್ರೆಗಳಿಂದಲೂ ಶ್ರೀ ವಿಷ್ಣುವನ್ನು ಅರ್ಚನೆ ಮಾಡುವುದೆಂಬುದು ಅಲ್ಲಲ್ಲಿ ಶಾಸ್ತ್ರಗಳಲ್ಲಿ ವಿಧಿಸಲ್ಪಟ್ಟಿದೆ.

ಹಾರೀತ ಸ್ಮೃತಿಯೆಂಬ ಅತ್ಯಂತ ಉತ್ತಮವಾದ ಧರ್ಮಶಾಸ್ತ್ರದಲ್ಲಿ ಐದನೆಯ ಅಧ್ಯಾಯದಲ್ಲಿರುವ ಮಾರ್ಗಶಿರ ಮಾಸ (ಧನುರ್ಮಾಸ) ಪೂಜೆಯನ್ನು ಹೇಳುವ

ಘಟ್ಟದಲ್ಲಿ - ಸೂರ್ಯನು 'ಧನುಸ್' ಎಂದು ಹೇಳುವ ರಾಶಿಯಲ್ಲಿ ಇರುವ ಧನುರ್ಮಾಸದಲ್ಲಿ (ಮಾರ್ಗಶಿರ) ಬ್ರಾಹ್ಮಣನು ಅರುಣೋದಯ ಕಾಲದಲ್ಲಿ ಪ್ರತಿನಿತ್ಯವೂ ಸ್ನಾನ, ತರ್ಪಣ, ಮುಂತಾದುವುಗಳನ್ನು ವಿಧಿಸಲ್ಪಟ್ಟ ರೀತಿಯಲ್ಲಿ (ಸಕ್ರಮವಾಗಿ) ಮಾಡಿ ಮುಗಿಸಿ ಮನಸ್ಸನ್ನು ಭಗವಂತನಲ್ಲಿ ಲಯಿಸಿರುವಂತೆ ಮಾಡಿ, ಆ ಭಗವಂತನಾದ, ಜಗನ್ನಾಥನಾದ, ನಾರಾಯಣನನ್ನು ಶಾಸ್ತ್ರದಲ್ಲಿ ವಿಧಿಸಿರುವಂತೆ ಪೂಜಿಸಬೇಕು. ಪುರುಷ ಸೂಕ್ತವನ್ನು ಅಥವಾ ಮೂಲಮಂತ್ರವಾದ ಶ್ರೀ ಅಷ್ಟಾಕ್ಷರ ಮಂತ್ರವನ್ನು ಉಚ್ಚರಿಸಿಕೊಂಡೇ, ತಾವರೆಯ ಹೂವು, ಜಾಜಿಹೂವು, ಶ್ರೀ ತುಳಸಿ, ಬಿಲ್ವ ಪತ್ರೆ, ಕನ್ನೈದಿಲೆ ಹೂವು ಮುಂತಾದುವುಗಳಿಂದ ಅರ್ಚಿಸಬೇಕು. ಚಂದನ, ಧೂಪ, ದೀಪಗಳನ್ನು ಸಮರ್ಪಿಸಬೇಕು. ಪಾಯಸ, ಸಕ್ಕರೆ ಪೊಂಗಲ್, ಶುದ್ಧ ತುಪ್ಪದಿಂದ ಕೂಡಿದ ಶುದ್ಧಾನ್ನ, ದಧಿಯೋದನ (ಮೊಸರನ್ನ) ಮುಂತಾದುವುಗಳನ್ನೂ, ಜೇನು ಸೇರಿಸಲ್ಪಟ್ಟ ಕಜ್ಜಾಯ, ಪಿಟ್ಟು, ಅವಲಕ್ಕಿ, ಚಕ್ಕುಲಿ, ಕಡಲೆ ಮುಂತಾದ ಭಕ್ಷ್ಯಗಳನ್ನೂ ನಿವೇದನ ಮಾಡಬೇಕು - ಎಂದು ಹೇಳಲ್ಪಟ್ಟಿದೆ.

ಮೇಲೂ, ಅದೇ ಅಧ್ಯಾಯದಲ್ಲಿ, ಅದಕ್ಕೆ ಮುಂಚೆ ಎಡತೊಡೆಯ ಮೇಲೆ ಕುಳಿತಿರುವ ಲಕ್ಷ್ಮೀದೇವಿಯೊಂದಿಗೆ ಕೂಡಿದ ಲಕ್ಷ್ಮೀನಾರಾಯಣ ದೇವರನ್ನು ಶುಕ್ರವಾರ ರಾತ್ರಿಗಳಲ್ಲಿ ಪೂರ್ಣ ಬಿಲ್ವ ಪತ್ರೆಗಳಿಂದಲೂ, ಮೃದುವಾದ ತುಳಸೀ ಪತ್ರಗಳಿಂದಲೂ ಮಂತ್ರರತ್ನವೆಂಬುವ ದ್ವಯ ಮಂತ್ರವನ್ನು ಹೇಳಿ ಅರ್ಚಿಸಬೇಕೆಂದೂ (ನಂತರ) ಪುರುಷ ಸೂಕ್ತದಲ್ಲಿರುವ ಒಂದೊಂದು ಮಂತ್ರವನ್ನೂ ಉಚ್ಚರಿಸುತ್ತಲೇ, ಬಿಲ್ವಪತ್ರೆ, ತಾವರೆ ದಳಗಳು, ತುಪ್ಪ ಇವುಗಳಲ್ಲಿ ಯಾವುದಾದರೂ ಒಂದರಿಂದ ಅಗ್ನಿಯಲ್ಲಿ ಹೋಮವನ್ನು ಮಾಡಬೇಕು. ಎಂದೂ, ಯದುಕುಲತಿಲಕನಾದ ಕೃಷ್ಣ ಭಗವಂತನನ್ನು ಶ್ರದ್ಧೆಯಿಂದ ಪೂಜಿಸಬೇಕೆಂದೂ ಹೇಳುತ್ತಾ, ಬಿಲ್ವಪತ್ರೆ, ಕಾಡುಮಲ್ಲಿಗೆ, ಆವರಿಕೆ, ಬೆಟ್ಟದಾವರಿಕೆ ಮುಂತಾದುವುಗಳಿಂದ ಹತ್ತಕ್ಷರ ಮಂತ್ರವನ್ನು ಉಚ್ಚರಿಸುತ್ತಾ ಅರ್ಚಿಸಬೇಕೆಂದೂ.

ನರಸಿಂಹ ದೇವರನ್ನು ಮಂತ್ರ ರಾಜವೆಂಬ ನರಸಿಂಹ ಮಂತ್ರದಿಂದಲಾದರೂ ಅಥವಾ ಗಾಯತ್ರೀ ಮಂತ್ರದಿಂದಲಾದರೂ ಅಥವಾ ಶ್ರೀ ಅಷ್ಟಾಕ್ಷರ ಮಂತ್ರದಿಂದಲಾದರೂ ಪೂರ್ಣ ಬಿಲ್ವ ಪತ್ರೆ, ಜಾಜಿ ಹೂವು, ಮಲ್ಲಿಗೆ, ಕಾಡುಮಲ್ಲಿಗೆ ಎಂಬುವುಗಳನ್ನು ಕೊಂಡು ಅರ್ಚಿಸಬೇಕೆಂದೂ ಹೇಳಲ್ಪಟ್ಟಿದೆ.

ಇದರಂತೆಯೇ ವರಾಹ ಪುರಾಣದ ಮೊದಲನೆಯ ಭಾಗದಲ್ಲಿ ಶ್ರೀ ವೇಂಕಟಾಚಲ ಮಾಹಾತ್ಮ್ಯವನ್ನು ಹೇಳುವ ೧೩ನೇ ಅಧ್ಯಾಯದಲ್ಲಿ ೪೫ ಎಂಬ ಸಂಖ್ಯೆಯ ವಚನದಲ್ಲಿ, ಶ್ರೀನಿವಾಸ ಭಗವಂತನ ದರ್ಶನವನ್ನುಕುರಿತು ಸ್ವಾಮಿ ಪುಷ್ಕರಿಣಿಯ ತೀರದಲ್ಲಿ ತಪಸ್ಸು ಮಾಡುವ ಮಹಾಮುನಿಗಳ ಸಚ್ಚಾರಿತ್ರ್ಯವನ್ನು

ದಶರಥ ಮಹಾರಾಜನು ಕಂಡನು ಎಂದು ಹೇಳುವ ಜಾಗದಲ್ಲಿ - ಯೋಗಿಗಳು, ಜಗನ್ನಾಥನಾದ ಶ್ರೀಮನ್ನಾರಾಯಣನನ್ನು ಕೃಷ್ಣ ತುಳಸಿ, ಬಿಲ್ವಪತ್ರೆಗಳು ಎಂಬುವುಗಳಿಂದ ಅರ್ಚಿಸುತ್ತಾರೆ ಎಂದು ತಿಳಿಸಲ್ಪಟ್ಟಿದೆ.

ವೇಂಕಟಾಚಲ್ಲ ಮಾಹಾತ್ಮ್ಯೆಯನ್ನು ಹೇಳುವ ವರಾಹ ಪುರಾಣದ ಎರಡನೆಯ ಭಾಗದ ಒಂಭತ್ತನೆಯ ಅಧ್ಯಾಯದಲ್ಲಿ ದೇವತೆಗಳು ಮಹಾಲಕ್ಷ್ಮಿಯನ್ನು ಸ್ತುತಿಸುವ ಸಂದರ್ಭದಲ್ಲಿ ''ಬಿಲ್ವವನದಲ್ಲಿರುವ ಶ್ರೀದೇವಿಗೆ ನಮಸ್ಕಾರಗಳು. ವಿಷ್ಣುಪತ್ನಿಗೆ ನಮಸ್ಕಾರಗಳು'' ಎಂದು ಸ್ತುತಿಸಿದುದರಿಂದ ಸಂತೋಷಗೊಂಡ ಆ ಮಹಾಲಕ್ಷ್ಮಿಯು ಅವರುಗಳಿಗೆ ಪ್ರತ್ಯುತ್ತರ ಹೇಳುವ ಸಂದರ್ಭದಲ್ಲಿ ''ದೇವತೆಗಳೇ! ಈ ಸ್ತೋತ್ರವನ್ನು ಹೇಳಿ. ನನ್ನನ್ನು ಪೂರ್ಣವಾದ ಬಿಲ್ವಪತ್ರೆಗಳಿಂದ ಮನುಷ್ಯರಾಗಲೀ ಅಥವಾ ದೇವತೆಗಳಾಗಲೀ ಯಾರಾದರೂ ಅರ್ಚಿಸುವುದಾದರೆ ಅವರುಗಳು ಧರ್ಮ, ಅರ್ಥ, ಕಾಮ, ಮೋಕ್ಷವೆಂಬ ಪುರುಷಾರ್ಥಗಳನ್ನು ಹೊಂದುವರು. ಇದು ಸತ್ಯವು'' ಎಂದು ಹೇಳಿದುದರಿಂದ ಬಿಲ್ವ ಪತ್ರೆಯಿಂದ ತನ್ನನ್ನು ಅರ್ಚನೆ ಮಾಡುವಂತೆ ಶ್ರೀದೇವಿಯೇ ವಿಧಿಸಿರುತ್ತಾಳೆ ಎಂದು ಗೊತ್ತಾಗಿರುವುದರಿಂದ ಆ ಮಹಾಲಕ್ಷ್ಮಿಯು ಒಂದು ಕ್ಷಣವೂ ಬಿಟ್ಟಿರದೆ ಅಲಂಕರಿಸಿರುವ ವಕ್ಷಃಸ್ಥಳವನ್ನುಳ್ಳ ಶ್ರೀ ವೇಂಕಟೇಶನನ್ನು ಬಿಲ್ವ ಪತ್ರೆಗಳಿಂದ ಅರ್ಚಿಸುವುದು ಅತ್ಯಂತ ಸೂಕ್ತವಾಗಿದೆ. ಹೀಗೆಯೇ ಶ್ರಿಯಃ ಪತಿಯಾದ ವಿಷ್ಣುವನ್ನು ಬಿಲ್ವ ಪತ್ರೆಯಿಂದ ಅರ್ಚಿಸುವುದರ ಬಗ್ಗೆ ಅಲ್ಲಲ್ಲಿ ಕೆಲವು ಗ್ರಂಥಗಳಲ್ಲಿ ಕಂಡು ಬರುವ ಸಮಾಚಾರಗಳು ಎಲ್ಲವೂ ಇದಕ್ಕೆ ಪ್ರಮಾಣಗಳನ್ನಾಗಿ ಕಾಣತಕ್ಕದ್ದು.

ಇದುವರೆಗೂ ಹೇಳಿದಂತೆ ಮಹಾಲಕ್ಷ್ಮಿಗೂ ಮಹಾ ವಿಷ್ಣುವಿಗೂ ಬಿಲ್ವವು ಪ್ರಿಯವಾದುದೆಂಬುದೂ, ಆದರಿಂದ ಅವರುಗಳನ್ನು ಅರ್ಚಿಸಬೇಕೆಂಬುದೂ - ಪ್ರಮಾಣ ಗ್ರಂಥಗಳಿಂದ ತಿಳಿದು ಬರುವುದರಿಂದ - ಅವುಗಳು ತಿಳಿಸಿದಂತೆಯೇ ಈ ಶ್ರೀ ವೇಂಕಟಾಚಲದಲ್ಲಿ ಈ ಭಗವಾನ್ ಶ್ರೀನಿವಾಸನಿಗೆ ಬಿಲ್ವದಿಂದ ಅರ್ಚಿಸುವುದು ಏರ್ಪಡಿಸಲ್ಪಟ್ಟು ಅದು ಪಾರಂಪರ್ಯವಾಗಿ ಕ್ರಮವಾಗಿ ಬಂದಿರುವುದರಿಂದಲೂ ಈ ರೀತಿಯೇ ಇತರ ಶ್ರೀ ವಿಷ್ಣುವು ಇರುವ ದಿವ್ಯಕ್ಷೇತ್ರಗಳಲ್ಲಿ ಕೆಲವಲ್ಲಿ ಬಿಲ್ವಾರ್ಚನೆಯು ಇಂದಿಗೂ ಕಂಡು ಬರುವುದರಿಂದಲೂ, ಈ ಬಿಲ್ವಾರ್ಚನೆಯನ್ನು ತೆಗೆದುಕೊಂಡು ಈ ದೇವನನ್ನು ಅನ್ಯ ದೇವತೆಯನ್ನಾಗಿ ಮಾಡಲು ಸಾಧ್ಯವಿಲ್ಲ.

ಇನ್ನು ಜಟೆಯನ್ನು ಹೊಂದಿರುವುದು ಬೇರೆ ದೇವತೆಗೇ ಮೀಸಲು ಎಂಬುದೂ ಸರಿಯಲ್ಲ. ವಿಷ್ಣುವಿನ ಅವತಾರಗಳಲ್ಲಿಯೂ ಕೆಲ ಕೆಲವುಗಳಲ್ಲಿ ಜಟೆಯು ಇದೆ ಎಂಬುವುದು ಗ್ರಂಥಗಳ ಮೂಲಕ ತಿಳಿಯಬರುವುದರಿಂದ ಈ

ಶ್ರೀನಿವಾಸ ದೇವರಲ್ಲಿ ಆ ಜಟೆಯು ಇದ್ದರೆ ಅದು ಈ ದೇವರು ಶ್ರಿಯಃ ಪತಿಯಾದ ನಾರಾಯಣನೆಂದು ಹೇಳಲು ತಡೆಯುಂಟು ಮಾಡುವುದಿಲ್ಲವಲ್ಲವೇ?

ಶ್ರೀ ಭಾಗವತದ ಏಕಾದಶ ಸ್ಕಂದದಲ್ಲಿ ಒಂಭತ್ತನೆಯ ಅಧ್ಯಾಯದಲ್ಲಿ ಭಗವದ್ಭಕ್ತಿಯನ್ನು ಹೇಳುವುದಾಗಿ, ನಿಮಿಯೆಂಬ ಅರಸನಿಗೂ ಕರಭಾಜರೆಂಬ ಯೋಗಿಗೂ ನಡೆದ ಸಂಭಾಷಣೆಯೊಂದು ಕಂಡು ಬರುತ್ತದೆ. ಅದರಲ್ಲಿ ನಿಮಿ ಅರಸನು - ಆ ಭಗವಂತನಾದ ವಿಷ್ಣುವು ಯಾವ ಯಾವ ಕಾಲಗಳಲ್ಲಿ, ಯಾವ ಯಾವ ಬಣ್ಣಗಳನ್ನು ಉಳ್ಳವನಾಗಿಯೂ, ಯಾವ ಯಾವ ರೂಪಗಳನ್ನು ಹೊಂದಿದವನಾಗಿಯೂ ಯಾವ ಯಾವ ರೀತಿಯಲ್ಲಿ ಮಾನವರಿಂದ ಪೂಜಿಸಲ್ಪಡುತ್ತಿದಾನೆ? ಎಲೈ ಮುನಿಶ್ರೇಷ್ಠರೇ, ಅದನ್ನು ಕೃಪೆಯಿಟ್ಟು ಹೇಳಿ - ಎಂದು ಕೇಳಲು, ಅದಕ್ಕೆ ಕರಭಾಜರು - ಕೃತಯುಗ, ತ್ರೇತಾಯುಗ, ದ್ವಾಪರ ಯುಗ ಮತ್ತು ಕಲಿಯುಗ ಎಂಬ ಈ ನಾಲ್ಕು ಯುಗಗಳಲ್ಲಿಯೂ ಕೇಶವನಾದ ಶ್ರೀಪತಿಯು ಬೇರೆ ಬೇರೆಯಾದ ಬಣ್ಣ, ರೂಪ, ಹೆಸರು ಇವುಗಳನ್ನು ಉಳ್ಳವನಾಗಿ, ಹಲವಾರು ರೀತಿಗಳಲ್ಲಿ ಪೂಜಿಸಲ್ಪಡುತ್ತಾನೆ. ಕೃತಯುಗದಲ್ಲಿ ಆ ದೇವನು ಶ್ವೇತ (ಬಿಳಿಯ) ವರ್ಣವನ್ನುಳ್ಳವನಾಗಿಯೂ, ನಾಲ್ಕು ತೋಳುಗಳು, ತಲೆಯಲ್ಲಿ ಜಟೆ, ಸೊಂಟದಲ್ಲಿ ನಾರು ಮಡಿ, ಎದೆಯಲ್ಲಿ ಕೃಷ್ಣಾಜಿನದಿಂದಾದ ಯಜ್ಞೋಪವೀತ, ಕೈಗಳಲ್ಲಿ ಜಪಮಾಲೆ, ದಂಡ, ಕಮಂಡಲ ಇವುಗಳನ್ನುಳ್ಳ ರೂಪವುಳ್ಳವನಾಗಿಯೂ, ಹಂಸ, ಸುಪರ್ಣ, ವೈಕುಂಠ, ಧರ್ಮ, ಯೋಗೀಶ್ವರ, ಅಮಲ, ಈಶ್ವರ, ಪುರುಷ, ಅವ್ಯಕ್ತ, ಪರಮಾತ್ಮಾ ಎಂಬ ಹೆಸರುಗಳನ್ನುಳ್ಳವನಾಗಿಯೂ, ಇಂದ್ರಿಯಗಳನ್ನು ಜಯಿಸಿ, ವಿರೋಧಿ ರಹಿತರಾಗಿ ಸಮಾಜ ದೃಷ್ಟಿಯುಳ್ಳವರಾದ ಆ ಕೃತಯುಗದ ಮಾನವರಿಂದ ವಿದ್ಯುಕ್ತ ರೀತಿಯಲ್ಲಿ ಪೂಜಿಸಲ್ಪಡುತ್ತಾನೆ - ಎಂದು ಪ್ರಾರಂಭಿಸಿ ಹೇಳಲ್ಪಟ್ಟಿದೆ.

ಇಲ್ಲಿ, ಆಯಾಯಾ ಕಾಲಗಳಲ್ಲಿ ಇಚ್ಛಾನುಸಾರವಾಗಿ ಭಗವಂತನು ಬೇರೆ ಬೇರೆ ವಿಧವಾದ ಬಣ್ಣ, ಆಯುಧ, ರೂಪ, ಹೆಸರು ಇವುಗಳಿಂದ ಕೂಡಿದ ವೇಷವನ್ನು ಧರಿಸುತ್ತಾನೆ ಎಂಬುವುದನ್ನೂ, ಆಯಾಯಾ ಅವತಾರಗಳಲ್ಲಿ ಆಯಾಯಾ ಬಣ್ಣ, ಆಯುಧ, ರೂಪ ಮುಂತಾದುವುಗಳೊಂದಿಗೆ ಕೂಡಿದ ವೇಷದೊಂದಿಗೆಯೇ ಆತನನ್ನು ಪೂಜೆ ಮಾಡಬೇಕೆಂಬುದನ್ನೂ ಹೇಳಿರುವುದರಿಂದ, ಈ ಶ್ರೀನಿವಾಸಾವತಾರದಲ್ಲಿಯೂ ನಮಗೆ ಕಾಣಿಸಲ್ಪಡುತ್ತಿರುವ, ಜಟೆ, ನಾಲ್ಕು ಭುಜಗಳು ಮುಂತಾದ ಚಿಹ್ನೆಗಳಿಂದ ಕೂಡಿದ ದಿವ್ಯ ರೂಪವನ್ನುಳ್ಳ ಶ್ರೀ ವಿಷ್ಣುವನ್ನು ಆ ರೀತಿಯಾಗಿಯೇ ಪೂಜಿಸಬೇಕೆಂಬುದೂ ಯೋಗ್ಯವಾದುದಾಗುತ್ತದೆ.

ಈ ರೀತಿಯೇ ಪಾಂಚರಾತ್ರ, ಸಾತ್ವತ ಸಂಹಿತೆಯಲ್ಲಿಯೂ, ಪಾತಾಳ ಮುಂತಾದ ಎಲ್ಲಾ ಲೋಕಗಳಲ್ಲಿಯೂ ಇರುವ ಸಕಲ ವಿಭವಾವತಾರ ದೇವತೆಗಳನ್ನೂ ಧ್ಯಾನಿಸತಕ್ಕ ರೂಪಗಳನ್ನು ಹೇಳುವ ಪರಿಚ್ಛೇದದಲ್ಲಿ (ಗ್ರಂಥದ ಭಾಗದಲ್ಲಿ) ಮೊಟ್ಟಮೊದಲು ಪಾತಾಳದಲ್ಲಿರುವ ಸಂಕರ್ಷಣ ಮೂರ್ತಿ ಎಂಬ ಹಲವು ಬಗೆಯ ರೂಪವನ್ನುಳ್ಳ ಅನಂತವಾದ ಭಗವಂತನ, ವಿದ್ಯೆಗೆ ಅಧಿಷ್ಠಾನ ದೇವತೆಯಾಗಿರತಕ್ಕ ರೂಪವನ್ನು ವರ್ಣಿಸುವ ಸಂದರ್ಭದಲ್ಲಿ, ನಾಲ್ಕು ಮುಖವೂ, ನಾಲ್ಕು ಭುಜಗಳೂ, ಇಳಿಬಿಟ್ಟಿರುವ ಮೀಸೆ, ಗಡ್ಡ, ಜಟೆಯೂ, ದಂಡವೂ, ಕಮಂಡಲವೂ, ಜಪಮಾಲೆಯೂ, ಯಜ್ಞೋಪವೀತ (ಜನಿವಾರ) ವುಳ್ಳವರಾಗಿ, ಅರಳಿದ ಕೆಂದಾವರೆಯ ಬಣ್ಣದಂತೆ ವರ್ಣವುಳ್ಳವರಾಗಿ, ಬಿಳಿ ದಾವರೆಯನ್ನು ಹಸ್ತದಲ್ಲಿ ಹಿಡಿದವರಾಗಿ, ತಮ್ಮ ನಾಲ್ಕು ಬಾಯಿಗಳಿಂದಲೂ ಋಕ್, ಯಜುಸ್, ಸಾಮ, ಅಥರ್ವಣವೆಂಬ ನಾಲ್ಕು ವೇದಗಳನ್ನೂ ಹೇಳುವವರಾಗಿರುವ, ವಿದ್ಯೆಯನ್ನು ಕರುಣಿಸುವ ದೇವರನ್ನು ಧ್ಯಾನಿಸಬೇಕು - ಎಂದೂ.

ಅಲ್ಲೇ, ಸ್ವಲ್ಪ ಮುಂದೆ ಹೋದರೆ, ನರ, ನಾರಾಯಣ, ಹರಿ, ಕೃಷ್ಣ ಎಂಬ ನಾಲ್ಕು ಅವತಾರಗಳಲ್ಲಿ ಕೃಷ್ಣನೆಂಬ ಅವತಾರ ರೂಪವನ್ನು ವರ್ಣಿಸುವಾಗ, ಕನ್ನೈದಿಲೆಯಂತೆ ಕಪ್ಪುಬಣ್ಣವನ್ನುಳ್ಳವರೂ, ಮೇಲಕ್ಕೆತ್ತಿರುವ ಕೈಗಳನ್ನುಳ್ಳವರೂ, ಜಟಾಧಾರಿಯೂ, ಒಂದು ಕಾಲಲ್ಲಿ ನಿಂತವರೂ, ಗಾಳಿಯನ್ನೇ ಆಹಾರವಾಗಿ ಸೇವಿಸುವವರೂ, ಒಂದು, ಎರಡು, ಮೂರು, ಆರು, ಹನ್ನೆರಡು ದಿನಗಳು ಅಧಿಕೃಚ್ಛ್ರವೆಂಬ ವ್ರತದಲ್ಲಿ ನಿಮಗ್ನರಾದವರೂ, ಒಂದು ಪಕ್ಷ (೧೫ ದಿನಗಳು) ಒಂದು ಮಾಸ ಉಪವಾಸ ವ್ರತವಿರುವವರೂ (ಉಪವಾಸ ವ್ರತವನ್ನುಪದೇಶಿಸಿದವರೂ) ಆದ ಕೃಷ್ಣ ಭಗವಂತನನ್ನು ಚಿಂತನೆ ಮಾಡಬೇಕು. (ಒಂದು ದಿವಸ ಕೈ ತುಂಬ ಅನ್ನವನ್ನುಂಡೂ, ಮಾರನೆಯ ದಿನ ಒಂದು ಹಿಡಿ ಅನ್ನವನ್ನುಂಡೂ, ಮೂರನೆಯ ದಿನ ಉಪವಾಸವಿದ್ದೂ ಮಾಡುವ ವ್ರತವು ಅಧಿಕೃಚ್ಛ್ರವ್ರತವೆನಿಸುತ್ತದೆ. ಇದೇ ರೀತಿ ಮೂರು, ಆರು, ಹನ್ನೆರಡು ದಿನಗಳಲ್ಲೂ ನಡೆಸುವ ವ್ರತವೆಂದು ಕಾಣಿರಿ) ಎಂದೂ-

ಅಲ್ಲಿಯೇ, ಪುನಃ ಭೂಲೋಕದಲ್ಲಿರುವ ಮತ್ತೊಂದು ಅವತಾರದ ಧ್ಯಾನ ಮಾಡತಕ್ಕ ರೂಪವನ್ನು ತಿಳಿಸುವಾಗ, ಉತ್ತಮವಾದ ಕುದುರೆಯ ಮೇಲೆ ಕುಳಿತಿರುವವರೂ, ಕವಚದಿಂದ ಮುಚ್ಚಿರುವ ದಿವ್ಯ ದೇಹವನ್ನುಳ್ಳವರೂ, ಬಿಳಿಯ ಪೇಟದೊಂದಿಗೆ ಕಾಣುವ ಹಣೆ, ಸ್ವಲ್ಪ ಉದ್ದವಾದ ಜಟೆ, ದ್ರವೀಕೃತ ಸುವರ್ಣಕಾಂತಿ (ಕರಗಿದ ಚಿನ್ನದಂತಿನ)ಯ ಬಣ್ಣವುಳ್ಳ ಶರೀರ ಸಂಪತ್ತೂ, ಎರಡು ಬತ್ತಳಿಕೆಗಳೂ, ಬಿಲ್ಲು ಬಾಣಗಳನ್ನು ಹಿಡಿದ ಕೈಗಳೂ, ಕತ್ತಿ, ಈಟಿ (ಶಕ್ತ್ಯಾಯುಧ) ಕೊಡಲಿ

ಮುಂತಾದ ಆಯುಧಗಳೊಂದಿಗೆ ಕೂಡಿದವರೂ, ಯಾಗ ಮಾಡುವುದು, ವೇದಪಾರಾಯಣ ಮಾಡುವುದು, ದಾನ ಮಾಡುವುದು ಮುಂತಾದ ಧರ್ಮಕಾರ್ಯಗಳನ್ನು ಕಾಪಾಡುವವರೂ, ಆ ಧರ್ಮದಲ್ಲೇ ಸ್ಥಿರವಾದ ಮನಸ್ಸಿಟ್ಟು, ಧರ್ಮನಿಂದೆ ಮಾಡುವವರನ್ನು ನಾಶ ಮಾಡುವವರೂ, ಪ್ರಪಂಚದಲ್ಲಿರುವ ಎಲ್ಲಾ ತತ್ತ್ವ(ವಸ್ತು)ಗಳಿಗೂ ಆಧಾರವಾದ ಪರಮತತ್ವರಾಗಿ ಎಲ್ಲಾ ವಿಧವಾದ ಶಕ್ತಿಯಿಂದ ಕೂಡಿದವರಾಗಿ (ಸರ್ವಶಕ್ತಿ ಸಂಪನ್ನರಾಗಿ), ಸರ್ವವ್ಯಾಪಿಯಾಗಿ, ಎಲ್ಲಾ ತತ್ತ್ವಗಳನ್ನೂ ಅರಿಯಬಲ್ಲವರೂ (ಸರ್ವಜ್ಞರೂ) ಎಲ್ಲಾ ಲೋಕದವರಿಂದಲೂ ಧ್ಯಾನಿಸತಕ್ಕವರೂ, ಭೂಲೋಕದಲ್ಲಿರುವವರೂ, ಆದಿಶೇಷನನ್ನು ಹಾಸಿಗೆಯಾಗಿಯೂ ಆಭರಣವಾಗಿಯೂ ಉಳ್ಳವರೂ, ಕಲ್ಪಾಂತ ಕಾಲದ ಅಗ್ನಿಯ ಪ್ರಕಾಶವನ್ನುಳ್ಳವರೂ, ಜಾಜ್ವಲ್ಯವಾದ ಅಗ್ನಿ ಜ್ವಾಲೆಗಳ ಸಮೂಹಗಳೊಂದಿಗೆ ಕೂಡಿದವರೂ, ಅಗ್ನಿಯನ್ನೇ ವಸ್ತ್ರವನ್ನಾಗಿ ಧರಿಸಿದವರೂ, ಪುರುಷ ರೂಪವನ್ನು ಧರಿಸಿದ ಚಕ್ರವೇ ಮುಂತಾದ ಆಯುಧಗಳಿಂದ ಆವೃತವಾದವರೂ ಆದ ಆ ಮಹಾವಿಷ್ಣುವನ್ನು ಧ್ಯಾನಿಸಬೇಕು - ಎಂದು ಹೇಳಲ್ಪಟ್ಟಿದೆ.

ಈ ರೀತಿ ಶ್ರೀಮನ್ಮಹಾವಿಷ್ಣುವಿನ ಹಲವು ಅವತಾರಗಳಲ್ಲಿ ಜಟೆಯನ್ನು ಧರಿಸಿರುವುದು ಉಂಟೆಂದು ತಿಳಿಯ ಬರುವುದರಿಂದ ಈ ಭಗವಾನ್ ಶ್ರೀನಿವಾಸನಿಗೂ ಜಟೆಯನ್ನು ಧರಿಸಿರುವಿಕೆ ಎಂಬುದು ಆತನೇ ಶ್ರೀ ವಿಷ್ಣುವೆಂದು ಹೇಳುವಿಕೆಗೆ ವಿರುದ್ಧವಾಗುವುದಿಲ್ಲವಾದುದರಿಂದ, ಈ ಜಟೆ ಇರುವುದರ ದೆಸೆಯಿಂದ ಈ ದೇವನು ಬೇರೆ ದೇವನಾಗಿರಲು ಸಾಧ್ಯವಿಲ್ಲ.

ಮೇಲೂ, ಕೆಳಗೆ ತಿಳಿಸಿದ ಸಾತ್ವತ ಸಂಹಿತೆಯ ವಚನಗಳಲ್ಲಿ ಕಡೆಯದಾಗಿ ಗುರುತಿಸಲ್ಪಟ್ಟ ಆಕೃತಿಯ ನಿಜ ಸ್ವರೂಪವನ್ನು ಶೋಧಿಸಿದಾಗ, ಆ ಆಕೃತಿಗೂ ಮತ್ತು ಶ್ರೀನಿವಾಸ ಭಗವಂತನ ಆಕೃತಿಗೂ ಅಧಿಕವಾದ ಸಾಮ್ಯತೆಯು ಕಂಡು ಬರುವುದರಿಂದ ಅದೇ ಆಕೃತಿಯೇ ಇದು ಎಂಬ ಸ್ಥಿತಿಯನ್ನು - ಪುರಾಣಗಳಿಂದ ತಿಳಿಯಲ್ಪಡುವ ಶ್ರೀನಿವಾಸ ಭಗವಂತನ ದಿವ್ಯರೂಪವು ಉಂಟು ಮಾಡುತ್ತದೆ.

ಇಲ್ಲಿ ಉತ್ತಮವಾದ ಕುದುರೆಯ ಮೇಲೆ ಕುಳಿತಿರುವವರೂ ಎನ್ನುವುದು, ಮೊದಲನೆಯದಾಗಿ ಹೇಳಲ್ಪಟ್ಟ ಲಕ್ಷಣಗಳು ಶ್ರೀನಿವಾಸನಲ್ಲಿಯೂ ಕಾಣ ಬರುತ್ತದೆ. ವರಾಹ ಪುರಾಣದ ಎರಡನೆಯ ಭಾಗ ನಾಲ್ಕನೆಯ ಅಧ್ಯಾಯದಲ್ಲಿ, ಪದ್ಮಾವತಿಯ ಕಲ್ಯಾಣಕ್ಕೆ ಮುಂಚೆ ನಡೆದ, ಭಗವಂತನು ಬೇಟೆಯಾಡುವುದನ್ನು ತಿಳಿಸುವ ಭಾಗದಲ್ಲಿ - ಪದ್ಮಾವತಿಯೂ ಅವಳ ಸಖಿಯರೂ, ನಿಷ್ಕಳಂಕ ಚಂದ್ರನಂತೆ ಬಿಳುಪಾದ, ಚಿನ್ನದಾಭರಣವನ್ನು ಧರಿಸಿದುದರಿಂದ ಮಿಂಚುವ, ಕೋಲ್ಮಿಂಚಿನೊಂದಿಗೆ ಕೂಡಿದ ಶರತ್ಕಾಲದ ಮೇಘದಂತೆಯೂ, ಎತ್ತರವಾದುದೂ ಆದ ಒಂದು ಉತ್ತಮ ಜಾತಿಯ

ಕುದುರೆಯನ್ನು ಕಂಡರು. ಅದರ ಮೇಲೆ ಕೃಷ್ಣ ವರ್ಣದ ದೇಹವನ್ನು ಹೊಂದಿದ, ಮನ್ಮಥನಂತೆ ಶರೀರ ತೇಜಸ್ಸನ್ನುಳ್ಳ, ಆಕರ್ಣಾಂತ ವಿಶಾಲವಾಗಿರುವ ತಾವರೆಯ ಹೂವಿನ ದಳದಂತೆ ನಯನಗಳನ್ನುಳ್ಳವನೂ, ತೆಳುವಾದ ಮತ್ತು ಮೃದುವಾದ ಬಿಳಿಯ ರೇಷ್ಮೆಯ ವಸ್ತ್ರದಿಂದ ಆವೃತವಾದ ಕರಿಯ ಕೇಶದ ಗಂಟು - ಕೊಂಡೆ (ಜಟೆ) ಯಿಂದ ಕಾಣಿಸುವವನೂ, ಪದ್ಮರಾಗ (ಕೆಂಪು) ಮಣಿಯಿಂದ ಪ್ರಕಾಶ ಹೊಂದಿ ಅಲುಗಾಡುವ ಕರ್ಣ ಕುಂಡಲಗಳಿಂದ ಅಲಂಕರಿಸಲ್ಪಟ್ಟವನೂ, ಸುವರ್ಣ (ಚಿನ್ನ) ಮತ್ತು ರತ್ನಗಳಿಂದ ತುಂಬಿಸಿ ಮಾಡಲ್ಪಟ್ಟ ಶಾರ್ಙ್ಗವೆಂಬ ಧನುಸ್ಸನ್ನು ಒಂದು ಕೈನಿಂದ ಹಿಡಿದವನೂ, ಮತ್ತೊಂದು ಕೈಯಿಂದ ಚಿನ್ನದಿಂದಾದ ಬಾಣವನ್ನು ಹಿಡಿದವನೂ ಆದ ಒಬ್ಬ ಯುವಕನನ್ನು ಅವರುಗಳು ಕಂಡರು - ಎಂದು ಹೇಳಲ್ಪಟ್ಟಿದೆ.

ಇದರಲ್ಲಿ ಸಾತ್ವತ ಸಂಹಿತೆಯಲ್ಲಿ ಬಿಳಿಯ ಪೇಟದೊಂದಿಗೆ ಕಂಡು ಬರುವ ಹಣೆಯೂ, ಸ್ವಲ್ಪವೇ ಉದ್ದವಾದ ಜಟೆಯೂ ಉಳ್ಳವರೆಂದೂ, ಧನುರ್ಬಾಣಗಳನ್ನು ಕೈಗಳಲ್ಲಿ ಹಿಡಿದವರೆಂದೂ, ಉತ್ತಮವಾದ ಕುದುರೆಯ ಮೇಲೆ ಆರೂಢರೆಂದೂ ಹೇಳಲ್ಪಟ್ಟ ಸಮಾಚಾರಗಳು - ತೆಳುವಾದ, ಮೃದುವಾದ, ರೇಷ್ಮೆ ವಸ್ತ್ರದಿಂದಾವೃತವಾದ, ಕಪ್ಪಾದ ಕೂದಲಿನ ಗಂಟು - ಕೊಂಡೆ (ಜಟೆ) ಯಿಂದ ಕಾಣಿಸುವವರೂ - ಎಂದೂ, ಚಿನ್ನ ಮತ್ತು ರತ್ನಗಳಿಂದ ತುಂಬಿಸಿ ಮಾಡಲ್ಪಟ್ಟ ಶಾರ್ಙ್ಗವೆಂಬ ಧನುಸ್ಸನ್ನೂ, ಚಿನ್ನದಿಂದಾದ ಬಾಣವನ್ನೂ ಹಿಡಿದವನು ಎಂದೂ ಕುದುರೆಯನ್ನೂ ಅದರ ಮೇಲೆ ಕುಳಿತಿರುವ ಯುವಕನನ್ನೂ ಕಂಡರು ಎಂದು ಹೇಳಲ್ಪಟ್ಟಿದೆ. ಆದುದರಿಂದ ಎರಡು ಆಕೃತಿಗಳಿಗೂ ಸಾಮ್ಯತೆಯು ಕಂಡು ಬರುವುದನ್ನು ಅರ್ಥ ಮಾಡಿಕೊಳ್ಳತಕ್ಕದ್ದು.

ಭವಿಷ್ಯೋತ್ತರ ಪುರಾಣದಲ್ಲಿಯೂ, ಆರನೆಯ ಅಧ್ಯಾಯದಲ್ಲಿ ಮುಂಚಿನ ರೀತಿಯಲ್ಲಿಯೇ ಬೇಟೆಯಾಡುವ ಸಮಾಚಾರವನ್ನು ತಿಳಿಸುವ ಭಾಗದಲ್ಲಿ - ಆ ಶ್ರಿಯಃ ಪತಿಯು ತನ್ನ ಮನಸ್ಸಿನಲ್ಲಿ ಕುದುರೆಯನ್ನು ನೆನೆಸಿಕೊಂಡರು. ಆ ಕ್ಷಣದಲ್ಲಿಯೇ ಒಂದು ಅಶ್ವವು ಎದುರಿಗೆ ಕಾಣಿಸಲ್ಪಟ್ಟಿತು. ವಾಯುದೇವನೇ ಅಶ್ವವಾಗಿ (ಕುದುರೆಯಾಗಿ) ಆದನು. ಶ್ರೀದೇವಿಯು ತಾನೇ ಸಮ್ಮತಿಸಿ ಬಂದು ಕಡಿವಾಣದ ಹಗ್ಗವಾದಳು. ನಂತರ ಆ ದೇವನು ಆ ಅಶ್ವವನ್ನು ಪೂಜಿಸಿ, ಎಲ್ಲಾ ಆಭರಣಗಳನ್ನೂ ಧರಿಸಿಕೊಂಡು ಅದರ ಮೇಲೆ ಹತ್ತಿ ಕುಳಿತನು - ಎಂದೂ.

ಕೊಂಡೆಯಂತೆ ಸುತ್ತಲ್ಪಟ್ಟ (ಜಟೆ) ಕೂದಲಿನಲ್ಲಿ ಕೆಂಪಾದ ವಸ್ತ್ರವನ್ನು ಪೇಟದಂತೆ ಸುತ್ತಿ ತೋಳುಗಳಲ್ಲಿ ಧರಿಸಿದ ಮತ್ತು ಇಳಿಯ ಬಿಟ್ಟು ಆಡುತ್ತಿರುವ ಪುಷ್ಪಮಾಲೆಗಳಿಂದ ಅಲಂಕರಿಸಲ್ಪಟ್ಟು, ರತ್ನಖಚಿತವಾದ ಸುವರ್ಣ ಪಾದುಕೆಗಳಿಂದ

ಮರೆಸಲ್ಪಟ್ಟ ಪಾದಗಳನ್ನುಳ್ಳವನಾಗಿ, ಬಿಲ್ಲು ಬಾಣಗಳನ್ನು ಧರಿಸಿ, ಅತ್ಯಂತ ಸುಂದರಮನ್ಮಥನಿಗೂ, ಮನ್ಮಥನಾಗಿ ಕಂಡು ಬರುವ ಶ್ರೀದೇವಿಯ ಪತಿಯಾದ ಶ್ರೀ ವೇಂಕಟಾಚಲ ಪತಿಯು, ನೋಡಿದವರ ಮನಸ್ಸನ್ನು ಸೂರೆಗೊಳ್ಳುವ ಇಂಥಹ ಆಕಾರವನ್ನು ತಾಳಿ, ರತ್ನಖಚಿತವಾದ ಪರಿಕರಗಳನ್ನು (ಆಸನ, ಕಡಿವಾಣ, ಕತ್ತಿನ ಪಟ್ಟಿ ಮುಂತಾದ ಹಲವು ಪೋಷಾಕುಗಳು) ಧರಿಸಲ್ಪಟ್ಟುದೂ, ಸ್ವರ್ಣಮಯವಾದ ತಿಲಕವನ್ನು ಇಟ್ಟಿರುವ ಮುಖವನ್ನುಳ್ಳದ್ದೂ, ವಾಯುವೇಗವೂ ಮತ್ತು ಮನೋವೇಗವನ್ನುಳ್ಳದ್ದೂ, ಕಪ್ಪಾದ ಶರೀರವನ್ನೂ, ಬಿಳಿಯ ಕಾಲ್ಗಳನ್ನೂ ಉಳ್ಳದ್ದೂ, ಹದಿನೈದು ಮೊಳ ಎತ್ತರವುಳ್ಳದ್ದೂ, ''ದೇವಮಣಿ'' ಎಂಬ ಕೂದಲಿನ ಸುಳಿ ಮುಂತಾದ ಉತ್ತಮ ಸಾಮುದ್ರಿಕಾ ಲಕ್ಷಣಗಳೆಲ್ಲವೂ ಕೂಡಿಸಲ್ಪಟ್ಟಅಶ್ವದ ಮೇಲೆ ಆರೂಢನಾಗಿ ಶ್ರೀಗಿರಿಯಿಂದ (ಶ್ರೀ ವೇಂಕಟಗಿರಿಯಿಂದ) ಇಳಿದು ಬೇಟೆಗೆ ಹೋದನು - ಎಂದಿದೆ.

ಇದರಲ್ಲಿಯೂ, ಶ್ರೀನಿವಾಸನಿಗೆ ಕುದುರೆಯ ಮೇಲೇರಿ ಹೋಗುವುದೂ, ತಲೆಯಲ್ಲಿ ಜಟೆ ಅದರ ಸುತ್ತಲೂ ಪೇಟ, ಕೈಗಳಲ್ಲಿ ಧನುರ್ಬಾಣಗಳು ಇರುವಿಕೆಯು ಹೇಳಲ್ಪಟ್ಟಿದೆ. ಮುಂಚೆ ಹೇಳಿದ ವರಾಹ ಪುರಾಣದ ಭಾಗದಲ್ಲಿಯೂ ಬೇಟೆಯಾಡಲು ಹೋಗಬೇಕಾದ ವೇಷಕ್ಕೆ ತಕ್ಕಂತೆ ಧನುರ್ಬಾಣಗಳನ್ನು ಧರಿಸಿರುವುದು ಹೇಳಲ್ಪಟ್ಟಿರುವುದರಿಂದ ಅದಕ್ಕೆ ತಕ್ಕ ಕವಚ, ಬತ್ತಳಿಕೆ ಇವುಗಳನ್ನು ಧರಿಸಿರುವಿಕೆಯು ಪುರಾಣ ಕರ್ತೃವಿಗೆ ವಿವಕ್ಷಿತವಾದುದರಿಂದ, ಮುಂಚೆ ಸಾತ್ವತ ಸಂಹಿತೆಯಲ್ಲಿ ಕಾಣಲ್ಪಟ್ಟ ಕವಚ ಮುಚ್ಚಿದ ಶರೀರವೂ, ಎರಡು ಬತ್ತಳಿಕೆಗಳೂ ಹೇಳಲ್ಪಟ್ಟುವುಗಳೇ ಆಗುತ್ತವೆ. ಆದುದರಿಂದ ಸಾತ್ವತ ಸಂಹಿತೆಯಲ್ಲಿ ಹೇಳಿದ ಆಕಾರಕ್ಕೂ ಇಲ್ಲಿ ಹೇಳಲ್ಪಟ್ಟಿರುವ ಶ್ರೀನಿವಾಸನ ಆಕಾರಕ್ಕೂ ಸಾಮ್ಯತೆಯು ಹೆಚ್ಚು ವಿಶದವಾಗಿ ಕಂಡು ಬರುತ್ತದೆ ಎಂಬುವುದು ತಿಳಿಯತಕ್ಕುದಾಗುತ್ತದೆ.

ಹಿಂದೆ ಹೇಳಿದ ವರಾಹ ಪುರಾಣದಲ್ಲಿರುವ ಬೇಟೆಯಾಡುವುದನ್ನು ತಿಳಿಸುವ ಭಾಗದಲ್ಲಿ, ಕುದುರೆಗೆ ಕಳಂಕ ರಹಿತ ಚಂದ್ರನಂತೆ ಬಿಳಿಯ ಬಣ್ಣವನ್ನೂ, ದೇವಾಧಿದೇವನಿಗೆ ತೆಳುವಾದ ಮೃದುವಾದ ಬಿಳಿಯ ರೇಷ್ಮೆಯ ವಸ್ತ್ರದಿಂದ ಸುತ್ತಲ್ಪಟ್ಟ ಜಟೆಯಿರುವುದೂ ಹೇಳಲ್ಪಟ್ಟುವು. ಈ ಭವಿಷ್ಯೋತ್ತರ ಪುರಾಣದ ಬೇಟೆಯಾಡುವ ವಿಷಯವನ್ನು ತಿಳಿಸುವ ಭಾಗದಲ್ಲಿ ಕುದುರೆಗೆ (ಕಪ್ಪು) ಬಣ್ಣವೂ, ಬಿಳಿಯ ಕಾಲ್ಗಳೂ, ಭಗವಂತನಿಗೆ ಕೆಂಪು ಪೇಟ ಸುತ್ತಿದ ಜಟೆಯೂ ಹೇಳಲ್ಪಡುವುದರಿಂದ (ಸ್ವಲ್ಪ) ವ್ಯತ್ಯಾಸವು ಕಂಡು ಬರುತ್ತದೆ. ಆದರೂ ಒಂದೊಂದು ಕಲ್ಪದಲ್ಲಿಯೂ ಮುಂದುವರೆದು ನಡೆಯುವ ಕೆಲವು ಚರಿತ್ರೆಗಳಲ್ಲಿ, ಮುಖ್ಯವಾದ ಭಾಗಗಳಲ್ಲಿ ಸಾಮ್ಯತೆಯು ಇದ್ದೇ ಇದ್ದು, ಅಮುಖ್ಯವಾದ ಕೆಲವು ವಿಷಯಗಳಲ್ಲಿ ಸ್ವಲ್ಪ ವ್ಯತ್ಯಾಸ

ಕಂಡು ಬರುವುದು ಸಹಜವಾದುದರಿಂದ, ಇಲ್ಲಿ ಅಂಥಹ ಚಿಕ್ಕ ಪುಟ್ಟ ವ್ಯತ್ಯಾಸಗಳನ್ನು ಮಾತ್ರ ಪರಿಗಣಿಸಿ ಪ್ರಧಾನ ವಿಷಯದಲ್ಲಿ ವ್ಯತ್ಯಾಸವನ್ನು ಚಿಂತಿಸುವುದು ಸರಿಯಾದುದಲ್ಲ.

ಮೇಲೂ, ಒಂದೇ ಕಲ್ಪದಲ್ಲಿ ನಡೆದ ಚರಿತ್ರೆಯನ್ನು ಗ್ರಂಥವನ್ನಾಗಿ ರಚಿಸಿದ್ದರೂ, ಹೇಳುವವರ ಮತ್ತು ಕೇಳುವವರ ಸಂಭಾಷಣೆಯ ಮೂಲಕವಾಗಿ ಪುರುಷರುಗಳಿಂದ ರಚಿಸಲ್ಪಟ್ಟ ಸ್ಮೃತಿ, ಇತಿಹಾಸ, ಪುರಾಣ ಮುಂತಾದ ಶಾಸ್ತ್ರಗಳಲ್ಲಿ, ಹೇಳುವವರು ಚೆನ್ನಾಗಿ ಹೇಳಿದರೂ, ಕೇಳುವವರು ಶ್ರದ್ಧೆಯಿಂದ ಕೇಳದೆ ಇರುವ ಕಾರಣದಿಂದಾಗಿ ಕೆಲವು ವಿಷಯಗಳನ್ನು ವ್ಯತ್ಯಾಸ ಪಡಿಸಿ ಗ್ರಂಥ ರಚನೆ ಆಗಿರಬಹುದು - ಹೇಳುವರೂ ತಾವು ಕೇಳಿದಂತೆಯೇ ಹೇಳಿದಾಗ, ಕೇಳುವವರೂ ಶ್ರದ್ಧೆಯಿಂದ ಕೇಳಿ ಹಾಗೆಯೇ ಗ್ರಂಥ ರಚನೆ ಆಗಿದ್ದರೂ ಸಹ, ಅದಕ್ಕೆ ಮುಂಚೆ ಹೇಳುವವರೂ ಕೇಳುವವರೂ ಬಹಳ ದಿನದಿಂದಲೂ ಮುಂದುವರೆಯುತ್ತಾ ನಡೆದು ಬರುವಾಗ, ಹೇಳುವವರೋ ಅಥವಾ ಕೇಳುವವರೋ, ಒಬ್ಬರು ತಾವು ಹೇಳುವಾಗಲೋ ಅಥವಾ ಕೇಳುವಾಗಲೋ ಶ್ರದ್ಧೆಯಿಲ್ಲದೆ ಹೇಳಿಯೂ ಅಥವಾ ಕೇಳಿಯೂ ಬಂದ ವಿಷಯಗಳು ಹಾಗೆಯೇ ಪಾರಂಪರ್ಯವಾಗಿ ಬರುವುದರಿಂದಾಗಲೀ, ಮುಂಚೆ ತಿಳಿಸಿದ ಅತ್ಯಂತ ಸಣ್ಣಪುಟ್ಟ ವಿಷಯಗಳಲ್ಲಿ ವ್ಯತ್ಯಾಸವುಂಟಾಗುವುದನ್ನು ತಪ್ಪಿಸುವುದು ಸಾಧ್ಯವೆಂಬುದೊಂದಾಗುತ್ತದೆ.

ಇದೇ ಕಾರಣದಿಂದ ಮಾನವರಿಂದ ಬರೆಯಲ್ಪಟ್ಟ ಸ್ಮೃತಿ, ಇತಿಹಾಸ, ಪುರಾಣ ಮುಂತಾದ ಎಲ್ಲಾ ಗ್ರಂಥಗಳಲ್ಲಿಯೂ, ಅಷ್ಟೇ ಏಕೆ? ಶ್ರೀ ವೇಂಕಟಾಚಲ ಮಾಹಾತ್ಮ್ಯೆಯನ್ನು ಹೇಳುವ ಈ ಪುರಾಣ ಭಾಗಗಳಲ್ಲಿಯೂ ಕೂಡ ಆ ಚರಿತ್ರೆಯ ಒಳಭಾಗಗಳು ವ್ಯತ್ಯಾಸವುಳ್ಳವುಗಳಾಗಿ ಕಂಡು ಬರುತ್ತವೆ. ಅಲ್ಲೆಲ್ಲಾ ಇದೇ ವಿಧವಾಗಿ ಸಣ್ಣ ಪುಟ್ಟ ವ್ಯತ್ಯಾಸಗಳಲ್ಲಿ, ದೃಷ್ಟಿಯನ್ನಿಡದೆ ಮುಖ್ಯ ವಿಷಯಗಳಲ್ಲಿಯೇ ಗಮನವನ್ನು ಕೊಡಬೇಕಾದುದು ಸರಿಯಷ್ಟೆ.

ಈ ರೀತಿಯೇ, ಸ್ಕಂದ ಪುರಾಣದ ಪೂರ್ವ ಭಾಗದಲ್ಲಿ ಹತ್ತನೆಯ ಅಧ್ಯಾಯದಲ್ಲಿ ಭಗವಂತನ ದಿವ್ಯ ಸ್ವರೂಪವನ್ನು ತಿಳಿಸುವ ಜಾಗದಲ್ಲಿ - ಅಗಸ್ತ್ಯ ಋಷಿಯೂ, ಶಂಖರಾಜ ಮುಂತಾದವರೂ, ತಮ್ಮೆದುರಿನಲ್ಲಿ ಜ್ಯೋತಿಯೊಂದು ತೋರಿದುದನ್ನು ಕಂಡು, ಪರಮ ಪದ (ವೈಕುಂಠ) ನಿಲಯನಾಗಿ, ಪರಮಾನಂದವನ್ನು ತರುವ ದೇಹ ಸೌಂದರ್ಯವುಳ್ಳವನಾಗಿ, ಶ್ರೇಷ್ಠಜ್ಞಾನಿಗಳಿಂದಲೂ ಮಾತನಾಡಲೋ ಅಥವಾ ಮನದಲ್ಲಿ ನೆನೆಯಲೋ ಆಗದಂತವನಾಗಿ, ಪ್ರಸಿದ್ಧವಾದ ಐಶ್ವರ್ಯದಿಂದ ಕೂಡಿರುವ ನಾರಾಯಣನನ್ನು

ಕಂಡು ಧ್ಯಾನವನ್ನು ಮಾಡಿದರು. ನಂತರ ಅವರುಗಳು ಸಾವಿರ ಕಣ್ಣುಗಳೊಡನೆಯೂ, ಸಾವಿರ ಬಾಹುಗಳೊಡನೆಯೂ, ಸಾವಿರ ಕಾಲುಗಳೊಡನೆಯೂ ಕೂಡಿ,ಕರಗಿದ ಚಿನ್ನದಂತೆ ಕಾಣುವ ಕಾಂತಿಯಿಂದ ಮನಸ್ಸನ್ನು ಸೂರೆಗೊಳ್ಳುವವನೂ, ಘೋರವಾದ ಹಲ್ಲುಗಳಿಂದ, ಘೋರವಾದ ಶರೀರವುಳ್ಳವನಾಗಿ, ಬೆಂಕಿಯ ಜ್ವಾಲೆಗಳನ್ನು ಉಗಿಯುವುದರಿಂದ ನೋಡಲಸಾಧ್ಯವಾದವನೂ, ವಕ್ಷಸ್ಥಳದಲ್ಲಿ ಶ್ರೀದೇವಿಯನ್ನು ಧರಿಸಿಕೊಂಡು, ಕೌಸ್ತುಭದಿಂದ ಬೆಳಗಿಸಲ್ಪಟ್ಟವನೂ, ಆದ್ಯಂತ ರಹಿತನೂ, ಭಯವುಂಟಾಗಿಸುವವನೂ, ಸರ್ವವ್ಯಾಪಿಯೂ, ವಿಶ್ವರೂಪವನ್ನು ತೋರಿಸುವವನೂ, ಆದ ಶ್ರೀ ಮಹಾವಿಷ್ಣುವನ್ನು ಕಂಡು ಮನಸ್ಸಂತೋಷಗೊಂಡು ಪುನಃ ಪುನಃ ಆ ಜಗನ್ನಾಥನನ್ನು ವಂದಿಸಿದರು. ಆಗ ಸೂರ್ಯ ತೇಜಸ್ಸುಳ್ಳ ಚಕ್ರಾಯುಧವೂ ಸುಂದರವಾದ ಗದೆ, ನಂದಕವೆಂಬ ಖಡ್ಗ (ಕತ್ತಿ), ಪುಂಡರೀಕ (ತಾವರೆ ಹೂ) ಚಂದ್ರಕಾಂತಿಯನ್ನು ಹೊಂದಿದ ಶಂಖ (ಪಾಂಚಜನ್ಯ), ಈ ಹರಿಯ ಆಯುಧಗಳು, ಪ್ರಪಂಚವನ್ನು ಕಾಪಾಡುವುದಕ್ಕಾಗಿ ಪರಿಭ್ರಮಣ ಮಾಡುತ್ತಲೇ ಇರುವ ಇವುಗಳು, ಆ ಮಹಾವಿಷ್ಣುವನ್ನು ಸೇವೆ ಮಾಡುವುದಕ್ಕಾಗಿ ತಮ್ಮಗಳ ಸಹಜವಾದ ಕಾಂತಿ ಮತ್ತು ಶಕ್ತಿಗಳಿಂದ ಕೂಡಿ ಅಲ್ಲಿಗೆ ಬಂದುವು. ಆ ಸಮಯದಲ್ಲಿ ಅಸುರರುಗಳೆಲ್ಲರಿಗೂ ಭೀತಿಯುಂಟು ಮಾಡುವ ಪಾಂಚಜನ್ಯದ ನಿನಾದವು ಬ್ರಹ್ಮಾಂಡವೆಲ್ಲವನ್ನೂ ಹರಡಿದುವು - ಎಂದು ಹೇಳಲ್ಪಟ್ಟಿತು.

ಇದರಲ್ಲಿ, ಸಾತ್ವತ ಸಂಹಿತೆಯಲ್ಲಿ ಕಲ್ಪಾಂತದಲ್ಲಿ (ಪ್ರಳಯ ಕಾಲದಲ್ಲಿ) ಅಗ್ನಿಯಂತೆ ತೇಜಸ್ಸುಳ್ಳವರೂ, ಜ್ವಲಿಸುತ್ತಿರುವ ಅಗ್ನಿಜ್ವಾಲೆಗಳ ಸಮೂಹಗಳೊಂದಿಗೆ ಸೇರಿದವರೂ, ಅಗ್ನಿಯನ್ನೇ ಉಡುಪಾಗಿ ಧರಿಸಿದವರೂ (ಸುತ್ತಿಕೊಂಡವರೂ) ಎಂದು ಹೇಳಲ್ಪಟ್ಟ ವಿಷಯವು, ಬೆಂಕಿಯ ಜ್ವಾಲೆಗಳನ್ನು ಉಗಿಯುವುದರಿಂದ ನೋಡಲಸಾಧ್ಯವಾದವನು ಎಂದು ತಿಳಿಸಲ್ಪಟ್ಟಿದೆ. ಕರಗಿಸಲ್ಪಟ್ಟ ಚಿನ್ನದಂತೆ ಕಾಂತಿಯನ್ನು ಹೊಂದಿದವನು ಎಂದು ಸೂಚಿಸಲ್ಪಟ್ಟಿತು. ಪುರುಷ ರೂಪವನ್ನು ಧರಿಸಿದ, ಚಕ್ರವೇ ಮುಂತಾದ ಆಯುಧಗಳಿಂದ ಸುತ್ತಲ್ಪಟ್ಟವರೆಂದು ಅಲ್ಲಿ ಹೇಳಿದುದು - ಇಲ್ಲಿ ಲೋಕಗಳನ್ನು ಸಂರಕ್ಷಿಸುವುದಕ್ಕಾಗಿ ಸುತ್ತುತ್ತಲೇ ಇರುವ ಆಯುಧಗಳು, ಭಗವಂತನನ್ನು ದರ್ಶಿಸುವುದಕ್ಕಾಗಿ ಅಲ್ಲಿ ಬಂದು ಸೇರಿದುವು ಎಂದು ಹೇಳಲ್ಪಟ್ಟಿತು.

ಆದುದರಿಂದ ಈ ಸ್ಕಾಂದ ಪುರಾಣದಲ್ಲಿಯೂ, ಮುಂಚೆ ಹೇಳಿದ ಸಾತ್ವತ ಸಂಹಿತೆಯಲ್ಲಿ ತಿಳಿಸಿದ ಆಕಾರದೊಂದಿಗೆ ಶ್ರೀ ಶ್ರೀನಿವಾಸನ ಆಕಾರವು ಹೊಂದಿಕೊಂಡಿರುವುದನ್ನು ತಿಳಿಯಬೇಕಾಗುತ್ತದೆ.

ವರಾಹ ಪುರಾಣದಲ್ಲಿ ಎರಡನೆಯ ಭಾಗದಲ್ಲಿರುವುದಾಗಿ ಮುಂಚೆ ತಿಳಿಸಿದ ಬೇಟೆಯಾಡುವ ಸಂದರ್ಭದಲ್ಲಿ ಶ್ರೀ ಶ್ರೀನಿವಾಸನು ಕೃಷ್ಣವರ್ಣದ ಶರೀರವನ್ನು ಹೊಂದಿದವರಾಗಿ ಹೇಳಲ್ಪಟ್ಟಿತು. ಇಲ್ಲಿ ಸುವರ್ಣ ಕಾಂತಿಯನ್ನು ಹೊಂದಿದವರಾಗಿ ಹೇಳಲ್ಪಟ್ಟಿರುವುದರಿಂದ ವ್ಯತ್ಯಾಸವು ಕಂಡು ಬರುತ್ತದೆ.

ಆದರೂ, ಭಗವಂತನ ದಿವ್ಯರೂಪವು - ಸುವರ್ಣ ಪ್ರಕಾಶದ ಜೊತೆ ಸೇರಿದ ನೀಲಮಣಿಯ ತೇಜಸ್ಸಿನಂತೆ, ಸುಂದರವಾದ, ನವಿಲಿನ ಕಂಠದೊಂದಿಗೂ, ಮಿಂಚಿನ ಬೆಳಕಿನಿಂದ ಕೂಡಿದ ನೀಲಮೇಘಕ್ಕೂ ಹೋಲಿಕೆಯುಳ್ಳ ಆಕಾರವನ್ನುಳ್ಳವರಾಗಿಯೂ, 'ಕೃಷಿ ಪಿಂಗಳಂ' (ಕಪ್ಪು ಮತ್ತು ಚಿನ್ನದ ಬಣ್ಣ ಹೊಂದಿರುವುದು) ಎಂದು ವೇದದಿಂದ ಗೊತ್ತಾಗುವುದರಿಂದಲೂ, ಕಪ್ಪಾಗಿಯೂ ಸುವರ್ಣ ಬಣ್ಣದ್ದಾಗಿಯೂ ಸೂಚಿಸಲ್ಪಡಬಹುದಾದುದರಿಂದ ವಿರೋಧವಿಲ್ಲವೆಂದು ತಿಳಿಯತಕ್ಕದ್ದು.

ಇದರಿಂದಲೇ, ಮುಂಚೆ ಸೂಚಿಸಿದ ಸ್ಕಾಂದ ಪುರಾಣದಲ್ಲಿರುವ ಭಗವಂತನ ಆಕಾರವನ್ನು ವರ್ಣಿಸುವ ಘಟ್ಟದಲ್ಲಿಯೇ, ಬ್ರಹ್ಮನೇ ಮುಂತಾದವರ ಪ್ರಾರ್ಥನೆಗೆ ಓಗೊಟ್ಟ ಭಗವಂತನು ಅಗ್ನಿಜ್ವಾಲೆಯಿಂದ ಸುತ್ತಲ್ಪಟ್ಟು, ಎಲ್ಲರಿಗೂ ಭೀತಿಯನ್ನುಂಟು ಮಾಡುವ ಆಕಾರವನ್ನು ಅವರುಗಳಿಗೆ ತೋರಿಸುವುದಾಗಿ ಸೂಚಿಸುವಾಗ - ಚಿನ್ನದಿಂದ ಮಾಡಿದ ವಿಮಾನದಲ್ಲಿ ಭಗವಂತನು ಚಂದ್ರಬಿಂಬದಂತಿರುವ ವದನನಾಗಿಯೂ, ಕನ್ನೈದಿಲೆಯಂತೆ ನೀಲವರ್ಣದ ಕಾಂತಿಯೊಂದಿಗೂ ಕೂಡಿ ಶಾಂತಮುಖಿನಾಗಿ ನೋಡಲು ಸಂತೋಷವುಂಟುಮಾಡುವವನಾಗಿ ಇದ್ದನು ಎಂದು ನೀಲವರ್ಣವು (ಕಪ್ಪುವರ್ಣ) ಭಗವಂತನಿಗೆ ಇದೆ ಎಂಬುದು ತೋರಿಸಲ್ಪಟ್ಟಿತು.

ಇದೇ ರೀತಿಯಲ್ಲಿ ವಾಮನ ಪುರಾಣದಲ್ಲಿಯೂ ಹದಿನೈದನೆಯ ಅಧ್ಯಾಯದಲ್ಲಿನ ೩೪ನೇ ಸಂಖ್ಯೆಯುಳ್ಳ ವಚನದಲ್ಲಿ, ಶ್ರೀ ಶ್ರೀನಿವಾಸನು ಆವಿರ್ಭವಿಸುವುದನ್ನು ತಿಳಿಸುವ ಸಂದರ್ಭದಲ್ಲಿ - ಅವ್ಯಕ್ತವಾದ (ಕಣ್ಣಿನಿಂದ ನೋಡಲಸಾಧ್ಯವಾದ) ರೂಪವನ್ನು (ಆಕಾರ) ಹೊಂದಿದ ಆ ಹರಿಯ ರೂಪವು ಎಂಥಹುದು? ಕೈಗಳೂ, ಮುಖಿಗಳೂ ಎಷ್ಟೆಷ್ಟು? ಹರಿತವಾದ ಎಷ್ಟು ಆಯುಧಗಳನ್ನು ಅವರು ಧರಿಸಿರುವರು? ಮುನಿ ಶ್ರೇಷ್ಠರೇ! ವಿಶ್ವರೂಪಿಯಾದ ಅವರ ಆಕಾರದ ರಚನೆಯನ್ನು ದಯಮಾಡಿ ತಿಳಿಸಿ ಎಂದು ಜನಕರು ಕೇಳಿದಾಗ ಆದಕ್ಕೆ ವಾಮದೇವ ಮಹರ್ಷಿಯು ಸಮಾಧಾನ ಹೇಳುವ ಘಟ್ಟದಲ್ಲಿ - ಸಂಕುಚಿತವಾಗಿಯೂ, ಕಪ್ಪಾಗಿಯೂ, ಅತ್ಯಂತ ತೆಳುವಾಗಿಯೂ ಇರುವ, ಕಾಣಲು ಸಂತೋಷವಾಗುವ ಕಿರೀಟದಿಂದ ಹೊರಗೆ ಬಂದು ಜೋಲಾಡುತ್ತಿರುವ ಕೇಶರಾಶಿಗಳಿಂದ ಮೇಘ ಮುಚ್ಚಿದ ಚಂದ್ರಬಿಂಬದಂತೆ ವದನಾರವಿಂದವನ್ನು

ಹೊಂದಿರುವರು - ಎಂದು ಭಗವಂತನಿಗೆ ಜಟೆ ಇರುವುದನ್ನು ಹೇಳಿ, ಹೇ ಮಿಥಿಲಾಧಿಪತಿಯೇ! ಪ್ರಜ್ವಲಿಸುತ್ತಿರುವ ಹರಿತವಾದ ಆಯುಧಗಳು ಆ ಕೈಗಳಲ್ಲಿ ಕಂಡು ಬಂದುವು - ಎಂಬುವುದರಿಂದಲೂ, ಹಲವು ನೂರಾರು ಸಂಖ್ಯೆಯುಳ್ಳ ಪ್ರಳಯ ಕಾಲದ ಅಗ್ನಿಯಂತೆ ತೇಜಸ್ಸನ್ನು ಹೊಂದಿದುವುಗಳೂ, ಘೋರವಾದುವುಗಳೂ, ದೇವತೆಗಳಿಗೆ ಶತ್ರುಗಳಾದ, ಅತ್ಯಂತ ಬಲಶಾಲಿಗಳಾದ ದೈತ್ಯೇಂದ್ರರುಗಳಿಗೆ (ರಾಕ್ಷಸ ನಾಯಕರುಗಳಿಗೆ) ಭಯವನ್ನುಂಟು ಮಾಡುವುವುಗಳೂ ಭಕ್ತರುಗಳಿಗೆ ಅಭಯವನ್ನು ಕೊಡುವುವುಗಳೂ, ಎಲ್ಲೆಲ್ಲಿಯೂ, ಯಾವಾಗಲೂ ಸಂಚರಿಸುವುವುಗಳಾಗಿ ಆ ಕೈಗಳಲ್ಲಿ ಸೇರಿದ್ದ ಹಲವು ವಿಧವಾದ ದಿವ್ಯಾಯುಧಗಳು ಭಯಂಕರವಾಗಿ ಜ್ವಲಿಸುತ್ತಿರುವ ತಮ್ಮ ಬೆಳಕಿನಿಂದ ಸೂರ್ಯನನ್ನೂ, ಶಾಂತವಾಗಿ ಪ್ರಸರಿಸುತ್ತಿರುವ ತಮ್ಮ ಬೆಳಕಿನಿಂದ ಚಂದ್ರನನ್ನೂ ತೇಜೋರಹಿತ ಗಳನ್ನಾಗಿ ಮಾಡಿದುವು - ಎಂಬುದರಿಂದಲೂ, ಭಗವಂತನ ಭಯಂಕರ ಮತ್ತು ಅಭಯಂಕರವಾದ ಎರಡು ರೂಪಗಳಿಗೆ ತಕ್ಕ ರೀತಿ ಕ್ರೂರವಾದುದೂ ಮತ್ತುಸೌಮ್ಯವಾದುದೂ ಆದ ಬೆಳಕನ್ನು ಪಡೆದು ಎರಡು ಬಗೆಯ ರೂಪವನ್ನೂ ಧರಿಸಿದ ಹಲವು ಬಗೆಯಾದ ಆಯುಧಗಳಿಂದ ಅಲಂಕರಿಸಲ್ಪಟ್ಟ ಹಲವಾರು ತೋಳ್ಗಳಿರುವುದು ಹೇಳಲ್ಪಟ್ಟಿರುವುದರಿಂದ ಈ ಶ್ರೀನಿವಾಸ ದೇವನಿಗೆ ಕಾಪಾಡುವ ಕೆಲಸ (ಸಂರಕ್ಷಣೆ) ಮಾಡುವುದಕ್ಕಾಗಿ ಸುಂದರವಾದ ರೂಪಕ್ಕೆ ಹೊಂದುವ ದಿವ್ಯಾಯುಧಗಳನ್ನು ಧರಿಸಿರುವ ರೀತಿ, ಧ್ವಂಸ ಮಾಡುವ ಕೆಲಸವನ್ನು ಮಾಡುವುದಕ್ಕಾಗಿ, ಭಯಂಕರ ರೂಪಕ್ಕೆ ತಕ್ಕುದಾದ ಶಕ್ತ್ಯಾಯುಧ, ಕೊಡಲಿ ಮುಂತಾದ ಘೋರ ರೂಪವುಳ್ಳ ಆಯುಧಗಳನ್ನು ಧರಿಸಿರುವುದನ್ನೂ ಇಲ್ಲಿ ಹೇಳಲ್ಪಟ್ಟಿರುವುದಾಗಿ ಕಂಡು ಬರುವುದರಿಂದ, ಸಾತ್ವತ ಸಂಹಿತೆಯಲ್ಲಿ ಇರುವುದಾಗಿ ತೋರಿಸಲ್ಪಟ್ಟ ಧನುಸ್ಸು, ಬಾಣ, ಈಟಿ (ಶಕ್ತ್ಯಾಯುಧ) ಕೊಡಲಿ ಇವುಗಳಿಂದ ಕೂಡಿದ ಘೋರ ರೂಪವೂ, ಪುರುಷರೂಪ ಧರಿಸಿದ ಚಕ್ರವೇ ಮುಂತಾದ ಆಕಾರಗಳು ತೋರಿಸಲ್ಪಟ್ಟವು ಎಂದಾಗುತ್ತದೆ.

ಇದರಂತೆಯೇ ಮುಂಚೆ ಹೇಳಿದ ಸ್ಕಾಂದ ಪುರಾಣ ವಚನಗಳಿಂದಲೂ, ಈ ವಾಮನ ಪುರಾಣ ಘಟ್ಟದಲ್ಲಿಯೂ - ವಿಶ್ವರೂಪಿಯಾದ ಶ್ರೀ ಮಹಾವಿಷ್ಣುವಿನ ಹಲವು ಬಣ್ಣಗಳನ್ನುಳ್ಳದ್ದೂ, ಆಶ್ಚರ್ಯಜನಕವಾದುದೂ ಆದ ದಿವ್ಯಮಂಗಳ ವಿಗ್ರಹ ರೂಪವು, ಕಿರೀಟ ಪಂಕ್ತಿಗಳಿಂದ ಹೊರಟ ಕಿರಣ ಪರಂಪರೆಗಳ ಹಲವು ಬಗೆಯ ಕಾಂತಿಗಳನ್ನು ಹೊಂದಿದ ಪ್ರಳಯ ಕಾಲದ ಸೂರ್ಯನಂತೆ ಕಂಡು ಬಂದಿತು. ಮೇಲೂ, ಆದಿಯಾದ ಆ ರೂಪವು ಆಶ್ಚರ್ಯವಾದ ಕಣ್ಣುಗಳುಳ್ಳ ಪ್ರಕಾಶವಾದ ಮುಖ ಮಂಡಲವುಳ್ಳದ್ದೂ, ನಿರ್ಮಲವಾದುದೂ, ಶೋಕರಹಿತವೂ, ತನ್ನ ಅದ್ಭುತ ಬೆಳಕಿನಿಂದ ಪ್ರಜ್ವಲಿಸುತ್ತಾ ಯುಗಾಂತ್ಯದ ಅಗ್ನಿಯಂತೆ ಚೆನ್ನಾಗಿ ಉರಿಯುತ್ತಲೇ

ಇರುವುದು ಕಂಡು ಬಂದಿತು ಎಂಬುದರಿಂದಲೂ, ಕೂಡಲೇ ಹೇಳಲ್ಪಟ್ಟಿರುವ ಇತರ ವಚನಗಳಿಂದಲೂ, ಮೃದುವಾದ, ಸುಂದರವಾದ ಕಪೋಲಗಳಿಂದಲೂ, ಕುಂಡಲಗಳಿಂದಲೂ ಕಂಡುಬರುವುದಾಗಿ ಎಂದು ಪ್ರಾರಂಭಿಸಿ, - ಸುಂದರವಾದುದೂ, ಶ್ರೇಷ್ಠವಾದ ವಕ್ಷಃಸ್ಥಳವನ್ನುಳ್ಳದ್ದು, ಉತ್ಕೃಷ್ಟವಾದ ಪೀತಾಂಬರವನ್ನು ಧರಿಸಿದುದೂ, ದಿವ್ಯವಾದ ಚಂದನವನ್ನು ಲೇಪಿಸಿಕೊಂಡದ್ದೂ ಆದ ಆ ಆಕಾರವು - ಸುಂದರವಾದ ಕೊರಳಿನಲ್ಲಿ ಧರಿಸಿದ ವೈಜಯಂತೀ ಎಂಬ ವನಮಾಲೆಯಿಂದ ಮಿಂಚುಗಳ ಸರಣಿಯಿಂದ ಬೆಳಗಿಸಲ್ಪಟ್ಟ ಮೇಘದಂತೆ ಪ್ರಕಾಶಿಸಿತು - ಎಂಬ ವಚನಗಳಿಂದಲೂ ರಕ್ಷಿಸುವ ವೃತ್ತಿಗೆ ಇರಬೇಕಾದ ಅಂದವಾದ ಆಕೃತಿ (ರೂಪ)ಯೂ, ಸಂಹಾರ ವೃತ್ತಿಗೆ ಇರಬೇಕಾದ ಕ್ರೂರವಾದ ರೂಪವೂ ಭಗವಂತನಿಗಿರುವುದು ಹೇಳಲ್ಪಡುವುದರಿಂದ, ಮುಂಚೆ ತೋರಿಸಿದ ಸಾತ್ವತ ಸಂಹಿತೆಯ ವಚನಗಳಲ್ಲಿ - ಯಾಗ ಮಾಡುವುದು, ವೇದ ಪಾರಾಯಣ ಮಾಡುವುದೂ, ದಾನ ಮಾಡುವುದೂ ಮುಂತಾದ ಒಳ್ಳೆಯ ಕಾರ್ಯಗಳನ್ನು 'ರಕ್ಷಿಸುವನು,' ಎಂದು ಹೇಳಲ್ಪಟ್ಟ, ಅದಕ್ಕೇ ಇರಬೇಕಾದ ಆಕಾರವು, ಅಧರ್ಮದಲ್ಲೇ ನೆಟ್ಟಿರುವ ಮನಸ್ಸುಳ್ಳವರಾಗಿ, ಧರ್ಮ ನಿಂದೆ ಮಾಡುವವರನ್ನು ನಾಶಮಾಡುವವನು , ಪ್ರಳಯ ಕಾಲದ ಅಗ್ನಿ ಸ್ವರೂಪವನ್ನು ಹೊಂದಿದವನೂ, ಪ್ರಜ್ವಲಿಸುವ ಅಗ್ನಿ ಜ್ವಾಲೆಗಳ ಸರಣಿಗಳಿಂದ ಕೂಡಿದವನು. ಅಗ್ನಿಯನ್ನೇ ವಸ್ತ್ರವನ್ನಾಗಿ ಕೊಂಡು ಆವೃತನಾದವನು, ಎಂದು ಹೇಳಲ್ಪಟ್ಟ ಸಂಹಾರ ಕಾರ್ಯ ಮಾಡುವ ರೂಪವನ್ನು ಹೇಳಿರುವುದೆಂದಾಗುತ್ತದೆ.

ಹೀಗೆಯೇ ಈ ವಾಮನ ಪುರಾಣದಲ್ಲಿಯೂ ಹದಿನಾರನೆಯ ಅಧ್ಯಾಯದ ೩೫ ಎಂಬ ಸಂಖ್ಯೆಯಿಂದ ಸೂಚಿತವಾದ ವಚನದಲ್ಲಿ ಸಪ್ತ ಋಷಿಗಳು ಶ್ರೀನಿವಾಸ ಭಗವಂತನ ಬಗ್ಗೆ ಮಾಡಿದ ಸ್ತೋತ್ರದಲ್ಲಿ -ಸಾವಿರ ಸೂರ್ಯರನ್ನು ಹೋಲುವ ಚಕ್ರವನ್ನು ಧರಿಸಿರುವ ನಿನಗೆ ನಮಸ್ಕಾರಗಳು. ಶಂಖ ಹಸ್ತನಿಗೆ ನಮಸ್ಕಾರಗಳು. ಮಹಾತ್ಮನಾದ ವಿಷ್ಣುವೇ ನಿನಗೆ ನಮಸ್ಕಾರಗಳು. ಕಿರೀಟಧಾರಿಯಾದ ನಿನಗೆ ನಮಸ್ಕಾರಗಳು. ನೀಲಮೇಘಕ್ಕೆ ಹೋಲುವ ದೇಹವನ್ನುಳ್ಳ ಬ್ರಹ್ಮನಾದ ನಿನಗೆ ನಮಸ್ಕಾರಗಳು. ಉತ್ತಮವಾದ ಸುತ್ತಿಗೆ, ಗದೆ, ಬಿಲ್ಲು, ಈಟಿ, ಶಕ್ತ್ಯಾಯುಧ ಇವುಗಳನ್ನು ಕೈಗಳಲ್ಲಿ ಧರಿಸಿದವನೂ, ಥಳ-ಥಳವೆಂದು ಹೊಳೆಯುತ್ತಿರುವ ಇತರ ಆಯುಧಗಳನ್ನು ಧರಿಸಿರುವವನೂ, ಜಾಜ್ವಲ್ಯವಾದ ಶರೀರವನ್ನುಳ್ಳವನೂ ಆದ ನಿನಗೆ ನಮಸ್ಕಾರಗಳು. ಯಾಗಗಳಿಗೆ ಫಲ ಕೊಡುವ ನಿನಗೆ ನಮಸ್ಕಾರಗಳು. ಪ್ರಕಾಶವನ್ನು ಸೂಸುವ ಕುಂಡಲಗಳನ್ನುಳ್ಳ ನಿನಗೆ ನಮಸ್ಕಾರಗಳು. ಉನ್ನತ ಮಟ್ಟದ ಜನರಿಗೂ, ಕೀಳು ಮಟ್ಟದ ಜನರಿಗೂ ಅಧಿಪತಿಯಾದ ನಿನಗೆ ನಮಸ್ಕಾರಗಳು. ಭಯಂಕರವೆನಿಸುವ ಶರೀರವನ್ನುಳ್ಳ ನಿನಗೆ ವಂದನೆಗಳು - ಎಂಬಿರುವ ವಚನಗಳಿಂದ

ಭಗವಾನ್ ಶ್ರೀನಿವಾಸನಿಗೆ ರಕ್ಷಣೆ ಮಾಡಲು ತಕ್ಕ ಹಾಗೆ ಇರುವ ಶಾಂತವಾದ ದಿವ್ಯದೇಹವೂ, ಧ್ವಂಸ ಮಾಡಲು ತಕ್ಕ ಹಾಗೆ ಇರುವ ಭಯಂಕರವಾದ ದೇಹವೂ, ಈ ಎರಡಕ್ಕೂ ಹೊಂದುವ ಶಾಂತವಾದ ಆಯುಧಗಳನ್ನು ಕೊಂಡಿರುವಿಕೆಯೂ, ಘೋರವಾದ ಆಯುಧಗಳನ್ನು ಕೊಂಡಿರುವಿಕೆಯೂ ವಿಶದವಾಗಿ ಹೇಳಲ್ಪಟ್ಟವು. ಆದುದರಿಂದಲೇ ಈ ವಾಮನ ಪುರಾಣದಲ್ಲಿಯೂ ಶ್ರೀನಿವಾಸನ ಆಕೃತಿಗೆ ಮುಂಚೆ ತೋರಿಸಿದ ಸಾತ್ವತ ಸಂಹಿತೆಯ ವಚನಗಳಲ್ಲಿ ತಿಳಿಸಿದ ಆಕೃತಿಯು ಸಾಮ್ಯವನ್ನು ಪಡೆದಿರುವುದನ್ನು ತಿಳಿಸುತ್ತದೆ ಎಂದು ತಿಳಿಯಬೇಕು.

ಹೀಗೆಯೇ ಪಾದ್ಮ ಪುರಾಣ ಭಾಗದಲ್ಲಿಯೂ ಮೂರನೇಯ ಅಧ್ಯಾಯದಲ್ಲಿ ೨೬ ಎಂಬ ಸಂಖ್ಯೆಯಿಂದ ಸೂಚಿಸಿರುವ ವಚನದಲ್ಲಿ ಪದ್ಮ ಸರೋವರದ (ತಿರುಚ್ಚಾನೂರ್ - ತಿರುಚ್ಚುಕನೂರ್) ನಲ್ಲಿರುವ ತಟಾಕದಲ್ಲಿ ಶುಕ ಮಹರ್ಷಿಗಾಗಿ ಶ್ರೀನಿವಾಸನು ಪ್ರತ್ಯಕ್ಷವಾದುದನ್ನು ಹೇಳುವ ಸಂದರ್ಭದಲ್ಲಿ ಸರ್ವಾತ್ಮನಾಗಿ (ಸಕಲರಿಗೂ ಆತ್ಮನಾಗಿ), ತಾವರೆ ಹೂವಿನ ದಳದಂತೆ ಕಣ್ಣುಗಳನ್ನುಳ್ಳವನಾಗಿ, ಹದಿನಾಲ್ಕು ಲೋಕಗಳನ್ನೂ ಸೃಷ್ಟಿಸಿ, ಕಾಪಾಡಿ, ಸಂಹರಿಸುವವನೂ ಆಗಿ, ಅನುಗ್ರಹಿಸುವವನೂ, ಅಂತರ್ಯಾಮಿಯೂ ಆಗಿದ್ದು ಎಲ್ಲರನ್ನೂ (ಅವರವರ ಕರ್ಮಾನುಸಾರದಂತೆ) ನಿಗ್ರಹಿಸುವವನೂ, ಶಾಶ್ವತನೂ ಆಗಿ (ಯಾವಾಗಲೂ ಎಲ್ಲೆಲ್ಲಿಯೂ ಇರುವವನಾಗಿ) ಶಂಖ, ಚಕ್ರ, ಗದೆ, ಕಮಲಗಳಿಂದ ಶೋಭಿತನಾದ ಚತುರ್ಭುಜವನ್ನುಳ್ಳವನಾಗಿ, ಮುತ್ತಿನ ಕೊಡೆಯಂತೆ ಶೋಭಿಸುವ ಆದಿಶೇಷನ ಸಾವಿರ ಹೆಡೆಗಳಿಂದ ಕೂಡಿದವನಾಗಿ ಹೊಸ ಆಭರಣಗಳಾದ ಹಾವುಗಳಿಂದಲೂ, ಸ್ವರ್ಣವಸ್ತ್ರಗಳಿಂದಲೂ, ಪುಷ್ಪಗಳಿಂದಲೂ, ಸುವಾಸನಾ ಭರಿತ ಚಂದನ ಲೇಪನದಿಂದ ಅಲಂಕರಿಸಲ್ಪಟ್ಟ ಶರೀರ ಸಂಪತ್ತನ್ನುಳ್ಳವನಾಗಿ, ಮಂದಸ್ಮಿತ ಮುಖಾರವಿಂದನಾದ ಆ ಮಹಾವಿಷ್ಣುವು ಶುಕ ಮಹರ್ಷಿಯ ತಪಸ್ಸಿನಿಂದ ಸಂತೋಷಗೊಂಡು ಪ್ರತ್ಯಕ್ಷನಾದನು - ಎಂದಿರುವ ವಚನಗಳಲ್ಲಿ ಆದಿಶೇಷನ ಸಾವಿರ ಹೆಡೆಗಳನ್ನೂ ಮುತ್ತಿನಕೊಡೆಯಾಗಿ ಉಳ್ಳವನೂ, ಹಾವುಗಳನ್ನೇ ಆಭರಣವಾಗಿ ಧರಿಸಲ್ಪಟ್ಟ ದಿವ್ಯ ಶರೀರವು - ಎಂದಿರುವುದರಿಂದ, ಮುಂಚೆ ಹೇಳಿದ ಸಾತ್ವತ ಸಂಹಿತೆಯಲ್ಲಿ ಆದಿಶೇಷನನ್ನು ಹಾಸಿಗೆಯಾಗಿಯೂ, ಆಭರಣವಾಗಿಯೂ ಉಳ್ಳವನು ಎಂದು ಹೇಳಲ್ಪಟ್ಟ ಭಾಗವು ಪ್ರತಿಪಾದಿಸಲ್ಪಟ್ಟಿದೆ.

ಇದರಂತೆಯೇ, ಈ ಪಾದ್ಮ ಪುರಾಣದಲ್ಲಿಯೇ, ಶ್ರೀ ಸ್ವಾಮಿ ಪುಷ್ಕರಿಣಿಯ ತಟದಲ್ಲಿ ಆ ಶುಕ ಮಹರ್ಷಿಗಾಗಿಯೇ ಭಗವಾನ್ ಶ್ರೀನಿವಾಸನು ಪ್ರತ್ಯಕ್ಷವಾದುದನ್ನು ವರ್ಣಿಸುವ ಘಟ್ಟದಲ್ಲಿ, ನಾಲ್ಕನೆಯ ಅಧ್ಯಾಯದ ೨೭ ಎಂಬ ಸಂಖ್ಯೆಯಿಂದ ಸೂಚಿತವಾದ ವಚನಗಳಲ್ಲಿ ವರ್ಷಾಕಾಲದ ನೀಲಮೇಘಗಳ ಸರಣಿಯಂತೆ

ಸುಂದರವಾದ ಸುತ್ತಿಕೊಂಡಿರುವ ಕೇಶ ಸಮೃದ್ಧಿಯುಳ್ಳವನು ಎಂದೂ, ಹಾವುಗಳಿಂದ ಶೋಭಿತನಾದ ತೋಳ್ಗಳನ್ನು ಪಡೆದಿರುವವನೆಂದೂ ಇರುವುದರಿಂದ "ಜಟಾಧಾರಿತ್ವ " (ಜಟೆಯನ್ನು ಹೊಂದಿರುವುದೂ) ಮತ್ತು ನಾಗಾಭರಣವನ್ನು ಧರಿಸಿರುವುದೂ ಹೇಳಲ್ಪಟ್ಟಿದೆ.

ಇದೇ ರೀತಿಯೇ, ಹತ್ತನೆಯ ಅಧ್ಯಾಯದ ೩೩ ಎಂಬ ಸಂಖ್ಯೆಯಿಂದ ಸೂಚಿತವಾದ ವಚನದಲ್ಲಿ ಬ್ರಹ್ಮನೇ ಮುಂತಾದವರಿಂದ ಸ್ತುತಿಸಲ್ಪಟ್ಟು, ಸ್ವಾಮಿ ಪುಷ್ಕರಿಣಿಯ ತೀರದಲ್ಲಿ ಶ್ರೀನಿವಾಸನ ಆವಿರ್ಭಾವವನ್ನು ಹೇಳುವ ಸಂದರ್ಭದಲ್ಲಿ - ಪಾಪ ಪುಣ್ಯಗಳೆಂಬ ಕರ್ಮಗಳಿಗೆ ವಶ್ಯನಲ್ಲದ (ಸ್ವತಂತ್ರನಾದ) ಪರಮ ಪುರುಷನು ಈ ಸ್ತುತಿಯಿಂದ ಸಂತೋಷಗೊಂಡವನಾಗಿ, ಈ ವಿಮಾನದಲ್ಲಿ, ಸಹಸ್ರ ಸೂರ್ಯ ಪ್ರಕಾಶದಿಂದಲೂ, ಸಹಸ್ರ ಚಂದ್ರರಿಗೆ ಸಮನಾದ ಶೀತಲವಾದ ಕಾಂತಿಯಿಂದಲೂ, ಸಹಸ್ರಾಗ್ನಿಜ್ವಾಲೆಗಳು ಒಂದುಗೂಡಿದಂತೆ ಪ್ರಸಿದ್ಧವಾದ ಕಲ್ಯಾಣ ಗುಣ ಸಂಪನ್ನನಾಗಿ ದರ್ಶನವನ್ನು ನೀಡಿದನು - ಎಂದು ಭಗವಾನ್ ಶ್ರೀನಿವಾಸನಿಗೆ ಶಾಂತವೂ, ಘೋರವೂ ಆದ ಎರಡು ಆಕಾರಗಳು ಉಂಟೆಂದು ಹೇಳಿರುವುದರಿಂದ, ಇಲ್ಲಿಯೂ ಸಾತ್ವತ ಸಂಹಿತೆಯಲ್ಲಿ ಹೇಳಿರುವುದಕ್ಕೆ ಸಾಮ್ಯತೆಯು ಪ್ರತಿಪಾದಿಸಲ್ಪಟ್ಟಿದೆ.

ಹೀಗೆಯೇ ಭವಿಷ್ಯೋತ್ತರ ಪುರಾಣದಲ್ಲಿ, ಹನ್ನೊಂದನೆಯ ಅಧ್ಯಾಯದಲ್ಲಿ - ಶ್ರೀನಿವಾಸನಿಗೂ ಪದ್ಮಾವತಿಗೂ ನಡೆಯುವ ವಿವಾಹ ಘಟ್ಟದಲ್ಲಿ, ಭಗವಾನ್ ಶ್ರೀನಿವಾಸನಿಗೆ ಆಭರಣವನ್ನು ಸಮರ್ಪಿಸುವ ಸಂದರ್ಭದಲ್ಲಿ ಎರಡು ನಾಗಾಭರಣಗಳನ್ನೂ, ತೋಳ್ಬಳೆಗಳು ಮುಂತಾದುವುಗಳನ್ನು ಕೊಟ್ಟನು ಎಂದು ಶೇಷಾಚಲವಾಸಿಯೂ, ಶೇಷಶಯನನೂ, ಶೇಷಾಭರಣನೂ ಆದ ಈ ದೇವನಿಗೆ, ಶೇಷನು (ಹಾವು) ಅತ್ಯಂತ ಪ್ರಿಯವಾದವನೆಂದೂ ತಿಳಿದ ಆಕಾಶರಾಜನಿಂದ ಎರಡು ನಾಗಾಭರಣಗಳು ಸಮರ್ಪಿಸಲ್ಪಟ್ಟುದಾಗಿ ಹೇಳಲ್ಪಡುತ್ತದೆ.

ಭವಿಷ್ಯೋತ್ತರ ಪುರಾಣದ ವೆಂಕಟೇಶರಹಸ್ಯಾಧ್ಯಾಯದಲ್ಲಿ ೮೦ ಎಂಬ ಸಂಖ್ಯೆಯಿಂದ ಸೂಚಿಸಲ್ಪಟ್ಟ ವಚನದಲ್ಲಿ, ಪಾರ್ವತೀ ದೇವಿಗೆ ಪರಮರಹಸ್ಯವಾದ, ವಿಮಾನಸ್ಥನಾದ ಶ್ರೀನಿವಾಸ ದೇವನ ಧ್ಯಾನಿಸತಕ್ಕ ಆಕಾರವನ್ನು ಉಪದೇಶಿಸುವ ಪರಮಶಿವನಿಂದ - ಇಂದ್ರನೀಲಮಣಿಯಂತೆ ಕಪ್ಪಾಗಿ ರಮಣೀಯವಾದ ನಾಗಾಭರಣಗಳನ್ನು ಧರಿಸುವುದು, ಚಕ್ರ ಮತ್ತು ಶಂಖಗಳನ್ನು ಧರಿಸುವುದು, ಅಭಯ ಆನಾಮ ಮುದ್ರೆಗಳು ಇವುಗಳಿಂದ ಅಲಂಕರಿಸಲ್ಪಟ್ಟುವುಗಳಾದ ಉತ್ತಮ (ನೀಳವಾದ) ಬಾಹುಗಳೊಂದಿಗೆ ಕೂಡಿದವನು ಎಂದೂ, ಯಾವನ ಶ್ರೀನಾಮವು (ಹೆಸರು) ಉತ್ತಮವಾದ ವೇದವಾಗಿರುವ ಬೃಹತ್ ಸಾಗರದಲ್ಲಿ ಶೋಭಿಸುತ್ತಿರುವ ಕೌಸ್ತುಭಮಣಿಯಂತೆಯೂ, ತನ್ನನ್ನು ಹಿಡಿದ ಅಜ್ಞಾನಾಂಧಕಾರವೆಂಬ ದುಃಖವನ್ನು

ಹೋಗಲಾಡಿಸುವವನೂ, ನನ್ನ (ನಮ್ಮ) ಪುತ್ರನಾದ ಸ್ಕಂದನಿಗೆ ಒಳ್ಳೆಯ ಜೀವನವನ್ನು ಕೊಡುವವನೂ, ಕೇಳುವ ವರಗಳನ್ನು ಎಲ್ಲರಿಗೂ ನೀಡುವವನೂ, ಅತ್ಯುತ್ತಮವಾದ ನಾಗಾಭರಣವನ್ನು ಧರಿಸಿರುವವನೂ, ಸಕಲ ವಿಧ ಸಂಪತ್ತುಗಳಿಗೆ ಮೂಲ ಕಾರಣನಾದವನೂ, ತನ್ನನ್ನೇ ವರವಾಗಿ ಕೊಡುವವನೂ ಆದ, ಅಂಥಹ ಭಗವಾನ್ ಶ್ರೀ ವೇಂಕಟೇಶನನ್ನು ಧ್ಯಾನಿಸುತ್ತೇನೆ - ಎಂದು ಭಗವಾನ್ ಶ್ರೀನಿವಾಸನ ದಿವ್ಯರೂಪವು ನಾಗಾಭರಣ ತೊಟ್ಟ ತೋಳುಗಳನ್ನುಳ್ಳದಾಗಿ ಹೇಳಲ್ಪಡುತ್ತದೆ. (ಇಲ್ಲಿ ಅಭಯ ಮುದ್ರೆ ಎಂಬುದು ತನ್ನ ಪಾದಾರವಿಂದಗಳನ್ನು ತೋರಿಸುವುದರ ಮೂಲಕ - ಅಂಜಬೇಡ ಎಂದು ತಿಳಿಸುವ ಬಲಹಸ್ತದ ರಚನೆ. ಆ ನಾಮ ಮುದ್ರೆ - ತೂಗುಬಿಟ್ಟ, ಸೊಂಟದ ಕೆಳಗೆ ಇಡಲ್ಪಟ್ಟ ಹಸ್ತದ ರಚನೆ).

ಈ ರೀತಿಯಾಗಿಯೇ ಬ್ರಹ್ಮಾಂಡ ಪುರಾಣದ ಎರಡನೆಯ ಅಧ್ಯಾಯದಲ್ಲಿ ಭಗವಂತನು ಸಂತೋಷದಿಂದ ವಿಕಸಿತವಾದ ಕಣ್ಣುಗಳನ್ನುಳ್ಳವನಾಗಿ, ತನ್ನ ಮುಂದೆ ನಿಂತ ಆದಿಶೇಷನನ್ನು ಕರೆದು ಮೇಘ ಘರ್ಜನೆಯಂತೆ ಗಂಭೀರವಾದ ಮಾತುಗಳಿಂದ ''ಎಲೈ ದೋಷ ರಹಿತನಾದ ಅನಂತನೇ! ನಿನ್ನನ್ನು ಬಿಟ್ಟರೆ ನನಗೆ ಪ್ರಪಂಚದಲ್ಲಿ ಪ್ರಿಯವಾದವನು ಮತ್ತೊಬ್ಬನಿಲ್ಲ. ಆದುದರಿಂದ ನನಗೆ ಪ್ರಿಯವಾದುದೊಂದು ಕೆಲಸವು ನಿನ್ನಿಂದ ಮಾಡಲ್ಪಡಬೇಕು. ನಾರದರು ಹೇಳಿದ ಮಾತುಗಳೆಲ್ಲವನ್ನೂ ನೀನು ಕೇಳಿದೆಯಲ್ಲವೇ? ಕ್ರೀಡಿಸುವುದಕ್ಕಾಗಿ ಸೂಕ್ತವಾದ ಜಾಗದಲ್ಲಿ ವಾಸಿಸಬೇಕೆಂಬುದು ನನ್ನ ಮನಸ್ಸು. ಭೂಮಂಡಲದಲ್ಲಿ ನೀನು ಪರಮ ಶ್ರೇಷ್ಠವಾದ ಬೆಟ್ಟದ ರೂಪವನ್ನು ತಾಳಿ ವಾಸಿಸುವವನಾಗು. ನಿನ್ನ ಹೆಡೆಗಳ ಮಂಡಲಗಳ ಕೆಳಭಾಗದಲ್ಲಿ ನಾನು ಶ್ರೀ ಮಹಾಲಕ್ಷ್ಮಿಯೊಂದಿಗೆ ವಾಸಿಸಬೇಕು'' ಎಂದು ಹೇಳಲು, ''ದೇವಾಧಿದೇವನೇ! ಅನಂತನಾದ ಕಿಂಕರನಾದ ನಾನು ಬೆಟ್ಟದಾಕಾರವನ್ನು ಧರಿಸುತ್ತೇನೆ. ತಾವು ಲಕ್ಷ್ಮೀದೇವಿಯೊಂದಿಗೆ ಕೂಡಿ, ದಾಸನ ಹೆಡೆ ಮಂಡಲಗಳ ಕೆಳಗೆ ವಾಸ ಮಾಡುವವರಾಗಿ'' - ಎಂದು ಆದಿಶೇಷನು ಪ್ರತ್ಯುತ್ತರವನ್ನು ನೀಡಿದನು - ಎಂಬಿವೇ ಮುಂತಾದ ವಚನಗಳಿಂದಲೂ, ಭಗವಾನ್ ನಾರಾಯಣನಿಗೆ ಅತ್ಯಂತ ಪ್ರಿಯನಾದ ಆದಿಶೇಷನು ಭಗವಂತನ ಆಜ್ಞೆಯಂತೆ ಭೂಲೋಕದಲ್ಲಿ ಆ ದೇವನ ಭೋಗಕ್ಕೆ ಸಹಾಯ ಮಾಡುವುದಕ್ಕಾಗಿ ಸುಖವಾಗಿ, ಶಯನಿಸಿಕೊಳ್ಳಲು ಅನುಕೂಲವಾಗುವಂಥಹ ಕ್ರೀಡಾವಿಹಾರ ಬೆಟ್ಟವಾಗಿ ಪರಿವರ್ತನೆ ಹೊಂದಿದುದು ಹೇಳಲ್ಪಟ್ಟಿರುವುದರಿಂದ, ಈ ಪುರಾಣದಿಂದಲೂ, ಎಲ್ಲ ಲೋಕದವರಿಂದಲೂ ಧ್ಯಾನಿಸತಕ್ಕವರೂ, ಭೂಲೋಕದಲ್ಲಿರುವವರೂ, ಆದಿಶೇಷನನ್ನೇ ಶಯನವಾಗಿಯೂ ಆಭರಣವಾಗಿಯೂ ಪಡೆದವರೂ - ಎಂದು ಸಾತ್ವತ ಸಂಹಿತೆಯಲ್ಲಿ ಹೇಳಿರುವ ಭಾಗವೇ ಇಲ್ಲಿ ಪ್ರತಿಪಾದಿಸಲ್ಪಟ್ಟಿದೆ.

ಇಲ್ಲಿ 'ಶಯನ' ವೆಂಬುವುದು (ಮಲಗುವ ಜಾಗದಲ್ಲಿರುವ ಹಾಸಿಗೆಯನ್ನು ಸೂಚಿಸುವುದಾದರೂ) ಭೋಗಕ್ಕೆ ಸಹಾಯಕವಾಗಿ ಸುಖವಾಗಿ ನಿದ್ರಿಸಲು ಬೇಕಾದ ಜಾಗವಾಗಿ, ಕ್ರೀಡಿಸಲು ಸೂಕ್ತವಾದ ಬೆಟ್ಟವನ್ನೂ ಒಳಪಡಿಸಬಲ್ಲದುದರಿಂದಲೂ ಭಗವಂತನಿಗೆ ಕಾರಣನಾಮವಾದ ''ಭೂಲೋಕದಲ್ಲುಳ್ಳವರು'' ಎನ್ನುವುದನ್ನು ಅನಂತನನ್ನು ಶಯನವಾಗಿ ಕೊಂಡವರು. ಎಂಬ ಕಾರಣ ನಾಮದೊಂದಿಗೆ ಸೇರಿಸಿ ನೋಡಿದಾಗ, ಭಗವಂತನ ಕ್ರೀಡೆಗಾಗಿ ಆದಿಶೇಷನು ಭೂಲೋಕದಲ್ಲಿ ಬೆಟ್ಟವಾಗಿ ರೂಪುಗೊಂಡದ್ದನ್ನು ಜ್ಞಾಪಕಪಡಿಸುವುದಾದುದರಿಂದಲೂ, ಪಾದ್ಮ ಪುರಾಣದ ಹನ್ನೊಂದನೆಯ ಅಧ್ಯಾಯದಲ್ಲಿ ೩೪ ಎಂಬ ಸಂಖ್ಯೆಯಿಂದ ಸೂಚಿಸಲ್ಪಟ್ಟ ವಚನದಲ್ಲಿ, ಶ್ರಿಯಃ ಪತಿಯು ಗರುಡಾರೂಢನಾಗಿ ಆದಿಶೇಷ ಬೆಟ್ಟವನ್ನು ಸೇರಿ, ಅಲ್ಲಿರುವ ಸುಂದರವಾದ ಸ್ವಾಮಿ ಪುಷ್ಕರಿಣಿಯ ತಟದಲ್ಲಿ, ಏಕಾಂತವಾದ ಪ್ರದೇಶವೊಂದರಲ್ಲಿ ರಮಿಸುತ್ತಿದ್ದಾನೆ - ಎಂದು ಬೆಟ್ಟವಾಗಿ ಪರಿವರ್ತನೆ ಹೊಂದಿದ ಆದಿಶೇಷನು, ಹಾಸಿಗೆಯಂತೆ ಭೋಗಕ್ಕಾಗಿಯೂ, ಸುಖವಾಗಿ ನಿದ್ರಿಸುವ ಸ್ಥಾನವಾಗಿಯೇ ಹೇಳಲ್ಪಡುವುದರಿಂದ ಈ ರೀತಿ ಪರಿಗಣಿಸುವುದೇ ಸೂಕ್ತವಾಗುತ್ತದೆ.

ಈ ರೀತಿಯೇ ಬ್ರಹ್ಮಾಂಡ ಪುರಾಣಕ್ಕೇ ಸೇರಿದ ಶ್ರೀ ವೇಂಕಟೇಶ್ವರ ಸಹಸ್ರನಾಮಾಧ್ಯಾಯದಲ್ಲಿ (ಕಪರ್ದೀ ಕಾಮಹಾರೀ) ಜಟಾಧಾರೀ ಮತ್ತು ಇತರ ವಿಷಯಗಳಲ್ಲಿ ಕಾಮ (ಆಸೆ)ವನ್ನು ಹೋಗಲಾಡಿಸುವವರು ಎಂಬುದರಿಂದಲೂ, ಶಂಖವನ್ನು ಧರಿಸಿದವರೂ, ಕಮಲದ ಹೂಗಳಂತೆ ಕೈಗಳನ್ನುಳ್ಳವರೂ (ಅಥವಾ ಕಮಲದ ಹೂಗಳನ್ನು ಕೈಗಳಲ್ಲಿ ಧರಿಸಿದವರೂ) ಎಂಬುದರಿಂದಲೂ, ಕುಂಕುಮಾಂಕಿತ ದಿವ್ಯದೇಹವುಳ್ಳವರು, ಹಾವುಗಳನ್ನು ಬಳೆಗಳಾಗಿ ಧರಿಸಿದವರೂ, ವಿಜಯವನ್ನು ತರುವ ಅಂಕುಶವನ್ನು ಧರಿಸಿದವರು, ಹಾವುಗಳನ್ನು ಬಳೆಗಳಾಗಿ ಎಂಬುವುಗಳಿಂದಲೂ - ವೇಲಾಯುಧ (ಶಕ್ತ್ಯಾಯುಧ)ವನ್ನು ಧರಿಸಿದವರೂ, ಮುತ್ತಿನ ಹಾರಗಳನ್ನು ಧರಿಸಿದವರು - ಎಂಬುವುದರಿಂದಲೂ, ಜಟಾಧಾರಿಯಾಗಿ ನಾಗಾಭರಣವನ್ನು ತೊಟ್ಟು, ಶಂಖ, ಚಕ್ರ, ವೇಲ್ ಮುಂತಾದ ಆಯುಧಗಳನ್ನು ಧರಿಸಿರುವುದು ಹೇಳಲ್ಪಟ್ಟಿದೆ. ಘೋರ ಮತ್ತು ಶಾಂತಗಳಾದ ಈ ಎರಡು ಆಕಾರಗಳಿಗೂ ತಕ್ಕ ವೇಷ, ಆಭರಣ, ಆಯುಧ ಇವುಗಳನ್ನು ಧರಿಸಿರುವುದನ್ನು ಹೇಳುವ ಈ ನಾಮಧೇಯಗಳಿಂದಲೂ ಮುಂಚೆ ಹೇಳಿದ ಸಾತ್ವತ ಸಂಹಿತೆಯ ಸಮಾಚಾರವೇ ಪ್ರತಿಪಾದಿಸಲ್ಪಡುತ್ತದೆ.

''ಕಪರ್ದೀ ಕಾಮಹಾರೀ'' ಎಂಬ ಪದಗಳು (ಕಾರಣವನ್ನು ಗುರುತಿಸಿಹೇಳುವ ಹೆಸರುಗಳಾಗಿ) ಜಟೆಯನ್ನುಳ್ಳವನು, ಕಾಮನನ್ನು (ಮನ್ಮಥನನ್ನು)

ನಾಶಮಾಡಿದವನು ಎಂಬ ಅರ್ಥಗಳು ಉಂಟಾಗುವುದರಿಂದ ಇವುಗಳು ಪರಮಶಿವನನ್ನು ಹೇಳಿ ನಂತರ, ಶರೀರವನ್ನು ಹೇಳುವ ಶಬ್ದಗಳು, ಅದರೊಳಗಿರುವ ಆತ್ಮನನ್ನು ತಿಳಿಸುವ ರೀತಿಯಲ್ಲಿ, ಆ ಪರಮಶಿವನನ್ನು ಶರೀರವಾಗಿಕೊಂಡ ಪರಮಾತ್ಮನಾದ ಶ್ರೀಮನ್ನಾರಾಯಣನನ್ನು ಹೇಳುತ್ತವೆ ಎಂದೂ ತೆಗೆದು ಕೊಳ್ಳಬಹುದು. . ಆದರೂ, ಈ ಸಹಸ್ರನಾಮಸ್ತೋತ್ರದಲ್ಲಿ ಶ್ರೀ ವೇಂಕಟಾಚಲಾದ್ರಿನಾಥನನ್ನೇ ಹೇಳುವ ಹಲವು ನಾಮಗಳು (ಹೆಸರುಗಳು) ಓದಲ್ಪಡುವುದರಿಂದ ಅವುಗಳಿಗೆ ಅನುಸಾರವಾಗಿ "ಕಪರ್ದೀ ಕಾಮಹಾರೀ" ಎಂಬ ಹೆಸರುಗಳೂ (ಮುಂಚೆ ಹೇಳಿದಂತೆ ಮೊದಲು ಪರಮಶಿವನನ್ನು ಹೇಳಿ ನಂತರ ಅವನಿಗೆ ಆತ್ಮನಾದ ಶ್ರಿಯಃ ಪತಿಯನ್ನು ಹೇಳುತ್ತವೆ ಎಂದು ಪರಿಗಣಿಸುವುದಲ್ಲದೆಯೇ) ನೇರವಾಗಿ ಆ ವೇಂಕಟಾಚಲಾಧೀಶನನ್ನೇ ಹೇಳುವುದಾಗಿ ಪುರಾಣಕಾರರುಗಳು ತಿಳಿದು ಕೊಂಡಿರುವುದು ಸಾಧ್ಯವಾದುದರಿಂದಲೂ, ಇತರ ಪುರಾಣ ವಚನಗಳೊಂದಿಗೆ ವ್ಯತ್ಯಾಸ ಹೊಂದದಂತೆ ಏಕಾಭಿಪ್ರಾಯವಾಗಿರಬೇಕಾದುದರಿಂದಲೂ, "ಕಪರ್ದೀ ಕಾಮಹಾರೀ" ಎಂಬ ಪದಗಳಿಗೆ ಜಟಾಧಾರೀ ಮತ್ತು ಹೊರ ವಿಷಯಗಳಲ್ಲಿ (ವಿಷಯಾಂತರಗಳಲ್ಲಿ) ಆಸೆಯನ್ನು ಹೋಗಲಾಡಿಸುವವರೂ ಎಂದು ಕ್ರಮವಾಗಿ ಅರ್ಥವನ್ನು ಮಾಡಿಕೊಳ್ಳಲು ಯಾವ ಅಡ್ಡಿಯೂ ಇಲ್ಲದಿರುವುದರಿಂದ ಈ ಶಬ್ದಗಳು ಕಾರಣಾರ್ಥಕ ಶಬ್ದಗಳಾಗಿಯೇ ಉಳಿದು ನೇರವಾಗಿ ಶ್ರೀವೇಂಕಟಾಚಲಾಧೀಶ್ವರನನ್ನೇ ಹೇಳುತ್ತವೆ ಎಂದು ತಿಳಿಯುವುದು ಯೋಗ್ಯವಾದುದು ಎಂದು ತಿಳಿಯಿರಿ (ತಿಳಿದುಕೊಳ್ಳಿ)

ಇಲ್ಲಿಯವರೆಗೂ ಹೇಳಿದುದೆಲ್ಲವುಗಳಿಂದ ಶ್ರೀಮಹಾವಿಷ್ಣುವಿಗೆ ನಾಗಾಭರಣವು ಉಂಟೆಂಬುದು ಪುರಾಣವಾಕ್ಯಗಳಿಂದ ಪ್ರತಿಪಾದಸಲ್ಪಟ್ಟುದರಿಂದ, ಈ ನಾಗಾಭರಣವಿರುವುದನ್ನು ಕೊಂಡು ವೇಂಕಟಾಧೀಶನನ್ನು ಬೇರೆ ದೇವತೆಯನ್ನಾಗಿ ಮಾಡುವುದು ಸರಿಯಾಗುವುದಿಲ್ಲ.

ಪ್ರಕೃತ, ಬಿಲ್ವಪತ್ರಾರ್ಚನೆ, ಶಂಖ ಚಕ್ರಗಳನ್ನು ಧರಿಸದಿರುವಿಕೆ, ಜಟಾಧಾರಿತ್ವ, ನಾಗಾಭರಣಧಾರಣೆ ಮಾಡಿರುವಿಕೆ ಎಂಬುವುಗಳು ಬೇರೆ ದೇವತೆಯೆಂದು ತಿಳಿಸತಕ್ಕವುಗಳಾಗಿ ಈ ಶೈವರುಗಳು ಹೇಳಿದ ಲಿಂಗಗಳು (ಅನುಮಾನವುಂಟುಮಾಡುವುವುಗಳು) ಕೆಡಲ್ಪಟ್ಟುವು ಎಂದಾಯಿತು.

ಮೇಲೂ, ಜಟೆಯೂ ನಾಗಾಭರಣವೂ ಪರಮಶಿವನಲ್ಲಿ ಇರುವುದಾಗಿ ಅಧಿಕವಾಗಿ ಪ್ರಸಿದ್ಧಿ ಹೊಂದಿದ್ದರೂ, ಅವು ವೇಂಕಟಾಚಲಾಧೀಶನನ್ನು ಕುಮಾರಸ್ವಾಮಿಯೆಂದು ತೋರಿಸುವುದಕ್ಕೇ ಸಾಕಾದ ಕಾರಣಗಳು ಎಂದು

ಹೇಳುವುದು ಒಂದುಕಾಲಕ್ಕೂ(ಖಂಡಿತವಾಗಿಯೂ) ಸಾಧ್ಯವಿಲ್ಲ.

ಈ ರೀತಿ ಶೈವರುಗಳು ಹೇಳಿದ ಲಿಂಗಗಳು (ಅನುಮಾನವುಂಟುಮಾಡುವುವುಗಳು - ಕಾರಣಗಳು - ಹೇತುಗಳು) ಕೆಟ್ಟು ಹೋದುದರಿಂದಲೂ, ನಾವು ತಿಳಿಸಿದ ವಕ್ಷಃಸ್ಥಲದಲ್ಲಿ ಶ್ರೀದೇವಿಯು ಅಲಂಕರಿಸಿರುವಿಕೆ, ಶ್ರೀವತ್ಸವೆಂಬ ಮಚ್ಚೆಯಿರುವಿಕೆ, ನಾಲ್ಕು ಹಸ್ತಗಳ ರಚನೆ ಹಲವಾರು ಲಿಂಗಪ್ರಮಾಣಗಳು ಶ್ರೀವೆಂಕಟಾಚಲಾಧೀಶನನ್ನು ನಾರಾಯಣನೆಂದೇ ಸ್ಪಷ್ಟವಾಗಿ ಹೇಳುವ ಪುರಾಣವಚನಗಳು ಕೆಟ್ಟು ಹೋಗದಿರುವ ದೆಸೆಯಿಂದ, ಈ ಶ್ರೀವೇಂಕಟೇಶನು ಮುಂಚೆ ತಿಳಿಸಿದ ಸಾತ್ವತ ಸಂಹಿತೆಯ ವಚನಗಳಲ್ಲಿ ಹೇಳಿದ ಲಕ್ಷಣಗಳನ್ನು ಹೊಂದಿರುವುದಾಗಿ, ಬೇರೆಲ್ಲಿಯೂ ಮುಂಚೆ ಕಂಡರಿಯದಂಥಹುದಾದ ದಿವ್ಯವಾದ ರೂಪವುಳ್ಳವನಾದ ಶ್ರೀನಿವಾಸನೆಂಬ ನಾಮಧೇಯವುಳ್ಳ ಬಗವಾನ್ ನಾರಾಯಣನೇ ಆಗುತ್ತಾನೆ. ಯಾವ ಕಾಲಕ್ಕೂ ಸ್ಕಂದನಾಗಲಾರನು ಎಂಬುದು ಅಂತಿಮವಾಗಿ ಸಿದ್ಧಿ ಹೊಂದಿತು.

ಇದನ್ನು ಇಲ್ಲಿ ಹೇಳಿಕೊಳ್ಳುವುದು ಅತಿಮುಖ್ಯವಾದದ್ದು ಮತ್ತು ಗಮನಿಸ ಬೇಕಾದುದು, ''ಏಕೋ ಹವೈ ನಾರಾಯಣ ಆಸೀತ್ ನ ಬ್ರಹ್ಮಾ ನೇಶಾನಃ'' - ಸೃಷ್ಟಿಗೆ ಮುಂಚೆ ನಾರಾಯಣನೆಂಬ ಒಬ್ಬನೇ ಇದ್ದನು. ಬ್ರಹ್ಮನಿರಲಿಲ್ಲ - ಶಿವನೂ ಇರಲಿಲ್ಲ - (ಮಹೋಪನಿಷತ್ತು) ಎಂಬಿವೇ ಮೊದಲಾದ ಎಲ್ಲೆ ಇಲ್ಲದ ಉಪನಿಷತ್ತುಗಳು ಶ್ರೀಮನ್ನಾರಾಯಣನನ್ನೇ ಎಲ್ಲಾ ಲೋಕಗಳ ಸೃಷ್ಟಿ, ಸ್ಥಿತಿ, ಲಯಗಳಿಗೆ ಕಾರಣವಾಗಿಯೂ, ಅವನಿಂದಲೇ ಬ್ರಹ್ಮನೇ ಮುಂತಾದವರುಗಳು ಬೇರೆ ಬೇರೆ ರೂಪವನ್ನೂ, ಗುಣಗಳನ್ನೂ, ಬೇರೆ ಬೇರೆ ಕೆಲಸಗಳಲ್ಲಿ ಅಧಿಕಾರಗಳನ್ನೂ, ಹೊಂದಿದರು ಎಂಬುವುಗಳನ್ನು ತಿಳಿಸುತ್ತವೆ.

ಕಾರಣಗಳಲ್ಲಿ ಇಲ್ಲದ ಗುಣಗಳು ಕಾರ್ಯಗಳಲ್ಲಿ ಬಂದು ಸೇರುತ್ತವೆ ಎಂಬುದು ಇಲ್ಲಿಯವರೆಗೂ ಎಲ್ಲಿಯೂ ಕಂಡರಿಯದ ವಿಷಯವಾಗುತ್ತದೆ. - ಕಾರಣಗಳಲ್ಲಿ ಕಂಡ ಗುಣಗಳೇ, ಕಾರ್ಯ ವಸ್ತುಗಳಲ್ಲಿ ಕಂಡು ಬರುತ್ತದೆ. ಆದ್ದರಿಂದ ಕಾರ್ಯದಲ್ಲಿರುವ ಗುಣಗಳು ಸೂಕ್ಷ್ಮಶಕ್ತಿರೂಪವಾಗಿಯಾದರೂ ಕಾರಣಗಳಲ್ಲಿ ನಿಶ್ಚಯವಾಗಿ ಇದ್ದೇ ತೀರಬೇಕು.

ಈ ವಿಧವಾಗಿ ನಿಖಿಲ ಜಗದ್ಬೀಜಭೂತನಾಗಿ, ''ನಾನು ಅನೇಕ ವಸ್ತುಗಳಾಗಿ ಆಗುತ್ತೇನೆ'' ಎಂದು ಸಂಕಲ್ಪಮಾಡಿದವನಾದ ಭಗವಾನ್ ಶ್ರೀಮನ್ನಾರಾಯಣನಿಗೆ, ಎಲ್ಲಾ ಲೋಕಗಳ ಸೃಷ್ಟಿ, ಸ್ಥಿತಿ ಮತ್ತು ಲಯಗಳನ್ನು ಮಾಡುವ ಶಕ್ತಿಯಾದಂಥಹ ಗುಣವು ತುಂಬಿರುವುದರಿಂದ, ಅವನಿಂದ ಉಂಟಾಗಿ, ಸೃಷ್ಟಿಮಾಡುವಿಕೆ, ನಾಶಮಾಡುವಿಕೆ ಮುಂತಾದ ಆಯಾಯಾ ವೃತ್ತಿಗಳಲ್ಲಿ ಅಧಿಕಾರವನ್ನು ಪಡೆದ

ಬ್ರಹ್ಮ ಶಿವ ಮುಂತಾದವರಲ್ಲಿ ಅವನಿಂದಲೇ ಆ ಶಕ್ತಿಯು ಅಂಟಿಕೊಂಡಿತೆಂದು ಹೇಳಬೇಕಾಗಿರುವುದರಿಂದ ಬ್ರಹ್ಮನೇ ಮುಂತಾದವರಲ್ಲಿ ಇರುವ ಸೃಷ್ಟಿಮಾಡುವುದು, ನಾಶಮಾಡುವುದು ಮುಂತಾದ ವೃತ್ತಿಗಳಿಗೆ ತಕ್ಕುದಾದ ಶಾಂತ, ಕ್ರೂರ ಮುಂತಾದ ರೂಪಗಳೇನು, ಆಯುಧಗಳೇನು, ಇವುಗಳಿಂದಾದ ವೇಷಗಳಿಗೆ ಮೂಲಕಾರಣವಾದ ಅಂಥಹ ವೇಷವು, ಮೂಲಕಾರಣನಾದ ಶ್ರೀಮನ್ನಾರಾಯಣನ ಒಂದು ರೂಪದಲ್ಲಿ ಅಲ್ಲಗಳೆಯಲಾಗದಂತೆ ಅವಶ್ಯಕವಾಗಿ ಒಪ್ಪಿಕೊಳ್ಳಬೇಕಾಗಿರುವುದರಿಂದ, ಸೃಷ್ಟಿ, ಸ್ಥಿತಿಗಳಿಗೆ ತಕ್ಕ ಶಾಂತರೂಪ, ಅದಕ್ಕೇ ಬೇಕಾದಂಥಹ ಆಯುಧಗಳು, ಇವುಗಳಿಂದ ಕೂಡಿದ ವೇಷದಂತೆ, ನಾಶನಕ್ಕಾಗಿಯೂ ಇರುವಂತೆ, ತಕ್ಕ ಘೋರ ರೂಪ, ಅದಕ್ಕೆ ಸಂಬಂಧಿಸಿದಂತೆ ಭಯಂಕರವಾದ ಜಟೆ, ನಾಗಾಭರಣ, ಶಕ್ತ್ಯಾಯುಧ, ಪರಶು (ಕೊಡಲಿ) ಮುಂತಾದ ಆಯುಧಗಳೊಂದಿಗೆ ಇರುವ ವೇಷವೂ ನಾರಾಯಣನಲ್ಲಿ ಅತ್ಯಂತ ಸಂಗತವಾಗಿಯೇ ಇರುತ್ತದೆ.

ಎರಡು ಬಗೆಯ ವೇಷವೂ ಭಗವಂತನಾದ ಶ್ರೀನಿವಾಸನಿಗೆ ಇದೆಯೆಂಬುದು ಮುಂಚೆ ಹೇಳಿದ ಪುರಾಣವಚನಗಳಲ್ಲಿ ಹೊರಪಡಿಸಲ್ಪಟ್ಟಿದೆ. ಸಮಸ್ತ ಲೋಕಗಳ ಸೃಷ್ಟಿ, ಸ್ಥಿತಿ ಮತ್ತು ಲಯಗಳಿಗೆ ಕಾರಣವಾದ ಶಕ್ತಿಯೆಲ್ಲವೂ ತನಗೇ ಮುಖ್ಯವಾಗಿ ಇರುವುದು, ಬ್ರಹ್ಮಾ, ಶಿವ ಮುಂತಾದ ಇತರರಲ್ಲಿ ಯೋ ಎಂದರೆ, ತನ್ನಿಂದಲೇ ಆ ಶಕ್ತಿಯು ಸ್ವಲ್ಪ ಅಂಟಿಕೊಂಡಿರುವುದನ್ನು ಹೊರತು ಪಡಿಸುವುದಕ್ಕಾಗಿಯೇ ಭಗವಂತನು ಅಂಥಹ ರೂಪವುಳ್ಳವನಾಗಿ ತನ್ನನ್ನು ತೋರಿಸುತ್ತಾನೆ.

ಆದುದರಿಂದ ಹಿಂದೆ ತಿಳಿಸಿದ ಸಾತ್ವತ ಸಂಹಿತೆಯ ವಚನಗಳಲ್ಲಿ ಸಮಸ್ತಲೋಕ, ವಸ್ತುಗಳಿಗೂ ಆಧಾರವಾಗಿ ಪರಮಸತ್ವವೂ ಸಕಲವಿಧ ಶಕ್ತಿಯಿಂದ ತುಂಬಿದವನೂ, ಸರ್ವವ್ಯಾಪಿಯೂ ಎಂದು ಹೇಳಲ್ಪಟ್ಟಿತು.

ಆದರಿಂದಲೇ ಪಾದ್ಮಪುರಾಣದ ಮೂರನೆಯ ಅಧ್ಯಾಯದಲ್ಲಿ ೨೬ ಎಂಬ ಸಂಖ್ಯೆಯನ್ನು ಕೊಂಡ ವಚನದಲ್ಲಿ - ಸರ್ವಾತ್ಮಾವಾಗಿಯೂ ತಾವರೆಯ ಹೂವಿನ ದಳದಂತೆ ಕಣ್ಣುಗಳನ್ನುಳ್ಳವನೂ, ಹದಿನಾಲ್ಕು ಲೋಕಗಳನ್ನೂ ಸೃಷ್ಟಿಸಿ, ಸಂರಕ್ಷಿಸಿ, ಮತ್ತು ನಾಶವನ್ನೂ ಮಾಡುವವನಾದ ಭಗವಂತನು, ಆ ಶುಕಮಹರ್ಷಿಯು ಮಾಡಿದ ತಪಸ್ಸಿಗೆ ಮೆಚ್ಚಿ ಸಂತೋಷಗೊಂಡು - ಎಂದು ಮುಂದುವರೆಯುತ್ತಾ ಮೂವತ್ತೆರಡು ಕೋಟಿ ವಿಧವಾದ ವೈಷ್ಣವ ಶಕ್ತಿಗಳಿಂದ, ''ನಾನು ಮುಂಚೆ, ನಾನು ಮುಂಚೆ'' ಎಂದು ಸ್ಪರ್ಧಿಸುತ್ತಾ ಸೇವೆಮಾಡಲ್ಪಟ್ಟ ದೇವನಾಗಿ, ಶ್ರೀದೇವಿ, ಭೂದೇವಿ ಮತ್ತು ನೀಳಾದೇವಿಯರುಗಳೊಡನೆ ಕೂಡಿದವನಾಗಿ, ಪರಮಪುರುಷನಾದ ಮಹಾವಿಷ್ಣುವು ಪದ್ಮಸರೋವರದ (ತಿರುಚ್ಚಾನೂರ್ -

ತಿರುಚ್ಚುಕನೂರ್) ತಟದಲ್ಲಿ ಪ್ರತ್ಯಕ್ಷನಾದನು - ಎಂದಿದ್ದು, ಅಂತ್ಯವಾಗಿ ಭಗವಂತನು ಸೃಷ್ಟಿ, ಸ್ಥಿತಿ, ಸಂಹಾರಗಳನ್ನು ಮಾಡುವವನೆಂದು ಹೇಳಿ, ಅದಕ್ಕೇ ಮೂಲವಾದ ಅನಂತವಾದ ವೈಷ್ಣವ ಶಕ್ತಿಗಳಿಂದ ಸೇವೆ ಮಾಡಿಸಿಕೊಳ್ಳುವ ಗುಣವು ಅವನಿಗಿರುವುದು ಹೇಳಲ್ಪಟ್ಟಿದೆ.

''ದೇವತೆಗಳು, ಮನುಷ್ಯರು, ಪಶುಗಳು ಇವುಗಳಲ್ಲಿ ಯಾವ ಯಾವ ಪ್ರಾಣಿಯು ತನ್ನ ಕೈಕೆಳಗೆ ಹಲವು ಪ್ರಾಣಿಗಳನ್ನು ಹೊಂದಿವೆಯೋ, ಅವುಗಳನ್ನು ಕಾಪಾಡಲು ಬೇಕಾದ ಧನ ಧಾನ್ಯಗಳನ್ನುಳ್ಳವುಗಳಾಗಿಯೂ, ಮೇಲಿಂದ ಮೇಲೆ ಧನ ಧಾನ್ಯಗಳನ್ನು ಸಂಪಾದಿಸುವ ಪ್ರಯತ್ನದಲ್ಲಿಯೇ ಗಮನವಾಗಿರವುವೋ, ಆಯಾ ಪ್ರಾಣಿಗಳೆಲ್ಲವೂ, ಎಲೈ ಅರ್ಜುನನೇ!, ಮತ್ತೊಬ್ಬರನ್ನು ತನ್ನ ಅಂಕೆಯಲ್ಲಿಟ್ಟು ಆಳುವ ತನ್ನದೇ ಆದ ಸಾಮರ್ಥ್ಯದಲ್ಲಿ (ಶಕ್ತಿಯಲ್ಲಿ) ಒಂದು ಅತಿ ಚಿಕ್ಕಭಾಗದಿಂದ ಉಂಟಾದುವು ಎಂದು ತಿಳಿಯುವವನಾಗು,'' ಎಂದು ಭಗವದ್ಗೀತೆಯಲ್ಲಿ ಶ್ರೀಕೃಷ್ಣಪರಮಾತ್ಮನು ಹೇಳಿದ ಕಟ್ಟಳೆಯಂತೆ, ಲೋಕದಲ್ಲಿ ಆ ಕಾರ್ಯಗಳಿಗೆ ಮೂಲವಾದ, ಅಲ್ಲಲ್ಲಿ ಕಾಣಿಸುತ್ತಿರುವ ಶಕ್ತಿಯು (ವಿಷ್ಣುವಿನ ಶಕ್ತಿ) ವೈಷ್ಣವೀ ಶಕ್ತಿಯಲ್ಲವೇ?

ಈ ರೀತಿಯೇ ಪಾದ್ಮಪುರಾಣದ ನಾಲ್ಕನೆಯ ಅಧ್ಯಾಯದಲ್ಲಿನ ೨೭ ಎಂಬ ಸಂಖ್ಯೆಯಿಂದ ಸೂಚಿತವಾದ ವಚನದಲ್ಲಿಯೂ – ಒಂದು ಸಮಯ ಭಗವಂತನಾದ ಮಹಾವಿಷ್ಣುವು ತನ್ನ ಕರುಣೆಯಿಂದ ಪೂರ್ಣವಾದ, ಅಗಣ್ಯ (ಎಣಿಸಲಾಗದ) ಪುಣ್ಯ ಮನಸ್ಸಿನಿಂದ ಎಲ್ಲರಿಗೂ ದರ್ಶನವನ್ನು ಕೊಡಬೇಕೆಂದು ಸಂಕಲ್ಪಿಸಿ, ಆನಂದಮಯವಾದ, ಉನ್ನತ ಆಕಾರವುಳ್ಳ ಗರುಡ, ಆದಿಶೇಷ, ವಿಷ್ವಕ್ಸೇನರು ಮುಂತಾದವರಿಂದಲೂ, ಪಂಚಾಯುಧಗಳಿಂದಲೂ, ಛತ್ರ, ಚಾಮರ, ಧ್ವಜ ತೋರಣಾದಿಗಳನ್ನೂ, ಆಭರಣಗಳನ್ನೂ, ಅಜಿನಗಳನ್ನೂ ಧರಿಸಿದ ಕುಮುದನೇ ಮೊದಲಾದ ನಗರ ಪಾಲಕರುಗಳಿಂದಲೂ, ಬ್ರಹ್ಮದೇವನ ಶಕ್ತಿಗಳಿಂದಲೂ, ಪರಮಶಿವನ ಶಕ್ತಿಗಳಿಂದಲೂ ಸೇವೆ ಮಾಡಲ್ಪಡುವವನಾಗಿ, ಸಂತೋಷಗೊಂಡು ತನಗೆ ಅತ್ಯಂತಾನಂದವನ್ನುಂಟು ಮಾಡುವವರೂ, ಆಶ್ಚರ್ಯವಾದ ಆಭರಣಗಳನ್ನೂ ಉಳ್ಳವರಾದ ಶ್ರೀದೇವಿ, ಭೂದೇವಿ ಮತ್ತು ನೀಳಾದೇವಿ ಮುಂತಾದ ಪತ್ನಿಯರೊಂದಿಗೆ ಕೂಡಿ, ಸರ್ವಾತ್ಮಾವಾಗಿ, ಕ್ರೀಡೆಯೆಂಬ ಆಡಂಬರವನ್ನು ಹೆಚ್ಚಾಗಿ ಹೊಂದಿ ಎಲ್ಲರ ಕಣ್ಣಳಿಗೂ ನೇರವಾಗಿ, ದೃಶ್ಯನಾಗಿ (ಗೋಚರನಾಗಿ) ಆನಂದಿಸಿದನು - ಎಂದು, ಶ್ರೀನಿವಾಸನು ಸರ್ವಾತ್ಮಾ (ಸರ್ವಕಾರಣ) ವಾದುದರಿಂದ ಸರ್ವವಿಧ ಪರಿಜನ, ಆಯುಧಗಳು, ಪರಿಕರಗಳೂ ಮತ್ತು ಶಕ್ತಿಗಳಿಂದ ಸೇವೆ

ಮಾಡಸಿಕೊಳ್ಳಲ್ಪಡುವುದು ಹೇಳಲ್ಪಟ್ಟಿತು. ಹೀಗೆಯೇ ಇವೇ ಅರ್ಥವನ್ನು ಕೊಡುವ ಇತರ ವಚನಗಳೂ, ಆಯಾಯಾ ಪುರಾಣಗಳಲ್ಲಿ ಇವೆ ಎಂಬುದನ್ನು ಕಾಣತಕ್ಕದ್ದು.

ಆದುದರಿಂದ ಸಂಹಾರಮಾಡುವಿಕೆ (ಸಂಹಾರಕರ್ತೃತ್ವ) ಯನ್ನು ತೋರಿಸುವ ಕ್ರೂರ ರೂಪವೂ, ಅದಕ್ಕೆ ತಕ್ಕದಾಗಿರುವ ಭಯಂಕರ ಜಟೆ, ನಾಗಾಭರಣ, ಶಕ್ತ್ಯಾಯುಧ, ಪರಶು ಮುಂತಾದುವನ್ನು ಧರಿಸಿದ ವೇಷವನ್ನುಳ್ಳವನೂ, ಸಂಹಾರವನ್ನು ಮಾಡುವ ಕಾರಣದಿಂದಲೇ ಬೇರೊಬ್ಬನಲ್ಲಿ (ಪರಮಶಿವನಲ್ಲಿ) ಅಂಥಹ ತನ್ನ ಅಧಿಕಾರದ ಒಂದು ಸ್ವಲ್ಪ ಭಾಗವು ತನ್ನ ಸಂಕಲ್ಪದಿಂದಲೇ ಹೋಗಿ ಸೇರುತ್ತದೆ ಎಂಬುದನ್ನು ಸ್ಪಷ್ಟವಾಗಿ ತೋರಿಸುವವನಾದ ಶ್ರೀನಿವಾಸ ಭಗವಂತನನ್ನು, ಆ ವೇಷಮಾತ್ರವನ್ನು ಕೊಂಡು ಬೇರೆ ದೇವತೆಯಾಗಿ (ಪರಮಶಿವನಾಗಿ) ಹೇಳುವುದು ಸ್ವಲ್ಪವೂ ಸಮಂಜಸವಾಗಿಲ್ಲ.

ಹಿಂದೆ ಹೇಳಿದ ಪಾದ್ಮಪುರಾಣದ ವಚನಗಳಲ್ಲಿ - ಬ್ರಹ್ಮದೇವನ ಶಕ್ತಿಗಳಿಂದಲೂ, ಶಂಕರನ ಶಕ್ತಿಗಳಿಂದಲೂ ಸೇವೆಮಾಡಿಸಿಕೊಳ್ಳುವವನೆಂದೂ, ಮೂವತ್ತೆರಡು ಕೋಟಿ ಸಂಖ್ಯೆಯ ವಿವಿಧ ವೈಷ್ಣವೀ ಶಕ್ತಿಗಳಿಂದಲೂ ಸೇವೆಮಾಡಿಸಿಕೊಳ್ಳುವವನೆಂದೂ, ಸರ್ವಾತ್ಮಾವಾಗಿ ಕ್ರೀಡೆಯಿಂದ ಕೂಡಿ ಆಡಂಬರಕಾರ್ಯವನ್ನು ಅಧಿಕವಾಗಿ ಉಳ್ಳವನೆಂದೂ ಗುರುತಿಸಲ್ಪಟ್ಟಿರುವುದರಿಂದ, ಚತುರ್ಮುಖ, ಶಂಕರ ಮುಂತಾದವರಿಗೆ ಆಯಾಯಾ ಅಧಿಕಾರಗಳನ್ನು ಉಂಟುಮಾಡುವುವುಗಳಾಗಿ, ಆಯಾಯಾ ಅಧಿಕಾರಗಳಿಗೇ ತಕ್ಕದಾಗಿ ಚತುರ್ಮುಖ ಬ್ರಹ್ಮ, ಪರಮಶಿವ ಮುಂತಾದ ಆಯಾಯಾ ದೇವತೆಗಳಲ್ಲಿರುವ ಅಂಶಗಳು ಅಂಥಹ ಅಧಿಕಾರವಾದ ಐಶ್ವರ್ಯಗಳನ್ನು ಉಂಟುಮಾಡುವ (ಶಕ್ತಿಸಾಮರ್ಥ್ಯಗಳನ್ನುಂಟುಮಾಡುವ) ವಿಶೇಷಗಳಾದುದರಿಂದ, ಶಕ್ತಿಗಳು ಎಂದು ಯಾವುವುಗಳು ಇವೆಯೋ, ಅವೆಲ್ಲವೂ ಸಮಸ್ತಲೋಕಗಳ ಭಾಗಗಳಿಗೂ ಬೀಜವಾಗಿರುವ (ಕಾರಣವಾಗಿರುವ) ಭಗವಾನ್ ನಾರಾಯಣನಲ್ಲಿ ಇರುವುವಗಳೇ ಆಗುತ್ತವೆ. ಅವುಗಳಲ್ಲಿ ಒಂದು ಸ್ವಲ್ಪಭಾಗ ಆಯಾಯಾ ದೇವತೆಗಳಲ್ಲಿ ಹೋಗಿ ಸೇರಿವೆ. ಅಂಥಹ ಭಾಗಗಳೆಲ್ಲವೂ ವಿಷ್ಣುವಿನ ಶಕ್ತಿಗಳೇ ಆಗುತ್ತವೆ. ಅವುಗಳೋ ಎಂದರೆ ಮೂವತ್ತರೆಡು ಕೋಟಿ ಎಂದು ಲೆಕ್ಕಿಸಲ್ಪಟ್ಟಿವೆ. ಆ ಶಕ್ತಿಗಳೆಲ್ಲಕ್ಕೂ ಮೂಲಕಂದವಾದ ಭಗವಾನ್ ನಾರಾಯಣನ ಮೊದಲನೆಯದಾದ ಶ್ರೇಷ್ಠರೂಪವೇ ಈ ಶ್ರೀನಿವಾಸನ ರೂಪವು. ಅಂಥಹ ಮೊದಲ ರೂಪವೇ, ಕ್ರೀಡಿಸಿ ಆನಂದಿಸುವವನೂ ತನ್ನನ್ನು ಶರಣ್ಯನನ್ನಾಗಿ ಆಶ್ರಯಿಸಿದವರಿಗೆ ತನ್ನ ಮಹಿಮೆಯನ್ನು ತೋರಿಸುವುದರಲ್ಲಿ ಮನಸ್ಸಂತೋಷಿಸುವವನಾದ ಆ ಭಗವಂತನಿಂದ ಕರುಣೆಯಿಂದ ತೋರಿಸಲ್ಪಟ್ಟದೆ ಯೆಂಬುದು ಚೆನ್ನಾಗಿ ಪ್ರತಿಪಾದಿಸಲ್ಪಡುತ್ತದೆ.

''ಸರ್ವಾತ್ಮಾ'' ಎಂದು ಮುಂಚೆ ಹೇಳಿದ ಜಾಗದಲ್ಲಿ ''ಆತ್ಮಾ'' ಎಂಬ ಪದಕ್ಕೆ 'ಸ್ವಭಾವ' ವೆಂದು ಅರ್ಥವನ್ನು ಮಾಡಿಕೊಂಡು ಆಯಾಯಾ ಕಾರ್ಯವಸ್ತುಗಳಲ್ಲಿ (ಬ್ರಹ್ಮ, ಶಿವ ಮುಂತಾದವರುಗಳಲ್ಲಿ) ಇರುವ ಸ್ವಭಾವಗಳೆಲ್ಲವೂ ಇವನಲ್ಲಿ ತುಂಬಿದೆ ಎಂದಾಗಲಿ, ''ಮೃದಾತ್ಮಕೋ ಘಟಃ'' ಎಂದರೆ ''ಮಣ್ಣನ್ನು ಕಾರಣವಾಗಿ ತೆಗೆದುಕೊಂಡು ಮಡಕೆ'' ಎಂದು ಹೇಳುವಂತೆ, ''ಆತ್ಮಾ'' ಎಂಬುದಕ್ಕೆ ಕಾರಣವೆಂಬ ಅರ್ಥವನ್ನು ಮಾಡಿ ಎಲ್ಲರಿಗೂ ಕಾರಣನಾದವನು ಎಂದಾಗಲೀ ಅರ್ಥಮಾಡುವವುದು ಪುರಾಣಕರ್ತೃಗಳಿಂದ ಅಂಗೀಕರಿಸಲ್ಪಟ್ಟಿರುವುದರಿಂದ, ಎರಡು ರೀತಿಯ ಅರ್ಥಗಳಲ್ಲಿಯೂ ಕಾರ್ಯವಸ್ತುಗಳಲ್ಲುಳ್ಳ ಪ್ರಭಾವಗಳೆಲ್ಲವಕ್ಕೂ ಮೊದಲ ಕಂದವಾಗಿ ಆಕರಸ್ಥಾನತ್ವವು ಭಗವಾನ್ ಶ್ರೀನಿವಾಸನಿಗೆ ಇರುವುದಾಗಿ ಹೇಳಲ್ಪಟ್ಟಿದೆ.

ವಾಮನ ಪುರಾಣದ ಭಾಗಗಳಲ್ಲುಳ್ಳ ಮೂವತ್ನಾಲ್ಕುನೆಯ ಅಧ್ಯಾಯದ ಕೊನೆಯಲ್ಲಿ - ಶ್ರೀವಿಷ್ಣುವಿನ ಮೊದಲನೆಯ ರೂಪವು ಪ್ರಳಯ ಕಾಲದ ಅಗ್ನಿಯಂತೆ ಅತ್ಯಂತ ಪ್ರಕಾಶವಾಗಿಯೂ, ನೋಡುವವರಿಗೆ ಆಶ್ಚರ್ಯವನ್ನುಂಟು ಮಾಡುವುದಾಗಿಯೂ ಕಾಣಲ್ಪಟ್ಟಿತು - ಎಂದು ಹೇಳಲ್ಪಟ್ಟಿರುವುದರಿಂದ, ಶ್ರೀನಿವಾಸನ ರೂಪವು ಭಗವಾನ್ ನಾರಾಯಣನ ಮೊದಲನೆಯ ರೂಪವೆಂದಲ್ಲವೇ ವಿವರಿಸಲ್ಪಟ್ಟಿತು? ಇವೆಲ್ಲವನ್ನೂ ತಿಳಿದುಕೊಂಡೇ ಸರೋಯೋಗಿ (ಪೊಯ್‌ಗೈ ಆಳ್ವಾರ್) ಭೂತಯೋಗಿ (ಪೂದತ್ತಾಳ್ವಾರ್) ಮಹಾಯೋಗಿ (ಪೇಯಾಳ್ವಾರ್) ಎಂಬ ಹೆಸರಿನ ಮೊದಲ ಆಳ್ವಾರ್‌ಗಳು (ಸೂರಿಗಳು) ಮೂವರಲ್ಲಿ ಮೂರನೆಯವರು, ಪರಮೈಕಾಂತಿಗಳಲ್ಲಿ (ಶ್ರೀಮನ್ನಾರಾಯಣನನ್ನೇ ಪರದೈವವೆಂದೂ, ಅವನಸೇವೆ ಮಾಡುವುದೇ ಪರಮ ಪ್ರಯೋಜನವೆಂದೂ ತಿಳಿದಿರುವವರಲ್ಲಿ) ಅಗ್ರೇಸರಾದ **ಪೇಯಾಳ್ವಾರ್** ಎಂದು ಕರೆಯಲ್ಪಡುವ ಮಹಾಯೋಗಿಯವರಿಂದ ತಮ್ಮ ತಮಿಳು ದಿವ್ಯ ಪ್ರಬಂಧ (ದ್ರಾವಿಡವೇದ) ವಾದ ಮೂರನೆಯ ''ತಿರುವಂದಾದಿ'' (ಮೂನ್ರಾಮ್ ತಿರುವಂದಾದಿ) ಯಲ್ಲಿ (**ತಾಳ್‌ಶಡೈಯುಂ ನೀಣ್‌ಮುಡಿಯಂ ಒಣ್ ಮಳುವುಂ ಶಕ್ಕರಮುಮ್, ಶೂಳರವುಂ ಪೊನ್ನಾಣುಂ ತೋನ್ರುಮಾಲ್, ಶೂಳ್‌ನ್ತಿರಂಡರುವಿ ಪಾಯುಂ ತಿರುಮಲೈಮೇಲೆನ್ದೈಕ್ಕು ಇರಂಡುರುವುಮೊನ್ರಾಯಿಶೈನ್ದು**) - ಜೋಲಾಡುತ್ತಿರುವ ಜಟೆಯೂ, ಉದ್ದನೆಯ ಕಿರೀಟವೂ, ಲೋಹಪಿಂಡವೂ, ಚಕ್ರವೂ, ಸುತ್ತಿದ ನಾಗವೂ, ಸ್ವರ್ಣದಿಂದ ಮಾಡಿದ ಉಡಿದಾರವೂ ಮುಂತಾದವುಗಳನ್ನು ಹೊಂದಿ, ಧುಮುಕುತ್ತಿರುವ ಅನೇಕ ಜಲಪಾತಗಳನ್ನು ಹೊಂದಿರುವ ವೇಂಕಟಾಚಲದಲ್ಲಿ ವಾಸಿಸುತ್ತಿರುವ ನನ್ನ ಅಪ್ಪನಿಗೆ (ತಮಿಳರುಗಳು ಶ್ರೀವೇಂಕಟನಾಥನನ್ನು ಅಪ್ಪನ್ ಎಂದು ಕರೆದು ಕೊಂಡಾಡುತ್ತಾರೆ) ಎರಡು ಬಗೆಯ ರೂಪಗಳೂ ಒಂದಾಗಿ ಸೇರಿ ದರ್ಶನೀಯವಾಗಿದೆ, ಇದು

ಆಶ್ಚರ್ಯ, ಎಂದು ವಿಷ್ಣುವಿನ ಮೊದಲನೆಯರೂಪವನ್ನು ಹೇಳುವ ಅರವತ್ತೂರನೆಯ ಪಾಶುರ (ಪದ್ಯ)ದ ಮೂಲಕ, ಬ್ರಹ್ಮ, ಶಿವ ಮುಂತಾದ ಎಲ್ಲರಿಗೂ ಮೊದಲನೆಯ ಕಾರಣವು ಶ್ರೀಮನ್ನಾರಾಯಣನು ಒಬ್ಬನೇ ಎಂಬುದು ಸ್ಪಷ್ಟವಾಗಿ ಹೇಳಲ್ಪಟ್ಟಿದೆ. ಇದರಲ್ಲಿ ''ಲೋಹಪಿಂಡ'' ಎಂಬ ಪದವು ಸಂಹಾರ ಮಾಡುವ ರೂಪಕ್ಕೆ ತಕ್ಕುದಾದ ಶಕ್ತ್ಯಾಯುಧ. ಈಟಿ ಮುಂತಾದ ಇತರ ಆಯುಧಗಳನ್ನೂ, ಚಕ್ರವೆಂದು ತಿಳಿಸಿದ ಪದವು, ಜಗತ್ತನ್ನು ಕಾಪಾಡುವ ರೂಪಕ್ಕೇ ಸೇರಿದ ಶಂಖ, ಚಕ್ರ, ಕತ್ತಿ, ಗದೆ, ಧನುಸ್ಸು ಮುಂತಾದುವೇ ಆದ ಇತರ ಆಯುಧಗಳನ್ನೂ ಉಪಲಕ್ಷಣವಾಗಿ ತೆಗೆದುಕೊಳ್ಳಿ.

ಇಲ್ಲಿ, ಸಂಹಾರಕರೂಪವನ್ನು ಹೊಂದಿದ ಶಕ್ತ್ಯಾಯುಧ, ಈಟಿ ಮುಂತಾದವುಗಳೊಂದಿಗೆ ಕೂಡಿದ ಭಯಂಕರ ವೇಷವೇ ಈಗ ಭಗವಂತನಲ್ಲಿ ಕಾಣಿಸಲಿಲ್ಲವಲ್ಲಾ? ಕಾಪಾಡುವರೂಪಕ್ಕೆ ತಕ್ಕ ಸುಂದರವಾದ ವೇಷವೇ ಕಾಣಬರುತ್ತದಲ್ಲಾ? ಎರಡುರೂಪಗಳು ಒಂದಾಗಿ ಸೇರಿ ಕಾಣಬರುತ್ತದೆ ಎಂದು ಆಳ್ವಾರ್‌ರವರು ಹೇಳಿದುದು ಹೇಗೆ ಸಮನ್ವಯ ವಾಗುತ್ತದೆ? ಎಂಬ ಪ್ರಶ್ನೆಯು ಉದ್ಭವಿಸುವುದು ಸ್ವಾಭಾವಿಕವೇ. ಆದರೂ ಬ್ರಹ್ಮನೇ ಮುಂತಾದವರುಗಳ ಪ್ರಾರ್ಥನೆಗೆ ಮಣಿದ ಭಗವಂತನು ತನ್ನ ಘೋರರೂಪವನ್ನು ಮರೆಸಿ ಸುಂದರವಾದ ವೇಷದೊಂದಿಗೆ ಮಾತ್ರವೇ ಈಗ ಎಲ್ಲರ ಕಣ್ಣಗಳಿಗೂ ಗೋಚರನಾಗಿ ದರ್ಶನವನ್ನೀಯುತ್ತಿದಾನೆ. ಪೇಯಾಳ್ವಾರ್ (ಮಹಾಯೋಗಿ) ರವರೋ ಎಂದರೆ, ಭಗವಂತನ ಕೃಪಾಕಟಾಕ್ಷದಿಂದ ಪಡೆದ ದಿವ್ಯ ಚಕ್ಷುಷಗಳಿಂದ ಆವನ ದಿವ್ಯರೂಪವನ್ನು ಇರುವ ಸ್ಥಿತಿಯಲ್ಲಿಯೇ ಕಂಡು ಅಂತೆಯೇ ತಮ್ಮ ಪಾಶುರಗಳಲ್ಲಿ ಹಾಡಿದ್ದಾರೆ. ಆದುದರಿಂದ ಯಾವ ಪ್ರತಿಬಂಧಕವೂ ಇರುವುದಿಲ್ಲ ಎಂಬುದೇ ಇದಕ್ಕೇ ಸಮಾಧಾನವು (ಉತ್ತರವು) ಎಂದು ತಿಳಿಯತಕ್ಕದ್ದು. ಭಯಂಕರವಾದ ರೂಪವನ್ನು ಮರೆಮಾಚಿದ ಭಗವಂತನಿಂದ ಜಟೆ, ನಾಗಾಭರಣ ಇವುಗಳನ್ನು-ಭಯಂಕರತೆಯನ್ನು ಹೋಗಲಾಡಿಸಿ ಸುಂದರ ರೂಪವನ್ನುಳ್ಳವನಾಗಿ ಮಾರ್ಪಡಿಸಿಕೊಂಡು ಆ ರೂಪದಲ್ಲಿ (ಸುಂದರರೂಪದಲ್ಲಿ) ಅವುಗಳೂ ಧರಿಸಲ್ಪಟ್ಟುವು. ತನ್ನನ್ನು ಯಾವಾಗಲೂ ಒಂದು ಕ್ಷಣವೂ ಅಗಲದೆಯೇ ಇದ್ದು ನಂತರ ಭೃಗು ಮಹರ್ಷಿಯು, ತನ್ನ ವಿಸ್ತಾರವಾದ ವಕ್ಷಃಸ್ಥಲವನ್ನು ಕಾಲಿನಿಂದ ಒದೆದಾಗ ಹೊರನಡೆದು ಕರವೀರಪುರ (ಕೊಲ್ಹಾಪುರ)ವನ್ನು ಸೇರಿದ ತನ್ನ ಶ್ರೀದೇವಿಯು ಪದ್ಮಸರೋವರದಲ್ಲಿ (ತಿರುಚ್ಚಾನೂರ್ ಪುಷ್ಕರಿಣಿ) ತಾವರೆಯತಟಾಕದಲ್ಲಿ ಪುನಃ ಆವಿರ್ಭವಿಸುವ ಕಾರಣದಿಂದ, ತಾನು ಮಾಡುವ ತಪಸ್ಸಿಗೆ ತಕ್ಕ ವೇಷಕ್ಕೆ ಹೊಂದುವಂಥಹುದಾದುದೂ, ತಿರುಪತಿಯ ಬೆಟ್ಟದಲ್ಲಿ ಶ್ರೀರಾಮತಾರಕ ಮಂತ್ರವನ್ನು ಜಪಿಸುತ್ತಾ ತನ್ನನ್ನು ಕುರಿತು ತಪಸ್ಸನ್ನು ಮಾಡುವ

ವಾಯುವಿಗೂ, ಸ್ಕಂದನಿಗೂ ಅವರುಗಳು ಧ್ಯಾನಮಾಡಿ ಕಾಣಲು ಅಪೇಕ್ಷಿಸಲ್ಪಟ್ಟುದಕ್ಕೆ ಅನುಗುಣವಾಗಿ ತಾನು ತೋರಿಸಬೇಕಾದ ರಾಮನ ವೇಷಕ್ಕೆ ಸೇರಿದಂಥಹುದೂ, ಕೃತೆಯುಗದ ತನ್ನದೊಂದು ಆವಿರ್ಭಾವಕ್ಕೆ ಒಪ್ಪುವಂಥಹ ಜಟೆಯೂ, ಯಾವಾಗಲೂ ಹಾಸಿಗೆ, ಕೊಡೆ ಮುಂತಾದ ರೂಪಗಳನ್ನು ತಾಳಿಯೂ, ಈಗ ಭೂಲೋಕದಲ್ಲಿ ಕ್ರೀಡಾಗಿರಿಯಾಗಿ ರೂಪವನ್ನು ತಾಳಿ ತನಗೆ ಶುಶ್ರೂಷೆ (ಕೈಂಕರ್ಯ)ಮಾಡುವುದರಲ್ಲಿಯೆ ಮನಸ್ಸಿಟ್ಟವನೂ, ಬೆಟ್ಟದ ರೂಪವಾಗಿ ಪರಿಪವರ್ತಿತವಾದ ತನ್ನದೇಹದಲ್ಲಿ ಯಾವಾಗಲೂ ತಾನು (ಭಗವಂತನು) ವಾಸಿಸಬೇಕೆಂಬುದಕ್ಕಾಗಿ ಅತ್ಯಂತ ಮಹತ್ತಾದ ತಪಸ್ಸನ್ನಾಚರಿಸಿದವನೂ, ತನ್ನ ಮನಸ್ಸಿಗೆ ತಕ್ಕಂತೆಯೂ, ಅಗಲಿದೆಯೆ ಸೇವೆ ಮಾಡುವವನೂ ಆದ ಫಣಿರಾಜ (ಆದಿಶೇಷ)ನನ್ನು ಆಭರಣವಾಗಿ ಧರಿಸುವುದು ಮತ್ತು ಅವನ (ಪಣಿರಾಜನ) ಪರಮಪ್ರೀತಿಗೆ ತಕ್ಕ ಬಹುಮಾನವಾಗುವುದರಿಂದ ಅಂತೆಯೇ ನಾಗಾಭರಣವನ್ನು ಧರಿಸಿ ಘೋರ ರೂಪವನ್ನು ಬಿಟ್ಟು ಶಾಂತರೂಪವುಳ್ಳವಾಗಿ ಬದಲಾಯಿಸಿ ಯಾವಾಗಲೂ ಅವುಗಳನ್ನು ತನ್ನ ಸುಂದರವಾದ ದೇಹದಲ್ಲಿ ಭಗವಂತನು ಧರಿಸುತ್ತಾನೆಂಬುದು ಅರಿಯಲ್ಪಡುತ್ತದೆ.

ನಂತರ, ಮುನಿಯು (ಭೃಗು) ಕಾಲಿನಿಂದ ಒದೆದ ಸಂದರ್ಭದಲ್ಲಿ ಅಗಲಿದ ಮಹಾಲಕ್ಷ್ಮಿಯು ಪದ್ಮಸರೋವರದಲ್ಲಿ ಅವತರಿಸಿದುದು ಮುಂತಾದ ಚರಿತ್ರೆಗಳು ಭವಿಷ್ಯೋತ್ತರ ಪುರಾಣದ ಭಾಗಗಳಲ್ಲಿ ಎರಡನೆಯ ಅಧ್ಯಾಯದಲ್ಲಿಯೂ, ಪಾದ್ಮ ಪುರಾಣಕ್ಕೆ ಸೇರಿದ ಹನ್ನೊಂದನೆಯ ಅಧ್ಯಾಯದ ೩೪ ಎಂಬ ಸಂಖ್ಯೆಯಿಂದ ಸೂಚಿಸಲ್ಪಟ್ಟ ವಚನದಲ್ಲಿಯೂ ನೋಡತಕ್ಕದ್ದು.

ವಾಮನ ಪುರಾಣಕ್ಕೆ ಸೇರಿದ ಎರಡನೆಯ ಅಧ್ಯಾಯದ ೨೧ನೆಯ ವಚನದಲ್ಲಿ - ಪುಣ್ಯವಂತನೇ! ಈಗ ವಾಯುದೇವನು ಜಪಮಾಲೆಯಿಂದ ಎಣಿಸಿಕೊಂಡೇ ಶ್ರೀರಾಮತಾರಕ ಮಂತ್ರವನ್ನು ಜಪಿಸಿಕೊಂಡೂ, ಉತ್ತಮೋತ್ತಮನಾದ ಶ್ರೀರಾಮನನ್ನು ವಿಧ್ಯುಕ್ತವಾಗಿ ಪೂಜಿಸಿಕೊಂಡೂ ತಪಸ್ಸನ್ನಾಚರಿಸುತ್ತಿರುವನು. ಉನ್ನತವಾದ (ಎತ್ತರವಾದ - ನೀಳವಾದ) ಕಿರೀಟವನ್ನು ಧರಿಸಿ, ನಾಲ್ಕು ಹಸ್ತಗಳಲ್ಲಿಯೂ ಶಂಖ, ಚಕ್ರ, ಧನುಸ್ಸು, ಬಾಣ ಇವುಗಳನ್ನು ಹಿಡಿದುಕೊಂಡು ನೀಲೋತ್ಪಲ ಪುಷ್ಪದಂತೆ ಕಪ್ಪಾದ ಕಾಂತಿಯನ್ನು ಹೊಂದಿದ ದೇವದೇವನಾದ ಜಗನ್ನಾಥನನ್ನು, ಶ್ರೀದೇವಿ ಭೂದೇವಿಯರೊಂದಿಗೆ ಕಣ್ಣುಗಳಲ್ಲಿ ಕಂಡು ನಮಸ್ಕರಿಸುವುದಕ್ಕಾಗಿ ಎಲ್ಲರಿಗೂ ಪ್ರಾಣನಾದ ವಾಯುದೇವನು ಘೋರ ಮಹಾತಪಸ್ಸನ್ನು ಆಚರಿಸುತ್ತಿದ್ದಾನೆ, ಆಶ್ಚರ್ಯವು - ಎಂದು ವಾಲ್ಮೀಕಿ ಮಹರ್ಷಿಗೆ ನಾರದಮಹರ್ಷಿಯು ಹೇಳಿದ ಸಮಾಚಾರದಿಂದ ವಾಯುದೇವನು ರಾಮತಾರಕ

ಮಂತ್ರವನ್ನು ಜಪಿಸುತ್ತಾ ಶ್ರೀರಾಮನನ್ನು ಉಪಾಸನೆಮಾಡುವುದೂ, ಲವಲೀಲೆಯಿಂದ ಸತ್ಕಾರ್ಯಗಳನ್ನು ಮಾಡುವ ಸಾಮರ್ಥ್ಯವುಳ್ಳ ಮಗನಾದ ಸ್ಕಂದನಿಂದ ಪ್ರಾರ್ಥಿಸಲ್ಪಟ್ಟ ಮಹಾದೇವನು ಒಡನೆಯೇ ಅವನಿಗೆ ರಾಮತಾರಕ ಮಂತ್ರವನ್ನು ಉಪದೇಶಿಸಿದನು. ಸ್ಕಂದನೂ ತಂದೆಯಾದ ಮಹಾದೇವನಿಂದ ಮಂತ್ರೋಪದೇಶವನ್ನು ಪಡೆದು ಆನಂದಿಸಿದನು - ಎಂದಿರುವ ವಚನದಿಂದ ಸ್ಕಂದನು ರಾಮತಾರಕ ಮಂತ್ರವನ್ನು ಜಪಿಸಿಯೇ ಶ್ರೀರಾಮನನ್ನು ಉಪಾಸಿಸಿದುದು ಪ್ರಸಿದ್ಧವಾಗಿ ಅರಿಯಲ್ಪಡುತ್ತದೆ.

ಆದಿಶೇಷನು ಕ್ರೀಡಾವಿಹಾರ ಪರ್ವತವಾಗಿ ಪರವರ್ತನೆ ಯಾದುದೂ, ಭಗವಂತನು ತನ್ನ ದೇಹದಲ್ಲಿ ಯಾವಾಗಲೂ ವಾಸಿಸಬೇಕೆಂದು ಅವನು ತಪಸ್ಸನ್ನಾಚರಿಸಿದುದೂ ಮುಂತಾದ ಚರಿತ್ರೆಗಳು ಬ್ರಹ್ಮಾಂಡಪುರಾಣದಲ್ಲಿ ಎರಡನೆಯ ಅಧ್ಯಾಯದಲ್ಲಿಯೂ, ಬ್ರಾಹ್ಮಪುರಾಣದಲ್ಲಿ ಎರಡನೆಯ ಅಧ್ಯಾಯದಲ್ಲಿಯೂ ಸುವ್ಯಕ್ತವಾಗಿದೆ.

ಆದುದರಿಂದ ಮುಂಚೆ ಹೇಳಿದ ರೀತಿಯಲ್ಲಿ ಜಟೆಧರಿಸಿರುವುದೂ, ನಾಗಾಭರಣ ಧಾರಣೆಯೂ, ಬಿಲ್ವ ಪತ್ರಾರ್ಚನೆಯೂ ಮುಂತಾದುವುಗಳನ್ನು ಚಿಹ್ನೆಗಳಾಗಿ ಹೊಂದಿದವನಾಗಿ, ಸ್ವಾಮಿ ಪುಷ್ಕರಿಣಿಯ ದಕ್ಷಿಣ ತಟದಲ್ಲಿ ವಿರಾಜಮಾನವಾಗಿರುವ ದೇವನು ಶ್ರೀನಿವಾಸನೆಂಬ ಹೆಸರನ್ನುಳ್ಳವನಾಗಿ ಶ್ರೀದೇವಿ ಭೂದೇವಿಯೊಂದಿಗೆ ವೈಕುಂಠ ನಾಥನಾಗಿ, ಶ್ರೀ ವೈಕುಂಠದಿಂದ ಲೋಕೋದ್ಧಾರಣ ಸಲುವಾಗಿ ಶ್ರೀ ವೇಂಕಟಾಚಲಕ್ಕೆ ಆಗಮಿಸಿ, ಸ್ಕಂದ, ಮಹಾದೇವ, ಮುಂತಾದ ಇತರ ಎಲ್ಲ ದೇವತೆಗಳಿಂದಲೂ ನಮಸ್ಕರಿಸಿ ಆರಾಧಿಸಲ್ಪಟ್ಟು ಶ್ರೇಷ್ಠತಮವಾದ ಪಾದಾರವಿಂದಗಳನ್ನುಳ್ಳ ಶ್ರೀಮನ್ನಾರಾಯಣನೇ ಆಗುತ್ತಾನೆ. ಸ್ಕಂದನೇ? ಅಥವಾ ಆತನ ತಂದೆಯೇ? ಎಂಬ ಇಂಥಹ ಶಂಕೆಗೊಳ್ಳಲು ಕಿಂಚಿತ್ತೂ ತಕ್ಕವನಲ್ಲವೆಂಬುದು ಮುಂಚೆ ಹೇಳಿದ, ಅಲ್ಲಗಳೆಯಲಸಾಧ್ಯವಾದ ಪ್ರಮಾಣ ಗ್ರಂಥಗಳಿಂದಲೂ, ಯುಕ್ತಿಗಳಿಂದಲೂ ಸ್ಥಿರಪಡುತ್ತದೆ.

ಎಂದು, ಈ ರೀತಿಯಾದ ಯತಿರಾಜರ (ಶ್ರೀ ರಾಮಾನುಜರ) ಪ್ರಗಲ್ಭವಾದ ವಾಣೀಸಾರದಿಂದ ಶ್ರೀವೇಂಟಾಚಲಪತಿಯ ಬಗ್ಗೆ 'ಇವನು ಸ್ಕಂದನೇ' ಎಂದು ಹೇಳಿದ ಶೈವರುಗಳವಾದವು ಶಿಥಿಲವಾದ ನಂತರ ಯಾದವರಾಜನು, ಶೈವರುಗಳನ್ನು ಕುರಿತು- ಎಲೈ ಶೈವರುಗಳೇ! ನೀವುಗಳು ಎಲ್ಲರೂ ಒಂದಾಗಿ ಸೇರಿ ಬಹಳದಿನಗಳು ಬಹಳ ಕಷ್ಟಪಟ್ಟು ಶ್ರೀ ವೇಂಕಟೇಶನ ಮೇಲೆ ಹೊರಿಸಿದ, 'ಇವನು ಸ್ಕಂದನೇ' ಎಂಬ ಕಟ್ಟುಕಥೆಯಾದ ಹತ್ತಿಯು ಈಗ ಒಂದು ಕ್ಷಣಮಾತ್ರದಲ್ಲಿ ಯತಿರಾಜ ವಚನಗಳೆಂಬ ಚಂಡಮಾರುತದ ವೇಗದಿಂದ ಅಲ್ಲಾಡಿಸಲ್ಪಟ್ಟು ಎಲ್ಲಿಗೋ ಕೊಂಡು

ಹೋಗಿ ತಳ್ಳಿಬಿಟ್ಟಿದೆ. ಮೇಲ್ನೋಟಕ್ಕೆ ಚೆನ್ನಾಗಿರುವುದಾಗಿ ಕಂಡು, ಚೆನ್ನಾಗಿ ಶೋಧಿಸಿದಾಗ ಜಳ್ಳಾಗುವ ಯುಕ್ತಿಗಳು ಇನ್ನು ಬೇಡ, ತಕ್ಕುದಾದ, ಸರಿಯಾದ ಉತ್ತರವಿದ್ದಲ್ಲಿ ಈ ದಿನವೋ, ನಾಳೆಯೋ ಸಭೆಯಲ್ಲಿ ಬಂದು ಹೇಳಿ ಎಂದು ಹೇಳಲು, ಶೈವರುಗಳು ತಮ್ಮ ಮನೆಗಳಿಗೆ ತೆರಳಿ ಆಲೋಚನೆಗಳನ್ನು ಮಾಡಿ ಮಾರನೆಯ ದಿನ ಉತ್ತರವನ್ನು ಹೇಳುವುದಾಗಿ ಒಪ್ಪಿದರು. ನಂತರ ಯಾದವರಾಜನು, ಯತಿರಾಜರ ಅತಿ ನೈಪುಣ್ಯವಾದ ವಾಣಿಯನ್ನು ಕೇಳಿ ಆಶ್ಚರ್ಯ ಚಕಿತನಾಗಿ, ''ಸ್ವಾಮಿ, ರಾಮನುಜಮುನಿಗಳೇ! ಈ ವಾದದ ಶೇಷವು (ಉಳಿದಿರುವ ವಿಭಾಗವು) ಪುನಃ ಮತ್ತೊಂದು ದಿನ ನಡೆಯುತ್ತದೆ. ಆಗ ತಾವುಗಳೂ ದಯಮಾಡಿಸಬೇಕು ಎಂದು ಪ್ರಾರ್ಥಿಸುತ್ತೇನೆ'' ಎಂದು ಹೇಳಿ ಅಂದಿನ ಸಭೆಯನ್ನು ಮುಕ್ತಾಯಗೊಳಿಸಲು, ಶೈವರುಗಳು ಹುಲಿಯಿಂದುಂಟಾದ ಭಯದಂತೆ, ಶ್ರೀರಾಮಾನುಜ ಮುನಿಗಳಿಂದ ಉಂಟಾದ ಭಯವು ತೀರಿದಂತೆ ತಮ್ಮ ತಮ್ಮ ಮನೆಗಳಿಗೆ ತೆರಳಿದರು. ನಂತರ ಪೂಜಾರ್ಹರಾದ ರಾಮಾನುಜ ಮುನಿಗಳು ಅರಸನ ಒಪ್ಪಿಗೆಯನ್ನು ಪಡೆದು ತಮ್ಮ ಬಿಡದಿಗೆ ಪರಿವಾರದೊಂದಿಗೆ ಹೊರಟರು.

ಹೀಗಾಗಿ ಸಭೆಯಲ್ಲಿದ್ದವರೆಲ್ಲರೂ ಹೊರಟು ಹೋದನಂತರ ಯಾದವರಾಜನು ರಾಮಾನುಜಮುನಿವರ್ಯರ ಮಹಿಮೆಯನ್ನೂ, ವಾದಮಾಡಲು ಅವರಿಗಿರುವ ಸಾಮರ್ಥ್ಯವನ್ನೂ, ಅವುಗಳ ಬಗ್ಗೆ ತನ್ನ ಮಂತ್ರಿಗಳೊಂದಿಗೆ ಮಾತನಾಡುತ್ತಾ ಅವುಗಳಲ್ಲಿಯೇ ತನ್ನ ಮನಸ್ಸನ್ನಿಟ್ಟವನಾಗಿ, ಅವರ ವಾದವನ್ನು ಅತ್ಯಂತ ಸತ್ಯವಾದುದು(ನ್ಯಾಯವಾದುದು) ಶೈವರವಾದವು ಅದಕ್ಕೇ ನೇರವಿರುದ್ಧವಾಗಿದೆಯೆಂದು ತಿಳಿದು, 'ನಾಳೆ ಶೈವರುಗಳು ಏನು ಹೇಳುತ್ತಾರೆಂಬುದನ್ನು ನೋಡೋಣ' ಎಂದು ಚಿಂತಿಸುತ್ತಿದ್ದನು.

ಅದರ ಮಾರನೆಯದಿವಸ ಶೈವರುಗಳೆಲ್ಲರೂ ಒಂದಾಗಿ ಸೇರಿ ತಮ್ಮ ಪಕ್ಷದ ಬಲಗಳನ್ನೆಲ್ಲಾ ಪರಿಶೀಲಿಸಿ ನೋಡಿ, ಅರಸನ ಸಭೆಯಲ್ಲಿ 'ತಮ್ಮ ಪಕ್ಷವು ಜಯಿಸುವುದು' ಎಂಬ ಆಸೆಯು ಮುಗಿದು ಹೋಯಿತು ಎಂದು ತಿಳಿದುಕೊಂಡು, ಅದರಿಂದ ಅಂಜಿಕೆಯಿಂದ ಕೂಡಿದ ಮನಸ್ಸುಳ್ಳವರಾಗಿ, ಆದರೂ, ರೋಗಿಗೆ ಪ್ರಾಣಹೋಗುವವರೆಗೂ ಚಿಕಿತ್ಸೆ ಮಾಡಬೇಕೆಂದು ಭಾವಿಸಿಕೊಂಡು ಸಭೆಗೆ ಬಂದರು. ಅದರನಂತರ ಶ್ರೀರಾಮಾನುಜ ಮುನಿವರ್ಯರೂ ತಮ್ಮ ಶಿಷ್ಯರೊಡಗೂಡಿ ಸಭೆಗೆ ಬಂದು, ತಮ್ಮ ಪಾದಗಳಿಗೆ ನಮಸ್ಕರಿಸಿದ ಯಾದವರಾಜನಿಗೆ ಆಶೀರ್ವಾದ ಮಾಡಿದರು.

ಆಮೇಲೆ ಅರಸನೂ, ಸಭಾಸದರುಗಳೂ ಸಭೆಯಲ್ಲಿ ಕುಳಿತ ನಂತರ, ಮನಸ್ಥಿಮಿತ ಹೊಂದಿದ ಶೈವರುಗಳು, ''ಅರಸೇ! ಸ್ವಾಮಿ ಪುಷ್ಕರಿಣಿಯ ದಕ್ಷಿಣ

ತಟದಲ್ಲಿ ವಿರಾಜಿಸುವ ಈ ದೇವನು ಸ್ಕಂದನಾಗಿಯೋ ಮಹಾದೇವನಾಗಿಯೋ ಅಥವಾ ಕೊನೆಯ ಪಕ್ಷ ಹರಿಹರಾವತಾರ ರೂಪವುಳ್ಳವನಾಗಿಯೋ ಇರಲು ಸಾಧ್ಯತೆಯುಳ್ಳವನೇ. ಅಲ್ಲದೆ ಬರಿಯ ವಿಷ್ಣುವಿನರೂಪವಮಾತ್ರದ ರಚನೆಯನ್ನುಳ್ಳವನಲ್ಲ ಎಂದು ನಾವುಗಳು ಸ್ಪಷ್ಟವಾಗಿ ಹೇಳುತ್ತೇವೆ.

ಅವರುಗಳಲ್ಲಿ, ಸ್ವಾಮಿ ಪುಷ್ಕರಿಣಿಯ ದಕ್ಷಿಣತಟದಲ್ಲಿ ಆವಿರ್ಭವಿಸಿದ ಈ ದೇವನು ಸ್ಕಂದನೆಂದು ತಿಳಿದುಕೊಂಡಾಗಲೂ ಇವನಲ್ಲಿ ವಿಷ್ಣುವಿನ ಲಕ್ಷಣಗಳು ಕಂಡು ಬರುವುದಕ್ಕೆ ಯಾವ ವಿರೋಧವೂ ಇಲ್ಲ. ಸ್ಕಂದನು ಮಹಾವಿಷ್ಣುವಿನ ಸ್ವಲ್ಪ ಅಂಶದೊಂದಿಗೆ ಸೇರಿದ ರೂಪವಿರುವವನಾಗಿ ವಾಮನ ಪುರಾಣದಲ್ಲಿನ ವಚನಗಳಿಂದ ತಿಳಿದು ಬರುವುದರಿಂದ, ಅದರಿಂದ ಅವನು ಆವಿರ್ಭಾವ ಹೊಂದಿದಾಗ ಶ್ರೀ ವಿಷ್ಣುವಿನ ಲಕ್ಷಣಗಳಾದ ಶಂಖ ಚಕ್ರ ಮುಂತಾದ ಆಯುಧಗಳನ್ನು ತೋರಿಸಿಕೊಂಡು ಆವಿರ್ಭವಿಸಿದಾನೆ. ಎಂಬುದರಲ್ಲಿ ಯಾವ ತಡೆಯೂ ಇಲ್ಲವಲ್ಲವೇ?

ವಾಮನ ಪುರಾಣಭಾಗದಲ್ಲಿ ಎರಡನೆಯ ಅಧ್ಯಾಯದ ೨೧ ಎಂಬ ಸಂಖ್ಯೆಯುಳ್ಳ ವಚನದಲ್ಲಿ ಸ್ಕಂದನ ರೂಪವನ್ನು ಬೃಹಸ್ಪತಿಯು ಅವನಲ್ಲಿಯೇ ಹೇಳುವಾಗ - ನೀಳವಾದ ಬಾಹುಗಳನ್ನುಳ್ಳ ಉತ್ತಮವಾದ ದೇವ ಸೇನಾಧಿಪತಿಯೇ, ಸಂಕಟಪಡಬೇಡ, ನೀನು ಅವಿನಾಶನಾದ ವಿಷ್ಣುವಿನ ಶಕ್ತಿ ಎಂಬುದನ್ನು ಮರೆತುಬಿಟ್ಟೆ ಎಂದು ತೋರುತ್ತದೆ, - ಎಂದು ಹೇಳಿದ ಮಾತಿನಿಂದಲೂ, ಯೋಗದಿಂದ ಪ್ರಾಣವನ್ನು ಬಿಟ್ಟ ಆ ಸತೀದೇವಿಯು ಪರ್ವತರಾಜನಾದ ಹಿಮವಂತನಿಗೆ ಮಗಳಾಗಿ ಹುಟ್ಟಿ, ತಾಯಿಯಾದ ಮೇನಕೆಯಿಂದ ಪಾಲಿಸಲ್ಪಟ್ಟು ಚೆನ್ನಾಗಿ ಬೆಳೆದು ಬರುತ್ತಿದಾಳೆ. ಅತ್ಯಂತವಾದ ಹೆಚ್ಚಿನ ಗೌರವವನ್ನುಳ್ಳ ಪರಮಶಿವನನ್ನು ಅವಳೊಂದಿಗೆ ಸೇರಿಸಿ ತಾರಕಾಸುರನನ್ನು ವಧಿಸುವಂಥಹ ದೇವನೊಬ್ಬನನ್ನು ಹೆತ್ತು ತರುವಂತೆ ಆ ದೇವನಲ್ಲಿ ಪ್ರಾರ್ಥಿಸು. ವಿಷ್ಣುವಿನ ಒಂದು ಚಿಕ್ಕ ಅಂಶವನ್ನು ಹೊಂದಿದವನೂ ನಮಗೆ ಒಳ್ಳೆಯದನ್ನುಂಟುಮಾಡುವವನಾದ ಸ್ಕಂದ ಭಗವಂತನು ಉಂಟಾಗುತ್ತಾನೆ - ಎಂದು ಬ್ರಹ್ಮನು, ಇಂದ್ರನೊಂದಿಗೆ ಹೇಳಿದ ಮಾತಿನಿಂದಲೂ, ಬ್ರಹಸ್ಪತಿಯು ಸ್ಕಂದನನ್ನು ಸ್ತುತಿಸುವಾಗ, ಸ್ವರ್ಣದಂತೆ ತೇಜಸ್ಸುಳ್ಳವನೂ, ನಮ್ಮಗಳಿಗೆ ಒಳ್ಳೆಯದನ್ನು ಉಂಟುಮಾಡುವವನಾದ ಶಂಕರ ಕುಮಾರನೇ! ನಿನ್ನನ್ನು ಶರಣು ಹೋಗುತ್ತೇನೆ. ನೀನು ವಿಷ್ಣು, ಬ್ರಹ್ಮ ಮತ್ತು ಕಾಲನರೂಪಗೊಂಡ ರುದ್ರನೂ ಆಗುತ್ತೀಯೆ - ಎಂಬಿರುವ ಮಾತುಗಳಿಂದಲೂ, ಸ್ಕಂದನಲ್ಲಿ ಶ್ರೀ ವಿಷ್ಣುವಿನ ಒಂದು ಅಂಶವು ಸೇರಿರುವುದು ತಿಳಿಯಲ್ಪಡುತ್ತದೆಯಲ್ಲವೇ?

ಈ ರೀತಿಯೇ, ''ಒಂದು ಮುಖವನ್ನುಳವನು, ಎರಡು ಕೈಗಳನ್ನುಳ್ಳವನ ಎಂದು ಒಂದು ಮುಖ ವಿರುವ ಸ್ಥಿತಿಯಲ್ಲಿ ಎರಡು ಕೈಗಳಿರುವ ರೀತಿಯ ''ಹನ್ನೆರಡು ಕೈಗಳಿನಲ್ಲೂ ಕಂಡುಬರುವ ಶಸ್ತ್ರಗಳನ್ನುಳ್ಳವನೇ, ಸಂಕಟಗೊಂಡೀ ದೇವತೆಗಳ ಶತ್ರುಗಳಾದ ರಾಕ್ಷಸರನ್ನು ನಾಶ ಮಾಡುವ ಈಶನೇ,'' - ಎಂಬುದರಿ ಆರುಮುಖವಿರುವ ಸ್ಥಿತಿಗೆ ಸೇರಲು ಹನ್ನೆರಡು ಕೈಗಳುಳ್ಳ ರೀತಿ ಇರುವ ನಾಲ್ಕುಕೈಗಳುಳ್ಳ ಸ್ಥಿತಿಯೂ, ಇಷ್ಟಬಂದಂತೆ ರೂಪಗೊಳ್ಳಬಲ್ಲ ಈ ಸ್ಕಂದ ಉಂಟಾಗುವ ಯೋಗ್ಯತೆಯಿರುವುದರಿಂದ ತಿರುಮಲೆ (ತಿರುಪತಿ ಬೆಟ್ಟ)ಯ ವಿರಾಜಮಾನನಾಗಿರುವ ದೇವನಲ್ಲಿ ನಾಲ್ಕು ಕೈಗಳು ಕಂಡುಬರುವು ವಿರೋಧವಾಗಲಾರದು.

ಅಥವಾ, ಈತನು ಮಹಾದೇವನಾಗಿಯೇ ಇರಲು ಸಾಧ್ಯ. ಶಿವನಿಗೆ ಃ ಧರಿಸುವುದೂ, ನಾಗಾಭರಣವನ್ನು ತೊಡುವುದೂ ಅತ್ಯ ಪ್ರಸಿದ್ಧವಾಗಿರುವುದರಿಂದಲೂ, ವೈಷ್ಣವರಿಂದ ಎಲ್ಲಾ ಲೋಕಗಳಿ ಮೂಲಕಾರಣವಾಗಿ ಅಂಗೀಕರಿಸಲ್ಪಟ್ಟ ಮಹಾವಿಷ್ಣುವಿನಲ್ಲಿ ಎಲ್ಲ ಕಾರ್ಯ ಕಾ ಲಕ್ಷಣ ವಿರುವುದಾಗಿ ಹೇಳಲ್ಪಡುವರೀತಿಯಲ್ಲಿಯೇ, ನಮ್ಮಿಂದ ಅಂಗೀಕರಿಸಲ ಮಹಾದೇವನಲ್ಲಿಯೇ ಎಲ್ಲ ಕಾರ್ಯ ಕಾರಣ ಲಕ್ಷಣಗಳು ಇರುವುದೆಂ ಹೇಳಲ್ಪಡುವುದು ಸಮನ್ವಯಿಸುವುದಲ್ಲವೇ? ಮೇಲೂ, ವಿಷ್ಣುವಿನದೇ ಆದ ಮ ಶಿವನದೇ ಆದ ಲಕ್ಷಣಗಳು ಇವನಲ್ಲಿದೆಯೆಂದು ತಿಳಿಯಲ್ಪಡುವಾಗ, ಈ ದೇವನ ಲಕ್ಷಣಗಳನ್ನು ಕೊಂಡು, ವಿಷ್ಣುವೇ ಎಂದು ತಮ್ಮಗಳ ಇಷ್ಟದಂತೆಯೆ ಹೇಳಿಕೊಳ್ಳುವಾಗ, ಶಿವನಲಕ್ಷಣಗಳನ್ನು ಕೊಂಡು ಇವನನ್ನು ಮಹಾದೇವನೆ ಎಂ ಹೇಳುತ್ತಿರುವ ನಮ್ಮಗಳನ್ನು ಅಡ್ಡಿಮಾಡುವವರು ಯಾರು?

ಇಲ್ಲದಿದ್ದಲ್ಲಿ ಎರಡು ವಿಧಲಕ್ಷಣಗಳೂ ಕಂಡುಬರುವುದರಿಂದಲು ಪ್ರತಿವಾದ ಮಾಡುವ ವೈಷ್ಣವರು ಹೇಳಿದ- ಅವರುಗಳ ಮತಕ್ಕೆ ಮೂಲ ಪುರುಷರಾ ಪೇಯಾಳ್ವಾರ್ (ಮಹಾಯೋಗಿ)ರವರ ಪಾಶುರವು (ಪದ್ಯವ ನಂಬತಕ್ಕದಾಗಿರುವುದನ್ನು ಕಂಡೂ, ಈ ದೇವನು ಹರಿಹರಾವತಾರ ರೂಪ ಆಗುತ್ತಾನೆ. ಈ ರೀತಿ ಪರಿಗಣಿಸಿದಾಗ ಮಾತ್ರವೇ ಸ್ಕಂದ ಪುರಾಣದ ಮೊದಲನೆಂ ಭಾಗದಲ್ಲಿ ಎಂಟನೆಯ ಅಧ್ಯಾಯದಲ್ಲಿ ಮೋಕ್ಷವನ್ನು ಕೊಡುವ ಮಹಾದೇವನಾ ಶ್ರೀನಿವಾಸನನ್ನು ಯಾವ ಬ್ರಾಹ್ಮಣರು ಸ್ಮರಿಸುತ್ತಾರೆಯೋ ಅಥವಾ ಸ್ತೋ ಮಾಡುತ್ತಾರೆಯೋ ಅವರು ಪಾಪವೆಂಬ ಗೂಡಿನಿಂದ ಬಿಡುಗಡೆ ಯಾಗುತ್ತಾರೆ ಎಂಬ ಜಾಗದಲ್ಲಿಯೂ, ಶ್ರೀನಿವಾಸನಾದ ಮಹಾದೇವನನ್ನು ಯಾವ ಮಾನವ ಒಂದು ಸಲ ಪೂಜೆಮಾಡುತ್ತಾರೆಯೋ, ಅವರುಗಳು ತಪಸ್ಸು, ದಾನ, ಯಾ ವ್ರತ ಇವುಗಳಲ್ಲಿ ಯಾವುದನ್ನೂ ಮಾಡಬೇಕಾಗಿಲ್ಲ, (ಎಲ್ಲದರ ಫಲವನು

ಶ್ರೀನಿವಾಸನ ಪೂಜೆಯಿಂದಲೇ ಪಡೆಯುತ್ತಾರೆ) ಎಂಬಲ್ಲಿಯೂ ಈ ರೀತಿಯೇ ಬೇರೆ ಕೆಲವೆಡೆಗಳಲ್ಲಿಯೂ, ಈ 'ಶ್ರೀನಿವಾಸ ಮಹಾದೇವ' ಎಂಬ ಎರಡು ಪದಗಳಿಂದಲೂ ಈ ದೇವನನ್ನು ಗುರುತಿಸಿರುವಿಕೆಯು ಸಮನ್ವಯಿಸುತ್ತದೆ.

ಈ ರೀತಿಯೇ ಪಾದ್ಮ ಪುರಾಣಭಾಗದ ನಾಲ್ಕನೆಯ ಅಧ್ಯಾಯದಲ್ಲಿ ೨೭ನೆಯ ವಚನದಲ್ಲಿ ಆ ದೇವನ ರೂಪಲಾವಣ್ಯವನ್ನು ಹೇಳುವ ಸನ್ನಿವೇಶದಲ್ಲಿ, ''ಅಷ್ಟಮೀ ದಿನದ ಚಂದ್ರಕಲೆಯನ್ನು ಹೊತ್ತವನು ಮುಖಮಂಡಲದಲ್ಲಿ ಊರ್ಧ್ವ ಪುಂಡ್ರ (ನಾಮವನ್ನು) ಇಟ್ಟು ಕೊಂಡವನು' ಎಂದು ಈ ದೇವನಿಗೆ ಕೊಟ್ಟ ಗೂಢ ದೇವ ವಿಶೇಷಣಗಳೂ ಈ ದೇವನು ಹರಿಹರಾವತಾರ ರೂಪನೆಂಬುವುದನ್ನು ಸ್ಥಿರಪಪಡಿಸುವ ಸಾಧನಗಳಾಗುತ್ತವೆ. ಶಂಕರನಿಗೆ ಚಂದ್ರಕಲೆಯನ್ನು ಧರಿಸುವುದೂ, ಶ್ರೀವಿಷ್ಣುವಿಗೆ ಊರ್ಧ್ವ ಪುಂಡ್ರವನ್ನು ಧರಿಸುವುದೂ ಲಕ್ಷಣವಲ್ಲವೇ?

ಆದುದರಿಂದ ಈ ಪ್ರತಿಪಾದನೆ ಮೂರನ್ನೂ ಮೀರಿ ಈ ದೇವನು ಕೇವಲ ವಿಷ್ಣುವೇ ಎಂದು ಹೇಳಿ ಪ್ರತಿವಾದಿಸುತ್ತಿರುವ ವೈಷ್ಣವರ ಪ್ರತಿಪಾದನೆಯು ಸ್ವೀಕರಿಸತಕ್ಕದಲ್ಲ - ಎಂದು ಈ ರೀತಿ ತಮ್ಮ ಸಾಮರ್ಥ್ಯವನ್ನು ಪೂರ್ಣವಾಗಿ ತೋರಿಸಿದ ಶೈವರುಗಳಿಂದ ಈ ರೀತಿ ಹೇಳಲ್ಪಟ್ಟ ಯಾದವರಾಜನು, ಸೋಲಿಗೆ ಅಂಜಿದ ಮನಸ್ಸನ್ನುಳ್ಳ ಆ ಶೈವರುಗಳನ್ನು ಕುರಿತು ಮಾತನಾಡಿದನು.

**ಯಾದವರಾಜ**

ಎಲೈ ಶೈವರುಗಳೇ! ಏಕೆ ನೀವು ಅತಿ ಅತಿಯಾಗಿ ಆಯಾಸ ಪಡುತ್ತಿದೀರಿ? ಶ್ರೀರಾಮಾನುಜ ಮುನಿವರ್ಯರ ಮುಂಚಿನ ಉಪನ್ಯಾಸದಿಂದ ಈ ವಾದಗಳಿಗೂ ಪ್ರತಿವಾದವಾಗಿ ಉತ್ತರ ಹೇಳಲ್ಪಟ್ಟಿದೆ ಎಂದು ನಾನು ಭಾವಿಸುತ್ತೇನೆ. ಅತ್ಯಂತ ಗಂಭೀರವಾದ ಅರ್ಥಗಳನ್ನು ಕೊಂಡುದಾದ ಮುಂಚೆ ರಾಮಾನುಜರು ಹೇಳಿದ ವಾದವನ್ನು ಕೇಳಿದ ಯಾವನು ತಾನೇ ನಿಮ್ಮ ಈ ವಾದಕ್ಕೆ ಪ್ರತಿವಾದವನ್ನು ಹೇಳಲು ಅಸಮರ್ಥನಾಗುತ್ತಾನೆ? ನಿಮ್ಮವಾದವು ಸಾಸಿವೆಯಂತೆ ಆಡಂಭರವುಳ್ಳದ್ದು, ಮೇಘ ಘರ್ಜನೆಯಂತಿರುವ ಅವರ ವಾದವೋ ಎಂದರೆ ಮೇರುಪರ್ವತದಂತೆ ದೊಡ್ಡದಾಗಿ ಜಯವನ್ನು ಹೊಂದಿದುದು, (ಮೇರು ಪರ್ವತದ ಮುಂದೆ ಸಾಸುವೆಯು ಇದ್ದ ಜಾಗವು ಗೊತ್ತಾಗದಂತೆ ಕಾಣಿಸದಿರುವುದು), ನನಗೇ ನಿಮ್ಮ ವಾದಗಳಿಗೆ ಈಗ ಪ್ರತಿವಾದ ಹೇಳುವ ಸಾಮರ್ಥ್ಯವಿದೆ. ಆದರೂ ಹರಿಹರಾವತಾರವೆಂಬ ವಾದದ ಬಗ್ಗೆ ಸ್ವಲ್ಪ ಕೇಳಬೇಕೆಂದು ಇಷ್ಟವಿರುವುದರಿಂದ ಶ್ರೀರಾಮಾನುಜ ಮುನಿವರ್ಯರನ್ನೇ ಇದಕ್ಕೇ ಉತ್ತರ ಕೊಡಬೇಕೆಂದು ಪ್ರಾರ್ಥಿಸುತ್ತೇನೆ. ಸುಂದರವಾದ ಗಂಭೀರವಾದ ವಾಣಿಯಿಂದ ಅವರು ಹೇಳುವಮಾತುಗಳನ್ನು ಕೇಳುತ್ತೇನೆ, (ಎಂದು ಹೇಳಿದನು)

ಈ ರೀತಿ ಹೇಳಿದ ಆ ರಾಜನು, ''ಪೂಜ್ಯ ರಾಮಾನುಜ ಮುನಿವರ್ಯರೇ!

ತಮ್ಮ ವದನದಿಂದಲೇ ಈ ವಾದಕ್ಕೆ ಉತ್ತರವನ್ನು ತಿಳಿಯಲು ಆಸೆಪಡುತ್ತೇನೆ, ಆದುದರಿಂದ ತಕ್ಕುದಾದ ಉತ್ತರವನ್ನು ಕರುಣಿಸಬೇಕು,'' ಎಂದು ಆ ಮುನಿಶ್ರೇಷ್ಠರನ್ನು ಪ್ರಾರ್ಥಿಸಲಾದನು.

## ರಾಮಾನುಜ ಮುನಿವರ್ಯರು

ನಂತರ ರಾಮಾನುಜರು ಉತ್ತರನೀಡಿದರು - ಎಲೈರಾಜನೇ! ತತ್ತ್ವಮಾರ್ಗಕ್ಕೆ ವ್ಯತಿರಿಕ್ತವಾಗಿದ್ದ ನಿನ್ನ ಮನಸ್ಸಿನಲ್ಲಿದ್ದ ಸಂದೇಹಗಳೆಲ್ಲವೂ ನಿನ್ನದೇ ಆದ ಭಾಗ್ಯದಿಂದ ದೂರವಾಗುತ್ತಿರುವ ಈ ಸಮಯದಲ್ಲಿ, ಈಗ ಇವರು ಈ ಸ್ವಲ್ಪಭಾಗವನ್ನು, ಬೆಳಗಾದರೂ ಸೂರ್ಯೋದಯಕ್ಕೆ ಮುಂಚೆ ಸ್ವಲ್ಪ ಮಿಕ್ಕುಳಿದ ಇರುಳಿನಂತೆ ಭಾವಿಸುತ್ತೇನೆ.

ರಾಜನೇ! ಈ ಶೈವರುಗಳು - ಸ್ಕಂದನಲ್ಲಿ ವಿಷ್ಣುವಿನಂಶವಿರುವುದಾಗಿ (ವಾಮನ ಪುರಾಣದಲ್ಲಿ) ಹೇಳಲ್ಪಡುವುದರಿಂದ ವಿಷ್ಣುವಿನ ಲಕ್ಷಣಗಳು ಕಂಡು ಬರುವುದರಲ್ಲಿ ವಿರೋಧವಿಲ್ಲವೆಂದೂ, ಇಷ್ಟಬಂದಂತೆ ರೂಪವನ್ನು ಹೊಂದಬಲ್ಲವನಾದುದರಿಂದ, ಹನ್ನೆರಡು ಕೈಗಳನ್ನು ಹೊಂದಿರುವುದರಿಂದ ನಾಲ್ಕು ಕೈಗಳುಳ್ಳ ಸ್ಥಿತಿಯು ಸಮನ್ವಯವಾಗುವುದರಿಂದ ಆ ರೀತಿ ಗುರುತಿಸುವಿಕೆಯಿಂದ ವಿರೋಧವಿಲ್ಲವೆಂದು ತಿಳಿದಿರುತ್ತಾರೆ. ಅದು ಅತ್ಯಂತ ತಪ್ಪಾದುದು.

''ಅರ್ಜುನನೇ! ಯಾವ ಯಾವ ಪ್ರಾಣಿಯು ತನ್ನ ಕೈಕೆಳಗೆ ಹಲವಾರು ಪ್ರಾಣಿಗಳನ್ನು ಇಟ್ಟುಕೊಂಡಿವೆಯೋ, ಅವುಗಳನ್ನು ಕಾಪಾಡಲು ಧನಧಾನ್ಯಗಳನ್ನು ಹೆಚ್ಚಾಗಿ ಪಡೆದಿವೆಯೋ, ಮೇಲಿಂದ ಮೇಲೆ ಅವುಗಳನ್ನು ಸಂಪಾದಿಸಲು ಪ್ರಯತ್ನಿಸುವುವೋ, ಆಯಾಯಾ ಪ್ರಾಣಿಗಳೆಲ್ಲವೂ, ನನ್ನದಾದ, ಇತರರನ್ನು ವಶಪಡಿಸಿಕೊಂಡಾಳುವ ಸಾಮರ್ಥ್ಯದಿಂದ ಒಂದು ಸಣ್ಣ ಭಾಗದಿಂದ ಉಂಟಾದುವು ಎಂದು ತಿಳಿಯುವವನಾಗು'' ಎಂದು ಭಗವದ್ಗೀತೆಯಲ್ಲಿ ಹತ್ತನೆಯ ಅಧ್ಯಾಯದಲ್ಲಿ ಹೇಳಿರುವುದರಿಂದ, ಧನಧಾನ್ಯ ಸಂಪತ್ತುಗಳು ತುಂಬಿ, ಮೇಲಿಂದ ಮೇಲೆ ಆ ಸಂಪತ್ತುಗಳನ್ನು ಸಂಪಾದಿಸುವುದರಲ್ಲಿ ಪ್ರಯತ್ನಿಸುತ್ತಿರುವ ಎಲ್ಲಾ ಪ್ರಾಣಿಗಳಲ್ಲಿಯೂ ವಿಷ್ಣುವಿನ ಅಂಶವಿರುವುದರಿಂದ, ಆ ಲಕ್ಷಣವು ಸಮನ್ವಯ ವಾಗುತ್ತದೆಂದು ಹೇಳುವುದರಿಂದ, ಅವುಗಳಲ್ಲಿರುವಂತೆಯೇ, ಈ ಸ್ಕಂದನಲ್ಲಿಯೂ ದೇವಸೇನಾಧಿಪತಿಯ ಲಕ್ಷಣವೆನ್ನುವ ಸಂಪತ್ತು ಇರುವುದಕ್ಕಾಗಿ ವಿಷ್ಣುವಿನ ಅಂಶವನ್ನುಕೊಂಡಿರುವುದಾಗಿ ವಾಮನ ಪುರಾಣದಲ್ಲಿ ಹೇಳಲ್ಪಟ್ಟಿದೆ ಎಂಬುದನ್ನು ಮಾತ್ರವೇ ತೆಗೆದುಕೊಂಡು, ಮಹಾವಿಷ್ಣುವಿಗೇ ಸೇರಿದ ಲಕ್ಷಣಗಳು ಇವನಲ್ಲಿ (ಸ್ಕಂದನಲ್ಲಿ) ಕಂಡು ಬರುವುದಾಗಿ ಹೇಳುವುದು ಸಮನ್ವಯಿಸುವುದಿಲ್ಲವಾದುರಿಂದ ನಾಲ್ಕು ತೋಳುಗಳೊಂದಿಗೆ ಕೂಡಿದ ಈ ದೇವನು ನಾಲ್ಕು ತೋಳುಗಳಿಂದ

ಪ್ರಸಿದ್ಧಿಪಡೆದ ಮಹಾವಿಷ್ಣುವೇ ಎಂದು ಹೇಳುವ ಬೇರೆ ಪುರಾಣವಚನಗಳನ್ನು ತಳ್ಳಿಹಾಕಿ ಬಿಟ್ಟು ''ವಿಷ್ಣುವಿನ ಅಂಶವನ್ನು ಹೊಂದಿದವನು ಸ್ಕಂದನು, ಎಂದು ಹೇಳುವ ಮಂಚಿ ತೋರಿಸಿದ ವಾಮನ ಪುರಾಣದ ವಚನಗಳು ಮೂರೂ ಸ್ಕಂದನಲ್ಲಿ ಅಪ್ರಸಿದ್ಧವಾಗಿರುವಾಗ ತಾವೇ ಊಹಿಸಿ ಕಲ್ಪನೆ ಮಾಡಲ್ಪಟ್ಟ ನಾಲ್ಕು ತೋಳುಗಳುಳ್ಳ ಸ್ಥಿತಿಯನ್ನು ಗುರುತಿಸುವುದರಲ್ಲೇ ನೋಟವುಳ್ಳವುವೆಂದು ಕಲ್ಪನೆ ಮಾಡುವುದನ್ನು ನ್ಯಾಯವನ್ನು, ತಿಳಿದವರಾರೂ ಒಪ್ಪಲಾರರೆಂಬುದರಿಂದಲೂ ಈ ಶೈವರುಗಳು ತಿಳಿದುಕೊಂಡಿರುವುದು ಶುದ್ಧ ತಪ್ಪು ಎಂಬುದರಲ್ಲಿ ಸಂದೇಹವೇ ಇರುವುದಿಲ್ಲ.

ಹೀಗೆ ಭಗವದ್ಗೀತೆಯ ಹತ್ತನೆಯ ಅಧ್ಯಾಯದಲ್ಲಿ, ''ಸೇನಾಧಿಪತಿಗಳಲ್ಲಿ ನಾನು ಸ್ಕಂದನಾಗುತ್ತೇನೆ'' ಎಂದು ಸ್ಕಂದನಿಗೆ ವಿಷ್ಣುವಿನ ಅಂಶವಿರುವುದು ಹೇಗೆ ಹೇಳಲ್ಪಟ್ಟಿತೋ, ಅದೇರೀತಿ ಈ ವಾಮನ ಪುರಾಣದಲ್ಲಿಯೂ ಸಹ, ಸ್ಕಂದನು ವಿಷ್ಣುವಿನ ಒಂದು ಚಿಕ್ಕ ಅಂಶ (ಭಾಗ)ವನ್ನು ಹೊಂದಿರುತ್ತಾನೆ ಎಂದು ಹೇಳಲ್ಪಟ್ಟಿರುವುದರಿಂದ ಅದನ್ನು ಬಿಟ್ಟು ಇದರಲ್ಲಿ ವಿಶೇಷವೇನೂ ಇರುವುದಿಲ್ಲ. ವಿಷ್ಣುವಿನ ಅಂಶವಿರುವುದನ್ನು ಮಾತ್ರವೇ ಪರಿಗಣಿಸಿ, ಶ್ರೀ ವಿಷ್ಣುವಿಗೇ ಅಸಾಧಾರಣವಾದ ನಾಲ್ಕು ತೋಳುಗಳೂ, ಶಂಖ ಚಕ್ರ ಮುಂತಾದ ಚಿಹ್ನೆಗಳೂ ಸ್ಕಂದನಲ್ಲಿ ಕಾಣಬೇಕಾಗಿರಬೇಕಾದರೆ ''ಎಲ್ಲಾ ಮರಗಳಲ್ಲಿಯೂ ನಾನು ಅಶ್ವತ್ಥಮರವಾಗಿರುತ್ತೇನೆ'' ಎಂದು ಹೇಳಲ್ಪಟ್ಟುಳ್ಳ ಅಶ್ವತ್ಥಮರದಲ್ಲೂ ಶ್ರೀವಿಷ್ಣುವಿನ ಚಿಹ್ನೆಗಳು ಕಂಡು ಬರಬೇಕಾಗಿತ್ತಲ್ಲವೇ?

ಹಲವು ಹೇಳಿಕೆ ನೀಡಿ ಪ್ರಯೋಜನವೇನು? ''ವಿಷ್ಣುವಲ್ಲದವನು (ವಿಷ್ಣುವಿನಂಶವಿಲ್ಲದವನು) ಅರಸನಾಗಲಾರ'' ಎಂಬಿರುವ ಪಚನದಂತೆ, ಎಲ್ಲ ಅರಸರುಗಳಲ್ಲಿಯೂ ವಿಷ್ಣುವಿನ ಅಂಶವು ಕಲೆತು ಇರುವುದು ಇರಲೇಬೇಕಾದುದರಿಂದ, ವಿಷ್ಣುವಿಗೇ ಅಸಾಧಾರಣವಾದ ಚಿಹ್ನೆಗಳು ಎಲ್ಲಾ ಅರಸರುಗಳಲ್ಲಿಯೂ ಏಕೆ ಕಾಣಲ್ಪಡಲಿಲ್ಲ? ಎಂದು ಪ್ರಶ್ನೆಮಾಡಿದರೆ ಅದಕ್ಕೆ ಏನು ಉತ್ತರವಿದೆ ಎಂಬುದನ್ನು ಈ ಶೈವರುಗಳು ಚಿಂತಿಸಿ ತೀರ್ಮಾನಿಸಲಿ.

ಮೇಲೂ, ವಾಮನ ಪುರಾಣದ ಎರಡನೆಯ ಅಧ್ಯಾಯದ ಕೊನೆಯಲ್ಲಿ ೨೧ನೇ ಸಂಖ್ಯೆಯು ಸೂಚಿಸಿರುವ ವಚನದಲ್ಲಿ ಕುಮಾರನು ಸ್ವಾಮಿ ಪುಷ್ಕರಿಣಿಯಲ್ಲಿ ಮಿಂದು ಅದರ ದಡದಲ್ಲಿ ಕುಳಿತುಕೊಂಡನು. ಅಲ್ಲಿ ವಾಯುದೇವನೂ ತಪಸ್ಸು ಮಾಡುತ್ತಿದ್ದುದನ್ನು ಕಂಡ ಆ ಷಣ್ಮುಖನು, ಅವನ ಪಕ್ಕದಲ್ಲೇ, ಬೆಳಿಗ್ಗೆ, ಮಧ್ಯಾಹ್ನ, ಸಂಜೆ ಎಂಬ ತ್ರಿಕಾಲಗಳಲ್ಲಿಯೂ, ದೇವ ದೇವರ ಸ್ವಾಮಿಯಾದ (ದೇವಾಧಿದೇವನಾದ) ಶಂಖ ಚಕ್ರಧಾರಿಯಾದ, ಪರದೇವತೆಯಾದ

ಶ್ರೀಮನ್ನಾರಾಯಣನನ್ನು ಸ್ಮರಿಸುತ್ತಾ, ಧ್ಯಾನವನ್ನು ಮಾಡುತ್ತಾ, ಸಮಾಧಿಸ್ಥಿತಿಯನ್ನು ಪಡೆಯುತ್ತಾ, ಘೋರವಾದ ತಪಸ್ಸನ್ನು ಮಾಡಿದನು - ಎಂದು ಶ್ರೀವೇಂಕಟಾಚಲಕ್ಕೆ ಬಂದು, ತಾರಕಾಸುರವಧೆಯಿಂದ ತನಗೆ ಉಂಟಾದ ಪಾತಕವನ್ನು ತೀರಿಸಿಕೊಳ್ಳುವುದಕ್ಕಾಗಿ ತಪಸ್ಸುಮಾಡುವ ಕುಮಾರನು, ಶಂಖ ಚಕ್ರಧಾರಿಯಾದ ಮಹಾ ವಿಷ್ಣುವನ್ನೇ ಕುರಿತು ತಪಸ್ಸನ್ನಾಚರಿಸಿದುದನ್ನು ಹೇಳುವುದರಿಂದಲೂ, ಐದನೆಯ ಅಧ್ಯಾಯದ ೨೪ ಎಂಬ ಸಂಖ್ಯೆಯ ವಚನದಲ್ಲಿ - ಇದಕ್ಕೆ ಮುಂಚಿನಿಂದಲೇ ತಪಸ್ಸಿನಲ್ಲಿ ಮಗ್ನನಾಗಿದ್ದ ವಾಯುದೇವನಿಗೆ ಅವನ ತಪಸ್ಸಿನ ಫಲವಾಗಿ ಶ್ರೀನಿವಾಸನೆಂಬ ಭಗವಾನ್ ನಾರಾಯಣನ ಆವಿರ್ಭಾವವನ್ನು ತಿಳಿಸಿ, ಅದರಂತೆಯೇ ಸ್ಕಂದನಿಗೂ ಅವನ ತಪಸ್ಸಿನ ಫಲವಾಗಿ ಆ ನಾರಾಯಣನ ಆವಿರ್ಭಾವವೂ, ನಂತರ ಕಲ್ಪಾಂತರದವರೆಗೆ ಆದೇವನನ್ನು ಪೂಜಿಸುವ ವರವನ್ನು ಸ್ಕಂದನು ಅವನಿಂದ ಪಡೆದುದು ಸ್ಪಷ್ಟವಾಗಿ ಹೇಳಿರುವುದರಿಂದಲೂ, ಪೂಜಿಸುವವನು ಸ್ಕಂದನೆಂದೂ ಪೂಜಿಸಲ್ಪಡುವ ದೇವನು ಸ್ವಾಮಿಪುಷ್ಕರಿಣಿಯ ದಕ್ಷಿಣ ತಟದಲ್ಲಿ ಆವಿರ್ಭವಿಸಿದ ಶ್ರೀನಿವಾಸನೆಂಬ ಶ್ರೀಮನ್ನಾರಾಯಣನೆಂದೂ ಸ್ಪಷ್ಟವಾಗಿ ಗೊತ್ತಾಗುವುದರಿಂದ ಪೂಜಿಸಲ್ಪಡುವವನನ್ನು ಪೂಜಿಸುವ ಸ್ಕಂದನೆಂದು ಉನ್ಮತ್ತ (ಹುಚ್ಚ)ನಲ್ಲದೇ ಬೇರೆ ಯಾರೂ ಹೇಳಲಾರರು.

ಸ್ಕಂದನು ಶ್ರೀನಿವಾಸನನ್ನು ಪೂಜಿಸಿದನೆಂಬ ವೃತ್ತಾಂತವು ಶ್ರೀವೆಂಕಟಾಚಲ ಮಹಾತ್ಮ್ಯವನ್ನು ತಿಳಿಸುವ ಪುರಾಣ ಭಾಗಗಳಲ್ಲಿ, ಹೆಚ್ಚು ಕಡಿಮೆ ಎಲ್ಲ ಜಾಗಗಳಲ್ಲಿಯೂ ಪ್ರಸಿದ್ಧವಾಗಿದೆ. ಆದುದರಿಂದಲೇ, ವರಾಹ ಪುರಾಣದ ಪ್ರಥಮ ಭಾಗ, ಇಪ್ಪತ್ತೊಂಭತ್ತನೆಯ ಅಧ್ಯಾಯ ೬೧ನೇ ಸಂಖ್ಯೆಯ ವಚನದಲ್ಲಿ, ''ಕುಮಾರನಿಂದ ಕಲ್ಪಮುಗಿಯುವವರೆಗೂ ಆರಾಧಿಸಲ್ಪಡುವವನು'', ''ಕುಮಾರಧಾರಾತೀರ್ಥದ ಬಳಿವಾಸಿಸುವ ಸ್ಕಂದನ ಇಷ್ಟಾರ್ಥವನ್ನು ಕೊಡುವವನು'' ಎಂದು ಎರಡುನಾಮ (ಹೆಸರು)ಗಳು ಗುರುತಿಸಲ್ಪಟ್ಟಿವೆ.

ಮೇಲೂ ಈ ಶೈವರುಗಳನ್ನು ಕುರಿತು ಈ ಪ್ರಶ್ನೆಗಳನ್ನು ಕೇಳಬೇಕು, (೧) ಸ್ವಾಮಿಪುಷ್ಕರಿಣಿಯ ದಕ್ಷಿಣತೀರದಲ್ಲಿ ಈಗ ಎಲ್ಲರ ಕಣ್ಣಳಿಗೂ ಗೋಚರವಾಗಿ ಅರ್ಚಾರೂಪದೊಂದಿಗೆ ಒಬ್ಬದೇವನು ವಿರಾಜಿಸುತ್ತಿದಾನೆ (೨) ತಾರಕಾಸುರ ವಧೆಯಿಂದ ತನಗುಂಟಾದ ಕೊಲೆಪಾತಕವನ್ನು ಹೋಗಲಾಡಿಸುವುದಕ್ಕಾಗಿ ಶ್ರೀವೇಂಕಟಾಚಲಕ್ಕೆ ಬಂದವನೂ, ಸ್ಕಂದನೆಂದು ಹೆಸರುಳ್ಳವನಾದ ಒಬ್ಬದೇವನು ಪುರಾಣಗಳಿಂದ ತಿಳಿಯಬರುತ್ತಾನೆ (೩) ಸ್ವಾಮಿ ಪುಷ್ಕರಿಣಿಯ ದಕ್ಷಿಣತೀರದಲ್ಲಿ ಬ್ರಹ್ಮನೇ ಮೊದಲಾದ ದೇವತೆಗಳೂ, ದೇವರ್ಷಿಗಳೂ, ಬ್ರಹ್ಮರ್ಷಿಗಳೂ, ರಾಜರ್ಷಿಗಳೂ ಮುಂತಾದ ಎಲ್ಲರಿಂದಲೂ ಆಚರಿಸಲ್ಪಟ್ಟ ತಪಸ್ಸುಗಳ ಫಲವಾಗಿ

ಅಷ್ಟು ಜನರ ಕಣ್ಣುಗಳಿಗೂ ಕಾಣಿಸುವವನಾಗಿ, ಶ್ರೀವೈಕುಂಠದಲ್ಲಿರುವ ದಿವ್ಯ ವಿಮಾನ ದೊಂದಿಗೆ ಪ್ರತ್ಯಕ್ಷನಾದ ಶ್ರೀನಿವಾಸನೆಂದು ಹೆಸರನ್ನುಳ್ಳ ಒಬ್ಬದೇವನು ಪುರಾಣದಿಂದ ವೇದ್ಯನಾಗುತ್ತಿದಾನೆ. ಇವರುಗಳಲ್ಲಿ ಮೊದಲು ಗುರುತಿಸಲ್ಪಟ್ಟ ಅರ್ಚಾರೂಪಿಯಾದ ದೇವನನ್ನು, ಈ ಶೈವರುಗಳು, ಎರಡನೆಯವನಾಗಿ ತಿಳಿಸಲ್ಪಟ್ಟ ಸ್ಕಂದನೆಂದು ಹೇಳುತ್ತಾರೆಯೇ? ಅಥವಾ ಮೂರನೆಯವನಾಗಿ ತಿಳಿಸಲ್ಪಟ್ಟ ಶ್ರೀನಿವಾಸನೆಂದು. ಹೇಳುತ್ತಾರೆಯೇ? ಎಂಬುದೇ ಈ ಪ್ರಶ್ನೆಗಳು.

ಆ ಎರಡು ಪ್ರಶ್ನೆಗಳಲ್ಲಿ ಅರ್ಚಾಮೂರ್ತಿಯನ್ನು ಸ್ಕಂದನೆಂದು ತಿಳಿಯುವ ಪ್ರಥಮ ಪಕ್ಷ - ತನ್ನ ಪಾತಕವನ್ನು ಹೋಗಿಸಿಕೊಳ್ಳುವ ಸಲುವಾಗಿ ತಪಸ್ಸುಮಾಡುವುದಕ್ಕಾಗಿ ಶ್ರೀವೇಂಕಟಾಚಲಕ್ಕೆ ಬಂದ ಸ್ಕಂದನು, ಈ ಬೆಟ್ಟದಲ್ಲಿ ಶ್ರೀನಿವಾಸ ಭಗವಂತನು ಪ್ರತ್ಯಕ್ಷನಾಗುವುದಕ್ಕಾಗಿಯೂ, ಅವನನ್ನು ನೇರವಾಗಿ ದರ್ಶಿಸುವುದಕ್ಕಾಗಿಯೂ ತಪಸ್ಸುಮಾಡಲು ಬಂದ ಬ್ರಹ್ಮ, ಶಿವ, ಇಂದ್ರ ಮುಂತಾದ ಮತ್ತು ಮಹರ್ಷಿಗಳಂತೆಯೇ, ಭಗವಂತನನ್ನೇ **ಪೂಜಿಸುವುದಕ್ಕೆ** ಮಾತ್ರ ಇಲ್ಲಿ ಇರುತ್ತಿದಾನೆ ಎಂಬುದೇ ಸರಿಯಾದುದಾದುದರಿಂದ, ಇವನೊಬ್ಬನು ಮಾತ್ರ ಆರಾಧಿಸಲ್ಪಡುವ **ಅರ್ಚಾಮೂರ್ತಿಯಾಗಿರುತ್ತಿದಾನೆ** ಎಂಬುದರಲ್ಲಿ ಕಾರಣವಾವುದೂ ಇಲ್ಲವಾದಾಗಿಯೂ, ಕುಮಾರಧಾರಾ ತೀರ್ಥದಲ್ಲಿಯೇ ಇವನು ಯಾವಾಗಲೂ ವಾಸಿಸುತ್ತಿದಾನೆ ಎಂದು ಹೇಳಲ್ಪಡುವುದರಿಂದ, ಸ್ವಾಮಿ ಪುಷ್ಕರಿಣಿಯ ದಕ್ಷಿಣ ತಟದಲ್ಲಿ ಇವನಿಗೆ ನಿತ್ಯವಾಸವು ಇರಲು ಯಾವದಾರಿಯೂ ಇಲ್ಲದುದರಿಂದಲೂ, ಆ ತಟದಲ್ಲಿ ಸ್ಕಂದನು ಅರ್ಚಾರೂಪದಲ್ಲಿ ಒಬ್ಬನಿಂದ ಪ್ರತಿಷ್ಠೆ ಮಾಡಲ್ಪಟ್ಟಿದಾನೆಂದು **ವೇಂಕಟಾಚಲಮಾಹಾತ್ಮ್ಯ**ವನ್ನು ಹೇಳುವ ಪುರಾಣ ಭಾಗಗಳಲ್ಲಿ ಎಲ್ಲಿಯೂ ಹೇಳಲ್ಪಟ್ಟಿರುವುದಾಗಿ ತಿಳಿಯುತ್ತಿಲ್ಲವಾದುದರಿಂದ, ಇದಕ್ಕೆ ನೇರ ವಿರುದ್ಧವಾಗಿ ಮೂರನೆಯವನಾದ ದೇವನಾಗಿ ಹೇಳಲ್ಪಟ್ಟ ಶ್ರೀನಿವಾಸನೇ, ದೇವತೆಗಳು, ಮಹರ್ಷಿಗಳು, ಇವರುಗಳ ಪ್ರಾರ್ಥನೆಯಂತೆ ನಿತ್ಯವಾಸವನ್ನು ಮಾಡುತ್ತಿದಾನೆಂದೂ, ಶಂಖರಾಜ, ತೊಂಡಮಾನ್ ಚಕ್ರವರ್ತಿ ಮುಂತಾದವರು ಅರ್ಚಾರೂಪವನ್ನುಂಟುಮಾಡಿ **ಆಯಲಯವನ್ನು ಕಟ್ಟಿ** ಪೂಜೆ ಮುಂತಾದುವುಗಳು ಅವನಿಗೆ ನಡೆಯುವಂತೆ ಮಾಡಿಸಿದರೆಂದೂ ಪುರಾಣದಿಂದ ಗೊತ್ತಾಗುವುದರಿಂದಲೂ - ಸಮನ್ವಯಿಸುವುದಿಲ್ಲ.

ಅರ್ಚಾರೂಪದಲ್ಲಿರುವ ಮೊದಲನೆಯ ದೇವನು, ಮೂರನೆಯ ದೇವನಾದ ಶ್ರೀನಿವಾಸನೆಂದು ತಿಳಿಯುವ ದ್ವಿತೀಯ ಪಕ್ಷದಂತೆ, ಮೊದಲ ದೇವನು ಸ್ಕಂದನಲ್ಲ, ಶ್ರೀನಿವಾಸನೆಂಬ ಹೆಸರನ್ನುಳ್ಳ ಬೇರೊಬ್ಬದೇವನು ಎಂಬುದು ಪ್ರತಿಪಾದಿಸಲ್ಪಟ್ಟಿತು.

ಶ್ರೀನಿವಾಸನೆಂಬ ಹೆಸರನ್ನುಳ್ಳವನು ಸ್ಕಂದನೇ ಅವನು ಬೇರೊಬ್ಬ ದೇವನಲ್ಲನು ಎಂಬುದೂ ಸಮನ್ವಯವಾಗುವುದಿಲ್ಲ. ಸ್ಕಂದನ ತಪಸ್ಸು, ಬ್ರಹ್ಮ,

ಶಿವ, ಇಂದ್ರ ಮುಂತಾದ ಎಲ್ಲ ದೇವತೆಗಳ, ಮಹರ್ಷಿಗಳೇ ಮುಂತಾದವರುಗ
ತಪಸ್ಸುಗಳ ಫಲವಾಗಿ ಆವಿರ್ಭವಿಸಿ ಅವರುಗಳಿಂದ ಆರಾಧಿಸಲ್ಪಟ್ಟುದುದರಿಂ
ಅವರುಗಳಿಗಿಂತಲೂ ಬೇರೆಯವನಾಗಿ ಶ್ರೀನಿವಾಸನು ಆವಿರ್ಭವಿಸಿದುದರಿಂದಲೂ
ಶ್ರೀನಿವಾಸನ ಆವಿರ್ಭಾವವನ್ನು ಹೇಳುವ ಪುರಾಣ ಭಾಗಗಳಲ್ಲಿ
ಶ್ರೀಮನ್ನಾರಾಯಣನೇ ವೈಕುಂಠದಿಂದ ಕ್ರೀಡಿಸುವುದಕ್ಕೋಸ್ಕರವೂ, ಲೋಕಗಳನ್ನು
ಸಂರಕ್ಷಿಸುವುದಕೋಸ್ಕರವೂ ತಿರುಪತಿ ಬೆಟ್ಟದಲ್ಲಿ ಆವಿರ್ಭವಿಸಿದನೆಂದು, ವಿಷ್ಣುವನ್ನೆ
ಗುರುತಿಸುವ 'ನಾರಾಯಣ' ಎಂಬ ಪದದಿಂದಲೇ ಸ್ಪಷ್ಟವಾಗಿ ತಿಳಿಯಲ್ಪಟ್ಟ ಈ
ಶ್ರೀನಿವಾಸನನ್ನು ಸ್ಕಂದನೆಂದು ತಿಳಿಯುವುದಕ್ಕೆ ಸ್ವಲ್ಪವೂ ಅವಕಾಶವಿಲ್ಲ
ದಿರುವುದರಿಂದಲೂ ಆ ರೀತಿ ಹೇಳುವುದು ಸಮನ್ವಯಿಸುವುದಿಲ್ಲವೆಂಬುದನ್ನು
ಕಾಣಿರಿ.

ಆದುದರಿಂದ, ಸ್ಕಂದನೇ ಇವನು ಎಂಬ ಈ ವಾದವು-ಮುಂದೆ ಮತ್ತು
ಹಿಂದೆ ಇರುವ ಪುರಾಣವಚನಗಳ ಹೊಂದಾಣಿಕೆಯನ್ನು ಸ್ವಲ್ಪವೂ ವಿವೇಚಿಸದ
ಮಂದಮತಿಗಳಿಂದ ಉಂಟುಮಾಡಲ್ಪಟ್ಟುದಾದುದರಿಂದ ವಿದ್ವಜ್ಜನರುಗಳಿಂದ
ಇದನ್ನು ತೆಗೆದುಕೊಳ್ಳತಕ್ಕದಲ್ಲ.

ಇನ್ನು, ಈ ದೇವನು ಮಹಾದೇವನೂ ಅಲ್ಲ. ಮುಂಚೆ ಹೇಳಿದಂತೆ
**ಮೂರನೆಯವನಾಗಿ ಹೇಳಲ್ಪಟ್ಟ ಶ್ರೀನಿವಾಸನು ಮಹಾದೇವನಾಗಿ ಇದ್ದರೆ ಮಾತ್ರವೆ**
ಅವನ **ಅರ್ಚಾರೂಪವಾದ** ಮೊದಲ ದೇವನು ಮಹಾದೇವನೆಂದು
(ಪರಮಶಿವನೆಂದು) ಹೇಳಬಹುದು. ಮೂರನೆಯವನು ನಾರಾಯಣನೆಂಬುವುದ
ಅವನ ಆವಿರ್ಭಾವವನ್ನು ಹೇಳುವ ಭಾಗಗಳಲ್ಲಿರುವ ನಾರಾಯಣ ಪದ
ಮೊದಲಾದುವುಗಳಿಂದಲೇ ಸ್ಪಷ್ಟವಾಗಿ ತಿಳಿಯ ಬರುವುದರಿಂದ, ಇವನ
ಮಹಾದೇವನೆಂಬ ಕಥೆಯು, ಇವನ ಮೊದಲನೆಯ ಕಥೆಯೊಂದಿಗೆ ಸೇರ
ಒಪ್ಪಲಾರದಾಗಿ ಬಿದ್ದುಹೋಯಿತು.

ಸ್ಕಂದನು ಬಂದ ನಂತರ ಭಗವಾನ್ ಶ್ರೀನಿವಾಸನು ಪ್ರಸಿದ್ಧವಾಗಿ
ಹಿರಿಯದೊಂದು ಆವಿರ್ಭಾವ ಮಾಡುವುದಕ್ಕೆ ಸ್ವಲ್ಪ ಮುಂಚೆ ಬ್ರಹ್ಮ, ಇಂದ್ರ
ಮುಂತಾದ ದೇವತೆಗಳು ಮತ್ತು ಋಷಿಗಳ ಗುಂಪಿನ ರೀತಿಯಲ್ಲಿಯೇ, ಈ
ಮಹಾದೇವನೂ ವೇಂಕಟಗಿರಿಗೆ ಬಂದು ಅವನ ಆವಿರ್ಭಾವವನ್ನೂ ಮತ್ತು
ಅವನನ್ನು ಪ್ರತ್ಯಕ್ಷವಾಗಿ ನೋಡುವುದನ್ನೂ ಸಹ ಸಿದ್ಧಿಸುವುದಕ್ಕಾಗಿ ಬೆಟ್ಟದ ತಪ್ಪಲಲ್ಲೇ
ತಪಸ್ಸನ್ನಾಚಾರಿಸುವುದರಲ್ಲಿ ಮಗ್ನನಾಗಿದ್ದು, ಆ ದೇವನು
ಆವಿರ್ಭವಿಸಿದುದರಿಂದುಂಟಾದ ಬ್ರಹತ್ ಶಬ್ದವನ್ನು ಕೇಳಿ ಪರಮಪದ (ವೈಕುಂಠ)

ದಿಂದ ಬಂದ ದಿವ್ಯ ವಿಮಾನದೊಂದಿಗೆ ಪ್ರತ್ಯಕ್ಷನಾದುದೂ, ಸಮಸ್ತ ಲೋಕಗಳ ಸೃಷ್ಟಿ, ಲಯಗಳಿಗೆ ಕಾರಣನಾದುದೂ, ಅವನಿಂದ ತೋರಿಸಲ್ಪಟ್ಟುದೂ ಆದ ಅವನ ಮೊದಲನೆಯ ರೂಪವನ್ನು ಕಂಡು, ಪೂಜಿಸಿ, ತನ್ನ ಕೋರಿಕೆಗಳನ್ನು ಬಿನ್ನವಿಸಿದುದೂ ಮುಂತಾದ ಸಲ್ಲಾಪಗಳನ್ನು ಮಾಡಿ ಪೂರೈಸಿ, ಪುನಃ ತನ್ನ ಪರಿವಾರದೊಂದಿಗೆ ಕೈಲಾಸಕ್ಕೆ ಹೋದನು ಎಂದೂ, ಭಗವಾನ್ ಶ್ರೀನಿವಾಸನು ಮಾತ್ರ ತಿರುಪತಿ ಬೆಟ್ಟದಲ್ಲಿಯೇ ನಿತ್ಯವಾಸವನ್ನು ಮಾಡುತ್ತಾ ಬಂದನೆಂದೂ ವಾಮನ ಪುರಾಣ ಭಾಗಗಳಲ್ಲಿ ಸ್ಪಷ್ಟವಾಗಿಯೇ ಹೇಳಲ್ಪಟ್ಟಿರುವುದರಿಂದ ಯಾವರೀತಿ ಈ ಶ್ರೀನಿವಾಸದೇವನು ಮಹಾದೇವನಾಗಿ ಇರಲು ಸಾಧ್ಯ?

ವಾಮನ ಪುರಾಣದ ಮೂರನೆಯ ಅಧ್ಯಾಯದಲ್ಲಿ ೨೨ನೇ ಸಂಖ್ಯೆಯ ವಚನದಲ್ಲಿ - ಪುಟವಿಟ್ಟ ಚಿನ್ನದ ಕಾಂತಿಯನ್ನುಳ್ಳ ಸ್ಕಂದನು ಧನುಸ್ಸು ಮತ್ತು ವೇಲ್ (ಶಕ್ತ್ಯಾಯುಧ) - ಧರಿಸಿಕೊಂಡು ದೇವಸೇನೆಗಳೊಡನೆ ತಪಸ್ಸು ಮಾಡಲು ಹೋದನಂತರ, ಮಗನಲ್ಲಿ ಉಂಟಾದ ವಾತ್ಸಲ್ಯದಿಂದ ಪ್ರೇರಿಸಲ್ಪಟ್ಟ ಪಾರ್ವತಿ ದೇವಿಯಾದವಳು, ಅಷ್ಟಮೀಚಂದ್ರನನ್ನು ತಲೆಯಮೇಲೆ ಹೊತ್ತಿರುವವನೂ, ಸುಖವನ್ನೇ ಕೊಡುವವನೂ, ಪ್ರಳಯಕಾಲದಲ್ಲಿ ಎಲ್ಲರನ್ನೂ ಸಂಹರಿಸುವವನಾದ ತನ್ನ ಪತಿಯನ್ನು ಭಕ್ತಿಯಿಂದ ನಮಸ್ಕರಿಸಿ, ''ಹೇ ಮುಕ್ಕಣ್ಣದೇವಾ (ತ್ರಿನೇತ್ರನೇ) ಚಿಕ್ಕವನಾದ ನನ್ನ ಮಗನು ಆ ಬೆಟ್ಟದಲ್ಲಿ ಏನು ಮಾಡುತ್ತಾನೆ? ಬ್ರಹ್ಮದೇವನಿಂದಲೂ ಮನಸ್ಸಿನಿಂದ ಚಿಂತಿಸಲೂ ಸಾಧ್ಯವಾಗದ ಆ ವಿಷ್ಣುದೇವನನ್ನು ಅವನು ಹೇಗೆ ತನ್ನ ಕಣ್ಣುಗಳಿಂದ ನೋಡುತ್ತಾನೆ?'' ಎಂದು ಕೇಳಲು, ಆದಕ್ಕಾಪರಮಶಿವನು, ''ಪರ್ವತ ರಾಜಕುಮಾರಿಯಾದ ದೇವಿಯೇ, ನಡೆಯಲಿರುವ ಅದ್ಭುತವಾದ ರಹಸ್ಯ ವೃತ್ತಾಂತವೊಂದನ್ನು ನಿನಗೆ ಹೇಳುತ್ತೇನೆ ಕೇಳು. ಪರಬ್ರಹ್ಮನಾದ ವಿಷ್ಣುವನ್ನು ಕಾಣಲಿಚ್ಛಿಸಿದ ಮುನಿಗಳೆಲ್ಲರೂ ಅತ್ಯಂತ ಬೃಹತ್ತರವಾದ ತಪಸ್ಸನ್ನು ಮಾಡುವುದಕ್ಕಾಗಿ ಆ ಬೆಟ್ಟಕ್ಕೆ ಬರುವವರಾಗಿರುತ್ತಾರೆ. ದೇವತೆಗಳೂ, ಮಾನವರೂ, ಪಿತೃಗಳೂ, ಗಂಧರ್ವರೂ, ಯಕ್ಷರೂ, ರಾಕ್ಷಸರೂ, ಸಿದ್ಧರೂ, ಸಾಧ್ಯರೂ, ಗರುಡರೂ, ಪನ್ನಗರೂ, ಮುನಿವರೂ ಮುಂತಾದವರೆಲ್ಲರೂ, ನಿತ್ಯನಾದ, ಪರಮಾತ್ಮನಾದ ವಿಷ್ಣುವನ್ನು ಪ್ರತ್ಯಕ್ಷವಾಗಿ ಕಾಣಲು ಆಸೆಗೊಂಡು ಆ ಬೆಟ್ಟದಲ್ಲಿ ತಪಸ್ಸು ಮಾಡುವವರಾಗುತ್ತಾರೆ. ಪ್ರೇಯಸಿಯೇ! ನಾವಿಬ್ಬರೂ ಬಹುಕಾಲ ಕಳೆದು ಪುಣ್ಯವಾದ ವೇಂಕಟಗಿರಿಯಲ್ಲಿ ಆವಿರ್ಭಾವಗೊಳ್ಳುವ, ನಾರಾಯಣನೆಂದೂ, ಪರಬ್ರಹ್ಮನೆಂದೂ ಹೇಳಲ್ಪಡುವ ಪರಮಾತ್ಮನನ್ನು ಕಾಣಲು ಹೋಗೋಣ. ಅವನ ಆವಿರ್ಭಾವವು ಉಂಟಾಗುವುದಕ್ಕಾಗಿ ಹಿರಿಯ ತಪಸ್ಸನ್ನು ಆಚರಿಸಲು ನಾವೂ ಮತ್ತಿತರ ದೇವತೆಗಳೂ ಮುನಿ ಶ್ರೇಷ್ಠರುಗಳೂ ಅಲ್ಲಿಗೆ ಹೋಗಬೇಕು,'' - ಎಂದು ಹೇಳಿದರೆಂದೂ,

ಐದನೆಯ ಅಧ್ಯಾಯದ ೨೪ನೇ ಸಂಖ್ಯೆಯ ವಚನದಲ್ಲಿ ಶಂಖರಾಜನ ಕೋರಿಕೆಯನ್ನು ನೆರವೇರಿಸುವುದಕ್ಕಾಗಿ ಶ್ರೀ ಮಹಾವಿಷ್ಣುವು ಪ್ರಪಂಚದಲ್ಲಿ ಅತ್ಯಂತ ಪ್ರಸಿದ್ಧವಾದುದೆಂಬ ಒಂದು ಮಹಾನ್ ಆವಿರ್ಭಾವವನ್ನು ಮಾಡುತ್ತಾನೆ. ಸಮಸ್ತ ಲೋಕಗಳ ಕ್ಷೇಮಕ್ಕಾಗಿಯೇ ಶಂಖರಾಜನನ್ನು ವ್ಯಾಜವಾಗಿಟ್ಟುಕೊಂಡು ಪುಣ್ಯಮಯವಾದ ವೇಂಕಟಗಿರಿಯಲ್ಲಿ ಆವಿರ್ಭವಿಸುತ್ತಾನೆ (ಅವತರಿಸುತ್ತಾನೆ), ಅದಕ್ಕಾಗಿ ಮುಂಚೆಯೇ ನಾವೂ ಅತ್ಯಂತ ದೊಡ್ಡ ತಪಸ್ಸುಮಾಡಲು, ಬಹಳಕಾಲದನಂತರ ಅಲ್ಲಿಗೆ ಹೋಗೋಣ. ದೇವತೆಗಳೆಲ್ಲರೂ, ಋಷಿಗಳೆಲ್ಲರೂ ಅಲ್ಲಿಗೆ ಹೋಗುವರು. ಆಗ ವಿಷ್ಣುಭಕ್ತಿಯಲ್ಲಿ ಮನಸ್ಸು ಲಯಿಸಲ್ಪಟ್ಟು ಕುಮಾರಸ್ವಾಮಿಯನ್ನು ಕಾಣುವ - ಎಂದು ಪರಮಶಿವನು ಹೇಳಲು ಪಾರ್ವತೀದೇವಿಯು ಮನಸ್ಸಿನಲ್ಲಿದ್ದ ಆತಂಕದಿಂದ ಬಿಡುಗಡೆಯಾದಳು. ಆದಾದ ನಂತರ, ಬಹುಕಾಲ ಕಳೆದನಂತರ, ವೇಂಕಟಗಿರಿಗೆ ಹೋಗಲು ಇಷ್ಟಪಟ್ಟ ಪರಮಶಿವನು, ಮಗನಾದ ಸ್ಕಂದನನ್ನು ಕಾಣಲು ಅತೀವ ಆಸೆಗೊಂಡು ಪಾರ್ವತಿಯನ್ನು ಕುರಿತು, ''ನಾನು ನಿನ್ನಲ್ಲಿ ಮುಂಚೆ ಹೇಳಿದಂತೆ, ಶ್ರೀವೇಂಕಟವೆಂಬ, ಅತ್ಯಂತ ಪುಣ್ಯದಾಯಕವಾದ, ಶ್ರೇಷ್ಠವಾದ, ಬೆಟ್ಟಕ್ಕೆ ಹೋಗಲು ಬೇಕಾದ ಕಾಲವು ಈಗ ಲಭಿಸಿದೆ'', ಎಂದು ಹೇಳಿದನೆಂದೂ, ಅದೇ ಅಧ್ಯಾಯದ ಮೇಲ್ಭಾಗದಲ್ಲಿ - ಪರ್ವತಕುಮಾರಿಯೇ! ನಾವಿಬ್ಬರೂ ನಮ್ಮ ಪರಿವಾರಗಳೊಡನೆ ಆ ಬೆಟ್ಟಕ್ಕೆ ಹೋಗಿ ದೇವಸೇನೆಗಳೊಡನೆಯೂ, ಬೇಡರುಗಳೊಡನೆಯೂ ಸೇರಿ ವಿಹರಿಸುತ್ತಿರುವ ಅಕಳಂಕನಾದ ಗುಹನನ್ನು (ಕುಮಾರಸ್ವಾಮಿಯನ್ನು) ಕಂಡು ಕೊಂಡು ಅಲ್ಲಿಯೇ ಯಾವಾಗಲೂ ವಾಸಿಸೋಣ - ಎಂದು ಪಾರ್ವತಿಯೊಡನೆ ಹೇಳಿದ ಶಂಕರನು ಅವಳೊಂದಿಗೆ ವೃಷಭಾರೂಢನಾಗಿ ದರ್ಶಿಸುವುದಕ್ಕಾಗಿ ವೇಂಕಟಗಿರಿಗೆ ಹೋದನು ಎಂದು ಹೇಳಲ್ಪಟ್ಟಿದೆ.

ಹೀಗೆಯೇ ಒಂಭತ್ತನೆಯ ಅಧ್ಯಾಯದಲ್ಲಿ ೨೮ನೇ ಸಂಖ್ಯೆಯ ವಚನದಲ್ಲಿ - ಋಷಿಗಣಗಳೊಡನೆ ಕೂಡಿದ ಅಗಸ್ತ್ಯ ಋಷಿಯು ಭಗವಾನ್ ಶ್ರೀನಿವಾಸನು ಆವಿರ್ಭವಿಸುವುದನ್ನು ಪ್ರತೀಕ್ಷಿಸುತ್ತಲೇ ಶ್ರೀವೇಂಕಟಗಿರಿಯನ್ನು ಪ್ರದಕ್ಷಿಣೆ ಮಾಡಿಕೊಂಡಿರುವಾಗ, ಅವರು ದಕ್ಷಿಣದಿಕ್ಕಿನಲ್ಲಿರುವ ಕಪಿಲ ತೀರ್ಥದ ಬಳಿ, ಗಣಗಳೊಡನೆ ಶ್ರೀಶ್ರೀನಿವಾಸ ಭಗವಂತನ ಆವಿರ್ಭಾವಕ್ಕಾಗಿ ಘೋರ ತಪಸ್ಸನ್ನು ಮಾಡುತ್ತಾ ಸಮಾಧಿ ಸ್ಥಿತಿಯಲ್ಲಿ ಇದ್ದ ಮಹಾದೇವನ ಬಳಿ ಸಾರಿ ಸಂತೋಷದಿಂದ ಮಾತನಾಡಿದರು - ಎಂದು ಹೇಳಲ್ಪಟ್ಟಿದೆ.

ಹನ್ನೊಂದನೆಯ ಅಧ್ಯಾಯದ ೩೩ನೇ ಸಂಖ್ಯೆಯ ವಚನದಲ್ಲಿ ಅಸಾಧಾರಣವಾದ ಆ ಶಬ್ದವನ್ನು ಕೇಳಿದ ಲೋಕಪಿತಾಮಹನಾದ ಬ್ರಹ್ಮದೇವನು,

ವಾಸುದೇವನಾದ ಶ್ರೀಹರಿಯು ಆವಿರ್ಭವಿಸಿದನು ಎಂದು ತಿಳಿದು, ಕೂಡಲೇ ದೇವತೆಗಳ, ಋಷಿಗಳ, ಗಂಧರ್ವರುಗಳ ಸಮೂಹದೊಂದಿಗೆ ಸೇರಿ ಕ್ಲೇಶರಹಿತನಾಗಿ, ಉಪಯುಕ್ತ ಕಾರ್ಯವನ್ನು ಮಾಡುವ ಆ ಭಗವಾನ್ ಕೃಷ್ಣನ ಸಮೀಪಕ್ಕೆ ಬಂದನು. ಜಟಾಧಾರಿಯಾಗಿ ಕಂಡು ಬಂದವನೂ, ಜ್ವಲಿಸುವ ಸೂರ್ಯನಂತಿರುವವನೂ, ಮುಕ್ಕಣ್ಣನೂ ಆದ ಭಗವಾನ್ ಶಂಕರನೂ ಆ ಶಬ್ದವನ್ನು ಕೇಳಿ, ಪುಣ್ಯಮನಸ್ಕನಾದ ಭಗವಾನ್ ಶ್ರೀಹರಿಯು ಆವಿರ್ಭವಿಸಿದನು ಎಂದರಿತು ಕೂಡಲೇ ಅವನನ್ನು ದರ್ಶನಮಾಡಲು ಅವನ ಸಮೀಪಕ್ಕೆ ಬಂದು ಸೇರಿದನು - ಎಂದು ಇವೇ ಮೊದಲಾಗಿ, ಅತೀವ ಶಬ್ದವೊಂದರಿಂದ ಭಗವಂತನಾದ ಶ್ರೀನಿವಾಸನು ಆವಿರ್ಭವಿಸಿದೊಡನೆಯೇ, ಆ ಶಬ್ದವನ್ನು ಕೇಳಿ, ಬ್ರಹ್ಮ, ಇಂದ್ರ, ಶಿವ ಮುಂತಾದ ಸಕಲದೇವತೆಗಳೂ, ಎಲ್ಲಾ ಋಷಿಗಳೂ ಬಂದು ಭಗವಂತನನ್ನು ಸ್ತುತಿಸಿದುದೂ, ತಮ್ಮ ತಮ್ಮ ಕೋರಿಕೆಗಳನ್ನು ಬಿನ್ನವಿಸಿದುದೂ ಮುಂತಾದುವುಗಳು ಹೇಳಲ್ಪಟ್ಟುವು.

ಹತ್ತೊಂಭತ್ತನೆಯ ಅಧ್ಯಾಯದ ೩೮ನೇ ಸಂಖ್ಯೆಯ ವಚನದಲ್ಲಿ - ಚಂದ್ರಕಲೆಯನ್ನು ಧರಿಸಿದವನೂ, ಶಂಭುವೆಂದೂ, ಶಿವನೆಂದೂ ಕರೆಯಲ್ಪಟ್ಟವನಾದ ಶಂಕರಭಗವಂತನು ಶ್ರೀವೇಂಕಟಾಚಲದಿಂದ ಕೈಲಾಸಕ್ಕೆ ಯಾವ ರೀತಿ ಹೋದನು? - ಎಂದು ಪ್ರಾರಂಭಿಸಿ - ಶಿವನು ಕೈಲಾಸಕ್ಕೆ ಹೋದುದನ್ನು ಹೇಳಲ್ಪಟ್ಟಿದೆಯೇ ವಿನಹ ಸ್ವಾಮಿಪುಷ್ಕರಿಣಿಯ ದಂಡೆಯಲ್ಲಿ ಅವನು ವಾಸಿಸುತ್ತಿದ್ದನೆಂಬುದು ಹೇಳಲ್ಪಡಲಿಲ್ಲ. ಶ್ರೀನಿವಾಸನಿಗೆ ಮಾತ್ರ ಸ್ವಾಮಿ ಪುಷ್ಕರಿಣಿಯ ದಕ್ಷಿಣ ದಂಡೆಯಲ್ಲಿ ಕಲ್ಪಕಾಲ ಮುಗಿಯುವ ವರೆಗೂ ವಾಸವೆಂಬುದು - ''ಲೋಕಗಳನ್ನು ಸಂರಕ್ಷಿಸಲು ಕಲ್ಪಕಾಲ ಮುಗಿಯುವವರೆಗೂ ಇಲ್ಲಿ ವಾಸಿಸುತ್ತೇನೆ'' - ಎಂದು ಹೇಳಿದ ಭಗವಂತನ ವಾಕ್ಯವು ವಾಮನ ಪುರಾಣ ಭಾಗಗಳಲ್ಲಿ ಐದನೆಯ ಅಧ್ಯಾಯದ ೨೪ನೇ ಸಂಖ್ಯೆಯ ವಚನದಲ್ಲಿ ಮಹಾದೇವ ನಿಂದಲೇ ಅನುವಾದ ಮಾಡಲ್ಪಟ್ಟಿರುವುದರಿಂದ ಸ್ಪಷ್ಟವಾಗಿತಿಳಿದು ಬರುತ್ತದೆ.

ವರಾಹ ಪುರಾಣದ ಮುಂಚಿನ ಭಾಗಗಳಲ್ಲಿ ಹದಿನೇಳನೆಯ ಅಧ್ಯಾದಲ್ಲಿ ೪೯ ಎಂದು ಗುರುತಿಸಿರುವ ವಚನದಲ್ಲಿ, ಭಗವಾನ್ ಶ್ರೀನಿವಾಸನ ಆವಿರ್ಭಾವವನ್ನು ಹೇಳುವ ಘಟ್ಟದಲ್ಲಿ, ಮಹಾದೇವನು ಶ್ರೀವೇಂಕಟಾಚಲದ ಮೇಲೆ ತಾನು ವಾಸಮಾಡಬೇಕೆಂಬುದನ್ನು ಶ್ರೀನಿವಾಸನಲ್ಲಿ ಪ್ರಾರ್ಥಿಸಿ ಕೊಂಡಾಗಲೂ, ಪರಮಪದದಿಂದ ಬಂದ ಅಪ್ರಾಕೃತ ಬೆಟ್ಟದಲ್ಲಿ ಕೆಳಗಿನ ಲೋಕಗಳಲ್ಲಿರುವವರು ಪೂಜಿಸಲ್ಪಡುವವರಾಗಿರುವುದು ಯೋಗ್ಯವಲ್ಲವೆಂದು ಚಿಂತಿಸಿದ ಆ ದೇವನು, ಆ ಮಹಾದೇವನಿಗೆ ಆ ಬೆಟ್ಟದ ತಪ್ಪಲಿನಲ್ಲಿಯೇ ವಾಸಮಾಡಲು ಸಮ್ಮತಿಸಿದನೆಂದು ಮುಂಚೆಯೇ ಹೇಳಲ್ಪಟ್ಟಿತು. ಅಲ್ಲಿಯೂ, ''ಕಲ್ಪಕಾಲ ಮುಗಿಯುವವರೆಗೂ

ಶ್ರೀವೇಂಕಟಾಚಲವೆಂಬ ಬೆಟ್ಟದಲ್ಲಿ ವಾಸಮಾಡುವವನಾಗಿದ್ದೇನೆ'' ಎಂದು ಮಹಾದೇವನಲ್ಲಿ ಶ್ರೀನಿವಾಸದೇವನಿಂದಲೇ ತನ್ನ ನಿತ್ಯವಾಸವು ವೇಂಕಟಾಚಲದ ಮೇಲೆಯೇ ಎಂದು ಸ್ಪಷ್ಟವಾಗಿ ಹೇಳಲ್ಪಟ್ಟಿರುವುದಾಗಿ ತಿಳಿಯಬರುತ್ತದೆ,

ಆದುದರಿಂದ ಮಹಾದೇವನು, ಶ್ರೀನಿವಾಸನು ಆವಿರ್ಭವಿಸಿದ ಸಮಯದಲ್ಲಿ ಬ್ರಹ್ಮನೇ ಮುಂತಾದವರಂತೆ ಆ ದೇವನನ್ನು ದರ್ಶಿಸುವುದು, ನಮಸ್ಕರಿಸುವುದು ಮುಂತಾದುವುಗಳಿಗಾಗಿ ಸ್ವಾಮಿ ಪುಷ್ಕರಿಣಿಯ ತಟಕ್ಕೆ ಬಂದುದು ಮತ್ತು ಪುನಃ ಹಿಂತಿರುಗಿದುದು ಮಾತ್ರವೇ ಅರಿಯಲ್ಪಡುವುದರಿಂದಲೂ, ಅಲ್ಲಿ ಆವಿರ್ಭವಿಸಿದ ದೇವನಿಗೇ ನಿತ್ಯವಾಸವು ಎಂದು ಅರಿಯಲ್ಪಡುವುದರಿಂದ, ಅವನು ಬ್ರಹ್ಮ, ಶಿವ ಮತ್ತಿತರ ದೇವತೆಗಳಿಂದಲೂ, ಮುನಿಗಣಗಳಿಂದಲೂ, ಇತರ ಸಮಸ್ತರಿಂದಲೂ ನಮಸ್ಕರಿಸಲ್ಪಡತಕ್ಕ ಪದವಿಯಲ್ಲಿ ಉಳ್ಳವನೆಂದೂ, ಅವನ ಆವಿರ್ಭಾವರೂಪವನ್ನು ವರ್ಣಿಸುವ ಪುರಾಣಭಾಗಗಳಲ್ಲಿ, ಭಗವಂತನಿಗೆ ಅಸಾಧಾರಣವಾಗಿರುವ ನಾರಾಯಣನೆಂಬ ಮಾತುಗಳಿಂದಲೇ ಆ ದೇವನು ನಾರಾಯಣನೇ ಎಂದು ಅರಿಯಲ್ಪಡುವುದರಿಂದ ಆತನ ಅರ್ಚಾರೂಪದಲ್ಲಿರುವ ಈ ದೇವನು ಮಹಾದೇವನಾಗಿರುವುದು ಯೋಗ್ಯವಲ್ಲವೆಂದು ಹೇಳಲ್ಪಟ್ಟಿತು.

ಮೇಲೂ, ಮಹಾದೇವನು ಲಿಂಗರೂಪದಲ್ಲಿಯೇ ಪೂಜಿಸಲ್ಪಡುವುದು ಪ್ರಪಂಚದಲ್ಲಿ ಎಲ್ಲಕಡೆಯೂ ಮತ್ತು ಶಾಸ್ತ್ರಗಳಿಂದ ಪ್ರಸಿದ್ಧವಾಗಿರುವುದರಿಂದಲೂ, ಎಲ್ಲಾ ಅವಯವಗಳಿಂದಲೂ ಕೂಡಿದ ಒಂದು ಬಿಂಬರೂಪದಲ್ಲಿ ಮಹಾದೇವನನ್ನು ಪೂಜಿಸುವುದು ಎಲ್ಲಿಯೂ ಪ್ರಸಿದ್ಧವಾಗಿಲ್ಲದುದರಿಂದಲೂ, ಶಾಸ್ತ್ರಗ್ರಂಥಗಳಲ್ಲಿ ವಿರೋಧಿಸಲ್ಪಟ್ಟಿರುವುದರಿಂದಲೂ, ಈ ದೇವನು ಮಹಾದೇವನು ಅಲ್ಲ. ಲಿಂಗರೂಪದಲ್ಲಿಯೇ ಮಹಾದೇವನನ್ನು ಪೂಜಿಸಬೇಕೆಂದೂ, ಪೂರ್ಣವಾದ ಬಿಂಬರೂಪದಲ್ಲಿ ಅವನನ್ನು ಪೂಜಿಸಕೂಡದೆಂದೂ, ಶ್ರೀ ವೇಂಕಟಾಚಲ ಮಹಾತ್ಮ್ಯಯನ್ನು ಹೇಳುವ ಭವಿಷ್ಯೋತ್ತರ ಪುರಾಣಭಾಗದಲ್ಲಿ ಎರಡನೆಯ ಅಧ್ಯಾಯದಲ್ಲಿ ಹೇಳಲ್ಪಟ್ಟಿದೆ.

ಪೂರ್ಣರೂಪವನ್ನು ಹೊಂದಿರುವ ಈ ಶ್ರೀನಿವಾಸನು ಮಹಾ ದೇವನಿಗಿಂತ ಬೇರೆಯವನಾಗಿ ಅವನ ಅತ್ಯಂತ ಭಕ್ತಿಗೆ ಪಾತ್ರನಾದ ನಾರಾಯಣನೇ ಆದುದರಿಂದ, ವರಾಹ ಪುರಾಣದ ಮೊದಲ ಭಾಗದ ಇಪ್ಪತ್ತೊಂಭತ್ತನೆಯ ಅಧ್ಯಾಯದಲ್ಲಿ ೬೧ ಎಂಬ ಸಂಖ್ಯೆಯಿಂದ ಗುರುತಿಸಿರುವ ಅಷ್ಟೋತ್ತರಶತನಾಮಾವಳಿಯಲ್ಲಿ ''ಬೆಟ್ಟದ ತಪ್ಪಲಿನಲ್ಲಿರುವ ಶಂಕರನಿಂದ ಧ್ಯಾನಿಸ್ಪಟ್ಟ ದಿವ್ಯ ಶರೀರವನ್ನು ಹೊಂದಿದವನು'' ಎಂದೂ ಬ್ರಹ್ಮಾಂಡ ಪುರಾಣದಲ್ಲಿ ಅನುಬಂಧವಾದ ವೇಂಕಟೇಶ ಸಹಸ್ರನಾಮಾಧ್ಯಾಯದಲ್ಲಿ, ''ನೀಲಕಂಠ ನಿಂದ ನಮಸ್ಕರಿಸಲ್ಪಟ್ಟು ಸುತ್ತಿಸಲ್ಪಡತಕ್ಕವನು'' ಎಂದೂ, ''ಸುವರ್ಣ ಮುಖೀ ನದಿಯ ದಡದಲ್ಲಿ ವಾಸಿಸುವ

ಶಿವನಿಂದ ಧ್ಯಾನಮಾಡಲ್ಪಟ್ಟ ಶ್ರೀಪಾದಾಂಬುಜಗಳನ್ನುಳ್ಳವನು'' ಎಂದೂ ಶ್ರೀನಿವಾಸನ ಶ್ರೀನಾಮಗಳು ಓದಲ್ಪಡುತ್ತವೆ. ಆದುದರಿಂದಲೇ, ಭವಿಷ್ಯೋತ್ತರ ಪುರಾಣದಲ್ಲಿರುವ ಎಂಭತ್ತನೆಯ ಅಧ್ಯಾಯದಲ್ಲಿ ಶ್ರೀನಿವಾಸನೆಂದು ಹೆಸರನ್ನುಳ್ಳ ಶ್ರೀವೇಂಕಟೇಶನು, ತಾನು ಪ್ರತಿನಿತ್ಯಮಾಡುವ, ಮನಸ್ಸಿಗೆ ಹಿಡಿಸಿದುದಾದ, ಪರಮರಹಸ್ಯವಾದ ಧ್ಯಾನಕ್ಕೆ ಪಾತ್ರನಾದವನು, ತನ್ನ ಪರಮಭಕ್ತಿಗೆ ಪಾತ್ರನಾದ ನಾರಾಯಣನೇ ಆಗುತ್ತಾನೆ - ಎಂದು ಪಾರ್ವತಿಗೆ ಮಹಾದೇವನೇ ಹೇಳಿದುದಾಗಿ ಸ್ಪಷ್ಟವಾಗಿ ತಿಳಿದು ಬರುತ್ತದೆ.

ಜಟೆ ಮತ್ತು ನಾಗಾಭರಣವನ್ನು ಧರಿಸಿರುವಿಕೆಯು ಮಹಾದೇವನಲ್ಲಿಯೇ ಅತ್ಯಂತ ಪ್ರಸಿದ್ಧವಾಗಿರುವುದರಿಂದ, ಆ ಎರಡನ್ನೂ ಧರಿಸಿದ ಈ ದೇವನು ಮಹಾದೇವನಾಗುತ್ತಾನೆ ಎಂದು ಹೇಳುವುದು, ವಿಷ್ಣುವಿಗೇ ಅಸಾಧಾರಣವಾಗಿರುವ ನಾರಾಯಣ ಪದ ಮುಂತಾದ ಆಗಮ ಶಾಸ್ತ್ರಗಳಿಂದ ನಾರಾಯಣನೆನ್ನುವುದು ಸ್ಥಿರಪಡುವಾಗ ಜಟೆಯೂ ಮತ್ತು ನಾಗಾಭರಣವೂ ಮುಂತಾದ ಅನುಮಾನಗಳಿಂದ ಇವನನ್ನು ಮಹಾದೇವನೆಂದೂ ಊಹಿಸಿ ತಿಳಿಯುವುದು ಸಮನ್ವಯವಾಗುವುದಿಲ್ಲವಾದುದರಿಂದ, ವಿಷ್ಣುವಿನ ಅವತಾರಗಳಲ್ಲಿಯೂ ಜಟೆ ನಾಗಾಭರಣಗಳು ಇರುವಿಕೆಯು ಪ್ರಮಾಣಗ್ರಂಥಗಳಿಂದ ಪ್ರಸಿದ್ಧವಾಗಿದೆಯೆಂಬುದನ್ನು ಮುಂಚೆಯೇ ತಿಳಿಸಿರುವುದರಿಂದ ಇದು ಯೋಗ್ಯವಲ್ಲವು.

ಮೇಲೂ, ಶೈವರುಗಳು - ರುದ್ರನಿಗೆ ಅವತಾರಗಳು ಇರುವುದಾಗಿ ಹೆಸರೇ ಇಲ್ಲದಿರುವುದರಿಂದ, ಒಂದೇ ರೀತಿಯಾದ ಆತನ ರೂಪದಲ್ಲಿ ಜಟೆ ಮತ್ತು ನಾಗಾಭರಣಗಳು ಯಾವಾಗಲೂ ಇರುವುದರಿಂದ ಅವುಗಳು ಅವನಲ್ಲಿ ಪ್ರಸಿದ್ಧವಾಗಿವೆ ಎಂದೂ, ಹಲವು ಅವತಾರಗಳನ್ನು ಮಾಡಿದ ವಿಷ್ಣುವಿಗೋ ಎಂದರೆ ಅವುಗಳು ಕೆಲವುದರಲ್ಲಿದ್ದು ಕೆಲವುದರಲ್ಲಿ ಇಲ್ಲದೇ ಇರುವುದರಿಂದ ಅವನಲ್ಲಿ ಆ ಎರಡೂ ಪ್ರಸಿದ್ಧವಾದವುಗಳಲ್ಲವೆಂದೂ, ಎಂಬುದನ್ನು ಕೊಂಡು, ಅವು ಯಾರಲ್ಲಿ ಪ್ರಸಿದ್ಧಿ ಯಾಗಿವೆಯೋ ಆ ದೇವನಾಗಿಯೇ ಶ್ರೀನಿವಾಸನನ್ನು ಕಾಣಬೇಕೆಂದು ಅಭಿಪ್ರಾಯಪಡುತ್ತಾರೆ.

ಆ ಅಭಿಪ್ರಾಯವು - ಒಂದೊಂದು ಕಲ್ಪಗಳಲ್ಲೂ ಉಂಟಾಗುವ ವಿಷ್ಣುವಿನ ಹಲವು ಅವತಾರಗಳಲ್ಲಿ ಯಾವ ಯಾವ ಚಿಹ್ನೆಗಳು ತಿಳಿಯಲ್ಪಟ್ಟಿರುತ್ತವೆಯೋ, ಆಯಾಯಾ ಅವತಾರದಲ್ಲಿ, ಆಯಾಯಾ ಚಿಹ್ನೆಗಳು ಒಂದೊಂದು ಕಲ್ಪದಲ್ಲಿಯೂ ತಪ್ಪದೆಯೆ ಕಂಡುಬರುವುದರಿಂದ, ವಿಷ್ಣುವಿನಲ್ಲಿ ಜಟೆ ಮುಂತಾದ ಗುರುತುಗಳುಳ್ಳ ಅಧಿಕವಾದ ಪ್ರಸಿದ್ಧಿಗೆ ಯಾವ ಕೊರತೆಯೂ ಇಲ್ಲದಿರುವುದರಿಂದ, ಇದಕ್ಕೆ

ಪ್ರತಿಯಾಗಿ ರುದ್ರನ ಒಂದೇ ರೂಪದಲ್ಲಿ ಜಟೆ ಮುಂತಾದುವುಗಳು ಒಂದೊಂದು ಕಲ್ಪದಲ್ಲಿಯೂ ಇರುವುದರಿಂದಲೂ, ವಿಷ್ಣುವಿಗೆ ಹಲವುರೂಪಗಳಲ್ಲಿ ಅವುಗಳು ಇರುವುದರಿಂದಲೂ, ರುದ್ರನಲ್ಲಿ ಅವುಗಳಿರುವ ಪ್ರಸಿದ್ಧಿಗಿಂತ ವಿಷ್ಣುವಿನಲ್ಲಿರುವ ಪ್ರಸಿದ್ಧಿಯೇ ಅಧಿಕವಾಗಿರುವುದರಿಂದ - ತಪ್ಪಾಗುತ್ತದೆ.

ಜಟೆ ಧರಿಸುವಿಕೆ (ಜಟಾಧಾರಣ) ಎಂಬುದು ವಿಷ್ಣುವಿನ ಹಲವು ಅವತಾರಗಳಲ್ಲಿ ಹಲವು ಪ್ರಮಾಣಗಳಿಂದ ಪ್ರಸಿದ್ಧಿಹೊಂದಿದೆ. ಶ್ರೀ ರಾಮಾವತಾರದಲ್ಲಿ ಜಟಾಧಾರಣೆಯು ಶ್ರೀರಾಮಾಯಣದಲ್ಲಿ ಪ್ರಸಿದ್ಧವೆಂಬುದು ಹಿಂದೆಯೇ ತಿಳಿಸಲ್ಪಟ್ಟಿದೆ. ಆ ವೃತ್ತಾಂತವು ಶ್ರೀವೇಂಕಟಾಚಲ ಮಹಾತ್ಮ್ಯವನ್ನು ತಿಳಿಸುವ ಬ್ರಹ್ಮಾಂಡ ಪುರಾಣದಲ್ಲಿ ಶ್ರೀ ವೇಂಕಟೇಶ ಸಹಸ್ರನಾಮಾಧ್ಯಾಯದಲ್ಲಿ 'ಜಟಾವಾನ್ ಪರ್ಣಶಾಲಾಸ್ಥಃ ಮಾರೀಚ ಬಲಮರ್ದಕಃ (ಜಟೆಯನ್ನುಳ್ಳವನೂ, ಪರ್ಣಶಾಲೆಯಲ್ಲಿರುವವನೂ, ಮಾರೀಚನ ಬಲವನ್ನು ನಾಶಮಾಡಿದವನು) ಎಂದು ತೋರಿಸಲ್ಪಟ್ಟಿದೆ.

ನಾಗವನ್ನು ಆಭರಣವಾಗಿ ಧರಿಸುವುದೆಂಬುದು-ಭಗವಂತನ ಹಲವು ಅವತಾರಗಳಲ್ಲಿ ಶ್ರೀವೇಂಕಟೇಶಾವತಾರದ ಸ್ವರೂಪಗಳನ್ನು ನಿರ್ಧರಿಸುವುದಾದುದೂ, ಇತರವುಗಳಲ್ಲಿರುವುದಕ್ಕಿಂತ ವ್ಯತ್ಯಾಸವಾಗಿರುವ ಅಸಾಧಾರಣ ಧರ್ಮವನ್ನು ಹೊಂದಿದುದೂ, ಹಿಂದೆ ತಿಳಿಸಿದ ಸಹಸ್ರನಾಮಾಧ್ಯಾಯದಲ್ಲಿ, ಬೇಟೆಯಾಡುವುದರಲ್ಲಿ ಕುಂದದ ಉತ್ಸಾಹವುಳ್ಳವನೂ, ಶಂಖರಾಜನಿಗೆ ಆನಂದವನ್ನು ಕೊಡುವವನೂ, ಶಿವನಲ್ಲಿ ಉಳ್ಳವನೂ, ಗರುಡನನ್ನೇ ವಾಹನವನ್ನಾಗಿ ಉಳ್ಳವನೂ, ಶರೀರವಿಲ್ಲದವನೂ, ನಾಗರಾಜನಿಂದ ಸುತ್ತಲ್ಪಟ್ಟಿರುವುದನ್ನೇ ತನಗೆ ಗುರುತಾಗಿ ಉಳ್ಳವನೂ, ಬ್ರಹ್ಮನೇ ಮುಂತಾದ ಅನೇಕರ ಸಮೂಹದಿಂದ ಪೂಜಿಸಲ್ಪಟ್ಟವನೂ, ಸಹಸ್ರ ಸೂರ್ಯರ ತೇಜಸ್ಸಿನಿಂದ ಕೂಡಿದ ವಿಮಾನಮಧ್ಯದಲ್ಲಿ ನಿಂತಿರುವವನೂ, ಸದ್ಗುಣಗಳಿಂದ ತುಂಬಿರುವವನೂ - ಎಂದು ಇದೇ ಮೊದಲಾದ ಶ್ರೀ ವೇಂಕಟೇಶಾವತಾರದ ಲಕ್ಷಣಗಳನ್ನು ಹೇಳುವ ಭಾಗದಲ್ಲಿ, ''ನಾಗರಾಜ ದೇಹದಿಂದ ಸುತ್ತಲ್ಪಟ್ಟಿರುವುದನ್ನು ತನಗೆ ಚಿಹ್ನೆಯಾಗಿ ಕೊಂಡವನು'' - ಎಂದು ತೋರಿಸಲ್ಪಟ್ಟಿತು ಈ ಅರ್ಥವನ್ನು ಹೇಳುವ ವಾಕ್ಯವು- ''ಭೋಗೀಂದ್ರ ಭೋಗ ಸಂಸ್ಥಾನಃ'' ಎಂಬುವುದೇ-ಭೋಗೀಂದ್ರ, ಭೋಗ = ನಾಗರಾಜನ ದೇಹವು ಯಾವನಿಗೆ ಸಂಸ್ಥಾನವು - ಮತ್ತು ಸಂಸ್ಥಾನವೆನ್ನುವ ಮಾತಿನಿಂದ ಸೂಚಿಸಲ್ಪಟ್ಟ, ಅಸಾಧಾರಣ ಸ್ವರೂಪ ನಿರೂಪಕ ಧರ್ಮವು ಯಸ್ಯಸಃ = ಯಾವನಿಗೆ ಇರುವುದೋ ಎಂದು ವಿಗ್ರಹ ವಾಕ್ಯವನ್ನು ಮಾಡಿದರೆ, ಭೋಗೀಂದ್ರ ಭೋಗ ಸಂಸ್ಥಾನ ಶಬ್ದವೇ ನಾಗಭೂಷಣತ್ವವನ್ನು ತಿಳಿಸುತ್ತದೆ, ಈ

ವೇಂಕಟೇಶಾವತಾರಕ್ಕೆ ಅಸಾಧಾರಣವಾದ ಬೇಟೆಯಾಡುವುದರಲ್ಲಿ ಆಸಕ್ತಿಕುಂದದ ಪ್ರಯತ್ನವಿರುವಿಕೆಯು ಶಂಖರಾಜನಿಗೆ ಆನಂದವನ್ನುಂಟು ಮಾಡುವುದೂ ಮುಂತಾದುವುಗಳ ಜೊತೆಗೆ ನಾಗಾಭರಣತ್ವವನ್ನು ಹೇಳಿರುವುದರಿಂದ ಇದು ಈ ದೇವನ ವಿಶಿಷ್ಟ ಗುಣವು ಎಂಬುದು ಸಿದ್ಧಿಸುತ್ತದೆ.

ಇಲ್ಲಿ ಶಿವನಲ್ಲಿ ಇರುವವನೂ ಎಂಬುದು, ಭವಿಷ್ಯೋತ್ತರ ಪುರಾಣದ ಉತ್ತರಖಂಡದಲ್ಲಿರುವ ಶ್ರೀವೇಂಕಟೇಶ್ವರ ರಹಸ್ಯಾನುಭವವೆಂಬ ಹೆಸರನ್ನುಳ್ಳ ಎಂಭತ್ತನೆಯ ಅಧ್ಯಾಯದಲ್ಲಿ - ಶ್ರೀವೇಂಕಟೇಶಾವತಾರವು ಯಾವಾಗಲೂ ಮಹಾದೇವನ ಮನಸ್ಸಿನಲ್ಲಿರುವ ಅತ್ಯಂತ ರಹಸ್ಯವಾದ ಧ್ಯಾನಗೋಚರ ಧ್ಯಾನಾರ್ಹವಸ್ತುರೂಪತ್ವವನ್ನು ಪ್ರತಿಪಾದಿಸುತ್ತದೆ, (ಅಂದರೆ ಧ್ಯಾನಿಸತಕ್ಕ ವಸ್ತುವಾಗುತ್ತದೆ) ಎಂದು ಹೇಳಿರುವುದೊಂದಿಗೆ ಶರೀರವಿಲ್ಲದವನು ಎಂಬುದೂ, ವಿಮಾನದೊಂದಿಗೆ ಶಂಖ ಚಕ್ರವೇ ಮೊದಲಾದ ಚಿಹ್ನೆಗಳೊಡನೆ ಕೂಡಿದ ಶ್ರೀವೇಂಕಟೇಶ ದಿವ್ಯಮಂಗಳ ವಿಗ್ರಹದ, ಎಲ್ಲರ ಕಣ್ಣುಳಿಗೂ ಗೋಚರವಾಗುವ ಗುಣ ಮತ್ತು ಗೋಚರವಾಗದ ಗುಣ, ಕ್ರಮವಾಗಿ ಕಾರಣವಾದ, ಗೋಚರವಾಗುವ ಸ್ಥಿತಿ ಗೋಚರವಾಗದ ಸ್ಥಿತಿ ಯೆಂಬ ಎರಡು ಸ್ಥಿತಿಗಳೂ ಎಲ್ಲಾ ಪುರಾಣಗಳಿಂದಲೂ ತಿಳಿಯಬರುವಂಥಹವುಗಳಾದುದರಿಂದಲೂ, ಆ ಎರಡು ಸ್ಥಿತಿಗಳನ್ನೂ ಅಭಿಪ್ರಾಯದಲ್ಲಿಟ್ಟುಕೊಂಡು, ಮುಂಚೆ ತಿಳಿಸಿದ ಭವಿಷ್ಯೋತ್ತರ ಪುರಾಣದ ಉತ್ತರ ಖಂಡದಲ್ಲಿ ಎಂಭತ್ತನೆಯ ಅಧ್ಯಾಯದಲ್ಲಿ, ಆಕಾರವನ್ನುಳ್ಳವನೆಂದೂ ಮತ್ತು ನಿರಾಕಾರನೆಂದೂ ಹೇಳಲ್ಪಟ್ಟಿರುವುದರಿಂದಲೂ, 'ಆ ಎರಡು ಸ್ಥಿತಿಗಳಲ್ಲಿ, ಕಾಣಿಸದ ಸ್ಥಿತಿಯಲ್ಲಿರುವ ರೂಪವನ್ನು ಅಭಿಪ್ರಾಯ ಗೊಂಡು ಎಲ್ಲರಕಣ್ಣಳಿಗೂ ಕಾಣಿಸದ ಶರೀರವಿಲ್ಲದಿರುವ ಸ್ಥಿತಿಯನ್ನು ಸೂಚಿಸುತ್ತದೆ ಎಂದು ಕೊಳ್ಳಿರಿ.

ವಿಷ್ಣುವನ್ನು ಹೊರತು ಮಿಕ್ಕವರುಗಳಲ್ಲಿ ನಾಗಭೂಷಣವೆಂಬುದು ಮಹಾದೇವನಲ್ಲಿಯೇ ಪ್ರಸಿದ್ಧವೆಂಬುದು, ಗರುಡನಲ್ಲಿ ನಾಗಭೂಷಣವು ಅತಿ ಪ್ರಸಿದ್ಧವಾಗಿರುವುದರಿಂದ ತಪ್ಪಾಗುತ್ತದೆ. ಪಾದ್ಮ ಪುರಾಣಭಾಗ ಮೂರನೆಯ ಅಧ್ಯಾಯದ ೨೬ ಎಂಬ ಸಂಖ್ಯೆಯು ಸೂಚಿಸುವ ವಚನದಲ್ಲಿ - ಶುಕಮಹರ್ಷಿಗಾಗಿ ಪದ್ಮಸರೋವರದ ತಟದಲ್ಲಿ ಶ್ರೀನಿವಾಸ ಭಗವಂತನ ಆವಿರ್ಭಾವವನ್ನು ತಿಳಿಸುವ ಘಟ್ಟದಲ್ಲಿ (ಸತ್ಯನು, ಸುಪರ್ಣನು, ಗರುಡನು, ತಾರ್ಕ್ಷ್ಯನು, ವಿಹಗೇಶ್ವರನು ಎಂದು ಹೆಸರನ್ನು ಪಡೆದ) ಐದು ವ್ಯೂಹಮೂರ್ತಿಗಳನ್ನುಳ್ಳವನೂ, ಪಂಚೋಪನಿಷತ್ತಿನಿಂದಾದ (=ಈ ಪ್ರಕೃತಿ ಮಂಡಲದ ಮೇಲುಳ್ಳ ಉತ್ತಮವಾದ ಪಂಚಭೂತಗಳಿಂದಾದ) ದೇಹವನ್ನುಳ್ಳವನೂ, ಪರಾಕ್ರಮದಲ್ಲಿ ಹನುಮಂತನನ್ನು ಹೋಲುವವನೂ, ಅಥರ್ವವೇದದ ಒಳಭಾಗಗಳೈದನ್ನೂ ತನ್ನ ಐದು

ಅವಯವಗಳನ್ನಾಗಿ ಉಳ್ಳವನೂ, ಋಕ್, ಯಜುಸ್, ಸಾಮವೆಂಬ ವೇದಗಳನ್ನು ತನ್ನ ದಿವ್ಯದೇಹವನ್ನಾಗಿ ಕೊಂಡವನೂ, ನಾಗಾಭರಣವನ್ನು ಧರಿಸಿದವನೂ, ಅಳೆಯಲಸಾಧ್ಯವಾದ ಶ್ರೇಷ್ಠತೆಯನ್ನು ಪಡೆದವನೂ ಆದ ಗರುಡನ ದಿವ್ಯ ಬಾಹುವಾದ ಪೀಠದಲ್ಲಿ ಅಲಂಕರಿಸಿದ್ದವನು - ಎಂದಿರುವ ಈ ಜಾಗದಲ್ಲಿ ಶ್ರೀನಿವಾಸನ ವಾಹನವಾದ ವಿನತೆಯ ಮಗನಿಗೆ (ವೈನತೇಯನಿಗೆ) ನಾಗಾಭರಣ ವಿರುವಿಕೆಯು ಪ್ರಸಿದ್ಧವಾಗಿ ತೋರಿಸಲ್ಪಟ್ಟಿದೆ.

ಶ್ರೀ ಪಾಂಚರಾತ್ರ ಶಾಸ್ತ್ರದಲ್ಲಿ, ಶ್ರೀವಿಷ್ಣುವಿನ ದಿವ್ಯಾಯುಧಗಳೂ, ವಾಹನಗಳೂ ಮುಂತಾದ ಆಕೃತಿಗಳನ್ನು ಕೊಂಡಿರುವ ದಿವ್ಯಸೂರಿಗಳಿಗೆ ಶ್ರೀ ವಿಷ್ಣುವಿನ ತೇಜಸ್ಸು ಎಂದು ಹೇಳಲ್ಪಡುವ - ಇತರರನ್ನು ಅಡಗಿಸಿ ಆಳುವ ಶಕ್ತಿಯಿಂದ ಅಭಿವೃದ್ಧಿಹೊಂದಿದ ಆಕೃತಿಯನ್ನು ಉಳ್ಳದುದರಿಂದಲೇ ಆಯಾಯಾ ವಸ್ತುವಾಗುವ ಗುಣವು ಸಿದ್ಧಿಸುವುದರಿಂದ, ಮುಂಚೆ ತೋರಿಸಿದ ಗರುಡನ ಶಕ್ತಿಯೂ, ವಿಷ್ಣುವಿನ ಒಂದು ಶಕ್ತಿಯೇ ಆಗುವುದೆಂಬುದು ಪ್ರತಿಪಾದಿಸಲ್ಪಟ್ಟಿತು.

ಈ ರೀತಿ ಜಟಾಧಾರಿತ್ವ ಮುಂತಾದ ಲಕ್ಷಣಗಳು ಶ್ರೀವಿಷ್ಣುವಿನ ಒಂದು ಅವತಾರದ ಲಕ್ಷಣವೆಂದು ತಿಳಿಯಬರುವುದರಿಂದ ಅವುಗಳನ್ನು ಬೇರೆ ದೇವತೆಯ ಲಕ್ಷಣಗಳಾಗಿ ಮಾತ್ರವೇ ತೆಗೆದುಕೊಂಡು ವಾದಿಸುವ ಈ ಶೈವರುಗಳು - ಶಂಖ ಚಕ್ರ ಮುಂತಾದ ಲಕ್ಷಣಗಳನ್ನು ವೈಷ್ಣವರು ವಿಷ್ಣುವೆಂದು ಹೇಳಿದರೆ, ಜಟಾಧರತ್ವ ಮುಂತಾದ ಶಿವಲಕ್ಷಣಗಳನ್ನು ಕೊಂಡು ಇವನನ್ನು ಶಿವನೆಂದು ಹೇಳುವ ನಮ್ಮಗಳನ್ನು ತಡೆಯುವವರು ಯಾರು? ಎಂದು ವಾದಿಸುವ ವಾದವು ವಿರೋಧಿಸಲ್ಪಟ್ಟಂತಾಯಿತು.

ಚಕ್ರ ಮುಂತಾದ ಲಕ್ಷಣಗಳೋವೆಂದರೆ ಅದು ಶ್ರೀವಿಷ್ಣುವಿಗೇ ಸೇರಿದುವೆಂದು ಮುಂಚೆ ತಿಳಿಸಿದ ವಾಮನ ಪುರಾಣದಲ್ಲಿಯೇ ತನಗೂ ವಿಷ್ಣುವಿಗೂ ನಡೆದ ಸಂಭಾಷಣೆಯನ್ನು ಹಾಗೆಯೇ ಅನುವಾದಿಸುವ ಪರಮಶಿವನಿಂದಲೇ ಪಾರ್ವತಿಯೊಡನೆ ಹೇಳಲ್ಪಟ್ಟಿದೆ. ವಾಮನ ಪುರಾಣದ ಮೂರನೆಯ ಅಧ್ಯಾಯದಲ್ಲಿನ ೨೨ನೇ ಸಂಖ್ಯೆಯ ವಚನದಲ್ಲಿ - ಲೋಕಕ್ಕೆಲ್ಲಾ ಒಳ್ಳೆಯದನ್ನು ಮಾಡುವ ಶಂಕರನು ಇದನ್ನು ಕೇಳಿ ಪಾರ್ವತಿಯನ್ನು ಕುರಿತು ಹೇಳಿದನು, ''ಎಲೈ ಪರ್ವತರಾಜಪುತ್ರಿಯೇ, ಆದ್ಯಂತವಿಲ್ಲದುದೂ, ಪರಮಶ್ರೇಷ್ಠವಾದುದೂ, ಅಳೆಯಲಸಾಧ್ಯವಾದ ಶಕ್ತಿಯನ್ನು ಹೊಂದಿರುವುದೂ, ಕೋಟಿಸೂರ್ಯ ಸಮಾನತೇಜಸ್ಸನ್ನು ಹೊಂದಿರುವುದೂ, ಸುದರ್ಶನವೆಂದು ಹೆಸರನ್ನು ಪಡೆದ ಆ ಚಕ್ರವು ವಿಷ್ಣುವಿಗೇ ಸೇರಿದುದು. ಪುರುಷೋತ್ತಮನಾದ ಅವನಿಂದಲ್ಲದೆ ಬೇರೊಬ್ಬರಿಂದಲೂ ಅದನ್ನು ಧರಿಸುವುದು ಅಸಾಧ್ಯವು. ಆ ದಿವ್ಯವಾದ ಚಕ್ರದಿಂದ

ವಾರಾಣಸಿ (ಕಾಶಿ) ಎಂಬ ನನ್ನ ರಾಜಧಾನಿಯು 'ಕಾಶಿರಾಜನು ಕಳುಹಿಸಿದ ಕೃತ್ಯೆ' (ಭೂತವಾಪಿಶಾಚಿ) ಕಾರಣವಾಗಿ ಉರಿಸಲ್ಪಟ್ಟು ನಾಶವಾಯಿತು. ಹಿಂದೊಂದು ಸಲ ನನ್ನಲ್ಲಿ ಪ್ರೇಮವನ್ನು ಕೊಂಡ ಜನಾರ್ಧನನು (ಶ್ರೀವಿಷ್ಣುವು) ನನಗೆ ವರವನ್ನು ಕೊಡಲು ಇಷ್ಟಪಟ್ಟು, ''ನಿನಗೇನು ಬೇಕು'' ಎಂದು ನನ್ನನ್ನು ಕೇಳಿದರು. ಈ ರೀತಿ ಅವರು ಕೇಳಲು,'' ಹರಿಯೇ! ನನ್ನಲ್ಲಿ ಪ್ರೀತಿಯಿಟ್ಟ ನೀವು ಯಾವ ಚಕ್ರಾಯುಧದಿಂದ ನನ್ನ ನಗರವು ದಹಿಸಲ್ಪಟ್ಟು ನಾಶವಾಯಿತೋ ಆ ಚಕ್ರವು ನನಗೆ ವಶವಾಗಿ ನನಗೆ ಕಿಂಕರನಾಗುವಂತೆ ಮಾಡಬೇಕೆಂದೂ ಬೇರಾವ ವರವೂ ಬೇಡವೆಂದೂ ಹೇಳಿದೆ. ಈ ನನ್ನ ಪ್ರಾರ್ಥನೆಯನ್ನು ಕೇಳಿದ ಮಧುಸೂದನನು (ನಾರಾಯಣನು) ಹಸನ್ಮುಖಿರಾಗಿ ತಮ್ಮ ಕೈಗಳಿಂದ ನನ್ನ ಕೈಯನ್ನು ಹಿಡಿದುಕೊಂಡು, ''ಪ್ರಮದಗಣಗಳಿಗೆ ನಾಯಕನಾದ ಶಂಕರನೇ! ಸೂರ್ಯನ ತೇಜಸ್ಸು ಅವನನ್ನು ಬಿಟ್ಟು ಬೇರೊಂದೆಡೆ ಹೇಗೆ ಇರುತ್ತದೆ? ಹಾಗೆಯೇ ಶ್ರೀಮಹಾಲಕ್ಷ್ಮಿ, ಕೌಸ್ತುಭಮಣಿ, ಚಕ್ರ, ಶಾರ್ಙ್ಗವೆಂಬ ಧನುಸ್ಸು, ಗದೆ ಮುಂತಾದವುಗಳು ನನಗೇ ಸೇರಿದುವುಗಳು. ಇವುಗಳಿಗೆ ಹುಟ್ಟು ಸಾವುಗಳಿಲ್ಲ. ಬೇರೊಬ್ಬರೊಡನೆಯೂ ಇವುಗಳು ಇರಲಾರವು. ಆದುದರಿಂದ ನೀನು ಕೇಳಿದ ಈ ವರವನ್ನು ಕೊಡಲು ಸಾಧ್ಯವಿಲ್ಲ'' ಎಂದು ಹೇಳಿದರು- ಎಂದಿದೇ ಮೊದಲಾಗಿ ಚಕ್ರ ಮುಂತಾದ ಲಕ್ಷಣಗಳು ಶ್ರೀವಿಷ್ಣುವಿಗೊಬ್ಬನಿಗೇ ಎಂದು ಸ್ಪಷ್ಟವಾಗಿ ತೋರಿಸಲ್ಪಟ್ಟಿತು. ಚಕ್ರ ಶಾರ್ಙ್ಗ ಮುಂತಾದುವುಗಳು ವಿಷ್ಣುವಿಗೆ ಅಸಾಧಾರಣವಾದುದರಿಂದಲೂ, ಜಟಾಧಾರತ್ವ ಮುಂತಾದವುಗಳು ವಿಷ್ಣುವಿನ ಒಂದು ಅವತಾರಕ್ಕೆ ಸಾಮಾನ್ಯ ವಾದುದರಿಂದಲೂ, ಈ ದೇವನನ್ನು ಪರಮಶಿವನನ್ನಾಗಿ ಹೇಳುವ ಕಟ್ಟುಕಥೆಯೂ ಸಮನ್ವಯಿಸುವುದಿಲ್ಲ.

''ವೈಷ್ಣವರುಗಳಿಂದ ಎಲ್ಲವುಗಳಿಗೂ ಕಾರಣವಾಗಿ (ನಿಖಿಲ ಜಗತ್ಕಾರಣತ್ವ) ಅಂಗೀಕರಿಸಲ್ಪಟ್ಟ ವಿಷ್ಣುವಿನಲ್ಲಿ ಸರ್ವಲಕ್ಷಣಗಳೂ ಹೊಂದುವುದು ಎಂದು ಹೇಳುವ ರೀತಿಯಲ್ಲಿ, ನಮ್ಮಿಂದ ಆರೀತಿ ಅಂಗೀಕರಿಸಲ್ಪಟ್ಟ ಮಹಾದೇವನಲ್ಲಿಯೇ ಸರ್ವಲಕ್ಷಣಗಳೂ ಹೊಂದುತ್ತವೆ'' ಎಂದು ಶೈವರುಗಳು ಹೇಳುವುದು ಸರಿಹೊಂದುವುದಿಲ್ಲ. ನಾರಾಯಣನನ್ನು ಬಿಟ್ಟು ಮತ್ತೊಬ್ಬರಿಗೂ ಸರ್ವಕಾರಣತ್ವವು ಸಂಭವಿಸುವುದೆಂಬುದು ಸರಿಹೊಂದುವುದಿಲ್ಲವೆಂಬುದು ವೇದಗಳಿಂದ ಸುಪ್ರಸಿದ್ಧವಾಗಿರುವುದರಿಂದಲೂ, ಶ್ರೀವಿಷ್ಣುವಿಗೇ ಅಸಾಧಾರಣವಾದ 'ನಾರಾಯಣ' ಮುಂತಾದ ಪದಗಳಿಂದಲೂ, ಆಗಮಶಾಸ್ತ್ರದಿಂದ ಎಲ್ಲವಕ್ಕೂ ಕಾರಣನು ನಾರಾಣನೇ ಎಂದೂ ನಿಶ್ಚಯಿಸ ಬಹುದಾದುದರಿಂದ, ಮಹಾದೇವನಲ್ಲಿ ಎಲ್ಲದಕ್ಕೂ ಕಾರಣನಾಗುವ ಸಾಮರ್ಥ್ಯವು ಸಂಭವಿಸುತ್ತದೆಯೇ? ಅಥವಾ ಸಂಭವಿಸುವುದಿಲ್ಲವೇ? ಎಂಬ ವ್ಯವಹಾರವನ್ನು ತೀರಿಸುವುದು ಈಗ ಅವಶ್ಯವಿಲ್ಲವಾದುದರಿಂದ ಅವರುಗಳ ಕುಯುಕ್ತಿಯು ಸಂಭವಿಸುವುದಿಲ್ಲವೆಂದು

ತಿಳಿಯಬೇಕು. ಆದುದರಿಂದ ಸ್ವಾಮಿ ಪುಷ್ಕರಿಣಿಯ ದಕ್ಷಿಣ ತೀರದಲ್ಲಿರುವ ಈ ಅರ್ಚಾಮೂರ್ತಿಯು ಮಹಾದೇವನಲ್ಲವೆಂದು ಧೃಢಪಡಿಸಲ್ಪಟ್ಟಿತು.

ಇನ್ನು ಈ ದೇವನು ಹರಿಹರಾವತಾರ ರೂಪನೂ ಅಲ್ಲನು. ಶಂಖ ಚಕ್ರವೇ ಮೊದಲಾದ ಶ್ರೀವಿಷ್ಣುವಿಗೇ ಅಸಾಧಾರಣವಾದ ಚಿಹ್ನೆಗಳನ್ನು ಬೇರೊಂದು ದೈವಕ್ಕೆ ಚಿಹ್ನೆಗಳೆಂದು ಹೇಳಲು ಸಾಧ್ಯವಿಲ್ಲದುದರಿಂದಲೂ, ಜಟೆ, ನಾಗಾಭರಣ ಮುಂತಾದುವುಗಳು ವಿಷ್ಣುವಿಗೂ ಉಂಟೆಂದು ಹಿಂದೆ ಪ್ರತಿಪಾದಿಸಿದುದರಿಂದಲೂ, ಈ ದೇವನ ಆವಿರ್ಭಾವವನ್ನು ಹೇಳುವ ಸಂದರ್ಭಗಳಲ್ಲಿ, ಶ್ರೀವೈಕುಂಠ ಮುಂತಾದ ಪ್ರದೇಶಗಳಿಂದ ಶ್ರೀವಿಷ್ಣುವೇ ನೇರವಾಗಿ ಇಲ್ಲಿಗೆ ಬಂದು ಪ್ರತ್ಯಕ್ಷನಾದನು - ಎಂದು ಹೇಳಿರುವಾಗ, ನಾರಾಯಣ, ವಿಷ್ಣು ಎಂದು ಇಂಥಹ ಮಹಾವಿಷ್ಣುವಿಗೇ ಅಸಾಧಾರಣವಾದ ಹೆಸರುಗಳಿಂದ ಆಗಮಶಾಸ್ತ್ರಗಳಿಂದಲೇ, ಈ ದೇವನು ನಾರಾಯಣನೇ ಎಂದು ನಿಶ್ಚಯಿಸಲ್ಪಡುವುದರಿಂಲೂ ಇವನಿಗೆ ಹರಿಹರಾವತಾರ ರೂಪವಿಲ್ಲದಿರುವಿಕೆಯು ನಿರ್ಣಯಿಸಲಾಗುತ್ತದೆ.

ಮೊದಲಾಳ್ವಾರ್‌ಗಳಲ್ಲಿ ಪೇಯಾಳ್ವಾರ್ (ಮಹಾಯೋಗಿ) ರವರು ಅರುಹಿದ, ''ತಾಳ್ ಶಡೈಯುಂ'' ಎಂದು ತೊಡಗುವ ಪಾಶುರದಲ್ಲಿಯೂ 'ಎರಡು ದೇವರುಗಳ ರೂಪವುಳ್ಳವನು ಇವನು' ಎಂದು ಹೇಳದೆ ತಮ್ಮ ನಾಯಕನಾದ ಶ್ರೀಮನ್ನಾರಾಯಣನಿಗೇ ಎರಡು ರೂಪಗಳೂ ಲಕ್ಷಣಗಳಾಗಿ ಕಂಡುಬರುತ್ತವೆ ಎಂದೇ ಹೇಳಲ್ಪಟ್ಟಿರುವುದರಿಂದ ಆ ಪಾಶುರವನ್ನು ಪ್ರಮಾಣವಾಗಿ ತೆಗೆದುಕೊಂಡು ಈ ದೇವನಿಗೆ ಹರಿಹರಾವತಾರ ರೂಪವಿರುವುದನ್ನು ಸಾಧಿಸುವುದು ಸರಿಯಲ್ಲವೆಂದು ತಿಳಿಯಬೇಕು. ಈ ರೀತಿಯೇ ಈ ದೇವನು ಆವಿರ್ಭವಿಸುವಾಗ ಬ್ರಹ್ಮ, ಶಿವ ಮುಂತಾದ ದೇವತೆಗಳು ಎಲ್ಲರೂ ತಮ್ಮ ತಮ್ಮ ವಾಸಸ್ಥಾನಗಳನ್ನು ಬಿಟ್ಟು ಇಲ್ಲಿಗೆ ಬಂದು ಈ ದೇವನನ್ನು ಪೂಜಿಸಿದರು ಎಂದು ಸ್ಪಷ್ಟವಾಗಿ ಹೇಳಲ್ಪಟ್ಟಿರುವುದರಿಂದ, ಇವನು ಮಹಾಶಿವನಾಗಿದ್ದಲ್ಲಿ, ತಂದೆಯಾದ ಬ್ರಹ್ಮನು ಮಗನಾದ ಇವನನ್ನು ನಮಸ್ಕರಿಸಿದುದಾಗಿ ಹೇಳಿರುವುದೂ, ಮಹಾಶಿವನಾದ ತಾನೇ ತನ್ನನ್ನು ನಮಸ್ಕರಿಸಿದುದಾಗಿ ವರ್ಣಿಸಿರುವುದು ಅಸಂಗತವಾಗಿಬಿಡುತ್ತದೆ. ಮೇಲೂ, ಮಹಾಶಿನವಾದ ಇವನು ಈ ಬೆಟ್ಟದಲ್ಲಿಯೇ ಇರುವುದನ್ನು ನಿಶ್ಚಯಿಸಿದ್ದೇ ಆದಾಗ, ಕೈಲಾಸವೆಂದು ಹೆಸರುಳ್ಳ ಬೇರೊಂದು ಜಾಗದಿಂದ ಇವನನ್ನು ನಮಸ್ಕರಿಸಲು ಮಹಾಶಿವನು ಬರುವುದೂ ಪುನಃ ಹಿಂದಿರುಗುವುದೂ ವರ್ಣಿಸಲ್ಪಟ್ಟಿರುವುದರಿಂದ ಅಸಂಗತವಾಗುತ್ತದೆ.

ಮೇಲೂ ಇವನು ಹರಿಹರಾವತಾರ ರೂಪವೆಂದು ಹೇಳುವ ಶೈವರುಗಳು,

ಒಂದರ್ಧವು ಪಾರ್ವತಿಯೂ ಮತ್ತೊಂದರ್ಧವು ಪರಮಶಿವನೂ ಆಗಿರುವ ಅರ್ಧನಾರೀಶ್ವರರಂತೆ ಒಂದೇ ದೇಹದಲ್ಲಿ ಎರಡು ದೇವರುಗಳಿರುವುದನ್ನು ಅಭಿಪ್ರಾಯ ಪಡುತ್ತಾರೆಂದು ಭಾವಿಸಬೇಕು. ಅದು ಶ್ರೀ ಮಹಾವಿಷ್ಣುವಿನ ಅಪ್ರಾಕೃತವಾದ (ಶ್ರೀವೈಕುಂಠದ) ಈ ಶ್ರೀವೇಂಕಟಗಿರಿಯಲ್ಲಿಯೇ ಬೇರೆ ದೈವಗಳನ್ನು ಪೂಜಿಸತಕ್ಕವುಗಳಾಗಿ ಇರಕೂಡದು ಎಂಬುದು ಮುಂಚೆಯೇ ಪ್ರಮಾಣಿಸಿದ ಪುರಾಣವಚನಗಳಿಂದ ಪ್ರತಿಪಾದಿಸಲ್ಪಟ್ಟಿರುವುದರಿಂದ, ಬೇರೆಯಾಗಿ ಪುನಃ ಹೇಳಬೇಕಾಗಿಲ್ಲ ವಾದುದರಿಂದ, ಈ ದೇವನ ದಿವ್ಯ ದೇಹದಲ್ಲಿ ಒಂದು ಕಡೆ ಒಂದು ದೇವತೆಯ ಚಿಹ್ನೆಗಳೂ, ಮತ್ತೊಂದು ಕಡೆ ಬೇರೊಂದು ದೈವದ ಚಿಹ್ನೆಗಳು ಕಂಡು ಬರದೇ ಇರುವುದರಿಂದ ಇವನು ಅರ್ಧನಾರೀಶ್ವರನಂತೆ ಎಂದು ಹೇಳುವುದಕ್ಕೆ ಅವಕಾಶ ವಿಲ್ಲದಿರುವುದುರಿಂದಲೂ, ವಾಮನ ಪುರಾಣ ಭಾಗದಲ್ಲಿ ನಾರಾಯಣನ ಅಪ್ರಾಕೃತವಾದ ದೇಹದಲ್ಲಿ ನೇರವಾಗಿ ಸಂಪರ್ಕಗೊಳ್ಳುವ ಯೋಗ್ಯತೆಯು ತನಗೆ ಇಲ್ಲದಿರುವುದರಿಂದಲೂ, ಆದುರಿಂದ ಮತ್ತೊಬ್ಬರ ಮೂಲಕವಾಗಿ ಅವನನ್ನು ತಾನು ಪಡೆಯಲು ಪ್ರಯತ್ನಿಸಿದುದನ್ನೂ ಆ ಮಹಾ ಶಿವನಿಂದಲೇ ಹೇಳಲ್ಪಟ್ಟಿರುವುದರಿಂದಲೂ ಇದು ಅಸಂಗತವಾಗುತ್ತದೆ.

ವಾಮನ ಪುರಾಣಭಾಗದ ಐದನೆಯ ಅಧ್ಯಾಯದಲ್ಲಿ ೨೪ಎಂಬ ಸಂಖ್ಯೆಯಿಂದ ಸೂಚಿತವಾದ ವಚನದಲ್ಲಿ (ಶ್ಲೋಕದಲ್ಲಿ)-ಸುದರ್ಶನ ಚಕ್ರದ ಅಂಶವಾಗಿ ಕಾಲಚಕ್ರದ ಅಭಿಮಾನಿಯಾದ ಪುರುಷನು, ತನ್ನನ್ನು ಕುರಿತು (ಶಿವನನ್ನು ಕುರಿತು) ತಪಸ್ಸನ್ನು ಮಾಡಲು, ಅವನನ್ನು (ಪುರುಷನನ್ನು) ಕುರಿತು ಮಹಾಶಿವನಿಂದ - ಸುದರ್ಶನನೇ! ತಮೋಗುಣಕ್ಕೆ ಆವಾಸಸ್ಥಾನನಾದ ನಾನು, ರಜೋಗುಣ ತಮೋಗುಣಗಳು ಒಂದಾಗಿ ಸೇರಿ ಕಲಸದೇ ಇರುವ ಶುದ್ಧ ಸತ್ವಗುಣಮಯವಾಗಿ, ಸರ್ವಯಜ್ಞಗಳಿಂದಲೂ ಆರಾಧಿಸತಕ್ಕವನಾದ ವಿಷ್ಣುವಿನ ದಿವ್ಯದೇಹವನ್ನು ನೇರವಾಗಿ ಸ್ಪರ್ಶಿಸುವುದಕ್ಕೆ ಅಂಜುತ್ತೇನೆ. ಆ ದಿವ್ಯದೇಹದಲ್ಲಿ (ಯಾವ ವಿಧದಲ್ಲಿಯಾದರೂ) ನಾನು ವಾಸಮಾಡಿಯೇ ತೀರಬೇಕು, ಆದುದರಿಂದ ವಿಷ್ಣುವನ್ನು ಬಿಟ್ಟು ಒಂದು ಘಳಿಗೆಯೂ ಅಗಲದೆಯೆ ಇರುವ ನಿತ್ಯನಾದ ನಿನ್ನೊಳಗೆ ಪ್ರವೇಶಗೊಂಡು ನಿನ್ನ ಮೂಲಕವಾಗಿ ಆತನ ದಿವ್ಯದೇಹದಲ್ಲಿ ವಾಸಿಸುವನಾಗುತ್ತೇನೆ - ಎಂದು ಹೇಳಲ್ಪಟ್ಟಿದೆ. ವೈಕುಂಠದಲ್ಲಿರುವ ಉತ್ತಮವಾದ ವಿಮಾನವು, ಅಂಥಹ ದಿವ್ಯದೇಹದ ಆಭರಣಗಳು, ದಿವ್ಯಾಯುಧಗಳು ಇವುಗಳೊಂದಿಗೆ ಭಗವಂತನಾದ ಶ್ರೀಮಹಾಲಕ್ಷ್ಮಿಯರಮಣನು ಆವಿರ್ಭವಿಸಿದನು-ಎಂಬುವುದು ಪುರಾಣಭಾಗಗಳಲ್ಲಿ ಸ್ಪಷ್ಟವಾಗಿ ನಿರೂಪಿಸಲ್ಪಟ್ಟಿದೆ. ಆದುದರಿಂದ ಹರಿಹರಾವತಾರ ವೆಂಬ ಕಥೆಯಾದ ಚಿಂದಿ ಬಟ್ಟೆಯು ಇಲ್ಲಿ ಸ್ವಲ್ಪವೂ ಅವಕಾಶಪಡೆಯಲು ತಕ್ಕುದಲ್ಲ.

ಸ್ಕಾಂದಪುರಾಣದ ಮೊದಲನೆಯ ಭಾಗಕ್ಕೆ ಸೇರಿದ ಎಂಟನೆಯ ಅಧ್ಯಾಯದಲ್ಲಿನ ಕೆಲವು ಶ್ಲೋಕಗಳಲ್ಲಿ 'ಶ್ರೀನಿವಾಸ' ಮತ್ತು 'ಮಹಾದೇವ' ಎಂಬ ಎರಡು ಪದಗಳಿಂದ ಈ ದೇವನನ್ನು ಕುರಿತು ಹೇಳಿರುವುದೂ ಇವನು ಹರಿಹರಾವತಾರ ರೂಪವೆಂದು ನಿಶ್ಚಯಿಸಲು ಸಹಾಯಮಾಡುತ್ತದೆ ಎಂದು ಶೈವರುಗಳು ಹೇಳುವ ವಾದವು ಯಾವುದೊಂದಿದೆಯೋ, ಅದೂ ಸಹ ಅಲ್ಲಿರುವ ಮಹಾದೇವನೆಂಬ ಪದವು ಪರಮಶಿವನಿಗೇ ಅಸಾಧಾರಣವಾದ ಮಹಾದೇವನೆಂಬ ಪದದಂತೆ ರೂಢನಾಮವಾಗಿ ಆಗದೆ ಕಾರಣಾರ್ಥಕ ಹೆಸರಾಗಿ ಮಾತ್ರವೇ ಇದ್ದಲ್ಲಿ ಎಲ್ಲಾದೇವತೆಗಳಿಗಿಂತಲೂ ಶ್ರೇಷ್ಠವಾದ ದೇವನು ಎಂದು ಅರ್ಥವನ್ನು ಮಾತ್ರವೇ ತೋರಿಸುತ್ತಿರುವುದರಿಂದಲೂ, ಕೆಲವು ಶ್ಲೋಕಗಳಲ್ಲಿ ಎಲ್ಲಾದೇವರುಗಳಿಗಿಂತಲೂ ಶ್ರೇಷ್ಠನಾದ ದೇವರು ಎಂಬರ್ಥವನ್ನು ಕೊಂಡು ಬೇರೆ ಪದಗಳನ್ನು ಉಪಯೋಗಿಸಿರುವುದರಿಂದಲೂ - ಸಮನ್ವಯಿಸುವುದಿಲ್ಲ.

ಮುಂಚೆ ತಿಳಿಸಿದ ಅಧ್ಯಾಯದಲ್ಲಿ, ಆ ಸಂದರ್ಭದಲ್ಲಿಯೇ-ಯಾವ ಬ್ರಾಹ್ಮಣರು ಮುಕ್ತಿಯನ್ನು ಕೊಡುವ ಮಹಾದೇವನಾದ (ಎಲ್ಲಾ ದೇವರುಗಳಿಗಿಂತ ಶ್ರೇಷ್ಠನಾದ) ಶ್ರೀನಿವಾಸನನ್ನು ಸ್ಮರಿಸುತ್ತಾರೆಯೋ ಅಥವಾ ಸ್ತೋತ್ರಮಾಡುತ್ತಾರೆಯೋ, ಅಥವಾ ಪರದೇವನಾದ (ಎಲ್ಲಾ ದೇವರುಗಳಿಗಿಂತಲೂ ಶ್ರೇಷ್ಠನಾದ) ವೇಂಕಟೇಶನೆನ್ನುವ ನಾರಾಯಣನ ಸನ್ನಿಧಿಗೆ ಹೋಗಿ ಸೇರುತ್ತಾರೆಯೋ ಅವರುಗಳು ಪಾಪಗಳಾಗಿರುವ ಪಂಜರದಿಂದ ಬಿಡುಗಡೆಯಾಗುತ್ತಾರೆಂದೂ, ಯಾವೊಬ್ಬನು ಪರದೇವತೆಯಾದ ವೇಂಕಟೇಶನನ್ನು ಒಂದು ಕ್ಷಣಕಾಲವಾದರೂ ಚಿಂತಿಸುವುದಿಲ್ಲವೋ ಅವನು ಜ್ಞಾನ ಶೂನ್ಯನೂ ಮತ್ತು ಪಾಪಿಯಾಗಿ, ಮೂಗನೂ ಮತ್ತು ಕಿವುಡನೂ ಆಗುವನೆಂದೂ, ಪರದೇವನಾದ ವೇಂಕಟೇಶನನ್ನು ಯಾವ ಕೆಲವರು ಸೇವೆಮಾಡುತ್ತಾರೆಯೋ ಅಥವಾ ಅರ್ಚಿಸುತ್ತಾರೆಯೋ ಅವರ ಜನ್ಮವು ಸಾಫಲ್ಯವಾಗುತ್ತದೆ. ಅವರುಗಳೇ, ಮಾಡಬೇಕಾದುವುಗಳನ್ನೆಲ್ಲಾ ಮಾಡಿದವರಾಗುತ್ತಾರೆ. ಇತರರು ಹಾಗಾಗುವುದಿಲ್ಲ.-ಪರದೇವತೆಯಾದ ವೇಂಕಟೇಶನು ದರ್ಶಿಸಲ್ಪಟ್ಟರೂ ಅಥವಾ ಪೂಜಿಸಲ್ಪಟ್ಟರೂ ಅದೇ ಸಾಕು. ಬ್ರಹ್ಮ, ಶಿವ, ಇಂದ್ರ ಮತ್ತಿತರ ದೇವತೆಗಳು ಎಂಬ ಇವರುಗಳಿಂದ ಯಾವ ಫಲ? - ಎಂದೂ, ಎಲ್ಲ ಪಾಪಗಳನ್ನೂ ನಾಶಮಾಡಿ ಹೆಚ್ಚಿನ ಪುಣ್ಯವನ್ನು ಕೊಡಬಲ್ಲ ವೇಂಕಟವೆಂಬ ಶ್ರೀಗಿರಿಯಲ್ಲಿರುವ ಶ್ರೀನಿವಾಸನನ್ನು ಯಾವೊಬ್ಬನು ಭಕ್ತಿಯಿಂದ ದರುಶನ ಮಾಡುತ್ತಾನೆಯೋ ಅವನಿಗೆ, ಈ ಭೂಲೋಕದಲ್ಲಿ ನಾಲ್ಕು ವೇದಗಳನ್ನರಿತವನೂ ಸಾಮ್ಯನಾಗಲಾರನು - ಎಂದು ಹೇಳಲ್ಪಟ್ಟಿರುತ್ತದೆ. ಇಲ್ಲಿ ('ಮಹಾದೇವ'ನೆಂದು ಮೊದಲು ಹೇಳಿದನಂತರ) ಆ ಪದಕ್ಕೆ ಪ್ರತಿನಿಧಿಯಾಗಿ (ಬದಲಾಗಿ) ಪರದೇವನೆಂದು ಹಲವು ಕಡೆಗಳಲ್ಲಿ

ಸೂಚಿಸಲ್ಪಟ್ಟಿರುವುದರಿಂದ ಮಹಾದೇವನೆಂಬ ಪದವು ಸಮಸ್ತ ದೇವತೆಗಳಿಗಿಂತಲೂ ಶ್ರೇಷ್ಠನಾದ ದೇವನೆಂದು ಅರ್ಥವನ್ನು ಕೊಂಡಿರುವ ಪರದೇವನೆಂಬ ಪದದೊಂದಿಗೆ ಸಮನಾದ ಅರ್ಥವನ್ನು ಹೊಂದಿದೆ (ಸಮಾನಾರ್ಥಕ ಶಬ್ದವಾಗಿದೆ) ಎಂಬುದು ಸುಸ್ಪಷ್ಟ.

ಮೇಲೂ, ಅದೇಸಂದರ್ಭದಲ್ಲಿ - ನಾರಾಯಣದೇವನನ್ನು ದರ್ಶಿಸಿದರೆ ಹಲವು ಸಾವಿರ ಬ್ರಹ್ಮಹತ್ಯೆಗಳಿಂದುಂಟಾಗುವ ಪಾಪಗಳೂ, ಹಲವು ಸಾವಿರ ಸಂಖ್ಯೆಗಳುಳ್ಳ ಮಧುಪಾನಗಳಿಂದುಂಟಾಗುವ ಪಾಪಗಳೂ ನಿಶ್ಶೇಷವಾಗಿ ನಾಶವನ್ನು ಹೊಂದುತ್ತವೆ ಎಂದೂ, ವೇಂಕಟಗಿರಿಯಲ್ಲುಳ್ಳ ದೇವಾಧಿದೇವನನ್ನು ಕುರಿತು ಹಾಡುವವನೂ, ಪೂಜಿಸುವವನೂ ವಿಷ್ಣು ಸಾಯುಜ್ಯವನ್ನು (ವಿಷ್ಣುವಿನ ಆನಂದಕ್ಕೆ ಸಮನಾದ ಆನಂದವನ್ನು) ಹೊಂದುವನು ಎಂಬುದರಲ್ಲಿ ಸಂದೇಹವಿಲ್ಲವೆಂದೂ, ವೇಂಕಟೇಶ್ವರನೆಂಬ ದೇವಾಧಿದೇವನನ್ನು ಯಾವನು ಭಕ್ತಿಯಿಂದ ಪೂಜಿಸುತ್ತಾನೆಯೋ ಅವನು ತನ್ನನ್ನು ಸೇರಿದ ಕೋಟಿ ಕೋಟಿ ಸಂಖ್ಯೆಯ ಕುಟುಂಬಗಳೊಂದಿಗೆ ಶ್ರೀ ವೈಕುಂಠವನ್ನು ಸೇರುತ್ತಾನೆಂದೂ, ವೆಂಕಟೇಶ ದೇವರನ್ನು ನಾರಾಯಣನನ್ನಾಗಿಯೂ ಆರಾಧಿಸುವವನಿಗೆ ವಿಷ್ಣುಸಾಯುಜ್ಯವನ್ನೇ ಫಲವಾಗಿಹೇಳಿರುವುದರಿಂದ ಈ ದೇವನು ಹರಿಹರಾವತಾರ ರೂಪವಲ್ಲನು. ಹಾಗಿದ್ದಿದ್ದರೆ ವಿಷ್ಣುಸಾಯುಜ್ಯವೊಂದನ್ನೇ ಫಲವಾನ್ನಾಗಿ ಹೇಳುವುದು ಅಸಂಭವವು. ಇವರು ಪರಮಶಿವನಾಗಿದ್ದರೆ (ವೇಂಕಟೇಶನನ್ನು ಸೇವೆಮಾಡಿದರೂ, ಪೂಜೆಮಾಡಿದರೂ ಅದುವೇಸಾಕು) - ಶಿವನಿಂದಲೂ ಬ್ರಹ್ಮನಿಂದಲೂ ಏನು ಫಲವು? - ಎಂದು ಹೇಳುವುದು ಅಸಂಗವಾಗುತ್ತದೆ.

''ಅಷ್ಟಮೀಂದು ಕಲಾಧಾರಲಲಾಟಸ್ಥೋರ್ಧ್ವಪುಂಡ್ರಕಃ'' (ಅಷ್ಟಮೀ ದಿನದ ಚಂದ್ರಕಲೆಯನ್ನು ಧರಿಸಿದವವನಾಗಿ ತನ್ನ ದಿವ್ಯಮುಖದಲ್ಲಿ ಊರ್ಧ್ವಪುಂಡ್ರ (ತಿರುನಾಮ) ವನ್ನು ಧರಿಸಿರುವವರು) ಎಂದು ಪಾದ್ಮಪುರಾಣದ ನಾಲ್ಕನೆಯ ಅಧ್ಯಾಯದಲ್ಲಿ ೨೭ನೇ ಸಂಖ್ಯೆಯ ವಚನದಿಂದ ಈ ದೇವನು ಹರಿಹರಾವತಾರವೆಂದು ಸ್ಥಿರಪಟ್ಟಿರುವುದಾಗಿ ಶೈವರುಗಳು ಹೇಳುವುದು ಯಾವುದೊಂದಿದೆಯೋ, ಅದೂ, ಅಷ್ಟಮೀದಿನದ ಚಂದ್ರಕಲೆ (ಚಂದ್ರನರೂಪ) ಯಂತಿನ ಆಧಾರವನ್ನು (ಕೆಳಭಾಗವನ್ನು) ಉಳ್ಳದಾಗಿ ಹಣೆಯಲ್ಲಿರುವ ಊರ್ಧ್ವಪುಂಡ್ರವನ್ನುಳ್ಳವನು ಎಂದು ಬಿಡಿಸಿ ಅರ್ಥವನ್ನು ಹೇಳತಕ್ಕ, ಮುಂಚೆ ತಿಳಿಸಿದ ವಚನದಿಂದ ಪೂರ್ಣಚಂದ್ರನ ಅರ್ಧಭಾಗದಂತೆ ರೂಪವನ್ನು ಹೊಂದಿದುದೂ (ಮೂಗಿನ ಮೇಲೆ) ಮೂಲವಾಗಿಯೂ (=ಅಡಿಭಾಗವಾಗಿಯೂ) ಅದರ ಮೇಲೆ (ಹಣೆಯಲ್ಲಿ) ಊರ್ಧ್ವಮುಖವಾಗಿ ಹೊರಟ

ಎರಡುಗೆರೆಗಳಾಗಿಯೂ, ಅವುಗಳ ಮಧ್ಯದಲ್ಲಿ ಅಂತರವಿರುವಂತೆ ರಚಿಸಲ್ಪಟ್ಟ ಊರ್ಧ್ವಪುಂಡ್ರ (ತಿರುನಾಮ) ವನ್ನು ಮಾತ್ರವೇ ಹೇಳಲ್ಪಡುವುದರಿಂದ (ಅಷ್ಟಮೀಂದು ಕಲೀವ ಆಧಾರಃ ಮೂಲಂ ಯಸ್ಯತತ್ ಅಷ್ಟಮೀಂದು ಕಲಾಧಾರಂ, ತಥಾವಿಧಂ ಊರ್ಧ್ವಪುಂಡ್ರಂ ಯಸ್ಯಸಃ- ಎಂದು ವಿಗ್ರಹ ವಾಕ್ಯವು) ಈ ವಚನಕ್ಕೆ ಚಂದ್ರನನ್ನು ತಲೆಯಲ್ಲಿ ಧರಿಸಿರುವುದೂ ಊರ್ಧ್ವಪುಂಡ್ರವನ್ನು ಹಾಕಿಕೊಂಡಿರುವುದೂ ಆದ ಹರಿಹರರುಗಳ ಚಿಹ್ನೆಗಳನ್ನು ಸೂಚಿಸುವುದರಲ್ಲಿ ಅಭಿಪ್ರಾಯವಿಲ್ಲದಿರುವುದರಿಂದ ಇದೂ ಒಂದು ಅಸಗಂತವೇ. ಆ ಪಾದ್ಮಪುರಣ ಆರನೆಯ ಅಧ್ಯಾಯದಲ್ಲಿ ೨೯ ಎಂಬ ಸಂಖ್ಯೆಯಿಂದ ಸೂಚಿತವಾದ,-''ಲಲಾಟ ಪಟ್ಟಕಟಿತ ವೇಣು ಪತ್ರೋರ್ಧ್ವಪುಂಡ್ರಕಃ'' (ಹಲಗೆಯಂತಿರುವ ದಿವ್ಯವಾದ ಹಣೆಯಲ್ಲಿ ಸ್ಥಾಪಿಸಿರುವ ಬಿದಿರಿನೆಲೆಯಂತೆ (ಬಿದಿರಿನಗರಿ) ರೂಪಗೊಂಡು ಊರ್ಧ್ವಪುಂಡ್ರವನ್ನು ಹೊಂದಿದವನು) ಎಂದಿರುವ ವಚನದಲ್ಲಿ ಶ್ರೀ ಶ್ವೇತವರಾಹ ಭಗವಂತನ ಊರ್ಧ್ವಪುಂಡ್ರದ ವಿನ್ಯಾಸವನ್ನು ಸೂಚಿಸಿರುವ ರೀತಿಯಲ್ಲಿ ಈ ವಚನವೂ ಶ್ರೀನಿವಾಸ ಭಗವಂತನ ಊರ್ಧ್ವಪುಂಡ್ರದ ವಿನ್ಯಾಸವನ್ನು ಸೂಚಿಸುವುದೆಂದು ತಿಳಿದು ಕೊಳ್ಳುವುದೇ ಸ್ವಾರಸ್ಯಕರವಾದುದರಿಂದ ಈ ಶೈವರುಗಳ ಆಟವು ಪರದಾಟವೇ ಆಗುತ್ತದೆ.

ಊರ್ಧ್ವಪುಂಡ್ರಕ್ಕೆ ಮೂಲ (ಅಡಿಭಾಗ) ದೊಂದಿಗೆ ಸೇರಿದುದೂ ಮಧ್ಯದಲ್ಲಿ ಅಂತರವಿರುವುದನ್ನು ಕೊಂಡುದೂ ಆದ ಎರಡು ರೇಖೆಗಳ ವಿನ್ಯಾಸವು ಶಾಸ್ತ್ರಗಳಿಂದ ತಿಳಿಯುಬರುತ್ತದೆ. ಕಾತ್ಯಾಯನೀಯ ಶ್ವೇತಮೃದೂರ್ಧ್ವಪುಂಡ್ರೋಪನಿಷತ್ತಿನಲ್ಲಿ - ಹಣೆಯ ಕೆಳಗೆ (ಮೂಗಿನ ಮೇಲೆ) ತಿರುನಾಮದ ಮೇಲ್ಭಾಗಕ್ಕೆ ಒಂದು ಅಂಗುಲ ಪ್ರಮಾಣದ ಮೂಲವೂ, ಆದರಿಂದುಂಟಾದ ಎರಡು ಶಾಖೆಗಳೂ (ಹಣೆಯಲ್ಲಿ ಎರಡು ರೇಖೆಗಳೂ), ಅವುಗಳ ನಡುವೆ ಒಂದಂಗುಲಕ್ಕಿಂತ ಕಡಿಮೆಯಿಲ್ಲದಂತೆ ಅವಕಾಶವೂ ಶ್ರೀಯ ಪ್ರತಿಷ್ಠೆಗಾಗಿ ಇರುತ್ತದೆ, ಶ್ರೀ ಎಂಬುದು ಅರಿಶಿನ (ಶ್ರೀಚೂರ್ಣ) ಇದನ್ನು ಧಾರಣೆಮಾಡುವುದರಿಂದ ಮನುಷ್ಯನು ಶ್ರೀಮಾನ್ ಆಗಿ (ಸಂಪತ್ತನ್ನು ಹೊಂದಿದವನಾಗಿ) ಆಗುತ್ತಾನೆ, ಎಂದು ಹೇಳಲ್ಪಟ್ಟಿದೆ.

ಪಾದ್ಮೋತ್ತರ ಖಂಡದ ಮೂರನೆಯ ಅಧ್ಯಾಯದಲ್ಲಿನ ೩೧ ಎಂಬ ಸಂಖ್ಯೆಯ ವಚನದಲ್ಲಿ - ಮೂಗಿನ ಕೆಳಭಾಗದಿಂದ ಪ್ರಾರಂಭಿಸಿದ ಹಣೆಯ ಮೇಲ್ಭಾಗದವರೆಗೂ (ಬಿಳಿಯ) ಮಣ್ಣಿನಿಂದ ತಿರುನಾಮವ ನ್ನಿಡಬೇಕು. ಹುಬ್ಬುಗಳ ನಡುವಿನಿಂದಾರಂಭಿಸಿ ಅವಕಾಶವನ್ನು ವಿನ್ಯಾಸಗೊಳಿಸಬೇಕು. ಮಧ್ಯದ ಶೂನ್ಯಸ್ಥಳವು ಎರಡಂಗುಲವೂ, ಪಾರ್ಶ್ವರೇಖೆಗಳು ಒಂದಗುಲ ಪ್ರಮಾಣವಾಗಿ ವಿನ್ಯಾಸಗೊಂಡಿರಬೇಕು - ಎಂದು ಸೂಚಿಸಲ್ಪಟ್ಟಿದೆ.

ಭಾರದ್ವಾಜ ಸಂಹಿತೆಯಲ್ಲಿಯೂ - ಆಚಮನವನ್ನು ಮಾಡಿ ಬಿಳಿಯ ಬಣ್ಣವಿರುವ ಮಣ್ಣನ್ನು ತೆಗೆದುಕೊಂಡು ಊರ್ಧ್ವಪುಂಡ್ರ (ತಿರುನಾಮ)ವನ್ನು ಇಟ್ಟು ಕೊಳ್ಳಬೇಕು. ಮೂಗಿನ ಅಡಿಭಾಗ (ಮೂಲ) ದಿಂದ ಪ್ರಾರಂಭಿಸಿ ತಲೆಗೂದಲವರೆಗೆ ಹಾಕಿಕೊಳ್ಳಬೇಕು. ಮೂಗಿನ ಮೂಲವೆಂದರೆ ಮೂಗಿನ ಮೂರನೆಯ ಒಂದು ಭಾಗವೆಂದು ಭಾವಿಸಲ್ಪಡುತ್ತದೆ. (ಅದೇನೆಂದರೆ ಮೂಗಿನ ತುದಿಯಿಂದ ಹುಬ್ಬುಗಳ ನಡುಭಾಗದವರೆಗೆ ಇರುವ ಮೂಗಿನ ಉದ್ದವನ್ನು ಮೂರು ಭಾಗಗಳಾಗಿ ಭಾಗಮಾಡಿದಾಗ ಮೇಲ್ಭಾಗದಲ್ಲಿರುವ ಮೂರನೆಯ ಭಾಗಕ್ಕೆ ಮೂಲವೆಂದು ಹೆಸರು) ಹಣೆಯಲ್ಲಿ ತಿರುನಾಮಗಳ ನಡುವೆ ಅರಿಶಿನದ ಪುಡಿಯಿಂದ (ಅಥವಾ) ಸುವಾಸನೆಯೊಡನೆ ಕೂಡಿದ ಕೇಸರಿಯ ಪುಡಿಯಿಂದ ಲಕ್ಷ್ಮಿಯ ಸ್ಥಾನದಲ್ಲಿಡಬೇಕು,- ಎಂದು ಹೇಳಲ್ಪಟ್ಟಿದೆ.

ವೈಖಾನಸಾಗಮದಲ್ಲಿಯೂ - ಶ್ರೀಹರಿಯ ಮಂಗಳವಾದ ಹಣೆಯಲ್ಲಿ ಶ್ರೀನಾಸಿಕದ ಕೆಳಭಾಗದಿಂದ ಆರಂಭಿಸಿ ಎರಡು ಗೆರೆಗಳೊಂದಿಗೆ ಕೂಡಿದ ತಿರುನಾಮವನ್ನು ಧರಿಸಬೇಕು -ಎಂದು ಕಂಡುಬರುತ್ತದೆ.

ಹೀಗೆಯೆ ಊರ್ಧ್ವಪುಂಡ್ರದ ವಿನ್ಯಾಸವನ್ನು ತಿಳಿಸುವ ಹಲವಾರು ಪ್ರಮಾಣಗಳು ಅಲ್ಲಲ್ಲಿ ತಿಳಿಸಿರುವುದನ್ನು ಕಾಣಬಹುದು.

ನಾಸಿಕದ ಮೂಲದಲ್ಲಿರುವ, ಎರಡು ರೇಖೆಗಳ ರೂಪವಾದ ತಿರುನಾಮದ ಕೆಳಭಾಗವಾದುದು ಪೂರ್ಣಚಂದ್ರ ಮಂಡಲದ ಸರಿಅರ್ಧಕ್ಕೆ ಹೋಲುವ ವಿನ್ಯಾಸವಿರುವುದಾಗಿರುವುದರಿಂದ, ಭಗವಂತನ ಊರ್ಧ್ವಪುಂಡ್ರವು ''ಅಷ್ಟಮೀ ಚಂದ್ರನ ಕಲೆಯಂತಿನ ಆಧಾರವುಳ್ಳದಾಗಿ ಹಣೆಯಲ್ಲಿರುವ ಊರ್ಧ್ವಪುಂಡ್ರವಿರುವ ಶ್ರೀನಿವಾಸನು'' ಎಂಬುದರಿಂದ (ಪಾದ್ಮಪುರಾಣದಲ್ಲಿ) ಸೂಚಿಸಲ್ಪಟ್ಟಿದೆಯೆಂದು ತಿಳಿದುಕೊಳ್ಳಬೇಕು.

ಅಥವಾ, ''ಅಷ್ಟಮೀ ದಿನದ ಚಂದ್ರನಂತೆ ರೂಪವುಳ್ಳದ್ದೂ ಕನ್ನಡಿಯಂತೆ ಫಳಫಳನೆ ಹೊಳೆಯುತ್ತಿರುವುದೂ ಆದ ತನ್ನ ಹಣೆಯಲ್ಲಿ ಸಾಧುಗಳ ಶರಣ್ಯನಾದ ಶ್ರೀನಿವಾಸನು ಮೂಲದೊಂದಿಗೆ (ಮೂಗಿನ ಕೆಳಭಾಗದೊಂದಿಗೆ) ಕೂಡಿದ ಎರಡು ರೇಖೆಗಳ ರೂಪವಾಗಿ ಶ್ವೇತಮೃತ್ತಿಕೆ (ಬಿಳಿಯಮಣ್ಣು) ಯಿಂದ ಊರ್ಧ್ವಪುಂಡ್ರವನ್ನು ತಾನೇ ಧರಿಸಿಕೊಂಡನು'' ಎಂದು ಭವಿಷ್ಯೋತ್ತರ ಪುರಾಣದಲ್ಲಿರುವ ವಚನದೊಂದಿಗೆ ಸಂಗತಿಸಬೇಕಾಗಿರುವುದರಿಂದ, ಇಲ್ಲಿ, ''ಅಷ್ಟಮೀಂದು ಕಲಾಕಾರ ಲಲಾಟ ಸ್ಥೋರ್ಧ್ವಪುಂಡ್ರಕಃ'' ಎಂದೇ ಪಾಠವನ್ನು ತೆಗೆದುಕೊಳ್ಳಿ, 'ಅಷ್ಟಮೀಂದು

ಹೆಸರು ಎಂದು ತಿಳಿಯಲು ಸಾಧ್ಯ. ಇದಕ್ಕಿಂತ ''ಅಷ್ಟಮೀಂದು ಕಲಾಧಾರ ಲಲಾಟಸ್ಥೋರ್ಧ್ವ ಪುಂಡ್ರಕಃ'' ಎಂಬ ಪಾಠವೇ ಪ್ರಾಮಾಣಿಕವಾದುದಲ್ಲಿ (ನಂಬತಕ್ಕದಾದುದಲ್ಲಿ) ಮುಂಚೆ ಹೇಳಲ್ಪಟ್ಟ ಅರ್ಥವೇ ಹೆಚ್ಚು ಸಂಗತವಾಗುತ್ತದೆ ಎಂದು ಅರಿಯಬಹುದು.

ಹೀಗೆಯೇ ಶಂಕರನ ಶಿರಸ್ಸಿನಲ್ಲಿ, ಚಂದ್ರಕಲೆಯಿದ್ದರೂ, ಹಣೆಯಲ್ಲಿ ಅದು ಇಲ್ಲದೇ ಇರುವುದರಿಂದ, 'ಅಷ್ಟಮೀಂದು ಕಲಾಧಾರ ಲಲಾಟಸ್ಥೋರ್ಧ್ವ ಪುಂಡ್ರಕಃ' ಎಂಬ ವಚನವು ಹಣೆಯನ್ನು ಚಂದ್ರಕಲೆಗೆ ಆಧಾರವಾಗಿ ಹೇಳುತ್ತದೆ- ಎಂದು ಶೈವರುಗಳು ವರ್ಣಿಸುವುದು ಅಸಂಗತವು.

ಇಲ್ಲಿ ಈ ವಿಷಯವನ್ನು ಸಾವಧಾನವಾಗಿ ಪರಿಶೀಲಿಸಬೇಕು. ಭಗವಂತನಾದ ನಾರಾಯಣನಿಗೆ ಮತ್ಸ್ಯ, ಕೂರ್ಮ, ವರಾಹ ಮುಂತಾದ ಹಲವು ರೂಪಗಳೂ, ವರ್ಣಗಳೂ ಇರುವ ಹಲವು ಸಾವಿರ ಅವತಾರಗಳಿವೆ. ಅವುಗಳಲ್ಲಿ 'ವಿಷ್ಣು' ಮುಂತಾದ ಪದಗಳಾದ ಶ್ರುತಿಗಳಿಂದಲೇ ಶ್ರಿಯಃಪತಿಯ ಗುಣವನ್ನರಿಯತಕ್ಕುದು, ಕೇವಲ ಚಿಹ್ನೆಗಳಿಂದ ಮಾತ್ರವಲ್ಲ. ಚಿಹ್ನೆಗಳನ್ನು ವಿಮರ್ಶಿಸುತ್ತಾ ಹೋದರೆ, ಅವತಾರಗಳಲ್ಲಿ ಮತ್ಸ್ಯ, ಕೂರ್ಮ ವರಾಹ ಮುಂತಾದ ಬಗೆಗಳಿಂದ ಪ್ರಪಂಚದಲ್ಲಿ ಕಾಣುವ ಸಾಧಾರಣವಾದ ಮೀನು, ಆಮೆ, ಹಂದಿ ಇವುಗಳ ಗುಣಗಳಲ್ಲದೆ ಶ್ರಿಯಃ ಪತಿಯಗುಣಗಳು ಧೃಢವಾಗುವುದಿಲ್ಲ. ಕೇವಲ ಚಿಹ್ನೆಗಳನ್ನು ಅಲ್ಲದೆ, 'ನಾರಾಯಣ', 'ವಿಷ್ಣು' ಮುಂತಾದ ಪದಗಳಾದ ಶ್ರುತಿಯೆಂಬ ಪ್ರಮಾಣವು ಪ್ರಬಲವಾಗಿರುವುದರಿಂದ, ನೀತಿ ಧರ್ಮವನ್ನರಿತು ವಿಮರ್ಶಕರು ಆ ಅವತಾರಗಳಲ್ಲಿ ಹೇಗೆ ಪ್ರಪಂಚದಲ್ಲಿರುವ ಮೀನು, ಆಮೆ, ಹಂದಿ ಇವುಗಳ ಗುಣಗಳನ್ನು ಬಿಟ್ಟು ಶ್ರಿಯಃ ಪತಿಯ ಗುಣಗಳನ್ನು ನಿಶ್ಚಯಿಸುತ್ತಾರೆಯೋ ಹಾಗೆಯೇ-ಶ್ರೀವೈಕುಂಠದಿಂದ ಶ್ರೀಮನ್ನಾರಾಯಣನೇ ಅಲ್ಲವೇ ಈ ರೀತಿಯ ವೇಷಗಳಿಂದ ಕೂಡಿ ಶ್ರೀನಿವಾಸನೆಂದು ಹೆಸರನ್ನು ಹೊಂದಿದ ಶ್ರೀವೆಂಕಟನಾಥನಾಗಿ ಅವತರಿಸಿದನು?- ಎಂದು ಸ್ಪಷ್ಟವಾಗಿ ಹೇಳಲ್ಪಡುವ 'ನಾರಾಯಣ' ಮುಂತಾದ ಲಿಂಗಗಳಿಂದ (ಗುರುತುಗಳಿಂದ) ಉಂಟಾಗುವ- ಇವನು ಬೇರೆ ದೇವತೆಯೆಂಬ ನೆನಪನ್ನು ಬಿಟ್ಟು, ನಾರಾಯಣತ್ವವನ್ನೇ ಈ ದೇವನಲ್ಲಿ ವಿಮರ್ಶಕರಿಂದ ಶೋಧಿಸಿ ಸ್ಥಾಪಿಸಲು ಸಾಧ್ಯವು ಇಂಥಹ ಜಾಗದಿಂದ, ಇಂಥಹವನು ಇಂಥಹ ವೇಷವನ್ನು ಹೊಂದಿದವನಾಗಿ, ಇಲ್ಲಿ ಬಂದನು ಎಂದು ಅತ್ಯಂತ ಸ್ಪಷ್ಟವಾಗಿ ತಿಳಿಸಲ್ಪಟ್ಟಿರುವಲ್ಲಿ, ಬರೀ ವೇಷಮಾತ್ರವನ್ನು ಕೊಂಡು ಅವನಿಗೆ, ಅವನಿಗಿಂತಲೂ ಬೇರೆಯಾದವನು ಎಂಬ ಭಿನ್ನತ್ವವನ್ನು ನಿಶ್ಚಯಿಸಲು ಸಾಧ್ಯವಿಲ್ಲವಲ್ಲವೇ?

ಲೋಕದಲ್ಲೂ, ರಾಮ, ಕೃಷ್ಣ, ಸೀತೆ, ಸತ್ಯಭಾಮೆ ಮುಂತಾದವರುಗಳ ವೇಷವನ್ನು ಧರಿಸಿ ನಾಟಕರಂಗದಲ್ಲಿ ತೋರುವ ಒಬ್ಬ ಪಾತ್ರಧಾರಿಯು, ಇಂಥಹವನು ಇಲ್ಲಿ ಈ ವೇಷನ್ನು ಹಾಕಿಕೊಂಡು ಬಂದಿದಾನೆ ಎಂದು ಸ್ಪಷ್ಟವಾಗಿ ತಿಳಿಯಲ್ಪಡುವಾಗ, ಬರೀ ಆತನ ವೇಷವನ್ನು ಮಾತ್ರವೇ ಪರಿಗಣಿಸಿದ ಇವನು ರಾಮನೇ ಎಂದು ಹುಚ್ಚನಲ್ಲದೇ ಮತ್ಯಾವನೂ ನಂಬುವುದಿಲ್ಲವಲ್ಲವೇ?

ನಾಗಾಭರಣ ಮುಂತಾದವುಗಳು ವಿಷ್ಣುವಿನ ಇತರ ಅವತಾರಗಳಲ್ಲಿ ಒಂದರಲ್ಲೂ ಕಾಣಲ್ಪಡಲಿಲ್ಲವಲ್ಲಾ? ಎಂದು ಕೇಳುವವರಿಗೆ, ಮೀನು, ಆಮೆ, ವರಾಹ ಗುಣಗಳು ಆ ಅವತಾರಗಳಲ್ಲಿ ಹೊರತು ಬೇರೆ ಅವತಾರಗಳಲ್ಲಿ ಎಲ್ಲೂ ಪ್ರಸಿದ್ಧವಾಗಿಲ್ಲವಲ್ಲಾ ಎಂಬ ಪ್ರತಿ ಪ್ರಶ್ನೆಯು ಸಮಾಧಾನಕರವಾದ ಉತ್ತರವಾಗುತ್ತದೆ. ಮೇಲೂ ಕೃಷ್ಣಾವತಾರದಲ್ಲಿ ನವಿಲುಗರಿಯ ಧಾರಣೆಯನ್ನು ನೋಡಿದುದರಿಂದ ಮಾತ್ರ ಇವನು ಮಯೂರವಾಹನನಾದ ಸ್ಕಂದನೇ ಎಂದು ಇಲ್ಲಿ ವಾದಿಸುತ್ತಿರುವವರು ಯಾರೂ ಹೇಳುತ್ತಿಲ್ಲವಲ್ಲಾ? ಇನ್ನು ವಿವಾದವೆಂಬ (ಜಗಳವೆಂಬ) ಚೆಂದಿಗೆ ಸ್ವಲ್ಪವೂ ಸ್ಥಳವಿಲ್ಲದ ಹಸ್ತಿಗಿರಿನಾಥನಾದ (ಕಂಚಿಯದೇವನಾದ) ವರದರಾಜದೇವನಲ್ಲಿಯೂ ನಾಗಾಭರಣವು ಕಾಣಲ್ಪಡುವುದರಿಂದ, ಈ ಶ್ರೀವೆಂಕಟನಾಥನಲ್ಲಿ ಕಾಣಬರುವ ನಾಗಾಭರಣವು ವಿಷ್ಣುವಿನ ಬೇರೆ ಅವತಾರಗಳಲ್ಲಿ ಇಲ್ಲವೆಂಬುದು ತಪ್ಪಾಗುತ್ತದೆ. ಆ ವರದರಾಜನು ನಾಗಾಭರಣವನ್ನು ಧರಿಸಲು ಕಾರಣ ಆತನು ಆದಿಶೇಷನಿಂದ ಪೂಜಿಸಲ್ಪಟ್ಟುದೇ ಎಂದು ಹೇಳಿದರೆ, ಅದಕ್ಕಿಂತಲೂ ಅಧಿಕವಾದ ಕಾರಣಗಳನ್ನು ಈ ದೇವನು ನಾಗಾಭರಣವನ್ನು ಧರಿಸುವುದಕ್ಕೂ ಇದೆ ಎಂಬುದು ಮುಂಚೆಯೇ ಹೇಳಲ್ಪಟ್ಟೇ ಇರುತ್ತದೆ. ಆದುದರಿಂದ ಈ ವೇಂಕಟೇಶನು ಅನ್ಯದೇವತೆಯಲ್ಲ.

'ಲಿಂಗ' (ಚಿಹ್ನೆ)ವೆಂಬ ಪ್ರಮಾಣಕ್ಕಿಂತ ಸ್ಪಷ್ಟವಾದ 'ಶ್ರುತಿ' ಎಂಬ ಪ್ರಮಾಣವು ಪ್ರಬಲವಾದುದೆಂಬ ವಿಷಯವು ಪೂರ್ವ ಮೀಮಾಂಸಾಶಾಸ್ತ್ರದಲ್ಲಿ (೧) ಶ್ರುತಿ (೨) ಲಿಂಗ (೩) ವಾಕ್ಯ (೪) ಪ್ರಮಾಣ (೫) ಸ್ಥಾನ (೬) ಸಮಾಖ್ಯ. ((೧) ಸ್ಪಷ್ಟವಾದ ಮಾತು (೨) ಗುರುತು(ಚಿಹ್ನೆ) (೩) ಪೂರ್ಣವಾಗಿ ಅರ್ಥಕೊಡುವ ಪದಗಳ ಜೋಡಣೆ (೪) ಸಂದರ್ಭ (೫) ಜಾಗ (೬) ಶಕ್ತಿಮಾನ್, ಬಲವಾನ್ ಎಂದು ಕಾರಣಗಳನ್ನು ತೋರಿಸುವ ಹೆಸರು) ಮುಂತಾದ, ಒಂದು ವಸ್ತುವನ್ನು ಅದು ಇಂಥಹುದೇ ಎಂದು ಸ್ಥಿರಪಡಿಸುವುದಕ್ಕಾಗಿ ಜನಿಸಿದ ಆರುಪ್ರಮಾಣಗಳಲ್ಲಿ, ಒಂದೆ ಹಿಂದಿನ ಪ್ರಮಾಣಗಳಿಗಿಂತ ಮುಂದೆ ಮುಂದಿನ ಪ್ರಮಾಣಗಳು ಉತ್ತಮವಾದುವುಗಳು. ಅದಕ್ಕೆ ಕಾರಣವೇನೆಂದರೆ ಮುಂಚೆಯಿರುವ ಪ್ರಮಾಣಗಳು ಹೆಚ್ಚಿನ ಕಾಲವನ್ನು ತೆಗೆದುಕೊಳ್ಳದೆ ಅತ್ಯಂತ ಶೀಘ್ರದಲ್ಲಿ ಒಂದುವಸ್ತುವನ್ನು

ಇಂಥಹುದು ಎಂದು ನಿರ್ಧರಿಸುತ್ತದೆ-ಎಂದು ಹೇಳಿರುವುದರಿಂದ ತಿಳಿದುಕೊಳ್ಳತಕ್ಕದ್ದು.

ಇಲ್ಲಿ ಸೂಚಿಸಲ್ಪಟ್ಟ ಪ್ರಮಾಣಗಳು ಆರೂ ಸಹ ಪುರಾಣಗಳಲ್ಲಿ ಶ್ರೀವೇಂಕಟೇಶನನ್ನು ಶ್ರೀಮನ್ನಾರಾಯಣನಾಗಿಯೇ ತಿಳಿಸುತ್ತವೆ. ಅವು ಕೆಳಗೆ ಕಂಡಂತಿವೆ.

ಶ್ರುತಿ ಯೆಂಬುದು (ಬೇರೊಂದನ್ನು ಅಪೇಕ್ಷಿಸದೇ ಸ್ವಯಂ ಆಗಿ ಅರ್ಥವನ್ನು (ವಸ್ತುವನ್ನು) ಇಂಥಹುದೇ ಎಂದು ನಿರ್ಧರಿಸುವುದು) ಸ್ಪಷ್ಟವಾದ ಶಬ್ದವೇ ಎಂಬುದು ಅತ್ಯಂತ ಪ್ರಸಿದ್ಧಿಯಾದುದು. ಈ ದೇವನ ಆವಿರ್ಭಾವವನ್ನು ವರ್ಣಿಸುವ ಪುರಾಣಘಟ್ಟಗಳಲ್ಲಿ ಶ್ರಿಯಃಪತಿಯನ್ನು ಸೂಚಿಸುವ ಅವನಿಗೇ ಅಸಾಧಾರಣವಾದ 'ನಾರಾಯಣ' 'ವಿಷ್ಣು' ಮುಂತಾದ ಸ್ಪಷ್ಟವಾದ ಪದಗಳು ಹಲವುಬಾರಿ ಪ್ರಯೋಗಿಸ್ಪಟ್ಟಿರುವುದನ್ನು ಕಾಣಬಹುದು.

ಲಿಂಗವೆಂಬುದು, ಒಂದು ವಸ್ತುವನ್ನು ಇಂಥಹುದು ಎಂಬುದನ್ನು ಸೂಚಿಸುವ ಗುರುತು. ಶಂಖ ಚಕ್ರಗಳು ಮುಂತಾದ ದಿವ್ಯಾಯುಧಗಳನ್ನು ಧರಿಸಿರುವಿಕೆ, ಶ್ರೀದೇವಿಯಿಂದಾಲಂಗಿಸಲ್ಪಟ್ಟ ವಕ್ಷಃಸ್ಥಳವು, ಗರುಡಾಧಿಷ್ಠಾನವಾದ ವಿಮಾನದಲ್ಲಿ ಆಧಿರೂಢನಾಗಿರುವಿಕೆ, ಬ್ರಹ್ಮ, ಶಿವ ಮತ್ತಿತರದೇವತೆಗಳೆಲ್ಲರಿಂದಲೂ ನಮಸ್ಕರಿಸಲ್ಪಡುವ ಶ್ರೀಪಾದಾಂಬುಜದ್ವಯಗಳು ಮುಂತಾದ ಇತರ ದೈವಗಳಿಗಿಲ್ಲದ ಶ್ರಿಯಃಪತಿಯಾದ ನಾರಾಯಣನೊಬ್ಬನಿಗೇ ಅಸಾಧಾರಣವಾದ ಚಿಹ್ನೆಗಳು ಅಲ್ಲಲ್ಲಿ ಹೇಳಿರುವುದನ್ನು ಕಾಣಿರಿ.

ವಾಕ್ಯವೆಂಬುದು ಒಂದಕ್ಕಿಂತ ಹೆಚ್ಚಿನ ಪದಗಳ ಜೋಡಣೆಯಾಗುತ್ತದೆ. 'ಶ್ರೀದೇವಿಯ ಪತಿಯಾದವನು' ಮುಂತಾದ ವಿಷ್ಣುವಿಗೇ ಅಸಾಧಾರಣವಾದ ಲಕ್ಷಣಗಳನ್ನು ಸೂಚಿಸುವ ಶ್ರಿಯಃಪತಿ (ಶ್ರೀದೇವಿಯನಾಥ) ಎಂಬ ಇಂಥಹ ಪದ ಜೋಡಣೆಗಳನ್ನು ಕಾಣತಕ್ಕದ್ದು

ಪ್ರಕರಣವೆಂಬುದು ಮುಂದೆ ಮತ್ತು ಹಿಂದೆ ತಿಳಿಸಿದ ಕೆಲವು ರಚನೆ (ಪ್ರಸ್ತಾವ)ಗಳಿಂದ ವಸ್ತುಗಳನ್ನು ಇಂಥಹುದೇ ಎಂದು ಪ್ರತಿಪಾದಿಸುವುದು. ಆಯಾಯಾ ಪುರಾಣಗಳಲ್ಲಿ, ಪ್ರಾರಂಭದಲ್ಲಿ ವಿಷ್ಣು ಕ್ಷೇತ್ರದ ಬಗ್ಗೆ ಪ್ರಸ್ತಾಪ ಮಾಡುವುದೂ ನಂತರ ಕೊನೆಯಲ್ಲಿ ಇದು ವಿಷ್ಣುಕ್ಷೇತ್ರವೆಂದೇ ಆ ಕ್ಷೇತ್ರವನ್ನು ಪ್ರತಿಪಾದಿಸುವ ಒಂದು ಪ್ರಮಾಣ.

ಸ್ಥಾನವೆಂಬುದು ಜಾಗ. ಒಬ್ಬರನ್ನು ಹೇಳಬೇಕಾದ ಜಾಗದಲ್ಲಿ ಮತ್ತೊಬ್ಬರನ್ನು ಹೇಳಿ ಅದರಿಂದ ಆ ಇಬ್ಬರನ್ನೂ ಒಬ್ಬರೇ ಎಂದು ಪರಿಗಣಿಸುವ

ಒಂದು ಪ್ರಮಾಣ, ಅದು ಹೇಗೆಂದರೆ - ಭವಿಷ್ಯೋತ್ತರ ಪುರಾಣದಲ್ಲಿಯೂ. ಶ್ರೀವರಾಹಪುರಾಣದ ಎರಡನೆಯ ಭಾಗದಲ್ಲಿಯೂ ಭಗವಾನ್ ಶ್ರೀಕೃಷ್ಣನ ಶುಭ ವಿವಾಹವನ್ನು ನೋಡಿ ಆನಂದಿಸಲು ಎಣಿಸಿದ ಯಶೋದೆಯು, ಆ ಅವತಾರ ಕಾಲದಲ್ಲಿ ಅದು ದಕ್ಕದೇ ಹೋದುದರಿಂದ, ಮತ್ತೊಂದು ಅವತಾರದಲ್ಲಿ, ''ಆ ಆನಂದವನ್ನು ನಿನಗೆ ಕೊಡುತ್ತೇನೆ'' ಎಂದು ಹೇಳಿದ ಶ್ರೀಕೃಷ್ಣಪರಮಾತ್ಮನಿಂದ ವರವನ್ನು ಪಡೆದು, ಪುನಃ ಕಲಿಯುಗದಲ್ಲಿ ವಕುಳಮಾಲಿಕೆಯಾಗಿ ಶ್ರೀವೇಂಕಟಗಿರಿಯಲ್ಲಿ ಅವತರಿಸಿದ ಅವಳಿಗೆ, ಮುಂಚೆ ಮಾಡಬೇಕಾದ ಭಗವಾನ್ ಶ್ರೀಕೃಷ್ಣನ ಸ್ಥಾನ (ಜಾಗ) ದಲ್ಲಿ ಶ್ರೀನಿವಾಸನೆಂಬ ಹೆಸರುಳ್ಳ ಶ್ರೀವೇಂಕಟೇಶ್ವರನು ಅವತರಿಸಿ ಆ ವಕುಳಮಾಲಿಕೆಯ ಮೂಲಕವೇ ಆಕಾಶರಾಜನ ಮಗಳನ್ನು ವಿವಾಹಮಾಡಿಕೊಂಡು, ಅವಳಿಗೆ ಆ ಆನಂದವನ್ನು ಕೊಟ್ಟನು, ಎಂದು ಹೇಳಲ್ಪಟ್ಟುದುದರಿಂದಲೂ, ಹಿಂದೆ ರಾಮಾವತಾರದಲ್ಲಿ ತನಗೆ ಪ್ರತಿನಿಧಿಯಾಗಿ (ಬದಲಾಗಿ) ಲಂಕೆಯಲ್ಲಿ ರಾವಣನ ಭವನದಲ್ಲಿದ್ದು ಘೋರವಾದ ಕಷ್ಟಗಳನ್ನನುಭವಿಸಿದ ವೇದವತಿ ಎಂಬ ಹೆಸರುಳ್ಳ ತನ್ನ ಸ್ನೇಹಿತೆಯನ್ನು ವಿವಾಹ ಮಾಡಿಕೊಳ್ಳಲೇಬೇಕೆಂದು, ರಾವಣವಧದ ನಂತರ ಅಗ್ನಿಪ್ರವೇಶ ಮಾಡುವ ತರುಣದಲ್ಲಿ ಪ್ರಾರ್ಥಿಸಿಕೊಂಡ ಸೀತಾದೇವಿಯ ಪ್ರಾರ್ಥನೆಯಂತೆಯೇ 'ಕಲಿಯುಗದಲ್ಲಿ ಅವಳನ್ನು ವಿವಾಹಮಾಡಿಕೊಳ್ಳುತ್ತೇನೆ' ಎಂದು ಶ್ರೀರಾಮಭದ್ರನು ಮಾತನ್ನು ಕೊಟ್ಟುದುದರಿಂದ, ಕಲಿಯುಗದಲ್ಲಿ ಆಕಾಶರಾಜನ ಮಗಳಾಗಿ ಜನ್ಮವೆತ್ತ ಪದ್ಮಾವತಿಯನ್ನು ವಿವಾಹಮಾಡಿಕೊಳ್ಳುವುದಕ್ಕಾಗಿ ಅವತಾರವನ್ನು ಮಾಡಬೇಕಾದ ಶ್ರೀರಾಮನ ಸ್ಥಾನದಲ್ಲಿ (ಜಾಗ) ಶ್ರೀನಿವಾಸನೆಂಬ ಹೆಸರನ್ನುಳ್ಳ ಶ್ರೀವೇಂಕಟೇಶನು ಅವತರಿಸಿ ಪದ್ಮಾವತಿಯನ್ನು ಪತ್ನಿಯಾಗಿ ಸ್ವೀಕರಿಸಿದನು - ಎಂದು ಹೇಳಲ್ಪಟ್ಟಿರುವುದರಿಂದಲೂ, ಶ್ರೀವೇಂಕಟೇಶನು ಮಹಾವಿಷ್ಣುವೇ ಎಂಬ ಈ ವಿಷಯದಲ್ಲಿ ಒಬ್ಬರನ್ನು ಹೇಳುವ ಜಾಗದಲ್ಲಿ ಮತ್ತೊಬ್ಬರನ್ನು ಹೇಳುವುದಾದ ಸ್ಥಾನ ಪ್ರಮಾಣವು ಉಂಟೆಂದು ತಿಳಿಯಲ್ಪಡುತ್ತದೆ. ಒಂದು ಕೆಲಸವನ್ನು ತಾವು ಮಾಡುವುದಾಗಿ ಹೇಳಿ ಮಾತು ಕೊಟ್ಟವರೂ, ಆ ಕಾರ್ಯವನ್ನು ಮಾಡಿದವರೂ ಒಬ್ಬರೇಯಾಗಿರಬೇಕಾದ ನಿಯಮವಿರುವುದರಿಂದಲೂ, ಭಗವಾನ್ ಶ್ರೀಕೃಷ್ಣನೇ ಶ್ರೀನಿವಾಸನೆಂದು ಹೇಳಿದಂತಾಯ್ತು. ಆ ಇಬ್ಬರೂ (ಶ್ರೀಕೃಷ್ಣ, ಶ್ರೀರಾಮ) ಮಹಾವಿಷ್ಣುವಿನ ಅವತಾರಗಳೆಂಬುದುದರಲ್ಲಿ ವಿವಾದ ಯಾವುದೂ ಇಲ್ಲವಲ್ಲವೇ? ಆದುದರಿಂದ ಶ್ರೀನಿವಾಸನು ಶ್ರೀಮಹಾವಿಷ್ಣುವೇ ಎಂದು ಧೃಢಪಡಿಸಲ್ಪಟ್ಟಿತು.

''ಸಮಾಖ್ಯೆ'' ಎಂಬುದು ಕಾರಣಾರ್ಥಕ ಹೆಸರು ಎಂದಾಗುತ್ತದೆ. ಶ್ರೀದೇವಿಯಿಂದ (ವಕ್ಷಃಸ್ಥಳದಲ್ಲಿ) ವಾಸಮಾಡಲ್ಪಟ್ಟವನು ಎಂಬ ಕಾರಣದಿಂದ ಉಂಟಾದ ಶ್ರೀನಿವಾಸ ಎಂಬ ಸಮಾಖ್ಯೆಯಿಂದ ಇವನು ಶ್ರಿಯಃಪತಿಯಾದ ವಿಷ್ಣುವೇ

ಎಂದು ಧೃಢಪಡುವುದರಿಂದ, ಸಮಾಖ್ಯೆ ಎಂಬ ಪ್ರಮಾಣವೂ ಸಹ ತೋರಿಸಲ್ಪಟ್ಟಿದೆ. ಬ್ರಹ್ಮಪುರಾಣದ ಏಳನೆಯ ಅಧ್ಯಾಯದಲ್ಲಿ - ''ಪೂಜಿಸತಕ್ಕವರೂ, ಎಲ್ಲರಲ್ಲೂ ಅಂತರ್ಯಾಮಿಯಾಗಿದ್ದು ಆಳುವವರಾದ ಹರಿಯು ಶ್ರೀವೇಂಕಟಾಚಲದಲ್ಲಿ ಯಾವ ಹೆಸರಿನಿಂದ ಪ್ರಸಿದ್ಧರಾಗಿದ್ದಾರೆ? ತಪೋಧನರೇ, ಅದನ್ನು ನನಗಾಗಿ ಹೇಳುವವರಾಗಿ'' ಎಂದು ದಿಲೀಪರಾಜನು ಕೇಳಲು, ''ಸರ್ವವ್ಯಾಪಿಯಾಗಿ ಶಂಖಚಕ್ರಧಾರಿಯಾದ ಭಗವಂತನು ಶ್ರೀನಿವಾಸನೆಂಬ ಹೆಸರಿನೊಂದಿಗೆ ಅಲ್ಲಿ ಪ್ರಸಿದ್ಧಿ ಹೊಂದಿದ್ದಾನೆ'' - ಎಂದು ಪ್ರಾರಂಭಿಸಿ ದೂರ್ವಾಸಮಹರ್ಷಿಯು ಉತ್ತರವಾಗಿ ಹೇಳಿದ ಭಾಗದಿಂದ ಈ ದೇವನಿಗೆ ಶ್ರೀ ಮಹಾವಿಷ್ಣುವಿನ ಭಾವವನ್ನು ಸ್ಥಿರಪಡಿಸುವ ಶ್ರೀನಿವಾಸನೆಂಬ ಸಮಾಖ್ಯೆಯು (ಪ್ರಮಾಣವು) ಹೇಳಲ್ಪಟ್ಟಿರುವುದನ್ನು ಕಾಣತಕ್ಕದ್ದು.

ಆದುದರಿಂದ ಈ ರೀತಿಯ ಆರು ಪ್ರಮಾಣಗಳಿಂದ ನಿರೂಪಿಸಿಲ್ಪಟ್ಟು, ನಿಷೇಧಿಸಲಸಾಧ್ಯವಾದ (ನಿಷೇಧಿಸಲು ಅಶಕ್ಯವಾದ) ನಾರಾಯಣನ ಭಾವಗಳನ್ನು ಹೊಂದಿದವನೂ, ದೇವತಾಂತರ ಭಾವದ ಆರೋಪವನ್ನು ಮಾಡಲು ಅಶಕ್ಯನಾದವನೂ ಆದ ಈ ಶ್ರೀನಿವಾಸನೆಂಬ ನಾಮಧೇಯವನ್ನು ಹೊಂದಿರುವ ವೇಂಕಟಗಿರಿಯನಾಯಕನಲ್ಲಿ ಕೆಲವು ಆಭಾಸ ಚಿಹ್ನೆಗಳನ್ನು ಕೊಂಡು, ಬೇರೆ ದೇವತೆಯೆಂಬ ಭಾವನೆಯನ್ನು ಬೇಕೆಂದೇ ಸೃಷ್ಟಿಸಿ ಹೇಳುವ ಶೈವರುಗಳ ಮನೋರಥವು ಯಾವವಿಧದಲ್ಲಿಯೂ ಸಿದ್ಧಿಸುವುದಿಲ್ಲ ವೆಂಬುದನ್ನು ನಿಶ್ಚಯವಾಗಿ ತಿಳಿಯಿರಿ. ನಾಗಾಭರಣವೇ ಮುಂತಾದ ಇತರ ದೇವತೆಯ ಚಿಹ್ನೆಗಳು ಕಂಡುಬರುವುದರಿಂದ ಬೇರೆದೇವತೆಯೆಂದು ತೋರುವುದಕ್ಕೆ ಯೋಗ್ಯತೆಯುಳ್ಳದನ್ನು ಮಾತ್ರವೇ ಕೊಂಡು ಅವಿವೇಕಿಗಳು ಆಕ್ಷೇಪಿಸುತ್ತಾರೆಯೇ ವಿನಃ ವಿವೇಕಿಗಳಾದ ಬುದ್ಧಿವಂತರುಗಳಿಗೆ ಈ ದೇವನಲ್ಲಿ ದೇವತಾಂತರತ್ವವನ್ನು ಆಕ್ಷೇಪಿಸಲು ಸ್ವಲ್ಪವೂ ಅವಕಾಶವಿಲ್ಲ. ಇವುಗಳೆಲ್ಲವೂ ''ಭೋಗೀಶಕಂಕಣಃ'', ''ಶಂಕ್ಯೋನಿಶ್ಶಂಕಶ್ಶಂಕಿತಾಖಿಲಃ'' (ಹಾವುಗಳನ್ನು ಬಳೆಯಾಗಿಧರಿಸಿದವನು (೨) ಆದರಿಂದ ಪರಮಶಿವನೋ ಎಂದು ಸಂದೇಹ ಪಡತಕ್ಕವನು (೩) ನಿಜವಾಗಿಯೂ ಸಂದೇಹಕ್ಕೆ ಆಸ್ಪದವಿಲ್ಲದೇ ಇರುವವನು (೪) ಆದರೂ ಎಲ್ಲರನ್ನೂ ಸಂದೇಹಿಸುವಂತೆ ಮಾಡುವವನು) ಎಂಬ ಬ್ರಹ್ಮಾಂಡ ಪುರಾಣದಲ್ಲಿನ ಶ್ರೀವೇಂಕಟೇಶ ಸಹಸ್ರನಾಮ ಪಾಠದಲ್ಲಿ ಇರುವ ಈ ನಾಲ್ಕು ನಾಮಗಳನ್ನು (ಹೆಸರುಗಳನ್ನು) ಪರಿಶೀಲಿಸಿದ ಮಾತ್ರದಲ್ಲಿ ಸುಲಭವಾಗಿ ತಿಳಿಯಲು ಸಾಧ್ಯವಾಗುವುದರಿಂದ ಇಲ್ಲಿ ಅಧಿಕವಾಗಿ ಸಂಶೋಧಿಸಬೇಕಾದ ಅಗತ್ಯವೇ ಇಲ್ಲ. ಆದುದರಿಂದ ''ಎಲೈ ಅರಸನೇ, ಶೈವರುಗಳ ವಾದದಂತೆ ಈ ದೇವನಲ್ಲಿ ಬೇರೆ ದೇವತೆಯ ಸಂಬಂಧವು ಇರಬಹುದೋ ಎಂದು ಸ್ವಲ್ಪವೂ ಸಂದೇಹಪಡಬೇಡ'',

ಎಂದು ಯತಿರಾಜರು (ರಾಮಾನುಜ)ಯಾದವರಾಜನಿಗೆ ಬೋಧಿಸಿದರು.

ಪಂಡಿತೋತ್ತಮ ಸಮೂಹವು 'ಹೌದು, ಹೌದು' ಎಂದು ತಲೆಯಲ್ಲಾಡಿಸಿ, ಒಪ್ಪಿಕೊಂಡಾಡುವಂತೆ ಮಾಡಿದ ಯತಿರಾಜರ ವಿಮರ್ಶಾತ್ಮಕವಾದ ವಾದವನ್ನು ಕೇಳಿದ ಆ ಯಾದವರಾಜನು ವಿಸ್ಮಯಗೊಂಡನು. ಯತಿರಾಜರ ಶ್ರೀಮುಖದಿಂದ ಹೊರಟ ವಾಕ್ಕಿನಿಂದ ಎತ್ತಿ ಬಹುದೂರಕ್ಕೆ ತಳ್ಳಲ್ಪಟ್ಟ ಶೈವರುಗಳ ಸಾಧಾರಣ ವಾದವನ್ನು, ಪ್ರಳಯಕಾಲದಲ್ಲಿ ಚಂಡ ಮಾರುತದ ವೇಗದಿಂದ ಎತ್ತರಕ್ಕೆ ಒಗೆದ ಹತ್ತಿಯು ಪಡುವ ಅವಸ್ಥೆಯನ್ನಾಗಿ ಕಂಡನು. ಈ ರೀತಿ ಯುಕ್ತಿಯಿಂದ ಯತಿರಾಜರು ಮಾಡಿದ ಭಾಷಣದಿಂದ ತನಗೆ ಉಂಟುಮಾಡಿದ ಸಂದೇಹಗಳೆಲ್ಲವೂ ನಾಶಮಾಡಲ್ಪಟ್ಟು ಆ ರಾಜನು ಹಲ್ಲುಕಿತ್ತಹಾವಿನ ರೀತಿಯಲ್ಲಿ ಶೈವರುಗಳನ್ನು ಕುರಿತು ಈ ರೀತಿ ಮಾತನಾಡಿದನು.

**ಯಾದವರಾಜ**

''ಓ, ಶೈವರುಗಳೇ! ನಿಮ್ಮ ವಾದವು ಪೂರ್ತಿಯಾಗಿ ಶ್ರೀರಾಮಾನುಜ ಮುನಿವರ್ಯರಿಂದ ಹಲವು ಸಾವಿರ ತುಂಡುಗಳಾಗಿ ಛಿದ್ರಿಸಲ್ಪಟ್ಟು ನಾಶವಾಯಿತು. ಈ ಮುನಿಗಳ ವಾಗ್ಮಿತ್ವವು (ವಾಕ್ಚಾತುರ್ಯ) ಬೃಹಸ್ಪತಿಯ ವಾಗ್ಮಿತ್ವವನ್ನೂ ಮೀರಿಸಿದೆ. ಆಶ್ಚರ್ಯವು! ಆಶ್ಚರ್ಯವು! ಇದಕ್ಕೆ ಮೇಲೂ ನೀವು ಏನನ್ನು ಹೇಳುವಿರಿ?'' ಎಂದು ಅರಸನು ಕೇಳಲು ಆ ಶೈವರುಗಳು ಏನುಮಾಡುವುದೆಂದು ತಿಳಿಯದೆ ದಿಗ್ಭ್ರಮೆಗೊಂಡು ಆ ಕಾಲಕ್ಕೆ ತಕ್ಕ ಹಾಗೆ ರಾಜನೊಡನೆ ಮಾತನಾಡಿದರು.

'ಓ ರಾಜನೇ! ಈ ರಾಮಾನುಜ ಮುನಿಯವರು ಸಭೆಯಲ್ಲಿ ವಾದಮಾಡುವವರನ್ನು ಬಾಯಿತೆಗೆಯಲಾರದಂತೆ ಸ್ತಂಭಿಸುವ ವಿದ್ಯೆಯಲ್ಲಿ ಬಹಳ ನುರಿತವರಂತೆ ಕಾಣುತ್ತದೆ. ಯಾವುದೋ ಮಂತ್ರವನ್ನು ಜಪಿಸಿ ನಮ್ಮನ್ನು ಮೂಗರಂತೆ ಮಾಡುತ್ತಿದಾರೆ. ನಾವುಗಳು ಈಗ ಅವರ ವಾದಕ್ಕೆ ತಕ್ಕ ಉತ್ತರವನ್ನು ನೀಡಬಲ್ಲ ಸ್ಥಿತಿಯನ್ನು ಹೊಂದದಿದ್ದರೂ, ಪೂರ್ವಜರಾದ ಹಿರಿಯರು ಪರಂಪರೆಯಾಗಿ ಹೇಳುತ್ತಾ ಬರುತ್ತಿರುವ (ನಮ್ಮಗಳ) ವಾದದಲ್ಲಿ ನಂಬಿಕೆಗೊಂಡ ನಮ್ಮ ಮನಸ್ಸು ದೇವತೆಯ ಸಮ್ಮತಿಯನ್ನು ತೋರಿಸದೆಯೇ ಇದ್ದ ಪಕ್ಷದಲ್ಲಿ, ಈ ಮುನಿವರ ವಾದದಲ್ಲಿ ನಂಬಿಕೆಯನ್ನು ಪಡೆಯುವುದಿಲ್ಲ. ಇವರು ತಮ್ಮ ವಾದದಲ್ಲಿ ದೇವತೆಯ ಅಂಗೀಕಾರವನ್ನು ತೋರಿಸಿದ್ದೇ ಆದರೆ ಆಗಲೇ ನಾವುಗಳು ಇವರ ವಾದವನ್ನು ನಂಬತಕ್ಕದುದಾಗಿ ಸಮ್ಮತಿಸುತ್ತೇವೆ. ಇಲ್ಲದಿದ್ದಲ್ಲಿ ಸಮ್ಮತಿಸುವುದಿಲ್ಲ. ಈ ದೇಶಕ್ಕೆ ಅಧಿಪತಿಯಾಗಿ ಬಲಶಾಲಿಯಾದ ಅರಸನಾದ ನೀನು ಏನನ್ನೂ ಮಾಡಲಿಲ್ಲ. ನೀನು ರಾಮಾನುಜ ಮುನಿಯ ಇಷ್ಟದಂತೆ ಬಲವಂತವಾಗಿ ನೆರವೇರಿಸುವಾಗ ಮಂದ ಭಾಗ್ಯರಾದ, ಶಕ್ತಿಯೂ ಇಲ್ಲದ ನಾವುಗಳು, ''ರಾಜಾಹರತಿ ಸರ್ವಸ್ವಂ ಕಾ

ತತ್ರಪರಿದೇವನಾ'' (ಅರಸನು ಸಂಪತ್ತನೆಲ್ಲಾ ಅಪಹರಿಸಿದ್ದೇ ಆದರೆ, ಅದರ ಬಗ್ಗೆ ಚಿಂತಿಸಿ ಫಲವೇನು?) ಎಂದು ಲೋಕರೀತಿಯಲ್ಲಿ ಸ್ಮರಿಸಿ, ಸೋತು ಸುಮ್ಮನೆಯೇ ಇರುತ್ತೇವೆ'' ಎಂದು ಶೈವರುಗಳು ಹೇಳಲು, ಯಾದವರಾಜನು ಅವರುಗಳನ್ನು ತಮ್ಮಗಳ ಕಪಿಮುಷ್ಟಿಗಳನ್ನು ಬಿಡದ ಮೂರ್ಖರುಗಳೆಂದು ತಿಳಿದು ಅವರುಗಳನ್ನು ಕುರಿತು ಈ ರೀತಿ ಮಾತನಾಡಿದನು.

**ಯಾದವರಾಜ**

''ಓ ಶೈವರುಗಳೇ! ಇದುವರೆವಿಗೆ ಸಾಧ್ಯವಾದಷ್ಟು ಉತ್ತರಗಳನ್ನು ನೀಡಿಕೊಂಡು ಬಂದ ನೀವುಗಳು ಬೇರೆ ದಾರಿಯಿಲ್ಲದೆ ರಾಮಾನುಜರು ಮಂತ್ರಹಾಕಿದರೆಂದು ಕಟ್ಟುಕಥೆಯನ್ನು ಹೇಳಿ ನನ್ನನ್ನು ಭ್ರಮೆಗೊಳ್ಳುವಂತೆ ಮಾಡಲು ಯತ್ನಿಸುತ್ತಿದ್ದೀರಿ ಎಂದು ನಾನು ಭಾವಿಸುತ್ತೇನೆ. ಇದಕ್ಕೆ ಮಂಚಿ ಪ್ರಮಾಣ ಒಂದನ್ನೂ ಕೊಡದೆ ಕೇವಲ ಕಾಲ್ಪನಿಕ ಚಿಹ್ನೆಗಳನ್ನು ಕೊಂಡು, ವೇಂಕಟೇಶನು ಅನ್ಯದೇವತೆಯೆಂದು ಹೊಸದಾಗಿ ಸೃಷ್ಟಿಸಲ್ಪಟ್ಟದೊಂದು ವಾದವನ್ನು ಮಾಡಿ ನನ್ನನ್ನು ಭ್ರಮಿಸುವಂತೆಮಾಡಿ, ಈಗ ಆ ವಾದಕ್ಕೆ ಸ್ವಲ್ಪವೂ ಅವಕಾಶ ವಿಲ್ಲದಂತಾದುದರಿಂದ ಬೇರೆದಾರಿಯಿಲ್ಲದೆ ನನ್ನನ್ನು ಮೋಸಗೊಳಿಸಲು ಪ್ರಯತ್ನಿಸುವ ನೀವುಗಳು ತಕ್ಕ ದಂಡನೆಯನ್ನು ಅನುಭವಿಸುತ್ತೀರಿ. ಆದುದರಿಂದ ಜಾಗ್ರತೆಯಿಂದಿರಿ'' - ಎಂದು ಶೈವರುಗಳನ್ನು ಗದರಿಸಿದ ಅರಸನು, ಮಾನವನಿಂದ ಮಾಡಲಸಾಧ್ಯವಾದ ಕೆಲಸಗಳನ್ನು ಮಾಡಬಲ್ಲವರೂ, ಯೋಗಿಗಳ ನಾಯಕರೂ ಆದ ಈ ರಾಮಾನುಜ ಮುನಿವರೆಂಬ ಮಹಾಪುರುಷರು ಶೈವರುಗಳು ಹೇಳಿದ ರೀತಿಯಲ್ಲಿಯೇ ತಮ್ಮ ವಾದದಲ್ಲಿ ದೇವತಾಸಮ್ಮತಿಯನ್ನು ಪ್ರದರ್ಶಿಸ ಬಲ್ಲವರೇ ಎಂದು ತೋರುತ್ತಾರೆ. ಆದುದರಿಂದ ಗೊಲ್ಲರ ಹೆಂಗಸರಿಂದ ಹಿಡಿದು ಪಂಡಿತರ ವರೆವಿಗೂ ಇರುವ ಎಲ್ಲಾ ಜನಗಳೂ ನಂಬುವಂಥಹ ರೀತಿಯಲ್ಲಿ ದೇವತಾಂಗೀಕಾರವನ್ನು ಪ್ರದರ್ಶಿಸುವಂತೆ ಈ ಮುನಿವರ್ಯರನ್ನು ಪ್ರಾರ್ಥಿಸೋಣ - ಎಂದು ಸಂಕಲ್ಪಿಸಿ ಅವರಲ್ಲಿ ವಿನಯದೊಂದಿಗೆ ಮಾತನಾಡಿದನು.

''ಓ, ರಾಮಾನುಜ ಮುನಿವರ್ಯರೇ! ನಿಮ್ಮಿಂದ ಇತರರ ಮತವು (ಅಭಿಪ್ರಾಯವು) ಖಂಡಿಸಲ್ಪಟ್ಟು ನಿಮ್ಮ ಮತವು ಬಹಳ ಚೆನ್ನಾಗಿ ಪ್ರತಿಪಾದಿಸಲ್ಪಟ್ಟಿತು. ಈ ದೇವನು ಮಹಾವಿಷ್ಣುವಲ್ಲ, ಬೇರೆ ದೇವತೆಯೇ ಎಂದು ಈ ಶೈವರುಗಳು ಪ್ರಚೋದಿಸಿದುದರಿಂದ ನನಗೆ ಏರ್ಪಟ್ಟ ಸಂದೇಹವೆಂಬ ಪಿಶಾಚಿಯು ನನ್ನ ಮನಸ್ಸನ್ನು ಬಿಟ್ಟು, ಇನ್ನು ಪುನಃ ಅದರೊಳಗೆ ಪ್ರವೇಶಿಸಲಾರದಂತೆ, ನಿಮ್ಮಿಂದ, ಬಹಳ ದೂರಕ್ಕಿಂತ ಹೊರಗೆ ಓಡಿಸಲ್ಪಟ್ಟಿತು. ವೇಂಕಟೇಶನು ಅನ್ಯದೇವತೆಯೆಂಬ ವಾದವು ಪ್ರಮಾಣಗಳಿಗೆ ವಿರುದ್ಧವು ಎಂದೂ ಶ್ರೀಮಹಾವಿಷ್ಣುವೇ ಆ ದೇವನು ಎಂಬ ವಾದವೇ ಪ್ರಮಾಣ ಸಿದ್ಧವೆಂದೂ,

ಶಾಸ್ತ್ರಗಳನ್ನೂ, ಯುಕ್ತಿಗಳನ್ನೂ ಕೈಗೊಂಡ ನೀವು ಸಾಧಿಸಿದುದರಿಂದ ನಾನು ಪ್ರಬಲವಾದ ನಂಬಿಕೆಯನ್ನು ಪಡೆದೆನು. ಆದುದರಿಂದ ನೀವು ಭಾವಿಸಿದಂತೆಯೇ ಎಲ್ಲಾ ಕೆಲಸಗಳನ್ನೂ ನೆರವೇರಿಸುತ್ತೇನೆ. ಆದರೆ ಮಹಾಪುರುಷರೂ, ಸಾಧಾರಣ ಮಾನವರೂ ಮಾಡಲಶಕ್ಯವಾದ ಕೆಲಸಗಳನ್ನು ಮಾಡಲು ಶಕ್ಯರಾಗಿರುವ ತಾವು, ಪಂಡಿತರೂ ಪಾಮರರೂ ಎಂಬ ವ್ಯತ್ಯಾಸವಿಲ್ಲದೆಯೇ ಸಮ್ಮತಿಸುವಂತೆ, ದೇವತಾಂಗೀಕಾರವನ್ನು ಪ್ರದರ್ಶಿಸುವುದೂ, ತೃಪ್ತಿಯನ್ನುಂಟುಮಾಡುವುದೂ ಆದ ಸಮಾಧಾನೋಪಾಯ ಒಂದನ್ನು ತಾವು ನೆರವೇರಿಸುವವರಾದಲ್ಲಿ, ಆ ವಿಧವಾಗಿಯೂ ಮಾಡಬೇಕೆಂದು ಪ್ರಾರ್ಥಿಸುತ್ತೇನೆ. ಇದರಿಂದ ನಿಮ್ಮ ಇಚ್ಛೆಯಂತೆ ಕೆಲಸಗಳನ್ನು ನಿರ್ವಹಿಸವುದಿಲ್ಲವೆಂದು ತಿಳಿಯಬೇಡಿ. ಹಾಗಾದಲ್ಲಿ ವಾದಿಸುವ ಶೈವರುಗಳು ತಾವುಗಳು ವಿರೋಧಿಸಿದುದನ್ನು ಪುನಃಪೂರ್ತಿಯಾಗಿ ಒಪ್ಪಿಕೊಳ್ಳುವರೆಂದು ನಿಮ್ಮಲ್ಲಿ ಈ ರೀತಿ ಪ್ರಾರ್ಥಿಸುತ್ತೇನೆ. ಎಂದನು.

ಈ ರೀತಿಯಾಗಿ ಪ್ರಾರ್ಥಿಸಲ್ಪಟ್ಟ ರಾಮಾನುಜಮುನಿಗಳು-ಇಷ್ಟೊಂದು ವಿವರವಾಗಿ ಹೇಳಿದಾಗಲೂ ತೃಪ್ತಿಹೊಂದದವನಂತೆ ಈ ರಾಜನು ಕಂಡು ಬರುತ್ತಿದಾನೆ. ಇದು ಆಶ್ಚರ್ಯವೇ ಸರಿ. ಆದುದರಿಂದ ಈಗ ಇದನ್ನೇ ಮಾಡತಕ್ಕುದು. ಬ್ರಹ್ಮಾಂಡ ಪುರಾಣದಲ್ಲಿ ಹನ್ನೊಂದನೆಯ ಅಧ್ಯಾಯದಲ್ಲಿ - ಕಲಿಯುಗದಲ್ಲಿ ವಿಮಾನ ಮುಂತಾದವುಗಳಂತೆ ಶಂಖ ಚಕ್ರ ಮುಂತಾದುವೇ ಆದ ದಿವ್ಯಾಯುಧಗಳನ್ನು ಭಕ್ತರುಗಳು ನಿರ್ಮಿಸಿ ಸಮರ್ಪಿಸಿದರೆ ಸ್ವೀಕರಿಸುವುದಾಗಿ ಮುಂಚೆಯೇ ಭಗವಂತನು ಪ್ರತಿಜ್ಞೆಯನ್ನು ಮಾಡಿರುವುದಾಗಿ ಕಂಡು ಬರುವುದರಿಂದ ನಾವು ನಿರ್ಮಿಸಿ ಸಮರ್ಪಿಸಿದ ವಸ್ತುಗಳನ್ನು ಸ್ವೀಕರಿಸುವುದಿಲ್ಲವೆಂಬ ನೀತಿಯು ಯಾವುದೂ ಇಲ್ಲವಾದುದರಿಂದಲೂ, ಇವನು ಬೇರೆ ದೇವತೆಯೆಂಬ ಈಗ ಉಂಟಾಗಿರುವ ದೊಡ್ಡ ಅನರ್ಥಪ್ರಸಂಗವು ತೀರುವುದಕ್ಕಾಗಿ ನಿರ್ಬಂಧಮಾಡಿಯಾದರೂ ಭಗವಂತನನ್ನು ಪ್ರಾರ್ಥಿಸಿ ಶಂಖ ಚಕ್ರಗಳನ್ನು ಧರಿಸುವಂತೆ ಮಾಡೋಣ. ಭಕ್ತರುಗಳಲ್ಲಿ, ಸಮುದ್ರದಂತೆ ಮೇರೆ ಇಲ್ಲದ ಪ್ರೀತಿಯನ್ನಿಟ್ಟರುವವನೂ, ಆದರಿಂದ ಅವರುಗಳಿಗೆ ವಶನಾದವನೂ ಆದ ಅವನು, ನಮ್ಮ ಪ್ರಾರ್ಥನೆಗೆ ಓಗೊಟ್ಟು, ನಾವು ಸಮರ್ಪಿಸಿದ ಶಂಖ ಚಕ್ರಗಳನ್ನು ನಿಶ್ಚಯವಾಗಿ ಸ್ವೀಕರಿಸುತಾನೆ. ಆದುದರಿಂದ ಅವುಗಳನ್ನು ತಯಾರಿಸಿ ಸಮರ್ಪಿಸುವ. ಅವನು ಅವುಗಳನ್ನು ಧರಿಸಿಕೊಂಡನಾದಲ್ಲಿ ಅದೇ ದೇವತೆಯ ಅಂಗೀಕಾರವೆಂದು ಪ್ರದರ್ಶಿಸುವ ಒಂದು ಚರಿತ್ರೆಯಾಗಿ ಸಮಸ್ತ ಜನಗಳೂ ನಂಬತಕ್ಕ ಪ್ರಮಾಣವಾಗಿಯೂ ಆಗುವಂತೆ ತೋರಿಸೋಣ - ಎಂದು ತಮ್ಮ ಮನಸ್ಸಿನಲ್ಲಿಯೇ ಸಂಕಲ್ಪಿಸಿ, ''ಓ ಅರಸನೇ! ಅತ್ಯಂತ ಹೆಚ್ಚಿನ ನಂಬಿಕೆಯನ್ನುಂಟುಮಾಡುವುದಾದ ನನ್ನ ಈ ಮಾತುಗಳನ್ನು ಸಾವಧಾನವಾಗಿ ಕೇಳು. ನಾನು ಈ ದೇವನನ್ನು ವಿಷ್ಣುವೆಂದು

ಹೇಳುತ್ತೇನೆ. ಈ ಶೈವರುಗಳೋ ಎಂದರೆ ಬೇರೆ ದೇವತೆಯೆನ್ನುತ್ತಾರಲ್ಲವೇ? ನಾನು ವಿಷ್ಣುವಿಗೇ ಅಸಾಧಾರಣವಾದ ಚಿಹ್ನೆಗಳಾದ ಶಂಖ ಚಕ್ರ ಮುಂತಾದುವುಗಳನ್ನು ನಿರ್ಮಿಸಿ ಈ ದೇವನ ಹತ್ತಿರದಲ್ಲಿಡುತ್ತೇನೆ. ಈ ಶೈವರುಗಳು ಅನ್ಯದೇವತೆಗಳ ಚಿಹ್ನೆಗಳಾದ ಪಾಶ, ಅಂಕುಶ ಮುಂತಾದುವುಗಳನ್ನು ಮಾಡಿಸಿ ಹಾಗೆಯೇ ದೇವನ ಮುಂದೆ ಇಡುವಂತಾಗಲಿ. ಯಾವ ಆಯುಧಗಳನ್ನು ಆ ದೇವನು ಸ್ವೀಕರಿಸಿ ಧರಿಸುತ್ತಾನೆಯೋ, ಅವನನ್ನು ಆ ಆಯುಧಗಳನ್ನು ಚಿಹ್ನೆಯಾಗಿ ಹೊಂದಿರುವ ದೇವನಾಗಿಯೇ ಪರಿಗಣಿಸಬೇಕು. - ಎಂದು ಯಾದವ ರಾಜನಿಗೆ ಹೇಳಿದರು. ರಾಜನೂ ಸಹ ಅದನ್ನು ಕೇಳಿ ಸಂತೋಷಗೊಂಡು ಆ ರೀತಿಮಾಡಿದರೆ ಯಾರಿಗೂ, ಯಾವವಿಧವಾದ ಆಕ್ಷೇಪವೂ ಇರದು. ಆದುದರಿಂದ ಹಾಗೆಯೇ ತಾವುಗಳೂ ಅವರುಗಳೂ ಮಾಡುವವರಾಗಿ ಎಂದು ಹೇಳಿದನು. ನಂತರ ವಾದಿ ಪ್ರತಿವಾದಿಗಳೆರಡು ಬಣವೂ ತಮ್ಮ ತಮ್ಮ ದೇವತೆಯ ಮುಖ್ಯ ಚಿಹ್ನಗಳಾದ ಆಯುಧಗಳನ್ನು ತಯಾರಿಸಿ ಒಂದು ದಿನ ಅರಸನೊಂದಿಗೆ ತಿರುಪತಿ ಬೆಟ್ಟವನ್ನು ಹತ್ತಿ, ರಾತ್ರಿಯಲ್ಲಿ ದೇವಸ್ಥಾನದ ಗರ್ಭಗೃಹದಲ್ಲಿ ದೇವನಿಗೆ ಸಮೀಪದಲ್ಲಿಟ್ಟು, ಬಾಗಿಲನ್ನು ಮುಚ್ಚಿ, ಬೀಗಹಾಕಿ, ಅರಸಮುದ್ರೆಯನ್ನಿಟ್ಟು, ಬೆಳಗಾಗುವವರೆಗೂ ಸುತ್ತುತ್ತಲೇ ಇದ್ದು, ತಮ್ಮ ತಮ್ಮ ಧ್ಯೇಯವು ಜಯವಾಗುವುದಕ್ಕಾಗಿ ತಮ್ಮ ತಮ್ಮ ದೇವತೆಯನ್ನು ಧ್ಯಾನಿಸಿಕೊಂಡಿದ್ದರು.

ಭಗವಾನ್ ಶ್ರೀರಾಮಾನುಜ ಮುನಿಗಳು ತಮ್ಮ ಯೋಗ ಮಹಿಮೆಯಿಂದ ಶ್ರೀನಿವಾಸದೇವನ ಬಳಿಸಾರಿ, ಚೆನ್ನಾಗಿ ದರ್ಶನಮಾಡಿ, 'ಹೇ ಭಗವನ್! ನೀನು ಮುಂಚೆ ಮಾಡಿದ ಪ್ರತಿಜ್ಞೆಯಂತೆ ನಿನ್ನ ಮುಖ್ಯಚಿಹ್ನೆಗಳಾದ ಶಂಖ ಚಕ್ರಗಳನ್ನು ಧರಿಸಿಕೊಂಡು ನಮ್ಮಗಳನ್ನು ಕಾಪಾಡಬೇಕು. ಎಂದು ಪ್ರಾರ್ಥಿಸಿಕೊಂಡು ಆರೀತಿಯೇ ಅವನು ಧರಿಸುವಂತೆ ಮಾಡಿದರು. ನಂತರ ಬೆಳಗಿನ ಜಾವದಲ್ಲಿ ಯಾದವರಾಜನು, ಆ ವಾದಿ ಪ್ರತಿವಾದಿಗಳೊಡನೆ ದೇವಸ್ಥಾನಕ್ಕೆ ತೆರಳಿ ಬಾಗಿಲನ್ನು ತೆರೆದು ಒಳಗೆ ಹೋಗಿ, ಶ್ರೀರಾಮಾನುಜ ಮುನಿಗಳ ಭಕ್ತಿಯೆಂಬ ಬಲೆಗೆ ವಶಪಟ್ಟು, ಪಾಶಾಂಕುಶಗಳನ್ನು ದೂರದಲ್ಲೇ ಇರಿಸಿ, ಶಂಖ ಚಕ್ರಗಳನ್ನೇ ಧರಿಸಿಕೊಂಡಿರುವ ಶ್ರೀವೇಂಕಟೇಶ ಭಗವಂತನನ್ನು ನಮಸ್ಕರಿಸಿ ಆಶ್ಚರ್ಯವೆಂಬ ಮಹಾಸಮುದ್ರದಲ್ಲಿ ಮುಳುಗಿದ ಮನಸ್ಸನ್ನು ಪಡೆದವನಾಗಿ, ಶ್ರೀರಾಮಾನುಜ ಮುನಿಗಳ ಬಗ್ಗೆ ಅತ್ಯಂತ ಗೌರವ ಬುದ್ಧಿಯನ್ನು ಹೊಂದಿ ಅವರ ಆದೇಶವನ್ನು ಕೊಂಡು, ತನ್ನ ಗರ್ವವು ನಾಶಹೊಂದಿದವನಾಗಿ, ಸುಳ್ಳನ್ನು ಹೇಳಿ ವಾದಿಸಿದ ಶೈವರುಗಳ ತಪ್ಪಿಗೆ ಸೂಕ್ತವಾದ ದಂಡನೆಯನ್ನು ಕೊಟ್ಟು, ತನ್ನ ನಾಡಿನಿಂದಲೇ ಹೊರದೂಡಿಸಿ (ದೇಶಭ್ರಷ್ಟರನ್ನಾಗಿ ಮಾಡಿ), ತಾನು ಆ ಮುನಿಗಳ ಸನ್ನಿಧಿಯಲ್ಲಿಯೇ ಭಗವತ್ ಸಮಾಶ್ರಯಣ (ಶ್ರೀವೈಷ್ಣವ ದೀಕ್ಷೆ) ಮಾಡಿಕೊಂಡು, ತನ್ನ ಜನ್ಮ ಸಾಫಲ್ಯವನ್ನು ಪಡೆದು, ಆ

ಮುನಿಗಳ ದಿವ್ಯ ಪಾದಾರವಿಂದಗಳನ್ನೇ ಶರಣವಾಗಿ ಭಾವಿಸಿಕೊಂಡು ಮನಶ್ಶಾಂತಿಯೊಂದಿಗೆ ಇದ್ದನು.

ಅದರ ನಂತರ ಶ್ರೀಮಹಾವಿಷ್ಣುವೇ ಪರತತ್ವವು ಎಂಬುದನ್ನು ಪ್ರತಿಷ್ಠಾಪನೆ ಮಾಡುವ ಆಚಾರ್ಯರಾಗಿ, ದೇಶವೆಲ್ಲ ಹರಡಿದ ಕೀರ್ತಿವಂತರಾಗಿ ಆದ ಆ ಭಗವದ್ರಾಮಾನುಜ ಮುನಿಗಳು, "ಶ್ರೀವೇಂಕಟಾಚಲದಲ್ಲಿ, ಶ್ರೀಸ್ವಾಮಿ ಪುಷ್ಕರಿಣಿಯ ದಕ್ಷಿಣ ತೀರದಲ್ಲಿ ವಿರಾಜಮಾನನಾಗಿರುವ ದೇವನು ಶ್ರೀದೇವಿಯನಾಥನೂ, ಶ್ರೀವೈಕುಂಠನಾಥನೂ ಆದ ಶ್ರೀಮಾಹಾವಿಷ್ಣುವಲ್ಲದೇ ಬೇರೆ ದೇವತೆಯಲ್ಲ. ಮಧ್ಯದಲ್ಲಿ ಕೆಲದಿನಗಳು, ಧನ, ಕೀರ್ತಿ ಮತ್ತು ಅಪೇಕ್ಷಿಸಲ್ಪಡುವ ಪದಾರ್ಥಗಳು ಇವುಗಳಲ್ಲಿ ಅತೀವ ಆಸೆಗೊಂಡ (ದುರಾಸೆಗೊಂಡ) ಶೈವರುಗಳಿಂದ, ಇತರರನ್ನು ವ್ಯಾಮೋಹಿಸಿ, ಈ ದೇವನು ಬೇರೆ ದೇವತೆಯು ಎಂದು ಸಂದೇಹ ಪಡುವಂಥಹುದಾದ ಕಳಂಕವು ಉಂಟಾಗುವಂತೆ ನಡೆಸಲ್ಪಟ್ಟನು", ಎಂಬ ಈ ಸತ್ಯವನ್ನು ಎಲ್ಲ ದೇಶದವರೂ ತಿಳಿಯುವಂತೆ ಪ್ರಸಿದ್ಧವಾಗಿಸಿ ಶ್ರೀನಿವಾಸದೇವನಿಗೆ ಶ್ರೀವೈಖಾನಸಾಗಮವು ಹೇಳಿದ ವಿಧಿಯಂತೆಯೇ ಮಹಾಸಂಪ್ರೋಕ್ಷಣವನ್ನು ಮಾಡಿಸಿ ಮುಂಚಿನಂತೆಯೇ ನಿತ್ಯಪೂಜೆ ಮುಂತಾದವುಗಳು ನಡೆಯುವಂತೆ ಮಾಡಿದರು.

ಮೇಲೂ, ಪುರಾತನವಾದುದೂ, ಬಹಳ ಶಿಥಿಲವೂ ಆದ ಶ್ರೀನಿವಾಸನ ಸುಂದರವಾದ "ಆನಂದ ನಿಲಯ" ವೆಂಬ ವಿಮಾನವನ್ನು ಜೀರ್ಣೋದ್ಧಾರ ಮಾಡಿ, ಶ್ರೀವೈಖಾನಸ ಆಗಮ ಶಾಸ್ತ್ರದಲ್ಲಿ ಹೇಳಿರುವಂತೆಯೇ ಅದರ ನಾಲ್ಕು ಮೂಲೆಗಳಲ್ಲಿಯೂ ವರಾಹ, ನಾರಸಿಂಹ, ಶ್ರೀವೈಕುಂಠನಾಥ ಮುಂತಾದ ವಿಮಾನಾಧಿದೇವತೆಗಳನ್ನು ಪ್ರತಿಷ್ಠಾಪಿಸಿ ವಿಷ್ಣುವಿನ ಪರಿವಾರಗಳಾದ ಆದಿಶೇಷ, ವಿಷ್ವಕ್ಸೇನರೊಡನೆ ದ್ವಾರಪಾಲಕರು ಮುಂತಾದವರುಗಳನ್ನು ಅವರವರುಗಳಿಗೆ ತಕ್ಕ ಜಾಗದಲ್ಲಿ ಸ್ಥಾಪಿಸಿ, ಶ್ರೀನಿವಾಸಭಗವಂತನ ನಿರವಧಿಕವಾದ, ನಿತ್ಯವಾದ ಐಶ್ವರ್ಯಸಿದ್ಧಿಗೋಸ್ಕರ ಅವನ ವಕ್ಷಃಸ್ಥಳದಲ್ಲಿ, "ಪದ್ಮಾಸನದಲ್ಲಿರುವುದನ್ನು ಇಚ್ಛಿಸಿದವಳೂ, ಎರಡು ಕೈಗಳನ್ನು ಕೊಂಡವಳೂ, ಶ್ರೀನಿವಾಸನ ವಕ್ಷಃಸ್ಥಳದಲ್ಲಿರುವವಳೂ ಆದ ವ್ಯೂಹ ಲಕ್ಷ್ಮಿಯಾದವಳು ಕೇಶವನಿಗೆ ಅತ್ಯಂತ ಪ್ರಿಯಳು," ಎಂದು ವರಾಹಪುರಾಣದ ಏಳನೆಯ ಅಧ್ಯಾಯದಲ್ಲಿ ಹೇಳಲ್ಪಟ್ಟ 'ವ್ಯೂಹಲಕ್ಷ್ಮಿ' ಎನ್ನುವ ಎರಡು ಹಸ್ತಗಳನ್ನುಳ್ಳ ಶ್ರೀದೇವಿಯನ್ನು, "ತಾವರೆಯ ಹೂವನ್ನು ವಾಸಸ್ಥಾನವಾಗಿಸಿಕೊಂಡವಳೂ, ಎರಡು ಕೈಗಳನ್ನು ಕಟ್ಟಿಕೊಂಡು ಚೆನ್ನಾಗಿ ಭೂಮಿಯಮೇಲೆ ಪದ್ಮಾಸನವನ್ನು ಹಾಕಿಕೊಂಡು ವಿಶಾಲವಾದ ಕಣ್ಣುಗಳನ್ನುಳ್ಳವಳೂ ಆದ ಶ್ರೀದೇವಿಯನ್ನು ತನ್ನ ವಕ್ಷಃಸ್ಥಳದಲ್ಲಿ ಧರಿಸಿಕೊಂಡು

ವಿರಾಜಮಾನನಾಗಿದ್ದಾನೆ,'' ಎಂದು ಭವಿಷ್ಯೋತ್ತರ ಪುರಾಣದಲ್ಲಿ ಏಳನೆಯ ಅಧ್ಯಾಯದಲ್ಲಿ ೧೩. ಎಂಬ ಸಂಖ್ಯೆಯಿಂದ ಸೂಚಿಸಲ್ಪಟ್ಟವಚನದಿಂದ, ಮುಂಚೆಯೇ ಈ ರೀತಿ ಧರಿಸಿದುದಾಗಿ ತಿಳಿಸಲ್ಪಟ್ಟವಳನ್ನು, ಶುಕ್ರವಾರವೂ, ಉತ್ತರಫಲ್ಗುನೀ ನಕ್ಷತ್ರವೂ ಸೇರಿದ ಶುಕ್ಲಪಕ್ಷ ದ್ವಾದಶಿಯಂದು ರತ್ನಮಾಲಿಕೆಯೆಂಬ ಪ್ರಖ್ಯಾತಯೋಗದಲ್ಲಿ ಸುವರ್ಣಮಯವಾದ ಕಂಠಿಕೆಯಲ್ಲಿ ಪ್ರತಿಷ್ಠೆ ಮಾಡಿಸಿದರು.

ಈ ರೀತಿ ಆ ಭಗವದ್ರಾಮಾನುಜ ಮುನಿಗಳು, ಸಮಸ್ತ ಭೂತಲದಲ್ಲಿರುವ ಶ್ರಿಯಃಪತಿಯ ಸ್ಥಳ (ತಿರುಪತಿ) ಗಳಿಗೆಲ್ಲಾ ನಾಯಕಮಣಿಯಾದ ಶ್ರೀವೇಂಕಟಾಚಲಸ್ಥಳವು, ಮಧ್ಯದಲ್ಲಿ ಅರಸನನ್ನು ವಂಚಿಸುವುದರಲ್ಲಿ ಆಸಕ್ತಿಗೊಂಡ ಶೈವಜನರಿಂದ ಕಪಟದಿಂದ ಆಕ್ರಮಿಸಲ್ಪಟ್ಟು, ಅಸ್ತವ್ಯಸ್ತವಾಗಿಸಲ್ಪಟ್ಟು, ಬಹಳ ಪರಿಶ್ರಮಿಸಿ, ಆ ದೊಡ್ಡ ಆಪತ್ತಿನಿಂದ ತಪ್ಪಿಸಲ್ಪಟ್ಟು ಅದನ್ನು ಶ್ರೀವೈಷ್ಣವರುಗಳಿಗೆ ಸೇರಿದಂತೆ ಮಾಡಿ, ತಮ್ಮ ಚರಣಾಂಬುಜಗಳನ್ನೇ ಶರಣವನ್ನಾಗಿ ಹೊಂದಿದ ದೇಶಾಧಿಪತಿಯಾದ ಯಾದವರಾಜನಿಗೆ ಚೆನ್ನಾಗಿ ತತ್ವವನ್ನುಪದೇಶಿಸಿ, ಸರಿಪಡಿಸಿ, ಅಂದಿನಿಂದ ನಡೆಯಬೇಕಾದ ಪೂಜಾದಿಗಳನ್ನು ಕ್ರಮತಪ್ಪದಂತೆ ನಡೆಸಿಕೊಂಡೇ ಶ್ರೀವೇಂಕಟಾಚಲದ ತಪ್ಪಲಲ್ಲಿ (ಕೆಳತಿರುಪತಿಯಲ್ಲಿ) ಕೆಲವು ದಿನಗಳು ವಾಸಿಸುತ್ತಿದ್ದರು.

ಶ್ರೀಅನಂತಾರ್ಯರು ಕಟ್ಟಿದ ಶ್ರೀವೇಂಕಟಗಿರಿ ಇತಿಹಾಸ ಮಾಲೆಯಲ್ಲಿ, ಶ್ರೀವೇಂಕಟೇಶನು ಅನ್ಯದೇವನು ಎಂಬ ವಾದಕ್ಕೆ ಪ್ರತಿವಾದ ಮೂರನೆಯ ಪುಷ್ಪಗುಚ್ಛವು ಸಂಪೂರ್ಣವು.

ಶ್ರೀಮತೇ ರಾಮಾನುಜಾಯ ನಮಃ



# ನಾಲ್ಕನೆಯ ಪುಷ್ಪಗುಚ್ಛ

## ಮೂಲದೇವರ (ಶ್ರೀನಿವಾಸನ) ಅಭೀಷೇಕ.

ಹೀಗೆ ತಿರುಪತಿಯಲ್ಲಿ ವಾಸಿಸುತ್ತಿದ್ದ ಶ್ರೀರಾಮಾನುಜ ಮುನಿಗಳು ಆ ಕಾಲದಲ್ಲಿ ಶ್ರೀವೇಂಕಟನಾಥನಿಗೆ ಪ್ರತಿನಿತ್ಯವೂ ಮಾಡಲ್ಪಡುತ್ತಿದ್ದ ಅಭಿಷೇಕದ ಬಗ್ಗೆ ಚೆನ್ನಾಗಿ ಯೋಚಿಸಿ, ಈ ರೀತಿ ಪ್ರತಿನಿತ್ಯವೂ ಅಭಿಷೇಕವು ನಡೆಯುತ್ತಾ ಬಂದರೆ ಭಗವಂತನ ದಿವ್ಯಮಂಗಳ ವಿಗ್ರಹಕ್ಕೆ ಉಪಚಾರಗಳೆಲ್ಲವೂ ಕ್ರಮವಾಗಿ ಪೂರ್ಣವಾಗಿ ನಡೆಯಲಾರದು, ಆದುದರಿಂದ ಆಗಾಗ ಒಂದೊಂದು ಸಲವಾಗಿಯೇ ಭವ್ಯವಾದ ಅಭಿಷೇಕ ಮಾಡುವುದು ಸರಿಯಾದುದು, ಆ ರೀತಿ ನಡೆಸುವಾಗ ''ಶ್ರಿಯಃಪತಿಯ ಅರ್ಚಾರೂಪವಾದ ವಿಗ್ರಹಕ್ಕೆ ಶ್ರೀದೇವಿಯೊಂದಿಗೆ ಶುಕ್ರವಾರದಂದು ಅಭಿಷೇಕವು ನಡೆಸಿದ್ದೇ ಆದರೆ ಅದು, ಅದರಲ್ಲಿ ಯಾವಾಗಲೂ ಆಕೆಯನ್ನು ಸನ್ನಿಧಿಗೊಂಡಿರುವಂತೆ ಮಾಡುವಂಥಹುದೂ, ಎಲ್ಲ ಸಂಪತ್ತನ್ನೂ ಅಧಿಕವಾಗಿ ಕೊಡತಕ್ಕದ್ದೂ ಆಗುತ್ತದೆ'' ಎಂದಿರುವ ವೈಖಾನಸಾಗಮಕ್ಕೆ ಸೇರಿದ ಆನಂದ ಸಂಹಿತೆಯ ವಚನದಿಂದ, ಪ್ರತಿ ಶುಕ್ರವಾರವೂ ನಡೆಸಲ್ಪಡುವ ಅಭಿಷೇಕದಿಂದ ಉತ್ತಮವಾದ ಸಂಪತ್ತು ಮುಂತಾದುವುಗಳ ಅಭಿವೃದ್ಧಿ ಉಂಟಾಗುವುದೆಂದು ತಿಳಿಯಬರುವದರಿಂದಲೂ, ಭವಿಷ್ಯೋತ್ತರ ಪುರಾಣದಲ್ಲಿ ಹರಿನಾಲ್ಕನೆಯ ಅಧ್ಯಾಯದಲ್ಲಿ ಕೂರ್ಮನೆಂಬ ಬ್ರಾಹ್ಮಣನ ಚರಿತ್ರೆಯಲ್ಲಿ,''ನಿನ್ನೆಯದಿನ ಶುಕ್ರವಾರವಾದುದರಿಂದ ಶ್ರೀವೇಂಕಟೇಶನಿಗೆ ಅಭಿಷೇಕವು ಏರ್ಪಟ್ಟಿತು. ಬ್ರಾಹ್ಮಣನೇ, ಅವನ ದರ್ಶನ ಮಾಡಲು, ನನ್ನ ಹೆಣ್ಣುಮಕ್ಕಳೆಲ್ಲರೂ ಹೋದರು. ಅವರುಗಳೊಂದಿಗೆ ನನ್ನ ಪತ್ನಿಯೂ ಭಗವಂತನನ್ನು ದರ್ಶಿಸುವುದಕ್ಕೆ ಶ್ರೀವೇಂಕಟಾಚಲಕ್ಕೆ ಹೋಗಿರುತ್ತಾಳೆ,'' ಎಂದು ತೊಂಡಮಾನ್ ಚಕ್ರವರ್ತಿಯು ಕೂರ್ಮನನ್ನು ಕುರಿತು ಹೇಳಿದುದಾಗಿ ಕಂಡುಬಂದಿರುವುದರಿಂದ ಮುಂಚೆಯೂ ಶ್ರೀನಿವಾಸನಿಗೆ ಶುಕ್ರವಾರ ಅಭಿಷೇಕವು ತಪ್ಪದೇ ನಡೆಯುತ್ತಿತ್ತು ಎಂಬುದು ತಿಳಿಯ ಬರುವುದರಿಂದ, ಇನ್ನು ಮೇಲೆ ಪ್ರತಿಯೊಂದು ಶುಕ್ರವಾರದಂದು ಮಾತ್ರ

ಶ್ರೀನಿವಾಸನಿಗೆ ಶ್ರೀಮಹಾಲಕ್ಷ್ಮಿಯೊಂದಿಗೆ ಅಭಿಷೇಕವು ಒಳ್ಳೆಯ ರೀತಿಯಲ್ಲಿ ನಡೆಸಬೇಕೆಂದು ವ್ಯವಸ್ಥೆಯನ್ನು ಮಾಡಿದರು.

ಮೂಲವಿಗ್ರಹದ ಊರ್ಧ್ವಪುಂಡ್ರ (ತಿರುನಾಮ) ದ ಬಗೆಗೆ ಪೂಜಾರ್ಹರಾದ ಆ ರಾಮಾನುಜ ಮುನಿವರ್ಯರು ಮೇಲೂ ಕೆಲವು ವ್ಯವಸ್ಥೆಗಳನ್ನು ಈ ರೀತಿ ಏರ್ಪಡಿಸಿದರು. "(ಮೂಗಿನ ಕೆಳಗೆ) ಅಷ್ಟಮೀದಿನದ ಚಂದ್ರನ ಕಲೆಯಂತೆ ಆಧಾರವನ್ನು ಹೊಂದಿರುವುದಾದ, ಹಣೆಯಲ್ಲಿ ಧರಿಸಿರುವ ಊರ್ಧ್ವಪುಂಡ್ರವನ್ನುಳ್ಳವನು" ಎಂದು ಪದ್ಮಪುರಾಣ ಭಾಗದಲ್ಲಿನ ನಾಲ್ಕನೆಯ ಅಧ್ಯಾಯಕ್ಕೆ ಸೇರಿದ ೨೭ಎಂಬ ಸಂಖ್ಯೆಯಿಂದ ಸೂಚಿತವಾದ ವಚನದಿಂದಲೂ, ಭವಿಷ್ಯೋತ್ತರಪುರಾಣದ ಆರನೆಯ ಅಧ್ಯಾಯದಲ್ಲಿ - ಕನ್ನಡಿಯಲ್ಲಿ ಕಾಣಲ್ಪಟ್ಟ ತನ್ನ ದಿವ್ಯವಾದ ಹಣೆಯಲ್ಲಿ ಶ್ರೀನಿವಾಸನು ಬಿಳಿಯ ಬಣ್ಣದ ಮಣ್ಣಿನಿಂದ ಊರ್ಧ್ವಪುಂಡ್ರವನ್ನೂ, ಅದರ ನಡುವೆ ಕುಂಕುಮದಿಂದ ತಿಲಕವನ್ನೂ ಧರಿಸಿಕೊಂಡು - ಎಂದಿರುವ ವಚನದಿಂದಲೂ, - ಕನ್ನಡಿ, ಬಿಳಿಯ ಮಣ್ಣು, ಕುಂಕುಮ ಇರುವ ಡಬ್ಬಿ ಇವುಗಳನ್ನು ಶ್ರೀನಿವಾಸನು ತನ್ನ ಸೊಂಟದಲ್ಲಿ ಹೊನ್ನಿನ ಬಟ್ಟೆಯಲ್ಲಿ ಕಟ್ಟಿಕೊಂಡು ಬೇಟೆಗಾಗಿ ಹೊರಟನು ಎಂದು - ಹೋಗುವಜಾಗಕ್ಕೆ ಊರ್ಧ್ವಪುಂಡ್ರವನ್ನು ಧರಿಸುವುದಕ್ಕಾಗಿ ಬೇಕಾದ ವಸ್ತುಗಳನ್ನು ತೆಗೆದುಕೊಂಡು ಹೋದುದಾಗಿ ಹೇಳುವ ವಚನದಿಂದಲೂ, ಈ ರೀತಿಯೇ, ಆ ಪುರಾಣದಲ್ಲಿಯೇ ಹನ್ನೊಂದನೆಯ ಅಧ್ಯಾಯದಲ್ಲಿ, "ಅಷ್ಟಮೀದಿನದ ಚಂದ್ರನಂತೆ ಆಕಾರಗೊಂಡುದೂ, ಕನ್ನಡಿಯಂತೆ ಹೊಳಪು ಇರುವ ತನ್ನ ಹಣೆಯಲ್ಲಿ, ಸತ್ಪುರುಷರಿಗೆ ಆಶ್ರಯನಾದ ಶ್ರೀನಿವಾಸನು (ಮೂಗಿನಲ್ಲಿ) ಮೂಲದೊಂದಿಗೆ ಕೂಡಿದ ಎರಡು ರೇಖೆಗಳ ಆಕಾರವುಳ್ಳ ಶ್ರೀನಾಮವನ್ನು (ಊರ್ಧ್ವಪುಂಡ್ರ) ಹಣೆಯಲ್ಲಿ ಬಿಳಿಯ ಮಣ್ಣಿನಿಂದ ತಾನೇ ಇಟ್ಟುಕೊಂಡನು (ಧರಿಸಿಕೊಂಡನು). ಆಗ ಭಗವಂತನ (ಶ್ರೀನಿವಾಸನ ತಾಯಿಯಾದ ಬಕುಳಮಾಲಿಕೆಯು, ಲೋಕಮಾತೆಯಾದ ಮಹಾಲಕ್ಷ್ಮಿಯನ್ನು ಕುರಿತು, "ಮಂಗಳೆಯೇ! ಕುಂಕುಮದಿಂದ ನಿನ್ನ ಪತಿದೇವನ ಹಣೆಯಲ್ಲಿ ತಿಲಕವನ್ನು ಇಡುವವಳಾಗು" ಎಂದು ಹೇಳಲು, "ಶ್ರೀಮಹಾಲಕ್ಷ್ಮಿಯು ಭಗವಂತನ ಹಣೆಯಲ್ಲಿ ಮೂಲದೊಂದಿಗೆ ಕೂಡಿದ ತಿರುನಾಮದ ಎರಡು ರೇಖೆಗಳ ಮಧ್ಯದಲ್ಲಿ ಕುಂಕುಮದ ತಿಲಕವನ್ನು ಇಟ್ಟಳು." ಎಂಬ ವಚನಗಳಿಂದಲೂ ಶ್ರೀನಿವಾಸಭಗವಂತನು, ಊರ್ಧ್ವಪುಂಡ್ರವನ್ನು ಧರಿಸುವುದು ತಿಳಿಯಬರುವುದರಿಂದ, ಅದನ್ನು ಧರಿಸಿದರೆ, ಶೈವರುಗಳಿಗೆ ಅವರ ಇಷ್ಟದೇವತೆ ಶಿವನೆಂಬ ದೃಷ್ಟಿಯು ತೊಲಗುವ ಸಂಭವವು ಉಂಟಾಗುವುದರಿಂದಲೂ, ಇಷ್ಟುದಿವಸಗಳು ಅನ್ಯದೇವತೆ ಎಂಬ ಶಂಕೆಯಿಂದ ಕಳಂಕಿತನಾಗಿದ್ದ ಶ್ರೀನಿವಾಸನಿಗೆ ದರ್ಶನಮಾಡುವ ಸಂದರ್ಭದಲ್ಲೇ

ಶ್ರೀವಿಷ್ಣುಮೂರ್ತಿತ್ವವಾದ ಗುರುತು ಜ್ಞಾಪಕಕ್ಕೆ ಬರುವುದರಿಂದ ಊರ್ಧ್ವಪುಂಡ್ರವನ್ನು ಧಾರಣೆಮಾಡ ಬೇಕು. ಊರ್ಧ್ವಪುಂಡ್ರವು ಮೂಗಿನ ಕೆಳಗೆ ಹರಡಿದ ಪೂರ್ಣ ಚಂದ್ರನ ಅರ್ಧಭಾಗದ ಆಕಾರವಿರುವ ಮೂಲದೊಂದಿಗೆ ಕೂಡಿರುವುದಾಗಿಯೂ, ಅದಕ್ಕೆ ಮೇಲೆ ಕೂದಲಿನ ವರೆಗೆ ಮೇಲಕ್ಕೆ ಹೊರಟ (ಊರ್ಧ್ವಮುಖವಾದ) ಎರಡು ಅಮೃತ ಧಾರೆಯಂತಹ, ಮಧ್ಯದಲ್ಲಿ ಅವಕಾಶದೊಂದಿಗೆ ಕೂಡಿದ, ಅಗಲವಾದ ಎರಡು ಬಿಳಿಯ ರೇಖೆ (ಪಟ್ಟಿ) ಗಳಿಂದ ಕೂಡಿದುದಾಗಿಯೂ, ಅತಿಶುದ್ಧವಾದ, ಶ್ವೇತವರ್ಣದ, ಪರಿಮಳ ಯುಕ್ತವಾದ, ಪಚ್ಚಕರ್ಪೂರದ, ಮಂದವಾದ (ದಟ್ಟವಾದ), ಪುಡಿಯ ದ್ರಾವಣದಿಂದ ಲೇಪಿಸಿ ಇಡಬೇಕು. ''ಅಷ್ಟಮೀಂದು ಕಲಾಧಾರ ಲಲಾಟಸ್ಥೋರ್ಧ್ವಪುಂಡ್ರಕಃ'' ಎಂದು ಮುಂಚೆ ತಿಳಿಸಿದ ಪಾದ್ಮಪುರಾಣ ವಚನದಲ್ಲಿ 'ಆಧಾರ' ಎಂದು ಹೇಳಲ್ಪಡುವ - ಶ್ರೀ ನಾಮದ ಅಡಿಭಾಗಕ್ಕೆ ಅಷ್ಟಮೀದಿವಸದ ಚಂದ್ರನ ಕಲೆಯೊಡನೆ ಹೋಲಿಕೆಯು ಹೇಳಲ್ಪಡುವುದರಿಂದಲೂ, ಆ ಚಂದ್ರನ ಕಲೆಯು ಪೂರ್ಣಚಂದ್ರ ಬಿಂಬದ ಅರ್ಧಭಾಗಕ್ಕೆ ಸಮನಾದ ಆಕಾರಹೊಂದಿರುವುದರಿಂದಲೂ, ಹುಬ್ಬುಗಳ ನಡುಭಾಗದ ಕೆಳಗೆ ಮೂಗಿನ ಅಡಿಭಾಗದಲ್ಲಿ ಅರ್ಧಚಂದ್ರಾಕಾರ ವುಳ್ಳದ್ದಾಗಿಯೂ, ನಡುವಿನಲ್ಲಿ ಅವಕಾಶ ವಿಲ್ಲದಂತೆಯೂ, ಶ್ರೀ ನಾಮದ ಅಡಿ (ಪಾದ) ಭಾಗವನ್ನು ಇಡಬೇಕು. ಅದಕ್ಕೆ ಮೇಲೆ ಹಣೆಯ ಮೇಲ್ಭಾಗದ ಕೂದಲಿನ ವರೆವಿಗೂ ಮಧ್ಯದಲ್ಲಿ ಅವಕಾಶವಿರುವಂತೆ ಎರಡು ರೇಖೆಗಳ ಆಕಾರವು ಹೇಳಲ್ಪಟ್ಟಿರುವುದರಿಂದ, ಹುಬ್ಬುಗಳ ಮಧ್ಯಭಾಗದಿಂದ ಪ್ರಾರಂಭಿಸಿ ಮಧ್ಯದಲ್ಲಿ ಅವಕಾಶದೊಂದಿಗೆ ಕೂಡಿದಾದ, ಮೂಗಿನ ಅಡಿಭಾಗದಲ್ಲಿ ಇಡಲ್ಪಟ್ಟ ಶ್ರೀನಾಮವು ಅಡಿಭಾಗದಿಂದ ಊರ್ಧ್ವಮುಖವಾಗಿ ಹೊರಟಿರುವಂತೆ ಎರಡು ರೇಖೆಗಳನ್ನಿಡಬೇಕು.

ಹಣೆಯ ಕೆಳಭಾಗದಲ್ಲಿ ಒಂದಂಗುಲ ಅಳತೆಯುಳ್ಳ ಮೂಲವೂ (ಪಾದ), ಅದರಿಂದ ಪ್ರಾರಂಭಿಸಿ ಊರ್ಧ್ವಮುಖವಾದ ಎರಡು ಶಾಖೆಗಳಾದ ರೇಖೆಗಳೂ, ಅವುಗಳ ಮಧ್ಯದಲ್ಲಿ ಒಂದಂಗುಲಕ್ಕಿಂತ ಕಡಿಮೆಯಾಗದ ಅವಕಾಶದೊಂದಿಗೆ ಶ್ರೀನಾಮವನ್ನಿಡಬೇಕು'' ಎಂದು ಮುಂಚೆ ತೋರಿಸಿದ ಕಾತ್ಯಾಯನೀಯ ಶ್ವೇತಮೃದೂರ್ಧ್ವಪುಂಡ್ರೋಪನಿಷತ್ತಿನಲ್ಲಿಯೂ - ಮೂಲಕ್ಕೆ ಎರಡು ರೇಖೆಗಳ ಆಕೃತಿಯುಳ್ಳ ರಚನೆಯಿರುವುದು ಹೇಳಲ್ಪಟ್ಟಿರುವುದರಿಂದಲೂ, ಅದರ ಮೇಲುಳ್ಳ ಶ್ರೀನಾಮದ ಭಾಗಕ್ಕೆ ಎರಡು ರೇಖೆ ಆಕೃತಿ ಇರುವಿಕೆಯೂ ನಡುವೆ ಒಂದಂಗುಲಕ್ಕಿಂತ ಕಡಿಮೆಯಿಲ್ಲದಂತೆ ಅವಕಾಶವಿರುವಿಕೆಯೂ ವಿಧಿಸಲ್ಪಟ್ಟಿರುವುದರಿಂದಲೂ, ಮೂಗಿನಲ್ಲಿರುವ ಮೂಲವು (ಪಾದ) ಅವಕಾಶ ರಹಿತವಾಗಿದೆಯೆಂದೂ ಅದರ ಮೇಲ್ಭಾಗವೇ ಅವಕಾಶವುಳ್ಳ ಪ್ರದೇಶವೆಂದೂ ಮುಂಚೆ ಹೇಳಿದ ವಿಷಯವನ್ನೇ ವಿವರಿಸಿದೆ. (ಪಾದಕ್ಕೂ, ಊರ್ಧ್ವಮುಖ ನಾಮಕ್ಕೂ ಮಧ್ಯೆ ಅವಕಾಶವಿರುವುದಿಲ್ಲ, ಅವು ಒಟ್ಟಾಗಿ ಸೇರಿದೆ ಎಂಬ ಅರ್ಥವು).

ಈ ರೀತಿಯೇ, ''ಮೂಗಿನಲ್ಲಿ ಮೂಲವು ಪ್ರಾರಂಭಿಸಿ ನೆತ್ತಿಯ (ಹಣೆಯ) ಕೊನೆಯವರೆವಿಗೂ ತಿರುಮಣ್ಣಿನಿಂದ (ಬಿಳಿಯ ಮಣ್ಣಿನಿಂದ) ಶ್ರೀನಾಮವನ್ನಿಡಬೇಕು. ಹುಬ್ಬಿನ ನಡುವಿನಿಂದ ಪ್ರಾರಂಭಿಸಿ ಶ್ರೀನಾಮಕ್ಕೆ ಅವಕಾಶವನ್ನು ಕಲ್ಪಿಸಬೇಕು. ಆ ಅವಕಾಶವು ಎರಡು ಅಂಗುಲ ಅಗಲವೂ, ಪಕ್ಕದಲ್ಲಿರುವ ರೇಖೆಗಳು ಒಂದಂಗುಲ ಅಗಲವಿರುವ ಹಾಗೆ ಅಳವಡಿಸಬೇಕು.'' ಎಂದು ಮುಂಚೆ ತಿಳಿಸಿದ ಪಾದ್ಮೋತ್ತರ ಖಂಡದ ಮೂರನೆಯ ಅಧ್ಯಾಯದ ಸಂಖ್ಯೆ ೩೧ರ ವಚನದಲ್ಲಿಯೂ, ಮೂಗಿನ ಕೆಳಭಾಗದಿಂದ ಹಿಡಿದು ಹಣೆಯ ಕೊನೆಯವರೆಗೂ ಶ್ರೀನಾಮವನ್ನು ಧರಿಸಬೇಕು - ಎಂಬುದೂ, ಅದರಲ್ಲಿ ಹುಬ್ಬಿನ ನಡುಮಧ್ಯದಿಂದಲೇ ಅವಕಾಶವನ್ನು ಅಳವಡಿಸಬೇಕೆಂಬುದು ಹೇಳಲ್ಪಟ್ಟಿರುವುದರಿಂದಲೂ, ಮೂಗಿನ ಕೆಳಭಾಗದಿಂದ ಹುಬ್ಬಿನ ನಡುಭಾಗದವರೆಗೂ ಇಡಲ್ಪಡುವ ಶ್ರೀನಾಮದ ಮೂಲವು ಅವಕಾಶರಹಿತವೆಂಬುದೂ, ಅದರ ಮೇಲಿರುವ ಶ್ರೀನಾಮವೇ ಅವಕಾಶವುಳ್ಳದೆಂಬುದೂ ಮುಂಚೆ ತಿಳಿಸಿದ ಅರ್ಥವೇ ವಿವರಣಾತ್ಮಕವಾಗಿ ತಿಳಿಯಲ್ಪಡುತ್ತದೆ.

ಮುಂಚೆ ತಿಳಿಸಿದ ಕಾತ್ಯಾಯನೀಯ ಉಪನಿಷತ್ತಿನಲ್ಲಿ, ''ಏಕಾಂಗುಲಂ ಫಾಲತಲೇ ಊರ್ಧ್ವಸ್ಯಮೂಲಂ'' ಎಂಬ ಜಾಗದಲ್ಲಿ ''ಫಾಲತಲ'' ಎಂಬ ಪದವು ಹಣೆಯ ಕೆಳಭಾಗವಾದ ಮೂಗಿನ ಮೂಲವನ್ನು ಸೂಚಿಸುತ್ತದೆ. 'ತಲ' ಎಂಬ ಪದವು ಕೆಳಭಾಗವನ್ನು ಹೇಳುವುದಾದುದರಿಂದಲೂ, ಬೇರೆ (ಪುರಾಣಾದಿ) ವಚನಗಳೊಂದಿಗೆ ಹೊಂದಬೇಕಾಗಿರುವುದರಿಂದಲೂ ಈ ರೀತಿಯೇ ಪರಿಗಣಿಸತಕ್ಕದ್ದು.

ಎಲ್ಲಾ ಗ್ರಂಥಗಳಲ್ಲಿಯೂ, ಮೂಗಿನ ಕೆಳಭಾಗದಿಂದ ಪ್ರಾರಂಭಿಸಿ ಶ್ರೀನಾಮವನ್ನು ಧರಿಸಬೇಕೆಂಬುದೂ, ಅದು ಮಧ್ಯೆ ಅವಕಾಶವಿರುವ ಎರಡು ರೇಖೆಗಳ ಆಕೃತಿಯನ್ನುಹೊಂದಿದೆ ಎಂಬುದೂ ಪ್ರಸಿದ್ಧವಾಗಿರುತ್ತದೆ.

ಆದುದರಿಂದಲೇ, ಭಾರದ್ವಾಜ ಸಂಹಿತೆಯಲ್ಲಿ ''ಆಚಮನವನ್ನು ಮಾಡಿ, ಬಿಳಿಮೃತ್ತಿಕೆ (ಮಣ್ಣು)ಯಿಂದ ಶ್ರೀನಾಮವನ್ನಿಟ್ಟು ಕೊಳ್ಳಬೇಕು. ಮೂಗಿನ ಮೂಲದಿಂದ ಆರಂಭಿಸಿ ತಲೆಗೂದಲಿನ ವರೆವಿಗೆ ಇಡಬೇಕು. ಮೂಗಿನ ಮೂಲವೆಂದರೆ ಮೂಗಿನ ಮೂರನೆಯ ಒಂದು ಭಾಗವಾಗುತ್ತದೆ. ಹಣೆಯಲ್ಲಿ ಶ್ರೀನಾಮದ ನಡುವಿನಲ್ಲಿ (ಅವಕಾಶದಲ್ಲಿ) ಅರಿಶಿನದ ಪುಡಿಯಿಂದ ಅಥವಾ ಸುವಾಸನೆಯುಳ್ಳ ಕೇಸರಿಯ ಪುಡಿಯಿಂದ, ಲಕ್ಷ್ಮಿಯ ಸ್ಥಾನದಲ್ಲಿ ಶ್ರೀಚೂರ್ಣವನ್ನಿಡಬೇಕು,'' ಎಂದು ಹೇಳಲ್ಪಟ್ಟಿತು.

ವೈಖಾನಸಾಗಮದಲ್ಲಿಯೂ ಸಹ, ''ಹರಿಯ ಮಂಗಳವಾದ ಹಣೆಯಲ್ಲಿ ಮೂಗಿನ ಮೂಲದಿಂದ ಪ್ರಾರಂಭಿಸಿ ಎರಡು ರೇಖಾಕೃತಿಯುಳ್ಳ ಶ್ರೀನಾಮವನ್ನು ಇಡಬೇಕು'' ಎಂದು ಹೇಳಲ್ಪಟ್ಟಿದೆ.

ಪರಾಶರ ಸಂಹಿತೆಯಲ್ಲಿಯೂ ಶ್ರೀನಾಮವಿರುವುದನ್ನು ವಿಧಿಸುವ ಜಾಗದಲ್ಲಿ - ಮೂಗಿನ ಮೂಲದಲ್ಲಿರುವ ಎರಡಂಗುಲವಿರುವ ಪಾದವೂ, ಹಣೆಯ ನಡುವಿನಲ್ಲಿ ಒಂದೂವರೆ ಅಂಗುಲ ವಿರುವ ಅವಕಾಶವೂ, ಅದರ ಎರಡು ಕಡೆಗಳಲ್ಲಿಯೂ ಒಂದಂಗುಲ ಇರುವ ರೇಖೆಗಳೂ ಇರುವಂತೆ ಅತ್ಯಂತ ವಿವರವಾಗಿ ಕಾಣುವಂತೆ ಬ್ರಾಹ್ಮಣನು ಶ್ರೀನಾಮವನ್ನು ಧರಿಸಬೇಕೆಂದು ಹೇಳಲ್ಪಟ್ಟಿದೆ.

ಇವುಗಳಂತೆಯೇ ಅಲ್ಲಲ್ಲೇ ಇರುವ ಇತರ ಪ್ರಮಾಣ ವಚನಗಳು ಇಲ್ಲಿ ಉದಾಹರಿಸತಕ್ಕವು. ಅವುಗಳಲ್ಲಿಯೂ, ಮುಂಚೆ ಹೇಳಿದ ಕಾತ್ಯಾಯನೀಯ ಉಪನಿಷತ್ತು, ಪರಾಶರ ಸಂಹಿತೆ, ಪಾದ್ಮೋತ್ತರಖಂಡ ಮುಂತಾದುವಗಳಲ್ಲಿರುವ ವಚನಗಳೊಂದಿಗೆ ವಿರೋಧವಿಲ್ಲದಂತೆ ಸಮನ್ವಯಗೊಳ್ಳಬೇಕಾಗಿರುವುದರಿಂದ, ಮೂಗಿನ ಕೆಳಭಾಗದಲ್ಲಿ ಧರಿಸಲ್ಪಟ್ಟ ಶ್ರೀನಾಮದ ಕೆಳಭಾಗವು ಅವಕಾಶ ರಹಿತವಾದುದೆಂದೂ, ಅದರ ಮೇಲಿರುವಭಾಗವೇ ಮಧ್ಯದಲ್ಲಿ ಅವಕಾಶದೊಂದಿಗೆ ಕೂಡಿದ ಎರಡು ರೇಖೆಗಳ ರಚನೆ ಹೊಂದಿರುವುದೆಂದೂ ತಿಳಿಯಲ್ಪಟ್ಟುದೆಂದು ಪರಿಗಣಿಸಿರಿ. ಆ ಕಾರಣದಿಂದಲೇ ತಿರುನಾಮದ ಕೆಳಭಾಗ(ಪಾದ)ವು ಒಂದಂಗುಲಕ್ಕಿಂತ ಕಡಿಮೆ ಇಲ್ಲದಂತೆಯೂ, ಎರಡಂಗುಲಕ್ಕಿಂತ ಹೆಚ್ಚಿಲ್ಲದಂತೆಯೂ, ಮೂಗಿನ ಮೂಲದಲ್ಲಿ ಹರಡಿಕೊಂಡು ಇರಬೇಕೆಂದೂ ಪರಿಗಣಿಸರಿ. ಎಲ್ಲಾ ವಸ್ತುಗಳಿಗೂ ಅಡಿಭಾಗ, ನಡುಭಾಗ ಮತ್ತು ತುದಿ ಎಂಬ ಭಾಗಗಳನ್ನು ಗಮನದಲ್ಲಿಟ್ಟುಕೊಂಡು ಮುಂಚೆ ತಿಳಿಸಿದ ಭಾರಧ್ವಾಜ ಸಂಹಿತೆಯಲ್ಲಿ ''ಮೂಗಿನ ಮೂರನೆಯಭಾಗ ಮೂಗಿನ ಮೂಲ (ಅಡಿಭಾಗ)ವೆಂದು ಹೇಳಲ್ಪಡುತ್ತದೆ'' ಎಂದು ಹೇಳುವ ಭಾರಧ್ವಾಜರಿಂದ - ಮೂಗನ್ನು ಮೂರುಭಾಗಗಳಾಗಿ ವಿಂಗಡಿಸಿ ಅವುಗಳಲ್ಲಿ ಕೆಳ ಎರಡು ಭಾಗಗಳನ್ನು (ತುದಿ ಮತ್ತು ನಡುಭಾಗಗಳನ್ನು) ಬಿಟ್ಟು ಬಿಟ್ಟು ಅವುಗಳ ಮೇಲಿರುವ ಭಾಗದಿಂದ ಪ್ರಾರಂಭಿಸಿಯೇ ತಿರುನಾಮವನ್ನು ಧರಿಸಬೇಕು- ಎಂದು ಹೇಳಲ್ಪಟ್ಟದಾಗುತ್ತದೆ. ''ತ್ರಿಭಾಗಃ ಎಂಬ ಪದವು ತ್ರಿಷುಭಾಗಃ ಎಂದು ವಿಭಜಿಸಲ್ಪಟ್ಟು ಮೂರರಲ್ಲಿ ಒಂದು ಭಾಗವನ್ನು ತಿಳಿಸುತ್ತದೆ''. ಆದ್ದರಿಂದ ತಿರುನಾಮಕ್ಕೆ ಉದ್ದ ಅಗಲಗಳಿರುವಂತೆಯೇ ಅದರ ಮೂಲ (ಪಾದ)ಕ್ಕೂ ಇರುವ ಉದ್ದ ಆಯಾಯಾ ಅವಯವಗಳ ರಚನೆಯಂತೆ ನೋಡುವುದಕ್ಕೆ ಸುಂದರವಾಗಿ ಇರಬೇಕೆಂದೂ, ಅದರಂತೆ ಆಯಾಯ ಜಾಗಗಳಿಗೆ ತಕ್ಕಂತೆ ಮೂಗಿನ ಮೂಲವನ್ನು ದಾಟದಂತೆ ರಚಿಸಿಬೇಕೆಂದೂ ಅರ್ಥೈಸಲ್ಪಟ್ಟಿತು. ಒಂದಂಗುಲ, ಎರಡಂಗುಲ

ಮುಂತಾದ ಅಳತೆಗಳೂ ಮೂಗಿನ ಮೂಲಭಾಗದಲ್ಲಿ ಪೂರ್ಣವಾಗಿ ಹರಡಿಯಿರುವಿಕೆಯು ಹೇಳಲ್ಪಟ್ಟಿರುವುದನ್ನು ಅನುಸರಿಸಿಯೂ, ತಿರುನಾಮರಚನೆಯನ್ನು ವಿಧಿಸುವ ಶಾಸ್ತ್ರಗಳಲ್ಲಿ "ಊರ್ಧ್ವಪುಂಡ್ರಗಳನ್ನು ನೇರವಾಗಿಯೂ ಅಂದವಾಗಿಯೂ, ಅಂದವಾದ ಎರಡು ರೇಖಾರಚನೆ ಹೊಂದಿರುವಂತೆಯೂ, ನೋಡುವವರ ಮನಸ್ಸನ್ನು ಆಕರ್ಷಿಸುವಂತೆಯೂ ಇಡಬೇಕು" ಎಂದು ನೇರವಾಗಿರುವಿಕೆ, ಅಂದವಾಗಿರುವಿಕೆ ಮುಂತಾದ ಮೇಲ್ಭಾಗಗಳೇ ಮುಖ್ಯವೆಂದು ಸಾರಲ್ಪಟ್ಟಿರುವುದನ್ನು ಅನುಸರಿಸಿ. ಮೂಗಿನ ಲಕ್ಷಣಗಳೇ ಮುಖ್ಯವೆಂದು ಸಾರಲ್ಪಟ್ಟಿರುವುದನ್ನು ಅನುಸರಿಸಿ. ಮೂಗಿನ ಮೇಲ್ಭಾಗದಲ್ಲಿ ಇಡಲ್ಪಡುವ ತಿರುನಾಮದ ಕೆಳಭಾಗಕ್ಕೆ ಅರಳಿದತಾವರೆ ಹೂವಿನ ಆಕಾರದಂತೆ ಅರ್ಧ ಚಂದ್ರಾಕೃತಿಯು ಹೊಂದುತ್ತದೆ ಎಂದು ಪರಿಗಣಿಸಿಯೇ "ಅಷ್ಟಮೀ ದಿನದ ಚಂದ್ರನ ಆಕಾರದಂತೆ ಹೋಲುವ ಆಧಾರವುಳ್ಳದಾಗಿ ಹಣೆಯಲ್ಲಿ ಧರಿಸಿದ ತಿರುನಾಮವನ್ನು ಉಳ್ಳವನು" ಎಂದು ಹೇಳಲ್ಪಟ್ಟಿತು. 'ಅಷ್ಟಮೀಂದು ಕಲಾಕಾರಃ' ಎಂಬ ಪಾಠದಲ್ಲಿಯೋವೆಂದರೆ, ಅದು ಹಣೆಗೆ ಮಾತ್ರವಲ್ಲದೆ ನಾಮಕ್ಕೆ ವಿಶೇಷಣವಲ್ಲ, ಅವಕಾಶದೊಂದಿಗೆ ಕೊಡಿದ ತಿರುನಾಮಕ್ಕೆ ಪೂರ್ಣ ಚಂದ್ರನ ಅರ್ಧಭಾಗದೊಂದಿಗೆ ಹೋಲಿಕೆಯುಳ್ಳ ಆಕಾರವನ್ನು ಹೊಂದಿರುವುದೂ, ಅವಕಾಶರಹಿತವಾದ ಅಷ್ಟಮೀದಿನದ ಚಂದ್ರನ ಕಲೆಗೆ ಸಮಾನವಾದ ಆಕಾರವಿರುವುವಿಕೆಯು ಹೊಂದುವುದಿಲ್ಲ ವಾದುದರಿಂದಲೂ, ಹಣೆಯನ್ನೇ ಆ ಆಕಾರವಿರುವಂತೆ ವರ್ಣಿಸುವುದು ಪ್ರಸಿದ್ಧವಾಗಿರುವುದರಿಂದಲೂ, ಮುಂಚೆ ಹೇಳಿದ ಭವಿಷ್ಯೋತ್ತರ ಪುರಾಣದ ಹನ್ನೊಂದನೆಯ ಅಧ್ಯಾಯದಲ್ಲಿ, ತಿರುನಾಮವನ್ನು ಧಾರಣೆಮಾಡುವುದರ ಬಗ್ಗೆ ಹೇಳುವ ಸಂದರ್ಭದಲ್ಲಿ, "ಅಷ್ಟಮೀ ಚಂದ್ರಕಲೆಯ ಆಕಾರವುಳ್ಳದ್ದೂ, ಕನ್ನಡಿಯಂತೆ ಹೊಳಪನ್ನು ಪಡೆದಿರುವುದೂ ಆದ ತನ್ನ ಹಣೆಯಲ್ಲಿ ಸತ್ಪುರುಷರಿಗೆ ಆಶ್ರಯನಾದ ಶ್ರೀನಿವಾಸನು ತಿರುನಾಮವನ್ನು ಧರಿಸಿಕೊಂಡನು" ಎಂದು ಹೇಳುವ ವಚನದೊಂದಿಗೆ ಸಮನ್ವಯಿಸ ಬೇಕಾದುದರಿಂದಲೂ, 'ಅಷ್ಟಮೀಂದು ಕಲಾಕಾರಃ' ಎಂಬುದು ಹಣೆಗೆ ಮಾತ್ರವೇ ವಿಶೇಷಣವೆಂದುಕೊಳ್ಳಬೇಕು.

ವರಾಹಪುರಾಣದ ಎರಡನೆಯ ಭಾಗದಲ್ಲಿ ನಾಲ್ಕನೆಯ ಅಧ್ಯಾಯದಲ್ಲಿ ಪದ್ಮಾವತಿಯ ಅವಯವ ಲಕ್ಷಣಗಳನ್ನು ತಿಳಿಸುತ್ತಾ ಬರುವ ನಾರದರು, "ಪದ್ಮಾವತಿ! ನಿನ್ನ ಈ ಹಣೆಯು ನಿಷ್ಕಳಂಕವಾದ ಅಷ್ಟಮೀಚಂದ್ರನಂತೆ ಇರುವ ಆಕಾರವನ್ನು ಹೊಂದಿರುವುದಾಗಿ, ಕಪ್ಪನೆಯ, ಮನೋಹರವಾದ ಮುಂಗುರುಳುಗಳಿಂದ ಕೂಡಿ ಮನಸ್ಸನ್ನು ಅತ್ಯಂತವಾಗಿ ಆಕರ್ಷಿಸುವುದಾಗಿ ಕಂಡುಬರುತ್ತದೆ" ಎಂದು ಹಣೆಯನ್ನು ಅಷ್ಟಮೀ ದಿನದ ಚಂದ್ರನ ಸದೃಶವಾದ ಆಕಾರವನ್ನುಳ್ಳದುದಾಗಿ

ಹೇಳಲ್ಪಟ್ಟಿರುವುದನ್ನು ಕಾಣತಕ್ಕದ್ದು.

ಈ ಪಾಠದಂತೆಯೂ, ಮುಂಚೆ ತಿಳಿಸಿದ ಭವಿಷ್ಯೋತ್ತರ ಪುರಾಣದ ಹನ್ನೊಂದನೆಯ ಅಧ್ಯಾಯದ ವಚನವೂ, ಕಾತ್ಯಾಯನೀಯೋಪನಿಷತ್ತು ಮುಂತಾದವುಗಳ ವಚನಗಳೂ ಪ್ರಮಾಣವಾಗಿ ತೆಗೆದುಕೊಳ್ಳಬೇಕಾಗಿರುವುದರಿಂದ, ಹಿಂದೆ ಹೇಳಿದಂತೆಯೇ ಮೂಲ(ಮೂಗ)ದೊಂದಿಗೆ ಸೇರಿ (ಹಣೆಯಲ್ಲಿ) ಅವಕಾಶವುಳ್ಳ ಎರಡು ರೇಖೆಗಳ ಆಕಾರವಿರುವ ರೂಪವಿರುವಂತೆಯೇ ಶ್ರೀನಿವಾಸನಿಗೆ ತಿರುನಾಮ (ಊರ್ಧ್ವಪುಂಡ್ರ)ವನ್ನು ಧರಿಸಬೇಕು.

ಮಧ್ಯದಲ್ಲಿ ಅರಿಶಿನ ತಿಲಕದ ರೇಖೆಯೊಂದಿಗೆ ಕೂಡಿ ಮೂರುರೇಖೆಗಳೊಂದಿಗೆ ಮೂಲವನ್ನು ಹೊಂದಿದ ತಿರುನಾಮವೇ ಮುಂಚೆ ತೋರಿಸಿದ ಪ್ರಮಾಣಗಳಿಂದ ತಿಳಿಯಲ್ಪಟ್ಟದಾಗುತ್ತದೆ. ಶ್ರೀ ಶ್ರೀನಿವಾಸನೂ ಅಂಥಹ ನಾಮವನ್ನೇ ಧರಿಸಿಕೊಂಡುದುದಾಗಿ ಮುಂಚೆ ತಿಳಿಸಿದ ಭವಿಷ್ಯೋತ್ತರ ಪುರಾಣದಿಂದ ಗೊತ್ತಾಗುತ್ತದೆ. ಆದರೂ (ಶ್ರೀಚೂರ್ಣ ರೇಖೆಯಿಲ್ಲದೆ) ಎರಡು ರೇಖೆಗಳುಳ್ಳ ತಿರುನಾಮವು ಹಲವು ಪ್ರಮಾಣಗ್ರಂಥಗಳಿಂದ ತಿಳಿಸಲ್ಪಟ್ಟಿಟುವುದರಿಂದಲೂ, ಶೈವರುಗಳ ಆಕ್ರಮಣಕ್ಕೆ ಮುಂಚಿನವರೆಗೆ ಶ್ರೀನಿವಾಸನು ಈ ಎರಡು ರೇಖೆಗಳ ತಿರುನಾಮವನ್ನೇ ಧರಿಸಿಕೊಂಡು ಬಂದುದಾಗಿ ಹಿರಿಯರು ಹೇಳುವುದರಿಂದಲೂ, ಇದನ್ನು ಧರಿಸುವುದರಿಂದ ತಪ್ಪುಯಾವುದೂ ಇಲ್ಲವೆಂದು ತಿಳಿಯಬೇಕು.

ಈ ರೀತಿಯಾಗಿ ಹಲವು ಆಕಾರಗಳನ್ನು ಹೊಂದಿ ಪೂಜೆಗೆ ಅಂಗವಾದ ಅಲಂಕಾರರೂಪಗಳಾದ ತಿರುನಾಮಗಳೂ, ಕಸ್ತೂರಿ, ಪಚ್ಚೆಕರ್ಪೂರ, ಶ್ವೇತಮೃತ್ತಿಕೆ, ಗೋಪೀಚಂದನ, ಮತ್ತು ಸುವರ್ಣ, ಬೆಳ್ಳಿ ಮುಂತಾದ, ತಿರುನಾಮವಿಡುವುದಕ್ಕೆ ಉಪಯೋಗಿಸುವ ಪದಾರ್ಥಗಳೂ, ಶಾಸ್ತ್ರಗಳ ಬಾಯಿಯಿಂದಲೇ ಗೊತ್ತಾಗುವುದರಿಂದ, ಆಯಾಯಾ ಕಾಲದೇಶಗಳಿಗೆ ತಕ್ಕಹಾಗೆ, ಆಯಾಯಾ ಸಂದರ್ಭಗಳಿಗೆ ತಕ್ಕ ರೀತಿ, ಆಯಾಯಾ ಪದಾರ್ಥಗಳಿಂದ ಶ್ರೀನಿವಾಸನಿಗೆ ತಿರುನಾಮವನ್ನು ಧರಿಸುವುದು ತಕ್ಕುದೆಂದು ತಿಳಿಯಬೇಕು.

ಆದುದರಿಂದ ಈಗ, 'ಇವನು ಅನ್ಯದೇವತೆಯೋ' ಎಂಬ ಶಂಕೆಯಿಂದ ಕಳಂಕಿತನಾಗಿದ್ದ ಶ್ರೀನಿವಾಸನಿಗೆ, ಅ ಕಳಂಕವು ತೀರುವುದಕ್ಕಾಗಿ, ಈ ಸ್ಥಳವನ್ನು ಶೈವರುಗಳು ಆಕ್ರಮಿಸುವುದಕ್ಕೆ ಮುಂಚಿನ ಕಾಲದವರೆಗೂ ಇದ್ದ ನಿಲುವನ್ನು ಅನುಸರಿಸಿ (ಮೂಗಿನಲ್ಲಿ) ಮೂಲದೊಂದಿಗೆ ಕೂಡಿ (ಹಣೆಯಲ್ಲಿ) ಅವಕಾಶವನ್ನುಳ್ಳ ಆಕಾರವುಳ್ಳದಾದ ತಿರುನಾಮವನ್ನು ಘನವಾದ ಪಚ್ಚೆಕರ್ಪೂರದ ಹುಡಿಯಿಂದ ಧರಿಸಿಸಬೇಕು- ಎಂದು ರಾಮಾನುಜರು ಕಟ್ಟಳೆ ಮಾಡಿದರು.

ಇದರ ನಂತರ ಭಗವದ್ರಾಮಾನುಜರು - ಮುಂದಿನ ಶುಕ್ರವಾರದ ದಿನದಂದೇ ಅಭಿಷೇಕ ಕಾಲದಲ್ಲಿ ಮೊದಲು ಶ್ರೀಮುಡಿಯಲ್ಲಿ ಅಭಿಷೇಕಮಾಡಲ್ಪಡುವ ಆಕಾಶಗಂಗೆಯ ತೀರ್ಥದಿಂದ ಶ್ರೀನಿವಾಸ ಭಗವಂತನ ದಿವ್ಯವಾದ ಹಣೆಯಲ್ಲಿ ಸಮರ್ಪಿಸಿದ್ದ (ಇಟ್ಟ) ತಿರುನಾಮದ ಎರಡು ರೇಖೆಗಳು ಅಳಿಸಲ್ಪಟ್ಟು ಕಾಣದಂತೆ ಆದಾಗ್ಯೂ ಅದರ ಕೆಳಭಾಗದ ಮೂಗಿನ .ಅಡಿಯಲ್ಲಿ ಅರ್ಧ ಚಂದ್ರಾಕಾರವಾಗಿ ಸಮರ್ಪಿಸಿದ್ದ ತಿರುನಾಮದ ಭಾಗವು ಮಾತ್ರ ಅಳಿಸದೇ ಇದ್ದುದನ್ನು ಕಂಡು, ಮುಂಚೆ (ಕ್ಷೀರಸಮುದ್ರಮಥನ ಸಮಯದಲ್ಲಿ) ಮೋಹಿನಿಯ ವೇಷವನ್ನು ಧರಿಸಿದ್ದ ಈ ಭಗವಂತನಿಗೆ, ''ಅರ್ಧಚಂದ್ರಾಕಾರವುಳ್ಳ ತಿರುನಾಮವನ್ನು ಎರಡು ಹುಬ್ಬುಗಳ ಕೆಳಗೆ (ಮೂಗಿನಡಿಯಲ್ಲಿ) ಧರಿಸಬೇಕು'' ಎಂಬ ವಸಿಷ್ಠ ಸಂಹಿತೆಯ ವಚನದಂತೆ, ಆಗಿನ ಹೆಣ್ಣಿನ ಸ್ಥಿತಿಗೆ ತಕ್ಕಹಾಗೆ ಇಂಥಹ ತಿರುನಾಮವು ಅಲ್ಲಿದ್ದ ದೇವತೆಗಳಿಗೂ ಅಸುರರಿಗೂ ಯಾವ ರೀತಿಯಲ್ಲಿ ವ್ಯಾಮೋಹಜನಕವಾಯಿತೋ ಅದೇ ರೀತಿಯಲ್ಲಿಯೇ ಲೋಕದ ಜನರೆಲ್ಲರನ್ನೂ ಆಕರ್ಷಿಸಿ ವ್ಯಾಮೋಹಗೊಳ್ಳುವಂತೆ ಮಾಡುವ, ಈ ದಿವ್ಯಮಂಗಳ ವಿಗ್ರಹವನ್ನು ಹೊಂದಿರುವ ಈ ಶ್ರೀನಿವಾಸನಿಗೂ ಮೇಲಿನ ರೇಖೆಗಳು ಕರಗಲ್ಪಟ್ಟು ಮೂಗಿನ ಅಡಿಭಾಗದಲ್ಲಿ ಮಾತ್ರ ಕರಗದೆಯೇ ಕಾಣಿಸುವ ಅರ್ಧ ಚಂದ್ರಾಕಾರವುಳ್ಳ ತಿರುನಾಮದ ಮೂಲ (ಪಾದ) ಭಾಗವು ಶೋಭಾಯಮಾನವಾಗಿ ಭಕ್ತರುಗಳ ಕಣ್ಣುಗಳನ್ನೂ ಮನಸ್ಸುಗಳನ್ನೂ ಆಕರ್ಷಿಸುವುದಾಗಿ ಕಾಣಲ್ಪಡುತ್ತದೆ. ಆದುದರಿಂದ ಇಷ್ಟೇ ಇರುವ ತಿರುನಾಮವನ್ನು ಕೆಲದಿನಗಳಲ್ಲಿ ಈ ದೇವನಿಗೆ ಧರಿಸಬೇಕೆಂದೂ ಮನದಲ್ಲಿ ಸ್ಮರಿಸಿಕೊಂಡಿದ್ದಾಗ ಆ ರೀತಿಯೇ ಅರ್ಚಕರ ಮುಖದಿಂದ (ಭಗವಂತನಿಂದ) ನಿಯಮಿಸಲ್ಪಟ್ಟವರಾಗಿ ಅಭಿಷೇಕವು ಪೂರ್ಣವಾದನಂತರ ಮುಂಚೆ ಇದ್ದ ರೀತಿಯಲ್ಲಿಯೇ ಪಚ್ಚಕರ್ಪೂರದ ಪುಡಿಯಿಂದ ಪಾದದೊಂದಿಗೆ ಕೂಡಿದ ಎರಡು ರೇಖೆಗಳ ಆಕಾರವುಳ್ಳ ತಿರುನಾಮವನ್ನು ಮೂಗಿನಡಿ ಭಾಗದಿಂದ ಕೇಶದವರೆಗೂ ಹಣೆಯಲ್ಲಿ ಧರಿಸುವಂತೆ ಹೇಳಿ ಇನ್ನುಮೇಲೆ ಯಾವಾಗಲೂ ಶುಕ್ರವಾರದಿಂದ ಹಿಡಿದು ಮೂರುದಿನಗಳು ಹೀಗೆಯೇ ತಿರುನಾಮವನ್ನಿಡಬೇಕು - ಎಂದೂ

ಆದಕ್ಕೆ ನಂತರ, ''ಮೊದಲನೆಯ ಕೃತಯುಗದಲ್ಲಿ ಜಂಬೂದ್ವೀಪದಲ್ಲಿ, ಭಾರತದೇಶದಲ್ಲಿ, ಗಂಗೆಗೆ ದಕ್ಷಿಣದಲ್ಲಿ ಎರಡುನೂರು ಯೋಜನದೂರದಲ್ಲಿಯೂ ಪೂರ್ವದಿಕ್ಕಿನ ಸಾಗರದ ಪಶ್ಚಿಮಕ್ಕೆ ಐದು ಯೋಜನ ದೂರವುಳ್ಳ ನಾರಾಯಣಗಿರಿಯಲ್ಲಿ (ತಿರುಪತಿ ಬೆಟ್ಟದಲ್ಲಿ) ಸಂಪತ್ತಿನಿಂದ, ಶ್ರೇಷ್ಠವಾದ ಸ್ವಾಮಿ ಪುಷ್ಕರಿಣಿಯ ಪಶ್ಚಿಮ ತಟದಲ್ಲಿ ದೇವಗಣಗಳಿಂದ ಪ್ರಾರ್ಥಿಸಲ್ಪಟ್ಟ ಲೋಕರಕ್ಷಕನಾದ ಪುರುಷೋತ್ತಮನು ಕನ್ಯಾಮಾಸ ಶ್ರವಣ ನಕ್ಷತ್ರದಿಂದ ಕೂಡಿದ ದ್ವಾದಶಿಯಂದು

ಸೋಮವಾರ ಸಿದ್ಧಿಯೋಗದಲ್ಲಿ, ಶ್ರೀನಿವಾಸಭಗವಂತನಾಗಿ ಆವಿರ್ಭವಿಸಿದನು.'' ಎಂದು ಪದ್ಮಪುರಾಣದ ಹತ್ತನೆಯ ಅಧ್ಯಾಯದಲ್ಲಿ ಸಂಖ್ಯೆ ೩೩ ರಿಂದ ಸೂಚಿತವಾದ ವಚನದಲ್ಲಿ ವರ್ಣಿಸಿರುವ ಶ್ರೀನಿವಾಸ ಆವಿರ್ಭಾವವನ್ನು ತಿಳಿಸುವಾಗ, ಶ್ರೀವೇಂಕಟನಾಥನ ದಿವ್ಯಅವತಾರ ಶುಭದಿನವಾಗಿ ತಿಳಿದು ಬರುವ ಸೋಮವಾರದಿಂದ ಮೂರುದಿನಗಳು, ಮೇಲಿರುವ ಎರಡು ರೇಖೆಗಳು ಇಲ್ಲದಂತೆ ಅರ್ಧಚಂದ್ರಾಕೃತಿಯಾಗಿ ಮೂಗಿನ ಮೂಲದಲ್ಲಿ ಧರಿಸಲ್ಪಡುವ ತಿರುನಾಮದ ಪಾದವನ್ನು ಮಾತ್ರವೇ ಧರಿಸಿಸಿ, ಅದರ ಮೇಲೆ ಹಣೆಯಲ್ಲಿ ಅರಿಸಿನ ಪುಡಿಯಿಂದಾದ ಕೆಂಪುಬಣ್ಣವುಳ್ಳ ಶ್ರೀ ಚೂರ್ಣರೇಖೆಯನ್ನು ಹಣೆಯತುದಿಯಲ್ಲಿ (ಕೀರಿಟದ ಕೆಳಗೆ) ಅಡ್ಡವಾಗಿ ಧರಿಸಿರುವ, ನವರತ್ನ ಖಚಿತವಾದ ಲಲಾಟಪಟ್ಟವೆಂಬ ದಿವ್ಯಾಭರಣವನ್ನು ಧರಿಸಿರುವಂತೆಯೂ, ಆ ಪಟ್ಟದಿಂದ ಮೂಗಿನ ಮೂಲದ ವರೆಗೆ ಜೋಲಾಡುವ ಬಿಳಿಮುತ್ತುಗಳಿಂದ ಪೋಣಿಸಿರುವ ರೇಖೆಗಳಿಂದ ಸುಂದರವಾಗಿ ಮಾಡಲ್ಪಟ್ಟ ಎರಡು ಪಕ್ಕಗಳುಳ್ಳದಾಗಿಯೂ, ಸ್ಥೂಲವಾಗಿ ನೋಡಿದಾಗ ಪಾದದೊಂದಿಗೆ ಕೂಡಿದ ಮೂರುರೇಖೆಗಳಿಂದಾದ ತಿರುನಾಮ ವಿರುವ ರೀತಿಯಲ್ಲಿ ನೇರವಾಗಿ ಧರಿಸಿಸಿ ಮುಂಚೆ ತಿಳಿಸಿದ ಮೋಹಿನಿಯ ರೂಪಕ್ಕೆ ತಕ್ಕ ರೀತಿಯಲ್ಲಿ ಶೀತಲ ವಸ್ತುಗಳಿಂದ ಅಂಜನ (ಕಾಡಿಗೆ) ಧರಿಸಬೇಕೆಂದೂ,

ಅದರ ನಂತರ, ಗುರುವಾರದಂದು, ಮಾರನೆಯದಿನ ಆಚರಿಸಲ್ಪಡುವ ಅಭೀಷೇಕಕ್ಕೆ ಪೂರ್ವಾಂಗವಾಗಿ ಸಕಲ ಆಭರಣಗಳನ್ನೂ ಕಳೆದು, ಭಗವಂತನ ದಿವ್ಯವಾದ ಹಣೆಯಲ್ಲಿ ತಿರುನಾಮವನ್ನು - ಸುವರ್ಣದಲ್ಲಿ ವಜ್ರಮಣಿ ಖಚಿತವಾಗಿ ತಯಾರಿಸಲ್ಪಟ್ಟ ಪಾದವೂ, ಎರಡು ರೇಖೆಗಳೂ ಆ ರೀತಿಯೇ ಪದ್ಮರಾಗ ರತ್ನಗಳು (ಕೆಂಪು) ಧೃಢವಾಗಿ ಖಚಿಸಲ್ಪಟ್ಟು ಇರುವಂತೆ ಶ್ರೀಚೂರ್ಣಶೇಖೆಯನ್ನು' ದಿವ್ಯಾಭರಣ ರೂಪವಾಗಿಯೇ ಧರಿಸಿಸಿ, ದಿವ್ಯಮುಖಮಂಡಲವನ್ನು ಬಿಟ್ಟು ಮಿಕ್ಕ ದಿವ್ಯಾವಯವಗಳು, ಅವುಗಳಲ್ಲಿರುವ ದಿವ್ಯಾಭರಣಗಳು, ಇವುಗಳ ಸ್ಥಾನದಲ್ಲಿ ಪುಷ್ಪಕವಚ (ಪೂಲಂಗಿ)ವನ್ನು ದೇಹಪೂರ್ತಿಯಾಗಿ ಮರೆಯುವಂತೆ ಸಮರ್ಪಿಸಬೇಕೆಂದೂ.

ಅದರ ಮಾರನೆಯದಿನ, ಶುಕ್ರವಾರ ಬೆಳಿಗ್ಗೆ ದಿವ್ಯಾಭರಣರೂಪವಾದ ತಿರುನಾಮವನ್ನೂ ಪುಷ್ಪಕವಚವನ್ನೂ ಕಳೆದು, ಬಿಳಿಯನಾಮ ಶ್ರೀಚೂರ್ಣಗಳಿಂದ ತಿರುನಾಮವನ್ನು ಸಮರ್ಪಿಸಿ, ಸೊಂಟದಲ್ಲಿಯೂ ತೋಳುಗಳಲ್ಲಿಯೂ ಪಂಚೆ ಮತ್ತು ಉತ್ತರೀಯವಾಗಿ ತೆಳ್ಳಗಿರುವ ಎರಡು ವಸ್ತ್ರಗಳನ್ನು ಸಮರ್ಪಿಸಿ, ಮೊದಲನೆಯ ದಿವ್ಯ ಆರಾಧನೆಯನ್ನು ನಡೆಸಿ ನಂತರ ಹಗಲಿನಲ್ಲಿ (ಮಧ್ಯಾಹ್ನದಲ್ಲಿ) ಅಭಿಷೇಕವನ್ನು ಮಾಡಿ ಪುನಃ ಮುಂಚೆ ತಿಳಿಸಿದಂತೆಯೇ ಪಚ್ಚಕರ್ಪೂರದ ಪುಡಿಯಿಂದ,

ಪಾದದೊಂದಿಗೆ ಸೇರಿದ ಎರಡು ರೇಖೆಗಳ ಆಕಾರವನ್ನು ಹೊಂದಿದ ಊರ್ಧ್ವಪುಂಡ್ರವನ್ನೇ ಧರಿಸಿರಬೇಕು. ಮುಂಚೆ ಹೇಳಿದ ದಿವ್ಯಾಭರಣರೂಪವಾದ ತಿರುನಾಮವು, ದಿವ್ಯವಾದ ಹಣೆಗೆ ದಿವ್ಯವಾದ ಕಾಂತಿಯನ್ನು ಕೊಡುವುದರಿಂದ. ಅದನ್ನು ಆಗಾಗ್ಗೆ ವಿಶೇಷವಾಗಿ ಉತ್ಸವ ಕಾಲಗಳಲ್ಲಿಯೂ ಧರಿಸಿಸಬೇಕು. ಉತ್ಸವಮೂರ್ತಿ ಮೊದಲಾದವರುಗಳಿಗೆ ದೀಪಶಿಖೆ (ದೀಪಜ್ವಾಲೆ) ಯ ಆಕಾರವುಳ್ಳ ಕಸ್ತೂರಿಯಿಂದ ತಿರುನಾಮವನ್ನಿಡಬೇಕು - ಎಂದೂ ಕಟ್ಟಳೆಯನ್ನಿಟ್ಟರು.

**ಅಲಂಕಾರ**

ನಂತರ ಆ ಭಗವದ್ರಾಮಾನುಜ ಮುನಿಗಳು, ಶೂರರುಗಳು ತಮ್ಮ ಕಾರ್ಯ ಪ್ರತಾಪಗಳಿಗೆ ಕಾರಣವಾದ ತಮ್ಮಗಳ ಆಯುಧಗಳನ್ನು ಚಂದನ, ಹೂವು ಮುಂತಾದುವುಗಳಿಂದ ಅಲಂಕರಿಸಿದ ನಂತರವೇ ತಮ್ಮಗಳನ್ನು ಅಲಂಕರಿಸಿಕೊಳ್ಳುವ ಸಂಪ್ರದಾಯದಂತೆ, ಶ್ರೀನಿವಾಸ ಭಗವಂತನಿಗೆ ಚಂದನ ಪುಷ್ಪ ಮುಂತಾದುವುಗಳಿಂದ ಅಲಂಕರಿಸುವ ಸಂದರ್ಭದಲ್ಲಿ ಮೊದ ಮೊದಲು ಆತನ ಗೆಲುವಿನ ಪರಂಪರೆಗಳಿಗೆ ಮುಖ್ಯ ಆಯುಧವಾದ ಶ್ರೀಸುದರ್ಶನ, ಪಾಂಚಜನ್ಯ, ಸುಂದರವಾದ ಶ್ರೀ ಚರಣಾರವಿಂದಗಳು ಮುಂತಾದುವುಗಳಿಗೆ ಅಲಂಕಾರವನ್ನು ಮಾಡಿ, ಅದರ ನಂತರ ವಕ್ಷಃಸ್ಥಳದಲ್ಲಿರುವ ಸುವರ್ಣಕಂಠಿಯಲ್ಲಿ ವಿಜಯ ಗೈದಿರುವ ಶ್ರೀದೇವಿಗೂ ನಂತರ ಕಿರೀಟಕ್ಕೂ, ನಂತರ ಶ್ರೀಭುಜಗಳು ಮುಂತಾದ ದಿವ್ಯ ಅವಯವಗಳಿಗೂ ಚಂದನ ಪುಷ್ಪಮಾಲೆ ಮುಂತಾದುವುಗಳಿಂದ ಅಲಂಕಾರವನ್ನು ಮಾಡಬೇಕೆಂದು ಕಟ್ಟಳೆಯನ್ನು ಮಾಡಿದರು.

**ವಕ್ಷಃಸ್ಥಳದ ಶ್ರೀದೇವಿಯೂ, ಮತ್ತು ''ನಾಚ್ಚಿಯಾರ್ ತಿರುಮೊಳಿ'' (ಅಂಡಾಳ್‌ರಚಿತ ತಮಿಳು ದಿವ್ಯಪ್ರಬಂಧದ ೧೪೩ ಪದ್ಯಗಳು) ಯನ್ನು ಓದುವುದು.**

ಹೀಗೆಯೇ ಪ್ರತಿ ಶುಕ್ರವಾರ ದೇವಾಧಿದೇವನಾದ ಶ್ರೀನಿವಾಸನಿಗೆ ಅಭಿಷೇಕವು ಸಂಪೂರ್ಣವಾದನಂತರ, ವಕ್ಷಃಸ್ಥಳದಲ್ಲಿ ಕನಕಮಯವಾದ ಕಂಠಿಯಲ್ಲಿ ವಿರಾಜಮಾನಳಾಗಿರುವ ಶ್ರೀದೇವಿಗೆ (ಪದ್ಮಾವತಿಗೆ) ಅಭಿಷೇಕ ಮಾಡುವುದಕ್ಕಾಗಿ ಅವಳನ್ನು ವಕ್ಷಃಸ್ಥಳದಿಂದ ಇಳಿಸಿ ಬೇರೆಯಾಗಿ ಬಿಜಯಮಾಡಿಸಿದಾಗ, ಯಾವಾಗಲೂ ಅಗಲದ ಅವಳಿಗೆ, ಭಗವಂತನ ವಕ್ಷಃಸ್ಥಳವನ್ನು ಬಿಟ್ಟಿರಲು ಒಂದು ಕ್ಷಣವೂ ಸಹಿಸಲಾರದ ಆಕೆಯ ವಿರಹ ದುಃಖವನ್ನು ಶಮನಮಾಡಲು ಉಪಾಯವಾಗಿ, ಆ ದೇವಿಯ ಮತ್ತೊಂದು ಅವತಾರವಾಗಿ, ಭೂಮಿದೇವಿಯ

ಅಂಶದೊಂದಿಗೆ ಅವತರಿಸಿದ ಆಂಡಾಳ್ (ಗೋದಾದೇವಿ) ರವರಿಂದ ಹಾಡಲ್ಪಟ್ಟ, ಭಗವಂತನನ್ನು ಬಿಟ್ಟಿರುವ ಕಾಲವನ್ನು ದುಃಖಿಸದಯೇ ಕಳೆಯಲು ಉಪಾಯಾದಿಗಳನ್ನು ತಿಳಿಸುವುದರಲ್ಲಿ (ದೃಷ್ಟಿಯನ್ನು) ಅಭಿಪ್ರಾಯವನ್ನು ಹೊಂದಿರುವುದಾದ, ನೂರನಲವತ್ತೂರು ಪದ್ಯಗಳನ್ನು ಒಳಗೊಂಡಿರುವ "ಶ್ರೀ ನಾಚ್ಚಿಯಾರ್ ತಿರುಮೊಳಿ" ಎಂಬ ದಿವ್ಯ ಪ್ರಬಂಧವನ್ನು (ತಮಿಳು ಪದ್ಯಗಳನ್ನು) ಓದಬೇಕೆಂದು ನಿಯಮಿಸಿದರು.

## ದೇವಸ್ಥಾನದ ಸುತ್ತಲೂ ರಾಜವೀಧಿಗಳನ್ನು ನಿರ್ಮಿಸುವುದು

ನಂತರ ಆ ರಾಮಾನುಜ ಯತಿವರ್ಯರು, ಶ್ರೀವೇಂಕಟಗಿರಿಯಾದ ದಿವ್ಯದೇಶವು, ಕಾಡುಮತ್ತು ಬೆಟ್ಟಗಳಿಂದ ಕೂಡಿ, ಕಡಿಯಲು ಮತ್ತು ಒಡೆಯಲು ಆಗದೇ ಇದ್ದುದರಿಂದ ಅಲ್ಲಿ ಒಂದು ಸುಂದರವಾದ ಪಟ್ಟಣವನ್ನು ನಿರ್ಮಿಸಲು ಯೋಗ್ಯವಿಲ್ಲದೇ ಇದ್ದುದರಿಂದ, ಸ್ವಲ್ಪದಿನಗಳ ಮುಂಚೆ ದ್ರುಮಕುತಾರನೆಂಬ ಭಕ್ತನು ಶ್ರೀನಿವಾಸನ ದೇವಾಲಯದ ಪ್ರಾಕಾರಗೋಡೆಗಳ ಸುತ್ತಲೂ, ನಾಲ್ಕೂಕಡೆಯೂ, ಕಲ್ಲುಗಳಿಂದಲೂ ಮರಗಳಿಂದಲೂ ಏರುತಗ್ಗುಗಳಿಂದ ಕೂಡಿದ ಪ್ರದೇಶವನ್ನು ಬಹಳ ಶ್ರಮಪಟ್ಟು ಸಮತಲವಾಗಿ ಮಾಡಿ ಚಿಕ್ಕದೊಂದು ಬೀದಿಯನ್ನು ರಚಿಸಿ ಅದರಲ್ಲಿ ಭಗವತ್ಕೈಂಕರ್ಯ ಮಾಡುವವರಿಗೆ ವಾಸಿಸಲು ಜಾಗ (ಮನೆ) ಗಳು, ಇವುಗಳನ್ನು ಮಾತ್ರ ಕಟ್ಟಿಸಿದನು. ಅದು ಬಿಟ್ಟರೆ ಭಗವಂತನ ಉತ್ಸವಗಳಲ್ಲಿ ಆತನು ದಿವ್ಯಯಾತ್ರೆಯನ್ನು ಮಾಡಲು ಯೋಗ್ಯವಾದ ನಗರವೋ ಅದರ ಮಧ್ಯದಲ್ಲಿರುವ ನಾಲ್ಕು ಪ್ರಾಕಾರದ ಸುತ್ತಲೂ ಇರಬೇಕಾದ ರಾಜಬೀದಿಗಳನ್ನೋ ಅವನು ಅಲ್ಲಿ ನಿರ್ಮಿಸಲಿಲ್ಲ. ಆದುದರಿಂದ ಇಲ್ಲಿ ಮುಂಚೆಯಿದ್ದ ಅರಸರುಗಳು "ದೇವಾಲಯದ ಸುತ್ತಲೂ ಬೀದಿಗಳನ್ನು ಏರ್ಪಡಿಸಲು ಸಾಧ್ಯವಿಲ್ಲದುದರಿಂದಲೂ, ಶೀಘ್ರದಲ್ಲಿಯೇ ಒಂದು ನಗರವನ್ನು ನಿರ್ಮಾಣಮಾಡಿ ಅದರಲ್ಲಿ ಭಗವಂತನಿಗೆ ಉತ್ಸವಾದಿಗಳನ್ನು ನಡೆಸಬೇಕು," ಎಂದಿದು ಮೊದಲಾಗಿ ವೈಷ್ಣವಾಗಮದಲ್ಲಿ ಹೇಳಿರುವಂತೆ, "ಶ್ರೀವೇಂಕಟೇಶನ ಬ್ರಹ್ಮೋತ್ಸವಾರಂಭದಲ್ಲಿ, ಉತ್ಸವ ಪ್ರಾರಂಭಕ್ಕೆ ಮುಂಚಿನ ಅಂಕುರಾರ್ಪಣ ಸಂಧರ್ಭಕ್ಕೆ ಮುಂಚೆ ಧ್ವಜಾರೋಹಣ ನಡೆದ ನಂತರ ಶ್ರೀವೇಂಕಟಗಿರಿಯ ತಪ್ಪಲಲ್ಲಿರುವ ತಿರುಚ್ಚಾನೂರ್ (ತಿರುಚ್ಚುಕನೂರ್) ಎಂಬ ಹೆಸರುವಾಸಿಯಾದ ರಾಜಧಾನಿಯಲ್ಲಿ ಉತ್ಸವ ಮೂರ್ತಿಯನ್ನು ಬೆಟ್ಟದಿಂದ ಇಳಿಸಿ ಅಲ್ಲಿ ಬಿಜಯ ಮಾಡಿಸಿ, ಎಂಟು ದಿನಗಳು ಬೆಳಿಗ್ಗೆ ಮತ್ತು ಸಾಯಂಕಾಲಗಳಲ್ಲಿ ರಾಜಬೀದಿಗಳಲ್ಲಿ ಎಲ್ಲಾ ವಾಹನಗಳಲ್ಲಿ ಕುಳ್ಳಿರಿಸಿ, ಮೆರವಣಿಗೆಗಳನ್ನು ನಡೆಸಿ, ಬ್ರಹ್ಮೋತ್ಸವವನ್ನು ಸಾಂಗವಾಗಿ ಮುಗಿಸಿ, ಒಂಭತ್ತನೆಯ ದಿನ ಬೆಳಿಗ್ಗೆ ಮಂಗಳವಾದ

ತೀರ್ಥಸ್ನಾನವನ್ನು ಮುಗಿಸತಕ್ಕ ಉತ್ಸವ ಶೇಷವನ್ನು ಶಾಸ್ತ್ರೋಕ್ತವಾಗಿ ನೆರವೇರಿಸಿ ಅಂದು ಸಾಯಂಕಾಲ ಪರಿವಾರಗಳೊಂದಿಗೆ ಸೇರಿ ಭಗವಂತನನ್ನು ಶ್ರೀವೇಂಕಟಗಿರಿಗೆ ಪುನಃ ಬಿಜಯ ಮಾಡಿಸಿಕೊಂಡು ಧ್ವಜಾವರೋಹಣ ಉತ್ಸವ ಮುಂತಾದುವುಗಳನ್ನು ಅಲ್ಲಿಯೇ ನಡೆಸುತ್ತಿದ್ದರು. ಅಂದಿನಿಂದ ಹಿಡಿದು ಭಗವಂತನ ಉತ್ಸವವು ತಿರುಪತಿಯ ಬೆಟ್ಟದ ಕೆಳಗೆಯೇ ನಡೆಸಲ್ಪಟ್ಟು ಬರುತ್ತಿದೆ'' ಎಂದು ತಿರುಪತಿ ಬೆಟ್ಟದಲ್ಲಿರುವ ಹಿರಿಯರು ಹೇಳಿದುದನ್ನು ಕೇಳಿ ಮನೋವ್ಯಾಕುಲಗೊಂಡು, ಹಿಂದೆ ಬ್ರಹ್ಮದೇವನು ತೊಂಡಮಾನ್ ಚಕ್ರವರ್ತಿ ಮುಂತಾದವರು ಯಾವರೀತಿ ತಿರುಪತಿ ಬೆಟ್ಟದಲ್ಲಿ ತೀರ್ಥಸ್ನಾನದೊಂದಿಗೆ ಕೂಡಿದ ಉತ್ಸವಾದಿಗಳನ್ನು ನಡೆಸಿದರೋ, ಅದರಂತೆಯೇ ಈ ಕಾಲದವರೂ ಅದನ್ನು ಅಲ್ಲಿಯೇ (ಬೆಟ್ಟದಲ್ಲಿಯೇ) ನಡೆಸಬೇಕೆಂದು ನಿಶ್ಚಯಿಸಿ, ಶ್ರೀವೇಂಕಟೇಶನ ದೇವಸ್ಥಾನದ ನಾಲ್ಕುಕಡೆಯೂ ಏರುತಗ್ಗುಪ್ರದೇಶಗಳನ್ನು ಸಮನಾಗಿ ಮಾಡಿಸಿ ಅಲ್ಲಿ ಸುಂದರವಾದುದೊಂದು ನಗರವನ್ನು ನಿರ್ಮಿಸಿ ಅದರಲ್ಲಿ ಮಾಳಿಗೆಗಳ ಸಮೂಹಗಳಿಂದ ಅಲಂಕರಿಸಲ್ಪಟ್ಟ ಎರಡು ಶ್ರೇಣಿಗಳನ್ನು ಕೊಂಡವುಗಳೂ, ಮಹೋತ್ಸವ ದಿನಗಳಲ್ಲಿ ಭಗವಂತನು ವಾಹನಗಳಲ್ಲೇರಿ ಮೆರವಣಿಗೆ ನಡೆಸುವುದನ್ನು ಕಣ್ತುಂಬ ನೋಡಿ ಆನಂದಿಸಲು ತಕ್ಕವುಗಳಾದ ನಾಲ್ಕು ವಿಶಾಲವಾದ ಬೀದಿಗಳನ್ನು ನಾಲ್ಕೂ ಕಡೆಯೂ ಏರ್ಪಡಿಸಿ, ಸ್ವಾಮಿ ಪುಷ್ಕರಿಣಿಯ ಪೂರ್ವತಟದಲ್ಲಿ ದಕ್ಷಿಣೋತ್ತರವಾಗಿ ಕ್ರೋಶದೂರ (ಕೂಗುದೂರ)ವುಳ್ಳ ದೊಡ್ಡದಾದ ಬೀದಿಗಳನ್ನೂ, ಅದರ ಪೂರ್ವಕ್ಕೆ ಮೃಗಯೋತ್ಸವ (ಪಾರಿವೇಟ್ಟೈ - ಪಾರಿಬೇಟೆ) ಸಂದರ್ಭದಲ್ಲಿ ಯಾತ್ರೆಗೆ ತಕ್ಕುದಾದ ನಾಲ್ಕು ಕೋನಗಳುಳ್ಳ ಬೇರೊಂದು ಬೀದಿಯನ್ನೂ ನಿರ್ಮಿಸಿ ತಿರುಪತಿ ಬೆಟ್ಟದಲ್ಲಿಯೇ ಸಮಸ್ತ ಉತ್ಸವಗಳನ್ನೂ ನಿರ್ವಹಿಸುವಂತೆ ಮಾಡಿದರು.

**ಉತ್ಸವ ಮೂರ್ತಿ ಮತ್ತು ಕೌತುಕ ಮೂರ್ತಿಗಳನ್ನು ಅದಲು ಬದಲು ಮಾಡಿ ಪ್ರತಿಷ್ಠೆ ಮಾಡಿದುದು.**

ಹೀಗೆಯೇ, ಆಗ ಉತ್ಸವಮೂರ್ತಿಯಾಗಿ ಪೂಜಿಸಲ್ಪಡುತ್ತಿದ್ದ ವೇಂಕಟವಾಸಿ (ವೇಂಗಡತ್ತುರೈವನ್) ಎಂಬ ಶ್ರೀನಾಮವನ್ನು ಹೊಂದಿದ ದಿವ್ಯಮಂಗಳವಿಗ್ರಹದ ಅವತಾರದಿನದ ಮಹತ್ವವು, ದಿವ್ಯನಗರದ ಅಭಿವೃದ್ಧಿಗೂ, ಕನಕಧಾರಾ ಯೋಗದಲ್ಲಿ ಅವತರಿಸಿದ್ದ ಶ್ರೀನಿವಾಸನ (ಮೂಲದೇವರು) ದಿವ್ಯವಾದ ಐಶ್ವರ್ಯದ ಉತ್ತರೋತ್ತರ ಅಭಿವೃದ್ಧಿಗೆ ತಡೆಯಾಗಿರುವುದೆಂಬ ಪ್ರಸಿದ್ಧವಾದ ಐತಿಹ್ಯವನ್ನು (ಹಳೆಯದಾದ, ಹಿಂದಿನಿಂದಲೂ ಹೇಳಲ್ಪಟ್ಟು ಕೇಳಿಬರುವ ಕಥೆ) ಹಿರಿಯರ ಬಾಯಿಯಿಂದ ಕೇಳಿ, ಆಗ ಕೌತುಕ ಮೂರ್ತಿಯಾಗಿ (ನಿತ್ಯಾರ್ಚಾಮೂರ್ತಿಯಾಗಿ)

ಆರಾಧಿಸಲ್ಪಡುತ್ತಿದ್ದ ''ಮಲಿಯಪ್ಪ'' (ಶೈಲೇಶ) ಎಂಬ ದಿವ್ಯನಾಮವುಳ್ಳ ದಿವ್ಯ ಮಂಗಳವಿಗ್ರಹವನ್ನು ಉತ್ಸವಮೂರ್ತಿಯ ಸ್ಥಾನದಲ್ಲಿಯೂ, ಮುಂಚೆ ಹೇಳಿದ 'ವೇಂಕಟವಾಸಿ' ಮೂರ್ತಿಯನ್ನು ಕೌತುಕ ಮೂರ್ತಿಯ ಸ್ಥಾನದಲ್ಲಿಯೂ ಬದಲಾಯಿಸಿ ಸ್ಥಾಪಿಸಿ, ಪ್ರಾಣಧಾರಣ ಮುಂತಾದ ಪ್ರತಿಷ್ಠೆಯನ್ನು ಯಥಾವಿಧಿಯಾಗಿ ನೆರವೇರಿಸಿ, ಶಾಸ್ತ್ರೋಕ್ತವಾಗಿ ಅವರುಗಳಿಗೆ ಆರಾಧನೆಗಳನ್ನು ಶ್ರೀರಾಮಾನುಜ ಯತಿವರ್ಯರು ನಿರ್ವಹಿಸುವಂತೆ ಮಾಡಿದರು.

## ಅರ್ಚಕರುಗಳನ್ನು (ಪೂಜೆಮಾಡುವವರನ್ನು) ನಿಯಮಿಸಿದುದು.

ಇದರಂತೆಯೇ, ತಮ್ಮಲ್ಲಿ ಪಂಚಸಂಸ್ಕಾರ ((೧) ತೋಳುಗಳಲ್ಲಿ ಶಂಖ ಚಕ್ರಗಳನ್ನು ಒತ್ತಿಸಿಕೊಳ್ಳುವುದು (ತಪ್ತಮುದ್ರೆ) (೨) ದ್ವಾದಶ (ಹನ್ನೆರಡು) ಊರ್ಧ್ವಪುಂಡ್ರಗಳನ್ನು ಧರಿಸುವುದು (೩) ದಾಸ್ಯತೆಯನ್ನು ಸೂಚಿಸುವ ಹೆಸರನ್ನು ಇಟ್ಟುಕೊಳ್ಳುವುದು (೪) ಮಂತ್ರೋಪದೇಶವನ್ನು ಪಡೆಯುವುದು (೫) ಭಗವಂತನಿಗೆ ಆರಾಧನೆ ಮಾಡುವುದು)ವನ್ನು ಪಡೆದು, ತಮ್ಮ ಬಾಯಿಂದ ಭಗವಂತನನ್ನು ಶರಣವಾಗಿ ಪಡೆದುದರಿಂದ ಪರಮೈಕಾಂತಿಯಾದವರೂ (ಶ್ರೀಮನ್ನಾರಾಯಣನೊಬ್ಬನನ್ನೇ ತಾವು ಪಡೆಯುವ ಫಲವಾಗಿಯೂ ಮತ್ತು ಅದನ್ನು ಪಡೆಯುವ ಉಪಾಯವಾಗಿಯೂ ದೃಢ ನಿಶ್ಚಯಮಾಡಿದವರು) ಶ್ರೀವೈಖಾನಸಾಗಮನ ಪಾರಂಗತರೂ, ಬಿಂಬಾಧರರೆಂಬ ಹೆಸರನ್ನುಳ್ಳ ಭಾಗವತೋತ್ತಮರಾದ ಅರ್ಚಕರ (ಪೂಜೆಮಾಡುವವರ) ವಂಶದಲ್ಲಿ ಜನಿಸಿದವರುಗಳನ್ನು ಕೊಂಡೇ ಶ್ರೀವೇಂಕಟಾಚಲಪತಿಗೆ ನಿತ್ಯಾರಾಧನೆಗಳನ್ನು ನಡೆಸಿಕೊಂಡು ಬರಬೇಕೆಂದು ಶ್ರೀರಾಮಾನುಜರು ಕಟ್ಟಳೆ ಮಾಡಿದರು.

## ಶ್ರೀರಾಮಾನುಜ ಯತಿವರ್ಯರನ್ನು ಸಕಲರೂ ಸ್ತುತಿಸಿದುದು.

ಈ ರೀತಿ ಇಟ್ಟ ಕಟ್ಟಳೆಗಳನ್ನು ಹಾಗೆಯೇ ನೆರವೇರಿಸಬೇಕೆಂಬ ಸ್ಥಿರವಾದ ಮನಸ್ಸನ್ನುಳ್ಳವನೂ, ತಮ್ಮ ಮನದಂತೆಯೇ ನಂಬತಕ್ಕ ದಾಸನೂ (ಕಿಂಕರನೂ) ಆದ ಯಾದವರಾಜನ ಮೂಲಕ ತಮ್ಮ ಇಷ್ಟಾರ್ಥದಂತೆಯೇ ಎಲ್ಲಾವಿಧವಾದ ಕೈಂಕರ್ಯಗಳನ್ನೂ (ಸೇವಾರ್ಥಗಳನ್ನೂ) ನಡೆಸಬೇಕೆಂಬ ಒಪ್ಪಿಗೆಯನ್ನು ಪಡೆದ ಶ್ರೀರಾಮಾನುಜ ಮುನಿವರ್ಯರನ್ನು ಅವರು ನೆರವೇರಿಸಿದ ಸುಧಾರಣೆಗಳ ಕಾರಣವಾಗಿ, ಎಲ್ಲೆಯಿಲ್ಲದ ಸಂತೋಷವನ್ನು ಪಡೆದ ಸಾತ್ವಿಕರಾದ ಹಿರಿಯರೆಲ್ಲರೂ ಇವರು ಆದಿಶೇಷನೋ, ಸೇನೆಮುದಲಿಯಾರ್ ಎಂದು ಕರೆಯಲ್ಪಡುವ ವಿಷ್ವಕ್ಸೇನರೋ ಅಥವಾ ಶ್ರೀದೇವಿಯನಾಥನೋ ಎಂದು ಊಹಿಸಲ್ಪಡತಕ್ಕ

ಯತಿರಾಜರಿಗೆ ಮಂಗಳವುಂಟಾಗಲಿ. ಶುದ್ಧಾತ್ಮವುಳ್ಳ ಭಾಗವತರುಗಳಾದ ಶಿಷ್ಯರುಗಳಿಂದಲೂ, ಮನಸ್ಸಂತೋಷ ಪಡಿಸುವ ಪರಿಜನಗಳಿಂದಲೂ ತಮ್ಮ ನೈಜ ಅವತಾರವನ್ನು ಚೆನ್ನಾಗಿ ತಿಳಿದುಕೊಳ್ಳಲ್ಪಟ್ಟವರಾದ ಶ್ರೀರಾಮಾನುಜರಾದ ಯತಿರಾಜರಿಗೆ ಮಂಗಳವುಂಟಾಗಲಿ. ''ತಿರುವೇಂಗಡ''ವೆಂಬ ಶ್ರೀವೇಂಕಟಾಚಲ ದಿವ್ಯಸ್ಥಲವನ್ನು ಶೈವರುಗಳಿಂದ ಬಂದ ಆಪತ್ತಿನಿಂದ ಪಾರುಮಾಡಿದ ವಿಷ್ಣು ಭಕ್ತಾಗ್ರೇಸರರಾದ ಯತಿರಾಜರಿಗೆ ಮಂಗಳವುಂಟಾಗಲಿ, ಶ್ರೀವೇಂಕಟಾಚಲಾಧೀಶನಿಗೆ ಶಂಖ ಚಕ್ರಗಳನ್ನುಕೊಟ್ಟ ಸದಾಚಾರ್ಯರಾದ ಯತಿರಾಜರಿಗೆ ಮಂಗಳವು. ಕುದೃಷ್ಟಿ (ವೇದಗಳಿಗೆ ಅರ್ಥಹೇಳುವಲ್ಲಿ ಕೆಟ್ಟದೃಷ್ಟಿಯನ್ನಿಟ್ಟವರು) ಗಳ ವಂಚನೆಯಿಂದುಂಟಾದ ಉಪನಿಷತ್ತುಗಳ ಆಪತ್ತನ್ನು ಕಳೆದ ರಾಮಾನುಜರೆಂಬ ಯತಿರಾಜರಿಗೆ ಮಂಗಳವು. ಲೋಕದಲ್ಲಿ ಶ್ರೀಮದ್ವೈಷ್ಣವ ಮತವನ್ನು ಎಲ್ಲ ವಿಧದಲ್ಲಿಯೂ ಕಾಪಾಡುವ ವ್ರತವನ್ನು ಕೈಗೊಂಡ ಗುರುವಾದ ಯತಿರಾಜರಿಗೆ ಮಂಗಳವು. (ವೇದವ್ಯಾಸರು ರಚಿಸಿದ) ಪವಿತ್ರವಾದ ಬ್ರಹ್ಮಸೂತ್ರಕ್ಕೆ ಕುದೃಷ್ಟಿಗಳಿಂದೇರ್ಪಟ್ಟ ತೊಂದರೆಯನ್ನು ಬೇರೊಂದಿಗೆ ಕಿತ್ತುಹಾಕಿದ ಯತಿರಾಜರಿಗೆ ಮಂಗಳವು. ಎಲ್ಲ ಆಳ್ವಾರುಗಳೂ ಒಂದಾಗಿ ಸೇರಿ ಒಂದೇ ಮೂರ್ತಿಯಾದವರೂ ಕಲಿಯುಗದ ದೋಷಗಳನ್ನು ನಾಶಪಡಿಸಲು ಉದ್ಯುಕ್ತರಾದವರೂ, ಅಪಾರ ಕರುಣಾರಸ ಪ್ರವಾಹವುಳ್ಳವರೂ ಆದ ಯತಿರಾಜರಿಗೆ ಮಂಗಳವು. ಹಲವು ಅವತಾರಗಳನ್ನು ಮಾಡಿದರೂ ಈಡೇರದ ಶ್ರೀಮಹಾವಿಷ್ಣುವಿನ ಮತವನ್ನು (ಲೋಕದಲ್ಲೆಲ್ಲರೂ ತನ್ನನ್ನೇ (ವಿಷ್ಣುವನ್ನೇ) ಹೊಂದಿ ಬಾಳಿನ ಸಾರ್ಥಕವನ್ನು ಹೊಂದಬೇಕೆಂಬ ಕೋರಿಕೆ) ಕ್ಷಣಮಾತ್ರದಲ್ಲಿ ನೆರವೇರಿಸಿದ ಯತಿರಾಜರಿಗೆ ಮಂಗಳವು. ಪ್ರಪಂಚದಲ್ಲಿರುವ ಸಮಸ್ತಜನರೂ ವಂದಿಸತಕ್ಕ ಗುರುವಾದವರೂ, ಆದಿಶೇಷನ ಅವತಾರವಾದವರೂ ಆದ ಯತಿರಾಜರಿಗೆ ಮಂಗಳವುಂಟಾಗಲಿ - ಎಂದು ಸಂತೋಷದಿಂದಲೂ, ಭಕ್ತಿಯಿಂದಲೂ (ಮಂಗಳಾಶಾಸನವನ್ನು ಮಾಡಿದರು) ಸ್ತುತಿಸಿದರು.

ಮೇಲೂ, ಆ ರಾಮಾನುಜ ಮುನಿವರ್ಯರು - ''ಪಾಷಂಡಿಗಳು (ವೇದೋಕ್ತಿಗಳಂತೆ ನಡೆಯದವರು) ಎಂಬ ಮರಗಳ ಸಮೂಹಕ್ಕೆ ಕಾಡ್ಗಿಚ್ಚಿನಂತವರೂ, ಚಾರ್ವಾಕರು (ನಾಸ್ತಿಕರು) ಎಂಬ ಬೆಟ್ಟಗಳಿಗೆ ವಜ್ರಾಯುಧದಂತಿರುವವರೂ, ಬೌದ್ಧರೆಂಬ ಇರುಳನ್ನು ನಾಶಮಾಡುವಂಥಹ ಸೂರ್ಯನಂತಿರುವವರೂ, ಜೈನರುಗಳೆಂಬ ಆನೆಗಳಿಗೆ ಸಿಂಹಸ್ವರೂಪರೂ, ಮಾಯಾವಾದಿಗಳು (ಶಂಕರಾಚಾರ್ಯರ ಮತದವರು) ಎಂಬ ಹಾವುಗಳನು ಭಂಗಗೊಳಿಸುವುದರಲ್ಲಿ ಗರುಡನಂತಿರುವವರೂ, ಋಗ್ವೇದ, ಯಜುರ್ವೇದ,

ಸಾಮವೇದವೆಂಬ ಮೂರು ವೇದಗಳನ್ನು ತಿಳಿದವರುಗಳಿಗೆ ಶಿರೋಭೂಷಣದಂತಿರುವವರೂ, ಶ್ರೀರಂಗನಾಥನ ವಿಜಯ ಪತಾಕೆಯಂತಿರುವವರೂ ಆದ ಈ ಶ್ರೀರಾಮಾನುಜ ಯತಿವರ್ಯರು ಎಲ್ಲವಿಧವಾದ ಶ್ರೇಷ್ಠತೆಯನ್ನೂ ಹೊಂದಿರುವವರಾಗಿರುತ್ತಾರೆ. ಪಾಷಂಡರುಗಳ ಸಮೂಹವಾದ ಬೆಟ್ಟಗಳನ್ನು ಒಡೆಯುವುದರಲ್ಲಿ ವಜ್ರಾಯುಧದಂತಿರುವ, ವೈದಿಕ ವೇಷದಿಂದ ತಮ್ಮ ಬೌದ್ಧಮತವನ್ನು ಮರೆಸಿಕೊಂಡವರಾದ (ಪ್ರುಚ್ಛನ್ನ ಬೌದ್ಧರುಗಳು = ಶಂಕರರ ಮತವನ್ನು ಅವಲಂಬಿಸಿದ ಅದ್ವೈತಿಗಳು) ಸಮುದ್ರವನ್ನು ಕೆಲಕುವಂಥಹ ಮತ್ತಿನಂತಿರುವವರು (ಮಂತನದಂಡ), ವೇದಾಂತದ ಸಾರಾರ್ಥವನ್ನು ಸುಖವಾಗಿ ತಿಳಿದುಕೊಳ್ಳಲು ದೀಪದಂಡದಂತಿರುವ ರಾಮಾನುಜರ ತ್ರಿದಂಡಗಳು (ಯತಿಗಳು ಯಾವಾಗಲೂ ಧರಿಸಿರಬೇಕಾದ ಮೂರು ಕೋಲುಗಳು) ಅತ್ಯಂತ ಸುಂದರವಾಗಿ ವಿರಾಜಿಸುತ್ತಿವೆ. ಸಚ್ಚಾರಿತ್ರ್ಯವನ್ನು (ಉಪದೇಶದ ಮೂಲಕ) ಎತ್ತಿಹಿಡಿಯುವ (ಆಚಾರ್ಯರುಗಳು - ಉಪಾಧ್ಯಾಯರುಗಳು) ಉಯೋಗಿಸುವ) ಸಲುವಾಗಿರುವ ಬೆತ್ತದಂತೆಯೂ (ದಂಡ), ನಿಪುಣನ್ಯಾಯಮಾರ್ಗ (ಶಾಸ್ತ್ರಗಳು ತಿಳಿಸುವ ವಿಧಿಗಳು)ವನ್ನು ಸುಂದರಪಡಿಸಿದ ಕೇತುದಂಡವಾಗಿಯೂ, ಸದ್ವಿದ್ಯೆ ಎನ್ನುವ ಒಂದು ವಿಧವಾದ ಭಕ್ತಿಮಾರ್ಗಕ್ಕೆ ದೀಪದಂಡವಾಗಿಯೂ, (ಕಲಿಯುಗದಲ್ಲುಂಟಾದ) ಸಕಲವಿಧವಾದ ಅರ್ಥವಿಲ್ಲದ ವಾದಗಳನ್ನು ನಾಶಮಾಡುವ ಯಮದಂಡದಂತೆಯೂ, ತ್ರಯ್ಯಂತಗಳಿಗೆ (ಉಪನಿಷತ್ತಿನ ಸಿದ್ಧಾಂತಗಳಿಗೆ) ಆಲಂಬದಂಡ (ಊರುಗೋಲು) ದಂತೆಯೂ, ತ್ರಿಭುವನಗಳನ್ನು ಜಯಿಸಿ ತನ್ನ ನೆರಳಿನಿಂದ ಕಾಪಾಡುವ ತ್ರಿಭುವನ ವಿಜಯಚ್ಛತ್ರಕ್ಕೆ (ಕೊಡೆ) ಸುವರ್ಣದ ದಂಡದಂತೆಯೂ ಇರುವ ತ್ರಿದಂಡವನ್ನು ರಾಮಾನುಜರು ಧರಿಸುತ್ತಾರೆ. ವೇದವೆಂಬ ಮಹಿಳೆಗೆ ಮಂಗಳ ಸೂತ್ರವಾಗಿಯೂ, ಹನ್ನೆರಡು ಮಾರ್ಗಗಳಲ್ಲಿ (ವೈಕುಂಠಕ್ಕೆ ಹೋಗುವ ಮಾರ್ಗಗಳಾದ 'ಅರ್ಚಿಸ್' ಮುಂತಾದ ಲೋಕಗಳು ಹನ್ನೆರಡರಲ್ಲಿ) ಏರಿಹೋಗುವುದಕ್ಕೆ ಆಲಂಬ ಸೂತ್ರ (ಕೈಯಲ್ಲಿ ಹಿಡಿದುಕೊಳ್ಳುವ ಹಗ್ಗವಾಗಿಯೂ, ಸದ್ವಿದ್ಯೆಯೆಂಬ ಭಕ್ತಿಮಾರ್ಗ ಯಂತ್ರಕ್ಕೆ ಅದನ್ನು ನಡೆಸುವ ಸೂತ್ರವಾಗಿಯೂ, ಪರಬ್ರಹ್ಮವನ್ನು ಹಲವಾರು ಕಲ್ಯಾಣಗುಣಗಳಿಂದ ಕೂಡಿದುದಾಗಿ ಹೇಳುವ ವ್ಯಾಸಸೂತ್ರ (ಬ್ರಹ್ಮಸೂತ್ರ)ವನ್ನು ಜ್ಞಾನಿಗಳ ಬೌದ್ಧಿಕ ಸಂಪತ್ತಿಗೆ ಗುರುತಾದ ಮುತ್ತಿನಹಾರದಂತೆಯೂ, ಪಂಡಿತರಿಗೆ ತಿಳಿವನ್ನು ನೀಡುವ ವೇದಾಂತಸೂತ್ರವಾಗಿಯೂ, ಶಾಂತಿಯನ್ನೇ (ಇಂದ್ರಿಯ ನಿಗ್ರಹವನ್ನೇ) ಸಂಪತ್ತನ್ನಾಗಿಯುಳ್ಳ ಯೋಗಿಗಳ ಹೃದಯವೆಂಬ ತಾವರೆಯ ತಟಾಕ (ಕೊಳ)ಕ್ಕೆ (ಸೌಂದರ್ಯವನ್ನು ನೀಡುವ) ತಾವರೆಯ ದಂಟಿನಂತೆಯೂ, ಮುನಿಗಳನ್ನು

ಕಾಪಾಡುವ ಸೂತ್ರವಾಗಿಯೂ ಇರುವ ಯತಿರಾಜರ ಶ್ರೀವಕ್ಷಃಸ್ಥಳದಲ್ಲಿನ ಯಜ್ಞೋಪವೀತವು ಉತ್ಕೃಷ್ಟತಮವಾಗಿ ಕಂಡು ಬರುತ್ತದೆ. ಪಾಪಂಡರುಗಳಾದ ಸಾಗರವನ್ನು ಬತ್ತಿಸುವ ಬಡಬಾಗ್ನಿಯಂತೆಯೂ, ಶ್ರೀರಂಗರಾಜನ ಚರಣಗಳ ಅಡಿದಾವರೆಯಾಗಿಯೂ, ಶ್ರೀವೈಕುಂಠದಲ್ಲಿರುವ ಮಣಿಮಂಟಪಕ್ಕೆ ಹೋಗುವ ದಾರಿಯನ್ನು ತೋರಿಸುವವರಾಗಿಯೂ, ಎಲ್ಲಾ ಯತಿಗಳ (ಸನ್ಯಾಸಿಗಳ) ರಾಜರುಗಳಿಗೂ ರಾಜರಾದ ರಾಮಾನುಜರು ಎಲ್ಲರಿಗಿಂತಲೂ ಶ್ರೇಷ್ಠರಾಗಿ ಕಂಡುಬರುತ್ತಿದಾರೆ'' - ಎಂದಿವೇ ರೀತಿಯಾಗಿ ನಾಲ್ಕು ದಿಕ್ಕಿನಿಂದ ಎಲ್ಲ ಭಾಗವತರುಗಳಿಂದ ಬಿರುದುಗಳು ಘೋಷಿಸಲ್ಪಟ್ಟು ವೈದಿಕರುಗಳಿಗೆ ಚಕ್ರವರ್ತಿಯಾಗಿ (ಯತಿ ಸಾರ್ವಭೌಮರಾಗಿ) ಕಂಡು ಬಂದು ಪ್ರಕಾಶಿಸಿದರು.

## ಶ್ರೀವೇಂಕಟಾಚಲದ ತಪ್ಪಲಿನಲ್ಲಿ (ಕೆಳ ತಿರುಪತಿಯಲ್ಲಿ) ಆಳ್ವಾರುಗಳನ್ನು ಪ್ರತಿಷ್ಠೆಮಾಡಿದುದು.

ಈ ರೀತಿಯಾಗಿ ವೈಷ್ಣವಪ್ರಮುಖರುಗಳಿಂದ ಘೋಷಿಸಲ್ಪಟ್ಟ ಬಿರುದುಗಳನ್ನೂ, ಕೀರ್ತಿಯನ್ನೂ ಪಡೆದ ವೈದಿಕ ಸಾರ್ವಭೌಮರಾದ ರಾಮಾನುಜ ಮುನಿವರ್ಯರು, ''ಶುಕಮುನಿಗಳೇ ಮುಂತಾದಮುನಿಳು, ಭೃಗು ಮುಂತಾದ ತಪೋಧನರುಗಳೂ, ಪ್ರಹ್ಲಾದನೇ ಮುಂತಾದ ಪುಣ್ಯಪುರುಷರುಗಳೂ, ಅಂಬರೀಷರೇ ಮುಂತಾದ ಅರಸರುಗಳೂ ಶ್ರೀವೇಂಕಟಗಿರಿಯೆಂಬ ಆ ಉತ್ಕೃಷ್ಟವಾದ ಬೆಟ್ಟವನ್ನು ಮಹಾವಿಷ್ಣುವಿನ ಮತ್ತೊಂದು ದಿವ್ಯಮಂಗಳ ವಿಗ್ರಹ (ರೂಪ)ವಾಗಿಯೇ ನಿಶ್ಚೈಸಿ, ತಮ್ಮ ಕಾಲುಗಳಿಂದ ತುಳಿದು ಹತ್ತಲು ಅಂಜಿ ಆ ಬೆಟ್ಟದ ಅಕ್ಕಪಕ್ಕಗಳಲ್ಲಿಯೇ ವಾಸಿಸುತ್ತಿದ್ದೂ, ಅದರಿಂದ ಉತ್ಪತ್ತಿಯಾದ ನದಿಗಳು ಮತ್ತು ಜಲಪಾತಗಳಲ್ಲಿ ಮಿಂದು ತರ್ಪಣಾದಿಗಳನ್ನು ಮಾಡುತ್ತಿದ್ದೂ, ಜನಾರ್ಧನನ್ನು ಕಣ್ಣುಗಳಿಂದ ನೋಡಲು ಆಸೆಪಟ್ಟು ತಪಸ್ಸನ್ನು ಮಾಡುತ್ತಿದಾರೆ' -ಎಂದು ವಾಮನ ಪುರಾಣ ಭಾಗದ ಎರಡನೆಯ ಅಧ್ಯಾಯದ ೨೧ ಎಂಬ ಸಂಖ್ಯೆಯ ವಚನಗಳಿಂದ - ಪರತತ್ವವು ಇಂಥಹುದೆಂದೂ ಅಪರತತ್ತ್ವವು ಇಂಥಹುದೆಂದೂ ವಿವೇಚಿಸಿ ತಿಳಿಯುವವರುಗಳಲ್ಲಿ ಅಗ್ರಮಾನ್ಯರುಗಳಾದ ಶುಕಾದಿ ಪರಮಯೋಗಿಗಳೂ, ಪ್ರಹ್ಲಾದಾದಿ ಪರಮಭಕ್ತರುಗಳೂ, ಅಂಬರೀಷಾದಿ ಮಹಾಭಾಗವತ ರಾಜರ್ಷಿಗಳೂ ಶ್ರೀವೇಂಕಟಗಿರಿಯ ಬಗ್ಗೆಯೂ ಅದರಲ್ಲಿ ವಿರಾಜಮಾನನಾಗಿರುವ ಶ್ರೀವೇಂಕಟೇಶನ ಬಗ್ಗೆಯೂ ಸಮಾನವಾದ ಪ್ರತಿಪತ್ತಿ (ಮರ್ಯಾದೆ ಅಥವಾ ಭಕ್ತಿ)ಯನ್ನು ಕೊಂಡವರಾಗಿ ತಮ್ಮ ಪ್ರಾಕೃತವಾದ ಶರೀರಗಳಿಂದಲೂ, ಕಾಲುಗಳಿಂದಲೂ ಆ ಬೆಟ್ಟವನ್ನು ಸ್ಪರ್ಶಿಸಲಾಗದವರಾಗಿ ಆ ಬೆಟ್ಟದ ತಪ್ಪಲಲ್ಲಿಯೇ

ತಪಸ್ಸುಗಳನ್ನು ಮಾಡುತ್ತಿದ್ದರೆಂದು ಹೇಳಲ್ಪಟ್ಟಿರುವುದರಿಂದಲೂ, ಭಗವಂತನ ಸ್ವಾಭಾವಿಕವಾದ ನಿರ್ಹೇತುಕ ಕೃಪಾಸಮುದ್ರವು ತುಂಬಿ ಪ್ರವಾಹವಾಗಿ ಹರಿದು ಬಂದುದರಿಂದ ದಿವ್ಯಜ್ಞಾನವನ್ನುಳ್ಳ, ಅಜ್ಞಾನವು ನಿಶ್ಶೇಷವಾಗಿ ಹೋಗಿಸಲ್ಪಟ್ಟ ಆಳ್ವಾರುಗಳಲ್ಲಿ ಪರಾಂಕುಶಸೂರಿ (ನಮ್ಮಾಳ್ವಾರ್) ಶ್ರೀಸೂಕ್ತಿಯಾದ ದ್ರಾವಿಡ ಬ್ರಹ್ಮಸಂಹಿತೆ (ತಮಿಳುವೇದವೆಂದು ಹೆಸರು ಗೊಂಡ ತಿರುವಾಯ್ಮೊಳಿ ಸಾವಿರ ಪದ್ಯಗಳು) ಯಲ್ಲಿ ಮೂರನೆಯ ಶತಕದ ಮೂರನೆಯ ದಶಕದ ಏಳನೆಯ ಪಾಶುರ (ಪದ್ಯ)ದಲ್ಲಿ - ''ತಿರುವೇಂಗಡ ವೆಂಬ (ಶ್ರೀವೇಂಕಟಾಚಲವೆಂಬ) ಹಿರಿದಾದ ಬೆಟ್ಟವು ನಮಗೆ ಭಗವಂತನಂತೆಯೇ ಮೋಕ್ಷಸಾಮ್ರಾಜ್ಯವನ್ನು ಕೊಡಬಲ್ಲದು'' ಎಂದೂ, ಎಂಟನೆಯ ಪಾಶುರದಲ್ಲಿ - ''ಶ್ರೀವೇಂಕಟಗಿರಿಯನ್ನು ಮಾತ್ರವೇ ಆರಾಧಿಸಿದರೆ ಸಾಕು, ನಮ್ಮ ಸಮಸ್ತ ಪಾಪಗಳೂ ನಾಶಗೊಳ್ಳುತ್ತವೆ'' ಎಂದೂ, ಒಂಭತ್ತನೆಯ ಶತಕದ ಮೂರನೆಯ ದಶಕದ ಎಂಟನೇ ಪಾಶುರದಲ್ಲಿ- ''ಮೋಕ್ಷವನ್ನು ಕರುಣಿಸುವ ಶ್ರೀಮಹಾವಿಷ್ಣುವಿನ ಸ್ಥಿತಿಯನ್ನೇ ಹೊಂದಿದ ಶ್ರೀವೇಂಕಟಗಿರಿಯು ಶ್ರೇಷ್ಠವಾದ ಭೂಲೋಕದಲ್ಲಿದೆ. ದೇವತೆಗಳು ಆದರ ಬಳಿಸಾರಿ ಆರಾಧಿಸುತ್ತಾರೆ'' - ಎಂದು ಹೇಳಿರುವುದರಿಂದಲೂ, ಭಕ್ತಿಸಾರಸೂರಿ (ತಿರುಮಳಿಶೈ ಆಳ್ವಾರ್)ಯವರಿಂದ ರಚಿತವಾದ ''ನಾನ್ಮುಗನ್ ತಿರುವಂದಾದಿ'' ಎಂಬ ದ್ರಾವಿಡ ವೇದದಲ್ಲಿ ನಲವತ್ತೆರಡನೆಯ ಪಾಶುರದಲ್ಲಿ - ''ಅತ್ಯಂತ ಶ್ರೇಷ್ಠವಾದ ವೇಂಕಟಗಿರಿಯನ್ನು ಸೇರಿ ನಮಸ್ಕರಿಸಿದರೆ, ಅದು ತನ್ನದಾದ ಸ್ವಭಾವದಿಂದಲೇ ನಮ್ಮ ಪಾಪಗಳನ್ನು ನಿಶ್ಚಯವಾಗಿ ನೀಗಿಸಬಲ್ಲದು'' ಎಂದೂ, ನಲವತ್ತೈದನೆಯ ಪದ್ಯದಲ್ಲಿ - ''ಶೀತಲವಾದ ಝರಿಗಳಿಂದ ಕೂಡಿದ ಶ್ರೀವೇಂಕಟಗಿರಿಯೇ ವೈಕುಂಠವಾಸಿಗಳಿಗೂ, ಭೂಲೋಕ ವಾಸಿಗಳಿಗೂ ಪಡೆಯತಕ್ಕ ಪರಮಶ್ರೇಷ್ಠವಾದ ಸ್ಥಳವಾಗುತ್ತದೆ'' - ಎಂದೂ, ನಲವತ್ತೆಂಟನೆಯ ಪಾಶುರದಲ್ಲಿ - ''ವೇಂಕಟಗಿರಿಯೊಂದೇ ಪರಮಪದವಾಸಿಗಳು ಪಡೆಯತಕ್ಕ ಪ್ರದೇಶವು. ಅದೇ, ಅನುಭವಿಸಿಯೇ ತೀರಿಸಿಕೊಳ್ಳಬೇಕಾದ ಪಾಪದ ಫಲಗಳನ್ನೂ ರೋಗಗಳನ್ನೂ ತೀರಿಸಬಲ್ಲದು'' - ಎಂದೂ ಹೇಳಲ್ಪಟ್ಟಿರುವುದರಿಂದಲೂ, ಪರಕಾಲಸೂರಿ (ತಿರುಮಂಗೈಯಾಳ್ವಾರ್)ಯವರಿಂದ 'ಪೆರಿಯ ತಿರುಮೊಳಿ' ಎಂದುಕರೆಯುವ ದ್ರಾವಿಡ ವೇದದಲ್ಲಿ ಮೊದಲನೆಯ ಶತಕದ ಎಂಟನೆಯ ದಶಕದಲ್ಲಿ ಒಂಭತ್ತು ಪಾಶುರಗಳಲ್ಲಿ'' ಎಲೈ ಮನವೇ (ಹೃದಯವೇ)! ನೀನು ಶ್ರೀವೇಂಕಟಗಿರಿಯನ್ನು ಸೇರತಕ್ಕವನಾಗು''- ಎಂದು ಹೇಳಲ್ಪಟ್ಟಿರುವುದರಿಂದಲೂ, ಈ ರೀತಿಯೇ, ಹಲವೆಡೆಗಳಲ್ಲಿ ಇತರ ಆಳ್ವಾರ್‌ಗಳೆಲ್ಲರಿಂದಲೂ ಶ್ರೀವೇಂಕಟಗಿರಿಯೇ ಪ್ರಾಪ್ಯಸ್ಥಾನವೆಂದು ವಿಧಿಸಲ್ಪಟ್ಟಿರುವುದರಿಂದಲೂ, ಆ ಆಳ್ವಾರುಗಳೂ,

ತಿರುವೇಂಕಟಗಿರಿಯನ್ನೂ ಅಲ್ಲಿ ವಿರಾಜಮಾನನಾಗಿರುವ ಮಹಾವಿಷ್ಣುವನ್ನೂ ಒಂದೇ ಎಂದು ಭಾವಿಸಿ ಪ್ರಾಪ್ಯವಾಗಿಯೂ, ಪ್ರಾಪಕವಾಗಿಯೂ (ಪಡೆಯತಕ್ಕಫಲವಾಗಿಯೂ ಅದನ್ನು ಪಡೆಯಲು ಬೇಕಾದ ಮಾರ್ಗವಾಗಿಯೂ) ಭಾವಿಸಿ ತಮ್ಮ ದೇಹಗಳಿಂದಲೂ, ಪಾದಗಳಿಂದಲೂ ತಿರುಮಲೆಯನ್ನು ಮುಟ್ಟುವುದು ಸೂಕ್ತವಲ್ಲವೆಂದು ತಿಳಿದುಕೊಂಡೇ ಅದರ ಮೇಲೆ ಹತ್ತದೆಯೇ, ಬೆಟ್ಟದ ಅಡಿವಾರದಿಂದಲೇ ಭಗವಂತನನ್ನು ಕುರಿತು ಮಂಗಳಾಶಾಸನವನ್ನು ಮಾಡಿದರೆಂದು ತಿಳಿದು ಬರುವುದರಿಂದಲೂ, ಶ್ರೀವೇಂಕಟಗಿರಿಯ ಮೇಲೆ ಆಳ್ವಾರುಗಳ ವಿಗ್ರಹಗಳನ್ನು ಪ್ರತಿಷ್ಠೆಮಾಡಿದರೆ ಅವರುಗಳ ಮನಸ್ಸಿನಲ್ಲಿದ್ದ ಅಭಿಪ್ರಾಯಗಳಿಗೆ ವಿರುದ್ಧವಾಗುತ್ತದೆ ಎಂದು ಅಭಿಪ್ರಾಯಪಟ್ಟು, ಬೆಟ್ಟದ ತಪ್ಪಲಿನಲ್ಲಿಯೇ, ತಿರುಮಲೆಯನ್ನು ನೋಡುತ್ತಿರುವಂತೆಯೇ, ಪ್ರತ್ಯೇಕ ಪ್ರತ್ಯೇಕವಾದ ದೇವಸ್ಥಾನಗಳಲ್ಲಿ, ಮಂಗಳಾಶಾಸನ ಒಂದೇ ತಮಗೆ ಫಲವು ಎಂದು ಭಾವಿಸಿದ ಆ ಆಳ್ವಾರುಗಳನ್ನು ಶಾಸ್ತ್ರ ರೀತಿಯಾಗಿ, ಅರ್ಚಾಮೂರ್ತಿಗಳಾಗಿ ಪ್ರತಿಷ್ಠೆಯನ್ನು ಮಾಡಿದರು.

### ತಿರುಪತಿ (ಬೆಟ್ಟದ ಅಡಿವಾರ) ಯಲ್ಲಿ ಶ್ರೀಗೋವಿಂದರಾಜ ಭಗವಂತನನ್ನು ಪ್ರತಿಷ್ಠೆಮಾಡಿದುದು.

ಹೀಗೆಯೇ ಅದಕ್ಕೆ ಕೆಲದಿನಗಳಮುಂಚೆ, ಹಲವಾರು ಜನ್ಮಗಳಿಂದ ಶೇಖರಿಸಿದ ಪಾಪಗಳ ಸರಣಿಗಳಿಗೆ ವಶವಾಗಿ ತನ್ನ ಶೈವಮತದಲ್ಲಿ ಇಟ್ಟ ಅತ್ಯಂತ ಅಭಿಮಾನದಿಂದ (ದುರಭಿಮಾನದಿಂದ) ಕ್ರೂರವಾದ ಆಳ್ವಿಕೆಯನ್ನು ನಡೆಸುತ್ತಾ ತನ್ನ ನಾಡಾದ ಚೋಳದೇಶದಲ್ಲಿ, ಹಲವು ಕಡೆಗಳಲ್ಲಿ ವಿಷ್ಣುದೇವಾಲಯಗಳಿಗೆ ವಿನಾಶವನ್ನುಂಟುಮಾಡಿ, ಆ ಪಾಪಕೃತ್ಯಗಳ ಕಾರಣವಾಗಿ ಕುತ್ತಿಗೆಯಲ್ಲಿ (ಕಂಠ) ದೊಡ್ಡ ರಣವುಂಟಾಗಿ, ಹುಳುಗಳು ಉತ್ಪತ್ತಿಯಾಗಿ ಅವುಗಳ ತೀಕ್ಷ್ಣತೆಯಿಂದ ಮರಣವನ್ನುಹೊಂದಿ, ಅದರಿಂದಲೇ ''ಕ್ರಿಮಿಕಂಠ ಚೋಳ'' (ಕತ್ತಿನಲ್ಲಿ ಕ್ರಿಮಿಗಳನ್ನುಕೊಂಡ ಚೋಳನು) ಎಂದು ಪ್ರಸಿದ್ಧಿಪಡೆದು, ತನ್ನ ಸ್ವಾಭಾವಿಕವಾದ ಹೆಸರನ್ನು ಕೊಂಡು ಕರೆಯಲ್ಪಡಲಾರದ ಚೋಳರಾಜನೊಬ್ಬನಿಂದ ವಿಷ್ಣುವಿನ ಸ್ಥಳಗಳಿಗೆ ಅವನು ಗೈದ ಪಾಪಗಳ ಮಹಾಪ್ರಳಯವು ನಡೆದ ಸಂದರ್ಭದಲ್ಲಿ, ಕಾವೇರೀನದಿಯ ತೀರದಲ್ಲಿರುವುದೂ, ಕಣ್ವಮುನಿಗಳ ತಪಸ್ಸಿನ ಫಲದಿಂದ ಪ್ರತ್ಯಕ್ಷನಾದ ಗೋವಿಂದರಾಜ ಭಗವಂತನು ವಿರಾಜಮಾನನಾಗಿದ್ದ ''ಚಿತ್ರಕೂಟ'' (ಈಗಿನ ಚಿದಂಬರ) ವೆಂಬ ಪ್ರಸಿದ್ಧಿಯಾದ ದಿವ್ಯದೇಶಕ್ಕೂ ಮಹಾನ್ ಆಪತ್ತು ಬರಲು, ಅಲ್ಲಿಂದ ಅಂಜಿಕೆಯಿಂದ ಹೊರಬಂದ ಕೆಲವು ಶ್ರೀವೈಷ್ಣವರುಗಳು

ಗೋವಿಂದರಾಜನ ಉತ್ಸವ ಮೂರ್ತಿಯನ್ನು ಮಾತ್ರವೇ ಕಾಪಾಡಿ ತಂದು ಶ್ರೀವೇಂಕಟಾಚಲದ ತಪ್ಪಲಲ್ಲಿರುವ ತಿರುಪತಿಯಲ್ಲಿ ಪೂಜಿಸುತ್ತಾ ಬರುವರೆಂದೂ, ಅವರ ಮೂಲ ಮೂರ್ತಿಯಾಗಿ ಕ್ಷೀರಸಾಗರದಲ್ಲಿ ಆದಿಶೇಷನ ಹಾಸಿಗೆಯ ಮೇಲೆ ಪವಡಿಸಿರುವಂತೆ ರೂಪುಗೊಂಡ ಶ್ರೀ ಗೋವಿಂದ ರಾಜನೆಂಬ ದೇವನು ಸಮುದ್ರಕ್ಕೆ ಎಸೆಯಲ್ಪಟ್ಟನೆಂದೂ ತಿಳಿದ ಶ್ರೀಭಗವದ್ರಾಮಾನುಜರು, ಪುರಾಣ ಪ್ರಸಿದ್ಧಿಯೊಂದಿಗೆ, ಶ್ರೀಕುಲಶೇಖರಾಳ್ವಾರ್, ಶ್ರೀಪರಕಾಲ ಸೂರಿ (ತಿರುಮಂಗೈಯಾಳ್ವಾರ್) ಗಳಿಂದ ಮಂಗಳಾಶಾಸನ ಮಾಡಲ್ಪಟ್ಟ ಶ್ರೀ ಚಿತ್ರಕೂಟವೆಂಬ ದಿವ್ಯದೇಶವು ಈ ರೀತಿ ಬೇರು ಸಹಿತ ಕಿತ್ತುಹಾಕಿದ ರೀತಿ ಹಾಳಾಗಿ ಹೋದುದು ನ್ಯಾಯವಲ್ಲವಲ್ಲವೇ? ಎಂದು ಮನೋವ್ಯಾಕುಲಗೊಂಡು, ಕಣ್ವಮಹರ್ಷಿಯ ತಪಸ್ಸು, ಆಳ್ವಾರ್‌ಗಳು ಮಂಗಳಾಶಾಸನ ಮಾಡಿದುದೂ ಆದ ಒಂದು ದಿವ್ಯದೇಶದ ನಿರ್ಮೂಲವನ್ನು ಸಹಿಸಲಾರದವರಾಗಿ, ಅದೇ ದಿವ್ಯದೇಶದಲ್ಲೇ ಪುನಃ ಭಗವಂತನ ಆವಿರ್ಭಾವವು ಉಂಟಾಗಿಯೇ ಆಗುತ್ತದೆ. ಈಗ ಈ ಚಿತ್ರಕೂಟ ನಾಯಕನಾದ ಶ್ರೀಗೋವಿಂದರಾಜ ದೇವನನ್ನು ಇಲ್ಲಿಯೇ ಪ್ರತಿಷ್ಠೆಮಾಡಿಬಿಡೋಣವೆಂದು ಹೇಳಿ, ತಮಗೆ ಅತ್ಯಂತ ಪ್ರಿಯ ಶಿಷ್ಯನಾದ ಯಾದವರಾಜನನ್ನು ಕರೆಸಿ, ತಮ್ಮಮನಸ್ಸಿನಲ್ಲಿದ್ದುದೆಲ್ಲವನ್ನೂ ಹೇಳಿ, ಸಮುದ್ರದಲ್ಲಿ ಎಸೆಯಲ್ಪಟ್ಟವರೂ ಕ್ಷೀರಸಾಗರಶಯನನಾಗಿ ರೂಪುಗೊಂಡವನಾದ ಗೋವಿಂದರಾಜನೆಂಬ ಹೆಸರು ಗೊಂಡವನೂ, ದೇವಾಧಿದೇವನಾದ ಉತ್ಸವಮೂರ್ತಿಯಾದವನೂ, ಶ್ರೀ ಚಿತ್ರಕೂಟನಾಥನೂ ಆದ ಭಗವಂತನನ್ನು ರಹಸ್ಯವಾಗಿ ಆವಾಹಿಸಿ ತಂದು, ಶ್ರೀಗೋವಿಂದರಾಜ ದೇವಾಧಿದೇವರಿಬ್ಬರನ್ನೂ ಶ್ರೀವೇಂಕಟೇಶನಿಗೆ ಸಮಾನವಾಗಿ ಶ್ರೀ ವೈಖಾನಸಾಗಮ ಶಾಸ್ತ್ರವು ಹೇಳಿದ ರೀತಿಯಲ್ಲಿ (ವಿಧಿಗಳಂತೆ) ಯೇ ತಿರುಪತಿಯಲ್ಲಿ ದಕ್ಷಿಣದಲ್ಲಿರುವ ದೊಡ್ಡಕೆರೆಯ ಪಾರ್ಶ್ವದಲ್ಲಿ ಪ್ರತಿಷ್ಠೆಮಾಡಿಸಿದರು.

ಆ ಗೋವಿಂದರಾಜದೇವನು - ಶ್ರೀ ಕ್ಷೀರಸಾಗರನಾಥನೂ ಆ ಶ್ರೀದೇವಿ ಭೂದೇವಿಗಳಿಂದ ಸೇವೆಮಾಡಲ್ಪಟ್ಟ ಶ್ರೀ ಚರಣಗಳನ್ನುಳ್ಳವನಾಗಿ, ನಾಭಿಕಮಲದಲ್ಲಿರುವ ಚತುರ್ಮುಖ ಬ್ರಹ್ಮನಿಂದಲೂ, ಮಧುಕೈಟಭರೆಂಬ ಇಬ್ಬರು ಅಸುರರು (ಚರಣಗಳ ಬಳಿ) ನಿಂತಿರುವ ಚರಣಗಳನ್ನುಳ್ಳವರಾಗಿಯೂ ಆ ಅಸುರರನ್ನೋಡಿಸಲು ವಿಷಾಗ್ನಿ ಜ್ವಾಲಾಜಾಲಗಳನ್ನು ಉಗಿಯುತ್ತಲೂ, ನಿಟ್ಟುಸಿರನ್ನು ಬಿಡುತ್ತಲೂ ಇರುವ - 'ಆ' ಎಂದು ತೆರೆದ ಬಾಯಿಯೊಂದಿಗೆ ಕೂಡಿ ಮೇಲೆತ್ತಿರುವ ಫಣಾಮಂಡಲ (ಹೆಡೆ) ಗಳನ್ನು ಕೊಂಡ ಸರ್ಪವಾದ ಆದಿಶೇಷನೆಂಬ ಹಾಸಿಗೆಯಲ್ಲಿ ಪವಡಿಸಿದವನಾಗಿ ವಿಶಾಲವಾದ ಉದ್ದನೆಯ ಕಿರೀಟವೇ ಮೊದಲಾದ

ದಿವ್ಯಾಭರಣಗಳನ್ನು ಧರಿಸಲ್ಪಟ್ಟವನಾಗಿ, ನಾಲ್ಕು ತೋಳುಗಳೂ, ದಕ್ಷಿಣಕ್ಕೆ ಇರುವ ಶಿರಸ್ಸೂ, ಉತ್ತರಕ್ಕೆ ಇರುವ ಪಾದಗಳೂ, ಇರುವಂತೆ ಪ್ರತಿಷ್ಠೆಮಾಡಲ್ಪಟ್ಟನು.

ಈ ರೀತಿ ಶ್ರೀರಾಮಾನುಜ ಮುನಿವರ್ಯರಿಂದ ಆಜ್ಞಾಪಿಸಲ್ಪಟ್ಟ ನಾರಾಯಣಪುರವಾಸಿಯೂ ಆ ದೇಶದ ರಾಜನೂ ಆದ ಯಾದವರಾಜನು ತನ್ನ ಗುರುವಿನ ಅಪ್ಪಣೆಯಂತೆಯೇ ತಿರುಪತಿಯಲ್ಲಿ ದಕ್ಷಿಣಭಾಗದಲ್ಲಿರುವ ದೊಡ್ಡ ಕೆರೆಯ ಬಳಿಯಲ್ಲಿ ದೊಡ್ಡದಾದ ಆಲಯದಲ್ಲಿ ಮುಂಚೆ ತಿಳಿಸಿದ ರೂಪಗಳಿಂದ ಕೂಡಿದ ಶ್ರೀಗೋವಿಂದರಾಜ ದೇವನನ್ನು ಪ್ರತಿಷ್ಠಾಪಿಸಿ, ಆ ದೇವಾಲಯದ ನಾಲ್ಕು ಭಾಗಗಳಲ್ಲಿಯೂ ತನ್ನ ಗುರುವಿನ ಹೆಸರಿನಲ್ಲಿಯೇ 'ರಾಮಾನುಜ ಪುರ' ವೆಂದು ಪ್ರಸಿದ್ಧವಾದ - ಅವಾಂತರ (ಮಧ್ಯಮದಲ್ಲಿರುವ) ನಗರವನ್ನೂ ಸ್ಥಾಪಿಸಿ, ಈಗಾಗಲೇ ಶ್ರೀನಿವಾಸನ ಭೋಗಕ್ಕೋಸ್ಕರ ಹಾಸಿಗೆಯಾಗಿರುವ ಆದಿಶೇಷನ ಪಕ್ಕದಲ್ಲಿ ಸ್ಥಾಪಿಸಲ್ಪಟ್ಟು, ಅವನ ಕೋಪದಿಂದ ಅತ್ಯಂತ ತಾಪಗೊಂಡ ತಿರುಪತಿಯಲ್ಲಿ, ಮಧು ಕೈಟಭರುಗಳನ್ನು ಹೊಡೆದೋಡಿಸುವುದಕ್ಕಾಗಿ ವಿಷಾಗ್ನಿ ಜ್ವಾಲೆಗಳನ್ನು ಉಗುಳುತ್ತಿರುವ - ಶ್ರೀಗೋವಿಂದರಾಜನ, ಶಯನ ಹಾಸಿಗೆಯಾದ ತಿರುವನಂದಾಳ್ವಾನ್ (ಆದಿಶೇಷ)ನ ಕೋಪದಿಂದ ಮೇಲೂ ಅತ್ಯಂತವಾದ ಕೇಡು ಸಂಭವಿಸಬಹುದೆಂದು ಹೆದರಿ, ಆ ರಾಮಾನುಜ ಮುನಿವರ್ಯರ ಅನುಮತಿಯನ್ನು ಪಡೆದು, ಆ ತಿರುಪತಿಯ ಕೆಲವು ರಚನೆಗಳನ್ನು ಮಾರ್ಪಡಿಸಿಯೂ, ತಿರುವೇಂಕಟಗಿರಿಯ ತಪ್ಪಲಲ್ಲಿ ಆಳ್ವಾರುಗಳಿಗೆ ಏರ್ಪಡಿಸಿದ್ದ ಆಯಾಯಾ ದೇಗುಲಗಳನ್ನು - ಮುಂಚಿದ್ದ ರಚನೆಯಂತೆಯೇ (ಪ್ರಾಚೀನ ಸನ್ನಿವೇಶದಂತೆಯೇ) ರಾಮಾನುಜ ಪುರದ ನಡುವೆ ಕಟ್ಟಿಸಿಯೂ, ಆ ತಿರುಪತಿನಗರವನ್ನು ಆದಿಶೇಷನ ಕೋಪದಿಂದ ಪಾರುಮಾಡಲು, ಗರುಡಪಕ್ಷಿಯ ರಚನೆ (ತಲೆ, ರೆಕ್ಕೆಗಳು, ಕಾಲುಗಳು, ಬಾಲ ಪ್ರತ್ಯೇಕವಾಗಿರುವಂತೆ - ಗರುಡವ್ಯೂಹ) ಒಂದನ್ನು ತಿರುಪತಿಯ ಬೆಟ್ಟಕ್ಕೆ ಸ್ವಲ್ಪದೂರದಲ್ಲಿ ನಿರ್ಮಿಸಿದನು.

ಈ ವಿಧವಾಗಿ ತಾವು ಹೇಳಿದಂತೆಯೇ ಮಾಡುವವನೂ, ತಮ್ಮ ಮನಸ್ಸಂತೋಷಪಡಿಸುವ ಶಿಷ್ಯನೂ, ಶ್ರೀವೇಂಕಟೇಶನ ನಾಡಿನ ಅರಸನೂ, ನಾರಾಯಣಪುರವಾಸಿಯೂ ಆದ ಯಾದವರಾಜನು ತಮಗೆ ಅನುಕೂಲವಾಗಿರುವುದರಿಂದಲೂ, ತಮ್ಮ ಪ್ರಾರ್ಥನೆಯಂತೆಯೇ ಶೈವರುಗಳನ್ನು ಹೊಡೆದೋಡಿಸುವದಕ್ಕಾಗಿ, ಶಂಖ ಚಕ್ರಗಳು ಮುಂತಾದ ತಮಗೇ ಅಸಾಧಾರಣವಾದ ದಿವ್ಯಾಯುಧಗಳನ್ನು ಧರಿಸಿದ ಶ್ರೀವೇಂಕಟಾಚಲಾಧೀಶನು, ತಮ್ಮಿಂದ ಪ್ರತಿಷ್ಠೆಮಾಡಲ್ಪಟ್ಟ ಶ್ರೀಗೋವಿಂದರಾಜನು, ಇವರಿಬ್ಬರಲ್ಲಿ ಇರುವ ವಿಶೇಷ ಅಭಿಮಾನದಿಂದಲೂ ಭಗವದ್ರಾಮಾನುಜ ಮುನಿವರ್ಯರು ತಮಗೆ

ಶ್ರೀರಂಗದಲ್ಲಿ ವಾಸಮಾಡುವುದರಲ್ಲಿ ಅತ್ಯಂತ ಆಸೆಯಿದ್ದರೂ ಸಹ, ಶ್ರೀರಂಗಕ್ಕೆ ಹೋಗುತ್ತಲೂ ಮತ್ತು ರಿತುಪತಿಗೆ ಬರುತ್ತಲೂ, ನಡೆಸಿದ ಮೂರು-ನಾಲ್ಕು ಯಾತ್ರೆಗಳಲ್ಲಿ, ಶ್ರೀವೇಂಕಟಕ್ಕೆ ಸೇರಿದ ದಿವ್ಯದೇಶದಲ್ಲಿ ಆಗಾಗ್ಗೆ, ಆಯಾಯಾ ಕಾಲದೇಶಗಳಿಗೆ, ಹಳೆಯ ಐತಿಹ್ಯಗಳಿಗೆ ತಕ್ಕ ರೀತಿ ಹಲವಾರು ಅತಿಶಯವಾದ ಕೆಲಸಗಳನ್ನೇರ್ಪಡಿಸಿದರು.

ಆ ಯಾದವರಾಜನೂ ಭಗವದ್ಭಾಷ್ಯಕಾರರ (ರಾಮಾನುಜರ) ಶಿಷ್ಯನಾಗಿ ತನ್ನ ಆಚಾರ್ಯರ ಕಟ್ಟಳೆಗಳನ್ನು ನೆರವೇರಿಸುವುದೇ ತನಗೆ ಫಲವೆಂದು ತಿಳಿದು ಕೊಂಡವನಾಗಿ, ಅವರಿಂದ ಪ್ರತಿಷ್ಠಾಪಿಸಲ್ಪಟ್ಟ ಶ್ರೀಗೋವಿಂದರಾಜದೇವನಲ್ಲಿಯೂ ಅವರ (ರಾಮಾನುಜರ) ಹೆಸರಿನಿಂದ ಸೂಚಿಸಲ್ಪಟ್ಟ, ಶ್ರೀಗೋವಿಂದರಾಜನು ವಿರಾಜಮಾನನಾಗಿರುವ ರಾಮಾನುಜ ಪುರದಲ್ಲಿಯೂ, ತಾನಿಟ್ಟ ವಿಶೇಷಾಭಿಮಾನಕ್ಕೆ ಬದ್ಧನಾಗಿ, ಮಂಟಪ, ಗೋಪುರ, ಪ್ರಾಕಾರದ ಗೋಡೆಗಳು ಮುಂತಾದ ದೇವಸ್ಥಾನಕ್ಕೆ ಅಂಗವಾದುವುಗಳನ್ನೂ ಮತ್ತು ನಗರಕ್ಕೆ ಅಂಗವಾದ ರಾಜಬೀದಿ ಮುಂತಾದವುಗಳನ್ನೂ ರಚಿಸಿ, ಭಗವಂತನಿಗೆ ನಡೆಸಬೇಕಾದ ಉತ್ಸವ ವಿಶೇಷಗಳನ್ನು ನಡೆಸಿಕೊಂಡು ಬರುತ್ತಿದ್ದನು.

### ಶ್ರೀಗೋವಿಂದ ರಾಜನ ರೂಪರಚನೆ ಮುಂತಾದುವುಗಳು

ಶ್ರೀ ಹರಿವಂಶದ ಭವಿಷ್ಯಪರ್ವದ ಇನ್ನೂರ ಮೂರನೆಯ ಅಧ್ಯಾಯದಲ್ಲಿ ಪೌಷ್ಕರನ (ಬ್ರಹ್ಮನ) ಆವಿರ್ಭಾವವನ್ನು ವಿವರಿಸುವ ಘಟ್ಟದಲ್ಲಿ - ಮಹಾಸಾಗರದಲ್ಲಿ ಭಗವಾನ್ ನಾರಾಯಣನಿಗೆ ಪ್ರತಿರೋಧವಾಗಿ ಮಧುವೆಂಬ ಮಹಾಸುರನೊಬ್ಬನು ತಮೋಗುಣದಿಂದ ಉತ್ಪತ್ತಿಯಾದನು. ಅವನಿಗೆ ಸಹಾಯ ಮಾಡುವುದಕ್ಕಾಗಿ ಕೈಟಭನೆಂಬ ಮತ್ತೊಬ್ಬ ಅಸುರನು ರಜೋಗುಣದಿಂದ ಜನಿಸಿದನು, - ಎಂದಿವೇ ಮೊದಲಾಗಿ ಮಧುಕೈಟಭರುಗಳಿಂದ ನಮಸ್ಕರಿಸಲ್ಪಟ್ಟು ಬರುತ್ತಿರುವ ಸ್ಥಿತಿಯುಳ್ಳ, ನಂತರ ಉತ್ತಮರಾದ ಆ ಅಸುರರುಗಳು ಕೊಬ್ಬಿದವರಾಗಿ ಯುದ್ಧ ಮಾಡಲುದ್ಯುಕ್ತರಾಗಿ, ಕೋಪದಿಂದ ಕೆಂಪೇರಿದ ಕಣ್ಣಳನ್ನು ಹೊಂದಿ ಕ್ರೂರಿಗಳಾಗಿ, ಅಲ್ಲಿದ್ದ ಬ್ರಹ್ಮದೇವನನ್ನು ಕಂಡು, ''ಬಿಳಿಯ ಪೇಟವನ್ನು ಧರಿಸಿಕೊಂಡು ನಾಲ್ಕುಮುಖಗಳೊಡನೆ ಕೂಡಿ ತಾವರೆ ಹೂವಿನ ನಡುವೆ ಇರುವ ನೀನಾರು?'' - ಎಂದು ಕೇಳಿದುದೂ ಕಂಡುಬರುವುದರಿಂದ, ಚರುರ್ಮುಖನು ಕುಳಿತಿರುವ ಶ್ರೀನಾಭೀಕಮಲವಿರುವಿಕೆಯೂ ತಿಳಿಯಬರುವುದರಿಂದ, ಕ್ಷೀರಸಾಗರ ನಾಥನಾದ ಮಹಾವಿಷ್ಣುವಿಗೂ ಭೂದೇವಿಗೂ ನಡೆದ ಸಂಭಾಷಣೆಯಾಗಿ ರೂಪಿತಗೊಂಡಿರುವ ಶ್ರೀವಿಷ್ಣುಸ್ಮೃತಿಯ ಮೊದಲನೆಯ ಅಧ್ಯಾಯದಲ್ಲಿ - ಆದಿಶೇಷ ಸರ್ಪದ

ಹೆಡೆಗಳಲ್ಲಿರುವ ಮಣಿಗಳಿಂದಾದ ಅತಿ ಪ್ರಕಾಶಮಾನವಾದ ಬೆಳಕಿನಿಂದ 'ಇದು ಇಂಥಹುದು' ಎಂದು ಊಹಿಸಲರಿಯಲಾಗದ ಶ್ರೀಮುಖಾರವಿಂದವನ್ನುಳ್ಳವನೂ, ನೂರುಚಂದ್ರನಿಗೆ ಸಮಾನವಾದವನೂ, ಹದಿನಾರುಸಾವಿರ ಸೂರ್ಯರೊಂದಿಗೆ ಹೋಲಿಸಬಹುದಾದ ಕಾಂತಿಯನ್ನುಳ್ಳವನೂ, ಹಿರಣ್ಮಯವಾದ ವಸ್ತ್ರವನ್ನು ಧರಿಸಿದವನೂ, ನವರತ್ನಗಳಿಂದಲಂಕರಿಸಲ್ಪಟ್ಟವನೂ, ಅತ್ಯಂತ ಪ್ರಕಾಶಮಾನನಾದುದರಿಂದ ಕಣ್ಣಿಗಳಿಂದ ನೋಡಲಾಗದವನೂ, ಸೂರ್ಯನಂತೆ ಪ್ರಕಾಶಿಸುವ ಕಿರೀಟ ಮತ್ತು ಎರಡು ಕುಂಡಲಗಳನ್ನು ಧರಿಸಿದವನೂ, ಶ್ರೀಮಹಾಲಕ್ಷ್ಮಿಯ ಕೋಮಲವಾದ ಮೃದುವಾದ ಹಸ್ತಗಳಿಂದ (ಶಂಖ ಚಕ್ರಮುಂತಾದುವುಗಳಿಂದ) ಸುತ್ತಲೂ ಸೇವಿಸಲ್ಪಟ್ಟವನೂ, ಆಗಿದ್ದುಕೊಂಡು ಶೇಷಶಯನದಲ್ಲಿ ಪವಡಿಸಿರುವ ಪರಮಾತ್ಮನಾದ ಮಧುಸೂದನನನ್ನು ಭೂದೇವಿಯು ಕಂಡಳು. ಆ ಪುಂಡರೀಕಾಕ್ಷನನ್ನು ಅವಳು ನೋಡಿ ನಮಸ್ಕರಿಸಿದಳು - ಎಂದು ಕ್ಷೀರಸಾಗರನಾಥನ ದಿವ್ಯ ಮಂಗಳ ವಿಗ್ರಹದ ಅವಯವ ವಿಶೇಷಗಳ ಸೊಬಗನ್ನು ವರ್ಣಿಸಿರುವುದರಿಂದಲೂ, ಅದರಲ್ಲಿಯೇ, ತೊಂಭತ್ತೆಂಟನೆಯ ಅಧ್ಯಾಯದಲ್ಲಿ - ಈ ರೀತಿ ಹೇಳಲ್ಪಟ್ಟ ಭೂದೇವಿಯು ತನ್ನ ಶಿರಸ್ಸಿನ ಕೇಶರಾಶಿಗಳೂ, ಮತ್ತು ಮೊಣಕಾಲುಗಳೂ ನೆಲದಲ್ಲಿ ತಾಗುವಂತೆ ನಮಸ್ಕಾರ ಮಾಡಿ, 'ಭಗವಂತನೇ! ನಿಮ್ಮ ಪಕ್ಕದಲ್ಲಿ ಯಾವಾಗಲೂ ನಾಲ್ಕು ಮಹಾಭೂತಾಲಯಗಳು ಇವೆ (ಅಂದರೆ, ಶಂಖ, ಚಕ್ರ, ಗದೆ, ತಾವರೆಹೂ)ಇವುಗಳನ್ನು ಕ್ರಮವಾಗಿ ರೂಪವಾಗಿಯುಳ್ಳ ಆಕಾಶ, ವಾಯು, ತೇಜಸ್ಸು ಮತ್ತು ಜಲ ಇವುಗಳು ಇವೆ. ಭೂಮಿಯಾದ ನಾನೂ ಈ (ಹೆಣ್ಣಿನ) ರೂಪದಿಂದ ನಿಮ್ಮಚರಣಗಳ ನಡುವೆ ಇರಲು ಇಚ್ಛಿಸುತ್ತೇನೆ,' ಎಂದು ಹೇಳಿದಳು ಭಗವಂತನೂ, 'ಹಾಗೆಯೇ ಇರು' ಎಂದರು. ಭೂಮಿದೇವಿಯು ತನ್ನ ಕೋರಿಕೆಯು ನೆರವೇರಲ್ಪಟ್ಟುದುದರಿಂದ ಆ ರೀತಿಯೇ ಮಾಡಿದಳು - ಎಂದು ಹೇಳಲ್ಪಟ್ಟಿರುವುದರಿಂದಲೂ, ಬ್ರಹ್ಮಾಂಡ ಪುರಾಣದಲ್ಲಿ ಶ್ರೀವೇಂಕಟಾಚಲ ಮಾಹಾತ್ಮ್ಯದ ಮೊದಲನೆಯ ಅಧ್ಯಾಯದಲ್ಲಿ, ಕ್ಷೀರಾಬ್ಧಿನಾಥನನ್ನು ವರ್ಣಿಸುವ ಘಟ್ಟದಲ್ಲಿ - ಶ್ರೀದೇವಿ ಭೂದೇವಿಗಳಿಂದ ಪ್ರೀತಿಯಿಂದ ಒತ್ತಲ್ಪಟ್ಟ ಶ್ರೀಚರಣಗಳನ್ನುಳ್ಳವನು - ಎಂದು ಹೇಳಲ್ಪಟ್ಟಿರುವುದರಿಂದಲೂ, ಇಂಥಹ ಈ ರೀತಿಹೇಳಲ್ಪಟ್ಟ, ದಿವ್ಯಮಂಗಳ ವಿಗ್ರಹದ ರಚನೆಯೊಂದಿಗೆ ಕೂಡಿದವನಾದ ಗೋವಿಂದರಾಜನು ಪ್ರತಿಷ್ಠೆಮಾಡಲ್ಪಟ್ಟನು. - ಈ ರೀತಿಯೇ - ಆದಿಶೇಷನ ವಿಷಜ್ವಾಲೆಗಳಿಂದ ಮಧುಕೈಟಭರುಗಳು ದಹಿಸಲ್ಪಟ್ಟರು - ಎಂಬಿರುವ ವಚನಗಳಿಂದ, ರಾಮಾನುಜ ನಗರವೂ ಅದೇಕಾರಣದಿಂದ ದಹಿಸಲ್ಪಡಲು ಸಾಧ್ಯವೆಂಬ ಅಂಜಿಕೆಯಿಂದ (ಯಾದವರಾಜನಿಂದ) ಆ ನಗರವೂ ಗರುಡ ಪಕ್ಷಿಯ ಅವಯಗಳ

ರಚನೆಯಿಂದ ನಿರ್ಮಾಣಿಸಲ್ಪಟ್ಟಿತು.

**ಶ್ರೀಗೋವಿಂದರಾಜನೂ ಶ್ರೀವೇಂಕಟೇಶ್ವರನೂ ಒಬ್ಬರೇ ಎಂಬ ವಿಷಯ**

ಈ ರೀತಿಯಾಗಿ ಗೋವಿಂದರಾಜನ ಪ್ರತಿಷ್ಠೆಯನ್ನು ಮಾಡಿಸಿ ಭಗವದ್ರಾಮಾನುಜ ಮುನಿವರ್ಯರು ಯಾದವರಾಜನನ್ನು ಕುರಿತು, ''ಎಲೈ ಯಾದವರಾಜನೇ! ಗೋವಿಂದರಾಜನೂ ಮತ್ತು ಶ್ರೀವೇಂಕಟನಾಥನೂ ಕ್ಷೀರಾಬ್ಧಿನಾಥನ ಅವತಾರವಾದುದರಿಂದ ಇಬ್ಬರೂ ಒಬ್ಬರೇ ಎಂದು ತಿಳಿದುಕೋ. ಶ್ರೀವೇಂಕಟನಾಥನು ಕ್ಷೀರಾಬ್ಧಿನಾಥನ ಅವತಾರವೆಂಬುದು ಬ್ರಹ್ಮಾಂಡಪುರಾಣದ ಮೊದಲಲ್ಲಿರುವ ಎರಡು ಅಧ್ಯಾಯ್ಯಗಳಲ್ಲಿ ವಿಶದವಾಗಿದೆ. ಆದಿಶೇಷನ ಅವತಾರವಾದ ಶ್ರೀವೇಂಕಟಗಿರಿಯು ಹೇಗೆ ಭಗವಂತನ ದಿವ್ಯಮಂಗಳ ವಿಗ್ರಹವಾಗಿದೆಯೋ, ಅದೇ ರೀತಿ ಶ್ರೀವೇಂಕಟನಾಥನೂ ಶ್ರೀವೈಕುಂಠನಾಥನ ಅವತಾರವಾಗಿದ್ದರೂ ಅವನಲ್ಲಿ ಕ್ಷೀರಾಬ್ಧಿನಾಥನ ಅಂಶವು ಇರುವುದರಿಂದ ಕ್ಷೀರಾಬ್ಧಿನಾಥನಾಗಿಯೂ ಆ ದೇವನು ಇರಲು ಅರ್ಹನಾಗಿದ್ದಾನೆ. ಬ್ರಹ್ಮಾಂಡಪುರಾಣದ ಎರಡನೆಯ ಅಧ್ಯಾಯದಲ್ಲಿ - ಅಗಸ್ತ್ಯಾದಿ ಮುನಿಗಳು ಈ ಬೆಟ್ಟವು ವಿಷ್ಣುವಿನ ಮತ್ತೊಂದು ಶರೀರ ವಾಗಿರುವುದರಿಂದ ಇದನ್ನು ತಮ್ಮ ಕಾಲುಗಳಿಂದ ತುಳಿಯಲಿಲ್ಲ. ಸರ್ಪರಾಜನ ದೇಹವಾದ ಈ ಬೆಟ್ಟವು ನಾರಾಯಣನ ಅಂಶವಾಗಿ (ದೇಹವಾಗಿ)ಯೂ ಉಂಟಾಯಿತು. ಎಂದು ಹೇಳಲ್ಪಟ್ಟಿರುವುದನ್ನು ನೋಡಬಹುದು. ಆದುದರಿಂದ ಗೋವಿಂದರಾಜನಿಗೂ ಉತ್ಸವಾದಿಗಳನ್ನು ಒಂದೇ ವಿಧವಾಗಿಯೂ, ಒಬ್ಬರ ಉತ್ಸವವು ಇನ್ನೊಬ್ಬರ ಉತ್ಸವಕ್ಕೆ ತಡೆಯಾಗದಂತೆಯೂ, ಬೇರೆ ಬೇರೆ ಕಾಲಗಳಲ್ಲಿ ನಡೆಸುವವನಾಗು'' - ಎಂದು ಹೇಳಿದರು.

ಮೇಲೂ ಶ್ರೀವೈಕುಂಠನಾಥ ಕ್ಷೀರಾಬ್ಧಿನಾಥರುಗಳ ಅವತಾರಗಳಾದ ಶ್ರೀವೇಂಕಟನಾಥ ಗೋವಿಂದರಾಜರುಗಳು ಇಬ್ಬರೂ ಕ್ರಮವಾಗಿ ದೂರದಲ್ಲಿಯೂ ಸಮೀಪದಲ್ಲಿಯೂ ಇರುವವರಾಗಿದ್ದುಕೊಂಡು ತಮ್ಮಗಳ ಮೂಲವಾದ ದೇವರುಗಳ ಲೀಲೆಗಳನ್ನೇ ತೋರಿಸಿ ತಾವಿಬ್ಬರೂ ಒಬ್ಬರೇ ಎಂಬುದನ್ನು ತಿಳಿಸುತ್ತಿದಾರೆ, ಹೀಗೆ ಅತಿ ದೂರದಲ್ಲಿರುವ ಶ್ರೀವೈಕುಂಠನಾತನು ಕಷ್ಟಗಳಿಂದ ನೊಂದ ಬ್ರಹ್ಮನೇ ಮುಂತಾದವರುಗಳು, ತಾವು ಪಡುವ ದುಃಖವನ್ನು ಮೊರಯಿಡಲು ಆಗದವರಾಗಿ, ಅವರುಗಳಿಗೆ ಕಷ್ಟಸಾಧ್ಯವಾದುದರಿಂದ, ಅವರುಗಳ ಆರ್ತಧ್ವನಿಯನ್ನು ಕೇಳಿ ಅವರುಗಳನ್ನು ಕಾಪಾಡಲೂ ಅವರುಗಳು ತನ್ನನ್ನು ಶರಣುಹೋಗುವುದಕ್ಕಾಗಿಯೂ ತಾನೇ ಕ್ಷೀರಸಾಗರವನ್ನು ತಲುಪಿ(ಅಲ್ಲಿಶೇಷಶಯನನಾಗಿ) ಹತ್ತಿರದಲ್ಲಿದ್ದುಕೊಂಡು, ಅವರುಗಳು (ದೇವತೆಗಳು)ನೋಡಲು ಸುಲಭವಾಗಿ ವಿರಾಜಿಸುತ್ತಿದಾನೆ. ಅದೇ ರೀತಿ ಶ್ರೀವೇಂಕಟನಾಥನೂ ಅತ್ಯಂತ ಎತ್ತರವಾದ ವೇಂಕಟಗಿರಿಯ ಶಿಖರದಲ್ಲಿ

ಬಹಳದೂರದಲ್ಲಿದ್ದುಕೊಂಡು, ರೋಗ ರುಜಿನ ಗಳಿಂದ ಅಶಕ್ತರಾಗಿರುವ ತನ್ನನ್ನುದರ್ಶಿಸಲಾಗದವರಾಗಿ, ತಾನು ಅವರುಗಳಿಗೆ ಕಷ್ಟಸಾಧ್ಯವಾಗಿರುವುದರಿಂದ, ಅವರುಗಳು ಯಾವ ಕೊರತೆಯೂ ಇಲ್ಲದಂತೆ ತನ್ನನ್ನಾಶ್ರಯಿಸುವುದಕ್ಕಾಗಿ ತಿರುಪತಿಯಲ್ಲಿ ತಾನೇ ಬೇರೊಂದು ರೂಪವನ್ನು ತಾಳಿ, ಹತ್ತಿರದಲ್ಲಿದ್ದು, ಎಲ್ಲರಿಗೂ ಸುಲಭವಾಗಿ ವಿರಾಜಿಸುತ್ತಿದಾನೆ.

ಹಲವು ಹೇಳಿದರೇನು? ಶ್ರೀವೈಕುಂಠನಾಥನೂ ಕ್ಷೀರಾಬ್ಧಿನಾಥನೂ ಒಬ್ಬನೇ ಆಗಿರುವುದರಿಂದ ಅವರುಗಳ ಅವತಾರಗಳೇ ಆದ ಶ್ರೀವೇಂಕಟನಾಥನೂ ಶ್ರೀಗೋವಿಂದರಾಜನೂ ಒಬ್ಬರೇ ಎಂದು ತಿಳಿಯಲು ಅತಿ ಸುಲಭವಾಗುತ್ತದೆ. ಮೇಲೂ, - ಈ ರೀತಿ ಕಲಿಯುಗದಲ್ಲಿ ಕೆಲಕಾಲದ ಮುಂಚೆ ಕ್ಷೀರಾಬ್ಧಿನಾಥನ ಅವತಾರವಾದ ಶ್ರೀ ಚಿತ್ರಕೂಟ ತಿರುಪತಿಯ (ಚಿದಂಬರ) ದೇವನಾದ ಶ್ರೀಗೋವಿಂದರಾಜನು ಯಾವುದೋ ಒಂದು ಕಾರಣದಿಂದ ಶ್ರೀವೇಂಕಟಾಚಲದ ತಪ್ಪಲಲ್ಲಿ ವಿರಾಜಮಾನನಾಗಿದ್ದಾನೆ. ಆಗ ಶ್ರೀವೈಕುಂಟನಾಥ ಕ್ಷೀರಾಬ್ಧಿನಾಥರುಗಳ ಅವತಾರಗಳಾದ ಶ್ರೀವೇಂಕಟನಾಥ ಗೋವಿಂದರಾಜರುಗಳು ಕ್ರಮವಾಗಿ ತಿರುಪತಿ ಬೆಟ್ಟದ ಮೇಲೂ ಮತ್ತು ಕೆಳಗೂ ವಿರಾಜಮಾನರಾಗಿದ್ದು ತಿರುಪತಿಬೆಟ್ಟವನ್ನು ಹತ್ತುವ ಶಕ್ತಿಯಿಲ್ಲದೇ ರೋಗರುಜನಗಳಿಂದ ಕಂಗೆಟ್ಟಿರುವವರುಗಳಿಗೆ ಇಷ್ಟವಾಗಿಯೂ, ಸುಲಭವಾಗಿಯೂ, ಇದ್ದುಕೊಂಡು, ತಮಗೆ ಮೂಲವಾದವರುಗಳಾಗಿ ಬ್ರಹ್ಮಾದಿದೇವರುಗಳಿಗೆ ದೂರವೂ ಸಮೀಪವೂ ಕಾರಣವಾಗಿ ಶ್ರೀವೈಕುಂಠದಲ್ಲೂ ಹಾಲ್ಗಡಲಿನಲ್ಲಿಯೂ ಇದ್ದುಕೊಂಡು, ಶಕ್ಯವಾಗಿಯೂ ಸುಲಭವಾಗಿಯೂ ಇದ್ದುಕೊಂಡು 'ಶ್ರೀವೈಕುಂಠನಾಥನ ಮತ್ತು ಕ್ಷೀರಾಬ್ಧಿನಾಥನ ಲೀಲೆಗಳನ್ನೇ ತೋರಿಸುತ್ತಾ ಇದ್ದುಕೊಂಡು, ಆ ಇಬ್ಬರಂತೆಯೇ ಏಕವಸ್ತುಭಾವವನ್ನು ತೋರಿಸುತ್ತಾ ವಿರಾಜಿಸುವರು - ಎಂದು ಭವಿಷ್ಯದ ಸುದ್ದಿಯನ್ನು ತಿಳಿದೇ ಶ್ರೀಭಗವಾನ್ ವೇದವ್ಯಾಸರ ಶಿಷ್ಯರೂ, ತ್ರಿಕಾಲಜ್ಞಾನಿಯೂ, ಧರ್ಮಚರಿತ್ರೆಗಳೆಲ್ಲವನ್ನೂ ಚೆನ್ನಾಗಿ ಅರಿತವರಾದ ಸೂತಮಹಾಮುನಿಗಳು, ಶ್ರೀವೇಂಕಟಾಚಲ ಮಾಹಾತ್ಮವನ್ನು ಹೇಳುವ ಶ್ರೀವರಾಹಪುರಾಣದ ಮೊದಲ ಭಾಗದಲ್ಲಿ ಇಪ್ಪತ್ತೊಂಭತ್ತನೆಯ ಅಧ್ಯಾಯದ ೬೧ನೇ ವಚನದಲ್ಲಿ ಶ್ರೀವೇಂಕಟೇಶಾಷ್ಟೋತ್ತರ ಶತನಾಮಾವಳಿಯಲ್ಲಿ - ಗೋವಿಂದನಾದ ನಿನಗೆ ಯಾವಾಗಲೂ ನಮಸ್ಕಾರವು. ಶ್ರೀನಿವಾಸನಾದ ನಿನಗೆ ನಮಸ್ಕಾರವು'' ಎಂದು ಓದಿ ಹೇಳಿ ಅದರ ಮೂಲಕವಾಗಿ ಶ್ರೀನಿವಾಸನಿಗೂ ಗೋವಿಂದರಾಜನಿಗೂ ಏಕವಸ್ತುಭಾವವನ್ನು ತಿಳಿಸಿದರು. ಆದುದರಿಂದ ಶ್ರೀ ಕ್ಷೀರಸಾಗರವೇ ಶ್ರೀದೇವಿಯ ಅವತಾರಸ್ಥಳವಾದುದರಿಂದ ತಿರುಪ್ಪತಿ (ತಿರು ಎಂದರೆ ಶ್ರೀ, ಪತಿ =ಸ್ಥಳ) ಎಂಬ

ಹೆಸರಿನಿಂದ ಸೂಚಿಸಲ್ಪಟ್ಟ ನಗರದ ರೂಪವನ್ನು ಹೊಂದಿದೆ. (ಅಂದರೆ ಕ್ಷೀರಾಬ್ಧಿಯೇ ತಿರುಪತಿಯಾಗಿ ಆವಿರ್ಭವಿಸಿದೆ ಎಂದುಕೊಳ್ಳಬಹುದು). ಶ್ರೀ ವೈಕುಂಠವೇ ಸ್ವಲ್ಪ ಅಕ್ಷರ ಬದಲಾವಣೆಯನ್ನು ಹೊಂದಿ ಶ್ರೀವೇಂಕಟವೆಂಬ ಹೆಸರಿನಿಂದ ಸೂಚಿಸಲ್ಪಟ್ಟ ಬೆಟ್ಟದ ರೂಪವನ್ನು ಕೊಂಡಿದೆ. ಆ ಎರಡು ಪ್ರದೇಶಗಳಲ್ಲಿ ವಿರಾಜಮಾನರಾಗಿರುವ ಗೋವಿಂದರಾಜನೂ, ಶ್ರೀವೇಂಕಟನಾಥನೂ ಕ್ರಮವಾಗಿ ಕ್ಷೀರಾಬ್ಧಿನಾಥನೂ ಶ್ರೀವೈಕುಂಠನಾಥನೇ ಆಗುತ್ತಾರೆ. ಅವರಿಬ್ಬರೂ ಒಬ್ಬರೇ ಎಂದು ಧೃಢವಾಗಿ ತಿಳಿದು ಪರಿಪೂರ್ಣವಾದ ಭಾವನೆಯಿಂದ ಕೂಡಿ ನೀನು ಅವರುಗಳಿಗೆ ಸಮಾನವಾಗಿಯೇ ಉತ್ಸವಾದಿಗಳನ್ನು ತಡೆಯಿಲ್ಲದೇ ಬೇರೆ ಬೇರೆ ಕಾಲಗಳಲ್ಲಿ ಚೆನ್ನಾಗಿ ನಡೆಸಿಕೊಂಡು ಬರುವವನಾಗು'' - ಎಂದು ಯಾದವರಾಜನಿಗೆ ಕಟ್ಟಳೆಯಿಟ್ಟರು.

## ಶ್ರೀಗೋವಿಂದ ರಾಜನೂ ಮತ್ತು ಶ್ರೀವೇಂಕಟೇಶನೂ ಒಬ್ಬರೇ ಎಂಬುದಕ್ಕೆ ಆಧಾರವಾದ ಒಂದು ಕಥೆಯೂ, ರಾಮಾನುಜಾಚಾರ್ಯರ ಏರ್ಪಾಡೂ.

ಇದಾದ ನಂತರ ಯಾದವರಾಜನು ರಾಮಾನುಜಾಚಾರ್ಯರ ಕಟ್ಟಳೆಯಂತೆ ಶ್ರೀಗೋವಿಂದರಾಜನ ಆರಾಧನೆ, ಉತ್ಸವಾದಿಗಳನ್ನು ನಡೆಸಿಕೊಂಡು ಬರುವ ಕಾಲದಲ್ಲಿ, ಶ್ರೀಗೋವಿಂದರಾಜನೂ ಫಲಾಪೇಕ್ಷಕರಾಗಿ ಪ್ರಾರ್ಥಿಸುವವರುಗಳಿಗೆ ಬೇಕಾದ ದೃಷ್ಟಾದೃಷ್ಟ ಸಕಲವಿಧ ಫಲಗಳನ್ನೂ ನೀಡುತ್ತಲೂ ಪ್ರಸಿದ್ಧಿ ಹೊಂದಿರುವ ಸಮಯದಲ್ಲಿ, ಮಕ್ಕಳ (ಸಂತಾನ) ಭಾಗ್ಯವನ್ನು ನೀಡಬೇಕೆಂದು ಕೋರಲು ಶ್ರೀವೆಂಕಟೇಶನನ್ನು ದರ್ಶಿಸಲು ಕುಟುಂಬ ಸಮೇತರಾಗಿ ಕಾಶಿರಾಜನು ಬರಲು, ಆ ದೇವನು ''ದೇಹಿಮೆ ದದಾಮಿತೇ'' (ನನಗೆ ಒಂದನ್ನು ಕೊಡು. ನಾನು ನಿನಗೆ ಒಂದನ್ನು ಕೊಡುತ್ತೇನೆ) ಎಂದು ವೇದದಲ್ಲಿ ಪ್ರಸಿದ್ಧವಾದುದೂ, ಅಧಿಕವಾಗಿ ಇತರ ದೇವತೆಗಳ ಮೂಲಕವಾಗಿಯೇ ತನ್ನಿಂದ ನೆರವೇರಿಸಲ್ಪಟ್ಟು ಬರುವುದಾದ ಲೀಲೆಯನ್ನು ತನ್ನದೇ ಎಂದೂ, ತನ್ನ ಸಂಕಲ್ಪದಿಂದಲೇ ಇತರ ದೇವತೆಗಳಲ್ಲಿ ಇದೆಯೆಂದೂ, ಲೋಕದ ಜನರುಗಳಿಗೆ ತಿಳಿಸುವುದಕ್ಕಾಗಿ, ತಾನೂ ಇತರ ದೇವತೆಗಳೋಪಾದಿಯಲ್ಲಿ, ಕಾಶಿರಾಜನ ಪಟ್ಟಮಹಿಷಿಯ ಕನಸಿನಲ್ಲಿ ಬಂದು ''ನಿನಗೆ ಸಂತಾನವಾಗುವಂತೆ ವರ ನೀಡುತ್ತೇನೆ, ನೀನು ನಿನ್ನ ಮೂಗಿನಲ್ಲಿ ತೊಟ್ಟಿರುವ ಮಣಿಯನ್ನು ನನಗೆ ಕೊಡು,'' ಎಂದು ಯಾಚಿಸಲು, ''ತಂದೆಯೇ! ನಾನು ನನ್ನ ಪತಿಗೆ ವಶಪಟ್ಟವಳಾಗಿದ್ದೇನೆ (ಅಧೀನಳಾದವನಾಗಿದ್ದೇನೆ). ನನ್ನ ಪತಿಯು ಒಪ್ಪಿದಲ್ಲಿ ಕೊಡುತ್ತೇನೆ.'' ಎಂದು ಆ ಅರಸಿಯು ಉತ್ತರ ಹೇಳಲು, ''ಹಾಗಾದರೆ, ನನ್ನ ಅಣ್ಣಂದಿರಾದ ಶ್ರೀ ಗೋವಿಂದರಾಜ ಭಗವಂತನಿಗೆ ನಾನೂ ವಶಪಟ್ಟಿರುತ್ತೇನೆ.

ಅವರು ಒಪ್ಪಿದರೆ ಮಾತ್ರ ಸಂತಾನಭಾಗ್ಯವುಂಟಾಗಲು ವರವನ್ನು ನೀಡುತ್ತೇನೆ. ಇಲ್ಲದಿದ್ದರೆ ಇಲ್ಲ.'' ಎಂದು ಪ್ರತ್ಯುತ್ತರವನ್ನು ನೀಡಿ, ಅದರ ಮೂಲಕ ಶ್ರೀವೇಂಕಟನಾಥನು - ಈಗ ಶ್ರೀರಾಮಾನುಜ ಮುನಿವರ್ಯರಿಂದ ನಿಶ್ಚಯಿಸಲ್ಪಟ್ಟಿರುವ - ಗೋವಿಂದರಾಜನಿಗೂ ತನಗೂ, ಏಕವಸ್ತುಭಾವವನ್ನು ಮುಂಚೆಯೇ ಪ್ರಕಟಿಸಿದನು - ಎಂಬ ಈ ಕಥೆಯನ್ನು ಕೇಳಿದ ಭಗವದ್ರಾಮಾನುಜರು, ಹೇಗೆ ಒಂದು ದೇವಾಲಯದಲ್ಲಿ ಪಂಚ ಬೇರಂಗ (ಐದು ಮೂರ್ತಿ)ಗಳಿಗೆ, ಒಂದನ್ನೇ ಮೂಲವನ್ನಾಗಿ ಹೊಂದಿರುವುದರಿಂದ ಹೇಗೆ ಏಕವಸ್ತುಭಾವವು ಇದೆಯೋ ಅದೇ ರೀತಿಯೇ ತಮ್ಮಿಂದ ಪ್ರತಿಷ್ಠಾಪಿಸಲ್ಪಟ್ಟ ಶ್ರೀಗೋವಿಂದರಾಜನಿಗೆ ಹೊಂದಾಣಿಕೆ ಅಥವಾ ಏಕವಸ್ತುಭಾವವು ಶ್ರೀನಿವಾಸನಿಂದ ಒಪ್ಪಿಕೊಳ್ಳಲ್ಪಟ್ಟಿತು. ಆದುದರಿಂದ ಇನ್ನು ಶ್ರೀವೇಂಕಟನಾಥ, ಶ್ರೀಗೋವಿಂದರಾಜ ಇಬ್ಬರಿಗೂ ಆರಾಧನೆ ಮಾಡುವ ಸಮಯದಲ್ಲಿ ವೇದ, ಸ್ಮೃತಿ, ಇತಿಹಾಸ, ಪುರಾಣ ಮುಂತಾದುವುಗಳನ್ನು ಪಠಿಸುವ ಸಂದರ್ಭದಲ್ಲಿ ಶ್ರೀವೇಂಕಟಾಚಲ ಮಾಹಾತ್ಮ್ಯದ ಭಾಗ ಮತ್ತು ಚಿತ್ರಕೂಟ ಮಾಹಾತ್ಮ್ಯದ ಭಾಗಗಳನ್ನು ಎರಡೂ ದೇವಸ್ಥಾನಗಳಲ್ಲಿಯೂ ಓದಬೇಕು. ನಿತ್ಯಾನುಸಂಧೇಯ (ದಿನವೂ ಓದತಕ್ಕ) ದಿವ್ಯಪ್ರಬಂಧಗಳನ್ನು ಓದುವಾಗಲೂ ಶ್ರೀವೇಂಕಟೇಶ ಮತ್ತು ಶ್ರೀಗೋವಿಂದರಾಜ ಇವರಿಬ್ಬರ ಬಗೆಗಿನ ದಿವ್ಯಪ್ರಬಂಧ ಭಾಗಗಳನ್ನು ಎರಡು ದೇವಸ್ಥಾನಗಳಲ್ಲಿಯೂ ವಾಚಿಸಬೇಕು. ತಿರುಮಲೆ - ತಿರುಪತಿ ಎಂಬ ಎರಡೂ ಸ್ಥಳಗಳಲ್ಲೂ ವಾಸಿಸುವ ಶ್ರೀವೈಷ್ಣವರುಗಳು ಈ ಎರಡು ದಿವ್ಯದೇಶಗಳನ್ನು ಒಂದಾಗಿಯೇ ಭಾವಿಸಿ ತಮ್ಮ ತಮ್ಮ ಮನೆಗಳಲ್ಲಿ ವಿವಾಹ ಮುಂತಾದ ಉತ್ಸವಾದಿಗಳನ್ನು ನಡೆಸುವಾಗ ತಮ್ಮ ತಮ್ಮ ದೇವಿಯರು (ಪತ್ನಿಯರು) ಗಳೊಂದಿಗೆ ಕೂಡಿದ ಶ್ರೀವೇಂಕಟೇಶ ಮತ್ತು ಶ್ರೀ ಗೋವಿಂದರಾಜ ಎಂಬ ಇಬ್ಬರಿಗೂ ಸಂಭಾವನೆಯನ್ನು ಮಾಡತಕ್ಕದ್ದು. ಗದ್ಯ (ವಚನ ರೂಪದ ಸ್ತೋತ್ರ), ಬಿರುದು ಮುಂತಾದುವುಗಳನ್ನೋದುವಾಗ ಈ ಇಬ್ಬರು ದೇವರುಗಳ ನಾಮಧೇಯಗಳನ್ನು ಹೇಳಿ ಇಬ್ಬರಿಗೂ ಗದ್ಯ, ಬಿರುದುಗಳನ್ನು ಓದಬೇಕು ಎಂಬ ನಿಯಮವನ್ನು ಆಚರಿಬೇಕೆಂದು ಸೂಚಿಸಿದರು.

### ಶ್ರೀಗೋವಿಂದರಾಜನ ದೇವಸ್ಥಾನದಲ್ಲಿ (ಆಂಡಾಳ್) ಗೋದಾದೇವಿಯ ಪ್ರತಿಷ್ಠೆ

ಈ ರೀತಿ ಶ್ರೀರಾಮಾನುಜಾಚಾರ್ಯರು ಶ್ರೀನಿವಾಸದೇವನ, ಎಲ್ಲೆಯಿಲ್ಲದ, ಕುಂದಿಲ್ಲದ ಸಂಪತ್ತಿನ ಅಭಿವೃದ್ಧಿಗಾಗಿ ಅವನ ವಕ್ಷಃಸ್ಥಳದಲ್ಲಿರುವ ಸ್ವರ್ಣಕಂಠಿಯಲ್ಲಿ ವ್ಯೂಹಲಕ್ಷ್ಮಿಯನ್ನು ತಾವು ಪ್ರತಿಷ್ಠೆ ಮಾಡಿಸಿದಂತೆಯೇ ಶ್ರೀಗೋವಿಂದರಾಜನ ಸಂಪತ್ತೂ ಸಹ ಕುಂದಿಲ್ಲದಂತೆ ಮೇಲಿಂದ ಮೇಲೆ ಅಭಿವೃದ್ಧಿ ಹೊಂದುವುದಕ್ಕಾಗಿ

ಒಬ್ಬ ಲಕ್ಷ್ಮೀ(ದೇವಿ)ಯನ್ನು ಪ್ರತಿಷ್ಠೆ ಮಾಡಿಸಬೇಕೆಂದು ಯೋಚಿಸಿ, ''ಪಟ್ಟರ್ ಪಿರಾಕ್'' ಎಂದು ಹೆಸರುವಾಸಿಯಾದ 'ಪೆರಿಯಾಳ್ವಾರ್' ಎಂದು ಕರೆಯಲ್ಪಡುವ ಶ್ರೀ ಭಟ್ಟನಾಥರ ಕನ್ನಿಕೆಯಾದವಳೂ, ಗರ್ಭವಾಸ ಮಾಡದೆಯೇ ತುಳಸೀವನದಲ್ಲಿ ಉತ್ಪತ್ತಿಯಾದವಳೂ, ಭೂದೇವಿಯ ಅಂಶವನ್ನುಳ್ಳವಳೂ ಆದ ಶ್ರೀಗೋದಾದೇವಿ (ಆಂಡಾಳ್) ಯನ್ನು, ಯಾವ ಕೊರತೆಯೂ ಇಲ್ಲದಂತೆ, ಎಲ್ಲಾ ಲಕ್ಷಣಗಳನ್ನೂ ಉಳ್ಳವಳಾಗಿರುವಂತೆ, ಶ್ರೀಗೋವಿಂದರಾಜನ ಎದುರಿನಲ್ಲಿ ಪ್ರಕಾಶಿಸುತ್ತಾ, ಸೌಂದರ್ಯದಿಂದ ಕೂಡಿದ ಮನೋಜ್ಞವಾದ ಸೌಗಂಧಿಕ ಪುಷ್ಪಗಳಿಂದ ಅಲಂಕರಿಸಲ್ಪಟ್ಟ ವಾಮಹಸ್ತವನ್ನು ಹೊಂದಿದವಳಾಗಿಯೂ, ಆ ಭಗವಂತನ ನಿರವಧಿಕ ಸಂಪತ್ತನ್ನು ಮತ್ತೂ ಹೆಚ್ಚಿಸುವ ವ್ಯೂಹಲಕ್ಷ್ಮೀಯ ಯಂತ್ರಮಂತ್ರಗಳನ್ನು ಶಾಸ್ತ್ರೋಕ್ತವಾಗಿ ಬರೆದು ಅಲಂಕರಿಸಲ್ಪಟ್ಟ ದಿವ್ಯಸಿಂಹಾಸನದಲ್ಲಿ ಆಸೀನಳಾಗಿಯೂ, ಶ್ರೀಗೋವಿಂದರಾಜನ ಬಲಪಾರ್ಶ್ವದಲ್ಲಿ ಬೇರೊಂದು ದೇಗುಲದಲ್ಲಿ ಪ್ರತ್ಯೇಕವಾದ ಗುಡಿಯುಳ್ಳ ಪ್ರಧಾನವಾದ ಲಕ್ಷ್ಮೀದೇವಿಯಂತೆಯೇ ಪ್ರತಿಷ್ಠೆಯನ್ನು ಮಾಡಿಸಿದರು.

### ಉತ್ಸವ ವಿಶೇಷಾದಿಗಳು

ನಂತರ ಶ್ರೀರಾಮಾನುಜರ ಅಪ್ಪಣೆಯನ್ನು ಪಡೆದು ಯಾದವರಾಜನು ಶ್ರೀಗೋವಿಂದರಾಜನಿಗೆ ಪುರಾಣಪ್ರಸಿದ್ಧವಾದ ಮಿಥುನ (ತಮಿಳು ಆನಿ) ಮಾಸ ಬ್ರಹ್ಮೋತ್ಸವವನ್ನೂ, ಆಂಡಾಳ್ (ಗೋದಾದೇವಿ) ಗೆ ಕಟಕ (ತಮಿಳು-ಆಡಿ) ಮಾಸದ ತಿರುನಕ್ಷತ್ರೋತ್ಸವವನ್ನೂ (ತಿರುವಾಡಿಪ್ಪೂರಂ), ಧನುರ್ಮಾಸ (ಮಾರ್ಗಳಿ)ದ ನೀರಾಟ್ಟ ಉತ್ಸವವನ್ನೂ ಅತ್ಯಂತ ಉತ್ಸಾಹದಿಂದ ನಡೆಸಿದನು. ಮೇಲೂ, ಆತನು ಆಂಡಾಳೊಂದಿಗೆ ಕೂಡಿದ ಗೋವಿಂದರಾಜನಿಗೆ ಯಾವಾಗಲೂ ಮಹಾಭಾಗವತರುಗಳ ಮಂಗಳಾಶಾಸನದಿಂದ ತಡೆಯಿಲ್ಲದ ಸಂಪತ್ತಿನ ಅಭಿವೃದ್ಧಿಯನ್ನುಂಟುಮಾಡಲು ಇಚ್ಛಿಸಿ, ಶ್ರೀರಾಮಾನುಜರ ಅನುಮತಿಯನ್ನು ಪಡೆದು, ಶ್ರೀಗೋವಿಂದರಾಜನು ವಿರಾಜಮಾನನಾಗಿರುವ ರಾಮಾನುಜಪುರದಲ್ಲಿ ನಾಲ್ಕು ದಿಕ್ಕುಗಳಲ್ಲಿರುವ ಬಲಿ ಪ್ರದಾನಮಾಡುವ ರಾಜಬೀದಿಗಳಲ್ಲಿ ಹಲವಾರು ಮಾಳಿಗೆ (ಮನೆಗಳು) ಗಳನ್ನು ಕಟ್ಟಿಸಿ, ತಿರುಮಲೆ ನಂಬಿ (ಶ್ರೀಶೈಲಪೂರ್ಣರು), ತಿರುಮಲೆ ಅನಂದಾಳ್ವಾನ್ (ಶ್ರೀಅನಂತಾರ್ಯರು) ಮುಂತಾದ ಮಹಾಭಾಗವತರುಗಳಿಗೆ ಅವುಗಳನ್ನು ಸಮರ್ಪಿಸಿ ಅವರುಗಳನ್ನು ಅಲ್ಲಿ ವಾಸಿಸುವಂತೆ ಮಾಡಿದನು.

ಹಾಗೆಯೇ ''ನಗರದ ವಾಯವ್ಯದಿಕ್ಕಿನಲ್ಲಿ ಮಟ್ಟವಾದ ಪ್ರದೇಶದಲ್ಲಿ, ನಗರ ಪ್ರಜೆಗಳ ಅಭಿವೃದ್ಧಿಗಾಗಿ ಅಂಗಡಿ ಬೀದಿಯನ್ನು ನಿರ್ಮಿಸಬೇಕು'' ಎಂಬ ಶಾಸ್ತ್ರದಂತೆ

ಶ್ರೀರಾಮಾನುಜಪುರದ ವಾಯವ್ಯದಿಕ್ಕಿನ ಪ್ರದೇಶದಲ್ಲಿ ನಗರವಾಸಿಗಳಿಗೆ ಅನುಕೂಲವಾಗುವಂತೆ ಅಂಗಡಿ ಬೀದಿಯನ್ನೂ, "ಭಗವಂತನಿಗೆ ಪೂರ್ವದಿಕ್ಕಿನಲ್ಲಿ ಧಾನ್ಯ ಸಂಗ್ರಹಮಾಡುವ ಕಣಜವನ್ನು ಏರ್ಪಡಿಸಬೇಕು" ಎಂಬ ಶಾಸ್ತ್ರೋಕ್ತಿಯಂತೆ ಗೋವಿಂದರಾಜ ದೇವನ ದೇವಾಲಯದ ಮುಂಭಾಗದಲ್ಲಿ ಭಗವಂತನಿಗೆ ಧಾನ್ಯ ಕಣಜವನ್ನೂ ನಿರ್ಮಾಣ ಮಾಡಿಸಿದನು.

ಶ್ರೀಅನಂತಾರ್ಯರು ಕಟ್ಟಿದ ಶ್ರೀವೇಂಕಟಾಚಲ ಇತಿಹಾಸಮಾಲೆಯಲ್ಲಿ ನಾಲ್ಕನೆಯ ಪುಷ್ಪಗುಚ್ಛವು ಸಂಪೂರ್ಣವಾಯಿತು.

ಶ್ರೀಮತೇ ರಾಮಾನುಜಾಯ ನಮಃ



## ಐದನೆಯ ಪುಷ್ಪಗುಚ್ಛವು

### ಹೂಭಾವಿ (ಪೂಲಭಾವಿ)

ಇನ್ನು ಶ್ರೀವೆಂಕಟಗಿರಿಯಲ್ಲಿ ಶ್ರೀನಿವಾಸನ ದೇವಾಲಯದಲ್ಲಿ ಇರುವ ಹೂಭಾವಿ ಮುಂತಾದುವುಗಳ ಚರಿತ್ರೆಯು ಹೇಳಲ್ಪಡುತ್ತದೆ. ಹಿಂದೆ - ಒಂದು ಕಾಲದಲ್ಲಿ ಅರಸರುಗಳಲ್ಲಿ ಉತ್ತಮನಾದ ತೊಂಡಮಾನ್ ಚಕ್ರವರ್ತಿಯು ದಿನವೂ ಗುಹಾದ್ವಾರದ ಮೂಲಕ ಬಂದು ಭಗವಂತನನ್ನು ಸೇವೆಮಾಡಿ ಉನ್ನತವಾದ ಪ್ರಾಪಂಚಿಕ ಭೋಗಗಳನ್ನನುಭವಿಸಿಕೊಂಡು ಧರ್ಮದಿಂದ ರಾಜ್ಯವನ್ನು ಆಳುತ್ತಾ ಬಂದನು - ಎಂದು ಭೂಗೋಳ ಉಪಾಖ್ಯಾನವೆಂದು ಕರೆಯಲ್ಪಟ್ಟ ವರಾಹ ಪುರಾಣದ ಎರಡನೆಯ ಭಾಗದಲ್ಲಿ ಹತ್ತನೆಯ ಅಧ್ಯಾಯದಲ್ಲಿ ಹೇಳಲ್ಪಟ್ಟಂತೆಯೇ ತೊಂಡಮಾನ್ ಚಕ್ರವರ್ತಿಯು, ಕಲಿಯುಗದ ಪ್ರಾರಂಭದಲ್ಲಿ ಶ್ರೀವೆಂಕಟನಾಥನ ಚರಣಾರವಿಂದಗಳಲ್ಲಿ ಪರಿಪೂರ್ಣವಾದ ಭಕ್ತಿ ಸಂಪನ್ನನಾಗಿದ್ದು, ಆ ಭಗವಂತನ ಕಟಾಕ್ಷ ಮತ್ತು ಕೃಪೆ (ಅನುಗ್ರಹ) ಯಿಂದ ರಾಜ್ಯವನ್ನು ಧರ್ಮಮಾರ್ಗದಿಂದ ಆಳುತ್ತಾ ಬಂದು, ಸಕಲವಿಧವಾದ ಭೋಗಗಳನ್ನು ಅನುಭವಿಸುತ್ತಾ ಬಂದು, ಭಗವಂತನೇ ತೋರಿಸಿದ ಶ್ರೀ ನರಸಿಂಹ ಗುಹೆಯ ದಾರಿಯಲ್ಲಿ ನಡೆದು ಪ್ರತಿನಿತ್ಯವೂ ಶ್ರೀನಿವಾಸನನ್ನು ದರ್ಶನ ಮಾಡಿ ಸೇವೆ ಸಲ್ಲಿಸುತ್ತಿದ್ದನು.

''ಆಗ ಒಂದು ದಿನ ಆ ಅರಸನು ಶ್ರೀನಿವಾಸದೇವನ ಸನ್ನಿಧಿಯಲ್ಲಿ ಇರುವ ಸಂದರ್ಭದಲ್ಲಿ ಪ್ರಬಲರಾದ ಶತ್ರುಗಳು ಅವನ ನಗರವನ್ನು ಮುತ್ತಿಗೆ ಹಾಕಿದರು.'' ಎಂದು ಬ್ರಹ್ಮಾಂಡ ಪುರಾಣದ ಏಳನೆಯ ಅಧ್ಯಾಯದಲ್ಲಿ ಹೇಳಿರುವಂತೆ ಸಾಮಂತ ರಾಜರ ಗುಂಪುಗಳು ತೊಂಡಮಾನ್ ಚಕ್ರವರ್ತಿಯನ್ನು ಸೋಲಿಸುವುದಕ್ಕಾಗಿ ಅವನ ಪಟ್ಟಣವನ್ನು ಸುತ್ತುವರೆದು ಮುತ್ತಿಗೆ ಇಟ್ಟರು. ಆಗ ಆ ಅರಸನು ಅವರುಗಳನ್ನು ಎದುರಿಸಿ, ತಮ್ಮ ನಾಡನ್ನು ಕುರಿತು ಓಡುತ್ತಿರುವ ಅವರುಗಳನ್ನು ಹಿಂಬಾಲಿಸಿ

ಓಡಿಸುತ್ತಾ ಘೋರಯುದ್ಧವನ್ನು ಮಾಡುತ್ತಾ ಬಲಹೀನನಾಗಿ, ಒಟ್ಟಾಗಿ ಮೇಲೆ ಬಿದ್ದ ಆ ಸಾಮಂತರ ಗುಂಪುಗಳೆಲ್ಲವುಗಳಿಂದಲೂ ಸೋಲಿಸಲ್ಪಟ್ಟವನಾಗಿ, ಭಯದಿಂದ ತನ್ನ ನಾಡಿಗೆ ಹಿಂತಿರುಗಿ, ಶ್ರೀನರಸಿಂಹ ಗುಹೆಯನ್ನು ಸೇರಿ ಆ ಭಗವಂತನನ್ನು ನಮಸ್ಕರಿಸಿ, ಸ್ತುತಿಸಿ, ಆ ಗುಹೆಯ ಮೂಲಕವೇ, (ಶ್ರೀವೆಂಕಟಾಚಲದಲ್ಲಿ) ಪತ್ನಿಯರೊಂದಿಗೆ ಕೂಡಿ ಕ್ರೀಡಿಸುತ್ತಾ ಆನಂದದಿಂದಿದ್ದ ಶ್ರೀನಿವಾಸನನ್ನು ಅವೇಳೆಯಲ್ಲಿ ಸಮೀಪಿಸಿದನು.

ನಂತರ ಭಗವಂತನೊಡನೆ ಕ್ರೀಡಿಸುತ್ತಿದ್ದು, ಅಕಾಲದಲ್ಲಿ ಅಂತಃಪುರಕ್ಕೆ ಬಂದ ಪುರುಷನನ್ನು ಕಂಡು ಲಜ್ಜೆಯಿಂದ ಒಡನೆ ಆ ಜಾಗವನ್ನು ಬಿಟ್ಟು ಓಡುವುದನ್ನೇ ಮುಖ್ಯಗುರಿಯಾಗಿಸಿಕೊಂಡ ಪತ್ನಿಯರಿಬ್ಬರಲ್ಲಿ ಒಬ್ಬಳಾದ ಶ್ರೀದೇವಿಯು ಶ್ರೀನಿವಾಸನ ವಕ್ಷಸ್ಥಳದಲ್ಲಿ ಹೊಕ್ಕು ವೈಜಯಂತೀ ಎಂಬ ವನಮಾಲೆಯ ಮರೆಯಲ್ಲಿ ಅಂತರ್ಧಾನಳಾದಳು. ಮತ್ತೊಬ್ಬಳಾದ ಭೂದೇವಿಯೋ ಎಂದರೆ ಹಿಂದೆ ಒಂದು ಕಾಲದಲ್ಲಿ ಶ್ರೀರಂಗದಾಸ ನಂದನವನಕ್ಕಾಗಿ ತೋಡಿಸಲ್ಪಟ್ಟು ಪಕ್ಕದಲ್ಲಿದ್ದ ಭಾವಿಯಲ್ಲಿ ಧುಮುಕಿ ಅಂತರ್ಧಾನಳಾದಳು - ಎಂದು ಪಂಡಿತರು, ಪಾಮರರೇ ಮೊದಲಾಗಿ ವ್ಯತ್ಯಾಸವಿಲ್ಲದೇ ಎಲ್ಲರೂ ಈ ಕಥೆಯನ್ನು ಹಿರಿಯರುಗಳು ಹೇಳಿರುವುದಾಗಿ ಕೇಳಿ ಶ್ರೀರಾಮಾನುಜಮುನಿವರ್ಯರು- ಹಿಂದಿನ ಕಲ್ಪದಲ್ಲಿಯೂ, ಅಕಾಲದಲ್ಲಿ ಬಂದ ತೊಂಡಮಾನ್ ರಾಜನಿಂದ ಲಜ್ಜೆಗೊಳಗಾದ ಶ್ರೀನಿವಾಸನ ಪತ್ನಿಯರು ಓಡಿಹೋದರು ಎಂಬ ಈ ವೃತ್ತಾಂತವು ಪುರಾಣದಲ್ಲಿ ಕಂಡುಬರುತ್ತದೆ. ಆದರೆ ಗಂಗಾಸ್ನಾನ ಮಾಡಲು ಉದ್ಯುಕ್ತನಾಗಿ ಹೊರಟ ವೀರಶರ್ಮನೆಂಬ ದಕ್ಷಿಣದೇಶದ ಬ್ರಾಹ್ಮಣನ ಚರಿತ್ರೆಯನ್ನು ಹೇಳುವ ಸಂದರ್ಭದಲ್ಲಿ ಈ ವೃತ್ತಾಂತವು ಕಾಣಬರುತ್ತದೆ. ಈಗಲೋ ಎಂದರೆ ಆ ತೊಂಡಮಾನ್ ಅರಸನಿಗೆ ಹಗೆಗಳಿಂದುಂಟಾದ ಸೋಲನ್ನು ಹೇಳುವಾಗ ಈ ವೃತ್ತಾಂತವು ಹೇಳಲ್ಪಟ್ಟಿದೆ. ವರಾಹಪುರಾಣದ ಎರಡನೆಯ ಭಾಗ ಹತ್ತನೆಯ ಅಧ್ಯಾಯದಲ್ಲಿ ವೀರಶರ್ಮನೆಂಬ ವಿಪ್ರನೊಬ್ಬನ ಚರಿತ್ರೆಯಲ್ಲಿ- ವೀರಶರ್ಮನೆಂಬ ವೇದಿಯನು (ವಿಪ್ರನು) ಗಂಗಾನದಿಯಲ್ಲಿ ಸ್ನಾನಮಾಡಿ ಬರಲು ಉದ್ಯುಕ್ತನಾದಾಗ ಗರ್ಭವತಿಯಾಗಿದ್ದ ತನ್ನ ಹೆಂಡತಿಯನ್ನು, ತಾನು ಹಿಂದಿರುಗಿ ಬಂದು ಕರೆದುಕೊಂಡು ಹೋಗುವವರೆಗೆ ಕಾಪಾಡಿಕೊಂಡು ಬರುವಂತೆ ತೊಂಡಮಾನ್ ಚಕ್ರವರ್ತಿಯ ಬಳಿ ಭದ್ರವಾಗಿರುವಂತೆ ಬಿಟ್ಟು, ಗಂಗಾ ನದಿಯಲ್ಲಿ ನೀರಾಡಿದ ನಂತರ ಹಿಂದಿರುಗಿ ಚಕ್ರವರ್ತಿಯನ್ನು ತನ್ನ ಹೆಂಡತಿಯ ಕ್ಷೇಮದ ಬಗ್ಗೆ ವಿಚಾರಿಸಲು, ಆ ರಾಜನು ಆ ವಿಪ್ರನನ್ನು ಅಲ್ಲಿಯೇ ಇರುವಂತೆ ಹೇಳಿ, ಅಂತಃಪುರವನ್ನು ಸೇರಿ, ಅಲ್ಲಿ ಆಕೆಯು ಮೃತಪಟ್ಟಿರುವುದನ್ನು ಕಂಡು, ಆ ವಿಪ್ರನೊಂದಿಗೆ ಹೇಳದೆಯೇ ಗುಹೆಯ ಬಳಿ ಬಂದು ಶ್ರೀನರಸಿಂಹನನ್ನು ನಮಸ್ಕರಿಸಿ ಆ ಗುಹೆಯ ಮಾರ್ಗವಾಗಿ ತಿರುಮಲೆಗೆ ಹೋಗಿ ಶ್ರೀದೇವಿ ಭೂದೇವಿಯರೊಡನೆ

ಕೂಡಿದ ಶ್ರೀನಿವಾಸನನ್ನು ದರ್ಶನ ಮಾಡಿದನು. ಇದ್ದಕ್ಕಿದ್ದಂತೆ ಬಂದ ಆತನನ್ನು ಕಂಡು ದೇವಿಯರಿಬ್ಬರೂ ಬಚ್ಚಿಟ್ಟುಕೊಂಡರು. ಬಂದು ನಮಸ್ಕರಿಸಿದ ರಾಜನನ್ನು ''ಏಕೆ ಅವೇಳೆಯಲ್ಲಿ ಬಂದೆ?'' ಎಂದು ಭಗವಂತನು ಕೇಳಲು, ಅರಸನು ಆ ದೇವನನ್ನು ನಮಸ್ಕರಿಸಿ ಭೀತಿಯಿಂದ ವಿಪ್ರನ ಪತ್ನಿಯು ಮರಣ ಹೊಂದಿದ ವಿಷಯವನ್ನು ತಿಳಿಸಿದನು - ಎಂದು ಹೇಳಲ್ಪಟ್ಟಿದೆ. ಬೇರೆ ಬೇರೆ ಕಲ್ಪಗಳಲ್ಲಿ ಬೇರೆ ಬೇರೆ ವಿಧವಾಗಿ ನಡೆದಿರುವುದೇ ಕಾರಣವೆಂದು ತಿಳಿದುಕೊಳ್ಳುವುದು ಸೂಕ್ತವೆನಿಸುತ್ತದೆ.

ಮೇಲೂ, ಶ್ರೀದೇವಿಯ ತೀರ್ಥವಾದ ಪುರಾಣದಿಂದ ತಿಳಿಯಲ್ಪಡುವ ಈ ಭಾವಿಯಲ್ಲಿ ಭೂದೇವಿಯು ಪ್ರವೇಶಿಸಿದುದೂ ಸಹ ಸೂಕ್ತವಾದುದೇ ಆದುದರಿಂದ, ಕ್ರೀಡೆಗೆ ತಡೆಯಾದ ಅರಸನ ಬರುವಿಕೆಯನ್ನು ಕಂಡು ಅಂಜಿ ಓಡಿ ಈ ಭಾವಿಯಲ್ಲಿ ಪ್ರವೇಶಿಸಿದ ಈ ಭೂದೇವಿಗೆ ಯಾವ ತಡೆಯೊಂದೂ ಇಲ್ಲದೆ, ಭಗವಂತನನ್ನು ಕೂಡಿ ಕ್ರೀಡಿಸಲು ಅವನೊಂದಿಗೆ ಇವಳನ್ನೂ ಪ್ರತಿಷ್ಠೆ ಮಾಡಿಸುವುದು ಸೂಕ್ತವೆಂದು ಭಾವಿಸಿ, ಆ ಹಳೆಯ ಕಥೆಯನ್ನು ಪರಿಪಾಲನೆ ಮಾಡುವ ದೃಷ್ಟಿಯಿಂದ, ಆ ರಂಗದಾಸನ ಭಾವಿಯಲ್ಲಿ ಭೂದೇವಿಯನ್ನೂ, ಆ ತೀರ್ಥಕ್ಕೆ ಅಧಿಪತಿಯಾಗುವ ಅಧಿಕಾರವಿರುವ ಭಗವಂತನನ್ನೂ ಅರ್ಚಾರೂಪವಾಗಿ ಸ್ಥಾಪನೆ ಮಾಡಿ ಪ್ರತಿಷ್ಠೆ ಮಾಡಿಸಿ, ಪ್ರತಿನಿತ್ಯವೂ ಆ ಭಾವಿಯಲ್ಲಿ ಆ ದಿವ್ಯದಂಪತಿಗಳಿಬ್ಬರಿಗೂ ಆರಾಧನೆಗಳನ್ನು ಮಾಡಬೇಕು. ಶ್ರೀನಿವಾಸನು ಧರಿಸಿಕೊಂಡು ನಂತರ ತೆಗೆಯಲ್ಪಟ್ಟ ತುಳಸಿಮಾಲೆ ಪುಷ್ಪಮಾಲೆಗಳನ್ನು ಭೂದೇವಿಗಾಗಿ ಆ ಭಾವಿಯಲ್ಲಿ ಸೇರಿಸಬೇಕು ಎಂದು ಕಟ್ಟಳೆಯನ್ನಿಟ್ಟು ನಡೆಸುವಂತೆ ಮಾಡಿದರು. ಆ ಭಾವಿಯು ಭಗವಂತನ ಹೂಮಾಲೆಗಳನ್ನು ಸ್ವೀಕರಿಸುವುದರಿಂದ ಹೂಭಾವಿ (ಪೂಲಭಾವಿ) ಎಂಬ ಹೆಸರಿನಿಂದ ಪ್ರಸಿದ್ಧವಾಗಿದೆ.

### ಸ್ವರ್ಣಭಾವಿ - (ಚಿನ್ನದಭಾವಿ - ಬಂಗಾರುಭಾವಿ)

ಈ ರೀತಿಯಾಗಿಯೇ ಜ್ಞಾನ, ಭಕ್ತಿ, ವೈರಾಗ್ಯಗಳು ತುಂಬಿದ್ದ ಶ್ರೀಯಾಮುನಾಚಾರ್ಯರು (ಶ್ರೀಆಳವಂದಾರ್‌ರವರು) ಕೆಲವು ಕಾಲಕ್ಕೆ ಹಿಂದೆ ಶ್ರೀವೇಂಕಟಾಚಲಕ್ಕೆ ಪದಾರ್ಪಣೆ ಮಾಡಿ ಶ್ರೀವೇಂಕಟಾಚಲಪತಿಗೆ ಮಂಗಳಾಶಾಸನವನ್ನು ಮಾಡಿಕೊಂಡಿರುವಾಗ, ಒಂದು ದಿನ ಬೆಳಗಿನ ಜಾವದಲ್ಲಿ ಭೋಗ ಶ್ರೀನಿವಾಸನ ಅಭಿಷೇಕಕ್ಕಾಗಿ ಶ್ರೀ ಪಾಪನಾಶನೀಯೆಂಬ ದಿವ್ಯತೀರ್ಥದಿಂದ ಅತಿಪರಿಶುದ್ಧತೆಯುಳ್ಳದ್ದೂ, ಅತ್ಯಂತ ಆರೋಗ್ಯದಾಯಕವಾದದ್ದೂ, ವಜ್ರಮಣಿಕಾಂತಿಪುಂಜ ರೀತಿಯಲ್ಲಿ ಸ್ವಚ್ಛವಾದ ತಣ್ಣೀರನ್ನು ತೆಗೆದುಕೊಂಡು ಬರಲು

ಶ್ರೀಶೈಲಪೂರ್ಣರಿಗೆ (ಯಾಮುನಮುನಿಗಳ ಶಿಷ್ಯರು) ಮಳೆಯಿಂದುಂಟಾದ ತೊಂದರೆಯಿಂದ ತರಲಾಗದಿದ್ದುದರಿಂದ, ಇತರ ತೀರ್ಥಗಳು ಭಗವಂತನ ದಿವ್ಯಮಂಗಳ ವಿಗ್ರಹಕ್ಕೆ ಆರೋಗ್ಯ ನೀಡದ ಸ್ಥಿತಿಯನ್ನು ಆಲೋಚಿಸಿದ ಶ್ರೀ ಆಳವಂದಾರ್‌ರವರು, ಪೂಜಾರ್ಹಳಾದ ಶ್ರೀದೇವಿಯನ್ನು ಶರಣಾಗತಿ ಮಾಡಿ, "ಕರುಣೆಯೇ ಮುಂತಾದ ಸದ್ಗುಣಗಳನ್ನು ತುಂಬಿಕೊಂಡಿರುವ ಹೇ ಶ್ರೀದೇವಿಯೇ! ನಿನ್ನ ತೀರ್ಥವಾದ ಈ ಭಾವಿಯಲ್ಲಿನ ಜಲವು ಶ್ರೀನಿವಾಸನ ದಿವ್ಯಮಂಗಳ ವಿಗ್ರಹಕ್ಕೆ ಆರೋಗ್ಯವನ್ನು ಕೊಡುವುದಾಗಿಯೂ, ಇನ್ನು ಮೇಲೆ ಪಾಪನಾಶಿನೀ ತೀರ್ಥದಂತೆಯೇ ಇದುವೂ ಸಹ ಆ ದೇವನ ಅಭಿಷೇಕಕ್ಕೆ ಯೋಗ್ಯವಾಗಿ ಆಗುವಂತೆ ನೀನು ಕರುಣಿಸಬೇಕು" ಎಂದು ಪ್ರಾರ್ಥಿಸಿದ ನಂತರ, ಶ್ರೀದೇವಿಯ ತೀರ್ಥವಾಗಿ ಪುರಾಣದಿಂದ ತಿಳಿಯಲ್ಪಟ್ಟುದೂ, ಹಿಂದೆ ರಂಗದಾಸನಿಂದ ತೋಡಲ್ಪಟ್ಟುದೂ, ಪಾಕಶಾಲೆಗೆ (ಪ್ರಸಾದ ಶಾಲೆಗೆ) ಹತ್ತಿರದಲ್ಲಿರುವುದೂ, ಸ್ವರ್ಣಭಾವಿಯೆಂದು ಕರೆಯಲ್ಪಡುವ ಭಾವಿಯಿಂದ ತಾವೇ ತೀರ್ಥವನ್ನು ತೆಗೆದುಕೊಂಡು ಬಂದು, ಭಗವಂತನ ಅಭಿಷೇಕವನ್ನು ನಡೆಸಿಬಿಟ್ಟು, "ಇನ್ನು ಮೇಲೆ, ಸುಂದರನೂ, ನನ್ನ ಸ್ವಾಮಿಯೂ, ಭಗವಂತನೂ ಆದ ಈ ಶ್ರೀನಿವಾಸನಿಗೇ ಸೇರಿದುದಾಗಿ ತಿಳಿದುಕೊಂಡು, ಈ ಭಾವಿಯು "ಸುಂದರಸ್ವಾಮಿ ಕೂಪ" (ಅಳಹಪ್ಪಿರಾನಾರ್ ಕಿಣರು) ಎಂದು ಅವನ ಹೆಸರಿನಿಂದಲೇ ಕರೆಯಲ್ಪಡಬೇಕು. ಈ ತೀರ್ಥದಿಂದಲೇ ಭಗವಂತನ ಎಲ್ಲ ವಿಧವಾದ ಕೈಂಕರ್ಯಗಳೂ ನಡೆಸಲ್ಪಡಬೇಕು. ಶ್ರೀಪಾಪನಾಶಿನೀ ಮುಂತಾದುವುಗಳಿಂದ ತೀರ್ಥವು ಬಾರದೇ ಹೋದಲ್ಲಿ ಅಭಿಷೇಕ ಮತ್ತು ಆರಾಧನೆಗಳಿಗೆ ವಿಳಂಬವಾಗಕೂಡದು" ಎಂದು ಕಟ್ಟಳೆಯಿಟ್ಟರು. ಎಂದು ಹಿರಿಯರು ಹೇಳಿದ ಕಥೆಯನ್ನು ಕೇಳಿದ ಶ್ರೀರಾಮಾನುಜಯತಿವರ್ಯರು ತಮ್ಮ ಪರಮಾಚಾರ್ಯರ (ಆಳವಂದಾರ್‌ರವರ) ಕಟ್ಟಳೆಯನ್ನು ತಾವು ಶಿರಸಾವಹಿಸಿ, ತಮ್ಮನ್ನು ಸೇರಿದ ಸಮಸ್ತರಿಗೂ ಆಳವಂದಾರ್‌ರವರ ಕಟ್ಟಳೆಯನ್ನು ಹಾಗೆಯೇ ನೆರವೇರಿಸುವಂತೆ ಅಪ್ಪಣೆ ಕೊಡಿಸಿ, ಶ್ರೀ ಪಾಪನಾಶಿನಿಯ ತೀರ್ಥ, ಅದಕ್ಕೆ ಪ್ರತಿನಿಧಿಯಾದ (ಬದಲಾದ) ಶ್ರೀಶೈಲಪೂರ್ಣರಿಗೆ ಭಗವಂತನಿಂದಲೇ ನಿಯಮಿಸಲ್ಪಟ್ಟ ಆಕಾಶಗಂಗೆಯ ತೀರ್ಥ, ಪರಮಾಚಾರ್ಯರಾದ ಶ್ರೀ ಆಳವಂದಾರ್‌ರವರಿಂದ ನಿಯಮಿಸಲ್ಪಟ್ಟ ಸುಂದರಸ್ವಾಮಿ ಕೂಪದ ತೀರ್ಥ, ಈ ಮೂರು ತೀರ್ಥಗಳಲ್ಲಿ ಒಂದು ತೀರ್ಥದಿಂದ ಶ್ರೀನಿವಾಸನ ಕೈಂಕರ್ಯವನ್ನು ನೆರವೇರಿಸಿಟ್ಟರು.

ಭಗವಂತನ ದೇವಾಲಯದೊಳಗೆ ಪಾಕಶಾಲೆಗೆ ಹತ್ತಿರದಲ್ಲಿರುವುದೂ, ಹಿಂದೆ ಶ್ರೀದೇವಿಯಿಂದ ಶ್ರೀಮಹಾವಿಷ್ಣುವಿನ ಪ್ರಸಾದಪಾಕಕ್ಕಾಗಿ ಉಪಯೋಗಿಸಲು ನಿರ್ಮಿಸಲ್ಪಟ್ಟುದೂ, ಈಗ (ಅಳಹಪ್ಪಿರಾನ್ ಕಿಣರು) ಸುಂದರಸ್ವಾಮಿ ಕೂಪ

ಎಂಬ ಹೆಸರಿನಿಂದ ಕರೆಯಲ್ಪಡುವುದೂ 'ಸ್ವರ್ಣಭಾವಿ' ಎಂದು ಮತ್ತೊಂದು ಹೆಸರನ್ನುಳ್ಳ ಒಂದು ಭಾವಿಯೂ, ಸಂಪಂಗಿ ಪ್ರದಕ್ಷಿಣ (ಸಂಪಿಗೆ ಮರ ಪ್ರದಕ್ಷಿಣ) ದ ಈಶಾನ್ಯಮೂಲೆಯಲ್ಲಿ ಪುಷ್ಪಮಂಟಪದ ಪಕ್ಕದಲ್ಲಿ ಶ್ರೀಯವರ ಭಕ್ಷ್ಯಪಾಕಶಾಲೆಯ ಹಿಂದೆ, ದೇವನಿಗೆ ಅನ್ನವನ್ನು (ಪ್ರಸಾದ) ಸಮರ್ಪಿಸುವುದಕ್ಕಾಗಿ ಭೂದೇವಿಯಿಂದ ನಿರ್ಮಿಸಲ್ಪಟ್ಟುದೂ, ಈಗ ಪೂಲಭಾವಿ(ಹೂಭಾವಿ) ಎಂದು ಹೆಸರುಳ್ಳ ಭಾವಿಯೊಂದೂ, ಶ್ರೀದೇವಿಭೂದೇವಿಯರುಗಳ ತೀರ್ಥಗಳಾದ ಈ ಎರಡೂ, ಹಿಂದೆ ಒಂದು ಸಮಯದಲ್ಲಿ ಮುಚ್ಚಿ ಹೋಗಿ ಕಾಣಿಸದೇ, ರಂಗದಾಸನಿಂದ ಹೂತೋಟವನ್ನು ಕಾಪಾಡುವ ಸಲುವಾಗಿ ಭಾವಿಗಳಾಗಿ ತೋಡಿ ನಿರ್ಮಾಣಿಸಲ್ಪಟ್ಟು, ಅದರ ನಂತರ ತೊಂಡಮಾನ್ ಚಕ್ರವರ್ತಿಯಾಗಿ ಬಂದ ಆ ರಂಗದಾಸನಿಂದಲೇ ಚೆನ್ನಾಗಿ (ಕಲ್ಲುಕಟ್ಟಡಗಳಿಂದ ಕೂಡಿ) ಕಟ್ಟಲ್ಪಟ್ಟುವುಗಳಾಗಿ ಕಂಡು ಬರುತ್ತಿವೆ.

ವರಾಹ ಪುರಾಣದ ಎರಡನೆಯ ಭಾಗ ಒಂಭತ್ತನೆಯ ಅಧ್ಯಾಯದಲ್ಲಿ - ಈ ರೀತಿ ರಂಗದಾಸನು ಶ್ರೀನಿವಾಸನನ್ನು ಸೇವೆ ಮಾಡಿ ಆಶ್ಚರ್ಯಗೊಂಡು, 'ಈ ದೇವನಿಗೆ ಹೂತೋಟವನ್ನು ನಿರ್ಮಿಸುವ' ಎಂದು ಯೋಚಿಸಿದನು - ಎಂದು ಪ್ರಾರಂಭಿಸಿ - ಮಲ್ಲಿಗೆ ಕಣಗಲೆ, ತಾವರೆ, ಮುಲ್ಲೆ, ಮಂದಾರ, ಜಾಜಿ, ತುಳಸಿ, ಸಂಪಿಗೆ ವನಗಳನ್ನು ನಿರ್ಮಿಸಿದನು. ಅಲ್ಲಿ ಎರಡು ಭಾವಿಗಳನ್ನು ತೋಡಿ ಅವುಗಳ ನೀರಿನಿಂದ ತೋಟವನ್ನು ಬೆಳಸಿ ಅದರಿಂದ ಪುಷ್ಪಗಳನ್ನು ಕೊಯ್ದು ನಂತರ ತಾನೇ ಅವುಗಳನ್ನು ಮಾಲೆಯಾಗಿ ಕಟ್ಟಿದನು - ಎಂಬುವುದರಿಂದ ಕೊನೆಯಾಗಿ, ಸ್ವಾಮಿ ಪುಷ್ಕರಿಣಿಯ ತಟದಲ್ಲಿ ಈಗ ಭಗವಂತನ ದೇವಸ್ಥಾನವಿರುವ ಜಾಗದಲ್ಲಿ ಹೂದೋಟವನ್ನು ನಿರ್ಮಿಸಿ ರಂಗದಾಸನಿಂದ ಎರಡು ಭಾವಿಗಳೂ ಉಂಟಾದುವೆಂದು ಹೇಳಲ್ಪಟ್ಟಿತು.

ಭವಿಷ್ಯೋತ್ತರ ಪುರಾಣದಲ್ಲಿಯೂ ಹದಿಮೂರನೆಯ ಅಧ್ಯಾಯದಲ್ಲಿ ''ತೊಂಡಮಾನ್ ಚಕ್ರವರ್ತಿಯೇ! ಶ್ರೀನಿವಾಸನ ಪಾಕಶಾಲೆಗಳ ಮುಂಭಾಗದಲ್ಲಿ ಹಿಂದಿನ ಜನ್ಮದಲ್ಲಿ (ರಂಗದಾಸನಾಗಿ ಹುಟ್ಟಿದ್ದ) ನಿನ್ನಿಂದ ನಿರ್ಮಿಸಲ್ಪಟ್ಟ ಶ್ರೀ ಶ್ರೀದೇವಿ ತೀರ್ಥವನ್ನೂ ಭೂದೇವಿ ತೀರ್ಥವನ್ನೂ ಈಗ ಕಪ್ಪುಕಲ್ಲುಗಳಿಂದ ಅಂದವಾಗಿ ಕಟ್ಟಿ ತಾಮ್ರದ ತಗಡುಗಳಿಂದ ಅವುಗಳಿಗೆ ಅಂದವಾದ ಕವಚಗಳನ್ನು ನಿರ್ಮಿಸಿ ಚಿನ್ನದ ಲೇಪನದಿಂದ ಅಲಂಕರಿಸಿ ಶೋಭಿಸುವಂತೆ ಮಾಡತಕ್ಕವನಾರುತ್ತೀಯೆ'' ಎಂದೂ, ''ಹಿಂದಿನ ಜನ್ಮದಲ್ಲಿ ಹೂತೋಟಕ್ಕೆ ಸಹಾಯವಾಗುವಂತೆ ಈ ಭಾವಿಗಳೆರಡೂ ನಿನ್ನಿಂದ ನಿರ್ಮಿಸಲ್ಪಟ್ಟುವು'' ಎಂದೂ

''ಈ ರೀತಿ ಪೂರ್ವಜನ್ಮದಲ್ಲಿ ನೀನು ಮಾಡಿದ ಕರ್ಮ (ಕೆಲಸ) ಗಳಿಂದಾಗಿ ಉಂಟಾದ ನಿನ್ನ ಪೂರ್ವಜನ್ಮ ವೃತ್ತಾಂತವು ನನ್ನಿಂದ ಹೇಳಲ್ಪಟ್ಟಿತು'' ಎಂದು ಗೋವಿಂದನು ಹೇಳಿದ ಮಾತನ್ನು ಕೇಳಿದ ಅರಸೋತ್ತಮನಾದ ತೊಂಡಮಾನ್ ಚಕ್ರವರ್ತಿಯು, ಹಿಂದಿನ ಜನ್ಮದಲ್ಲಿ ತಾನು ನಿರ್ಮಿಸಿದ ಎರಡು ಭಾವಿಗಳನ್ನೂ (ಮುಂಚೆ ತಿಳಿಸಿದಂತೆ) ಅಂದವಾಗಿ ಕಟ್ಟಿ ಪುನರ್ನಿರ್ಮಾಣ ಮಾಡಿದನು - ಎಂದು ಹೇಳಲ್ಪಟ್ಟಿತು.

ಬ್ರಹ್ಮಪುರಾಣದ ಏಳನೆಯ ಅಧ್ಯಾಯದಲ್ಲಿ - ಹುಣಿಸೆ ಮರದಡಿಯಲ್ಲಿರುವ ಹುತ್ತದಲ್ಲಿ ಮೊಣಕಾಲುದ್ದ ಆಳದಲ್ಲಿ ಹುದುಗಿರುವ ವಿಷ್ಣುವಿನ ಅರ್ಚಾಮೂರ್ತಿ ಇರುವುದಲ್ಲವೇ? ಅದಕ್ಕೆ ಎರಡು ಬಿಲ್ಲಿನ ದೂರದಲ್ಲಿ ಹಿಂದೆ ಭೂದೇವಿಯಿಂದ ದೇವಾಧಿದೇವನ ಪಾಕ (ಅಡಿಗೆ) ಕ್ಕೋಸ್ಕರ ನಿರ್ಮಿಸಲ್ಪಟ್ಟ ಭೂತೀರ್ಥವೆಂಬೊಂದು ಸುಂದರವಾದ ಪುಣ್ಯತೀರ್ಥವೊಂದಿದೆ. ಆ ಹುಣಿಸೆಮರದ ವಾಯವ್ಯ ದಿಕ್ಕಿನಲ್ಲಿ ಭೂತೀರ್ಥದಲ್ಲಿ ವಾಸಿಸುತ್ತ ಬರುತ್ತಿರುವ ಅತ್ಯಂತ ಶ್ರೇಷ್ಠವಾದ ಎಳೆಯ ಕರುವಿನೊಡನೆ ಇರುವ ಒಂದು ಹಸುವು, ತನ್ನ ಹಾಲಿನಿಂದ ಹುತ್ತದಲ್ಲಿರುವ ಭಗವಂತನನ್ನು ಅಭಿಷೇಕ ಮಾಡಿಕೊಂಡು ಬರುತ್ತಿದೆ - ಎಂದೂ, ಭೂತೀರ್ಥಕ್ಕೂ ಸ್ವಾಮಿ ಪುಷ್ಕರಿಣಿಗೂ ಮಧ್ಯೆ, ನಾಲ್ಕನೆಯ ವರ್ಣದಲ್ಲಿ ಜನಿಸಿದ ಆ ಭಾಗವತೋತ್ತಮನು (ರಂಗದಾಸನು) ಹರಿಯ ವಿಹಾರಕ್ಕಾಗಿ ಹೂತೋಟವನ್ನು ನಿರ್ಮಿಸಿದನು - ಎಂದು ಹೇಳಲ್ಪಟ್ಟಿದೆ.

**ನಿದ್ರಿಸದ ಹುಣಿಸೆ ಮತ್ತು ಸಂಪಂಗಿ ಮರಗಳು**

ಇನ್ನು ನಿದ್ರಿಸದ ಹುಣಿಸೆಮರ ಮತ್ತು ಸಂಪಂಗಿ ಮರಗಳ ಚರಿತ್ರೆಯು ಹೇಳಲ್ಪಡುತ್ತದೆ. ವರಾಹಪುರಾಣದ ಎರಡನೆಯ ಭಾಗದಲ್ಲಿ ಒಂಬತ್ತನೆಯ ಅಧ್ಯಾಯದಲ್ಲಿ - ಕಾಡಿನ ಮಧ್ಯೆ ಸ್ವಾಮಿ ಪುಷ್ಕರಿಣಿಯ ತೀರದಲ್ಲಿ ಮರದ (ಹುಣಿಸೆ) ಕೆಳಗೆ ಆಕಾಶವನ್ನು ಅಳತೆ ಮಾಡುವವರಂತೆ ನಿಂತಿರುವವರೂ, ತಾವರೆಯಂತೆ ಕಣ್ಣುಗಳನ್ನುಳ್ಳವರೂ, ಸುವರ್ಣವರ್ಣದೊಂದೊಡಗೂಡಿದ ಶ್ಯಾಮಲವರ್ಣವುಳ್ಳ ಆಕಾರದ ಸುಂದರನಾದ ಹರಿಯನ್ನು ರಂಗದಾಸನು ಕಂಡನು - ಎಂಬ ವಚನದಿಂದಲೂ,

ಬೇಡರ ನಾಯಕನು ತೊಂಡಮಾನ್ ಚಕ್ರವರ್ತಿಯೊಂದಿಗೆ ಸ್ವಾಮಿ ಪುಷ್ಕರಿಣಿಯಲ್ಲಿ ವಿಧಿವತ್ತಾಗಿ ಸ್ನಾನಮಾಡಿ, ಅದರ ತೀರದಲ್ಲಿ ಹುಣಿಸೆಮರದ ಕೆಳಗಿರುವ ದೇವಾಧಿದೇವನಾದ ಶ್ರೀನಿವಾಸನನ್ನು ಮಹಾತ್ಮನಾದ ಆ ರಾಜನಿಗೆ ತೋರಿಸಿದನು - ಎಂದಿರುವ ವಚನದಿಂದಲೂ,

ಪಾದ್ಮಪುರಾಣದ ಏಳನೆಯ ಅಧ್ಯಾಯದಲ್ಲಿ - ಹೂದೋಟವನ್ನು ನಿರ್ಮಿಸುವ ನಾಲ್ಕನೆಯ ವರ್ಣದವನಾದ ರಂಗದಾಸನೂ, ಪೂಜೆಮಾಡುವ

ಬ್ರಾಹ್ಮಣರ ಮುಖ್ಯಸ್ಥನಾದ ಗೋಪೀನಾಥನೂ ಇಬ್ಬರೂ ಒಟ್ಟಾಗಿ ವೆಂಕಟಗಿರಿಯನ್ನು ಸೇರಿ ಮೆಲ್ಲಮೆಲ್ಲಗೆ ಪುನೀತವಾದ ಸ್ವಾಮಿ ಪುಷ್ಕರಿಣಿ ಬಳಿಸಾರಿ ವಿಧ್ಯುಕ್ತವಾಗಿ ಸ್ನಾನಮಾಡಿ 'ಭಗವಂತನು ಎಲ್ಲಿದಾನೆ'? ಎಂದು ಹುಡುಕಿದರು. ಆ ರೀತಿ ಅವನನ್ನು ಹುಡುಕುತ್ತಲೇ ಹೋಗುತ್ತಿದ್ದ ಅವರುಗಳಿಗೆ ಅದರ ತಟದಲ್ಲಿ (ಸ್ವಾಮಿ ಪುಷ್ಕರಿಣಿಯ ತಟದಲ್ಲಿ) ಹುಣಿಸೆಯ ಮರದ ಕೆಳಗೆ ಜನಾರ್ಧನನು ಪ್ರತ್ಯಕ್ಷನಾದನು. ಹುಣಿಸೆಯ ಮರದಡಿಯಲ್ಲಿನ ಹುತ್ತದಲ್ಲಿ ವಿರಾಜಮಾನನಾಗಿರುವ ಪರಮಾತ್ಮನಾದ ಹರಿಯನ್ನು ಅದರಿಂದ (ಹುತ್ತದಿಂದ) ಹೊರತೆಗೆದು ಆ ಇಬ್ಬರೂ ಅದರ ಪಶ್ಚಿಮ ಭಾಗದಲ್ಲಿ ನಿಲ್ಲಿಸಿ ಇಟ್ಟರು. -ಎಂದಿರುವ ವಚನದಿಂದಲೂ,

ಭವಿಷ್ಯೋತ್ತರ ಪುರಾಣದ ಮೂರನೆಯ ಅಧ್ಯಾಯದಲ್ಲಿ - ಲೋಕನಾಥನಾದ ಭಗವಾನ್ ಹರಿಯು ತಾನು ಬಚ್ಚಿಟ್ಟುಕೊಳ್ಳತಕ್ಕ ಜಾಗವೊಂದನ್ನು ಪರಿಶೀಲಿಸುತ್ತಿರುವಾಗ, ಸ್ವಾಮಿ ಪುಷ್ಕರಿಣಿಯ ದಕ್ಷಿಣ ದಿಕ್ಕಿನಲ್ಲಿ ಹುಣಿಸೆ ಮರದಡಿಯಲ್ಲಿ ಅಪಾಯ ರಹಿತವಾದ ಉತ್ತಮವಾದ ಹುತ್ತವೊಂದನ್ನು ಸಂತೋಷದಿಂದ ನೋಡಿದರು. ಅದೇ ತಾನು ವಾಸಿಸತಕ್ಕ ಉತ್ತಮವೂ ಸರಿಯಾದುದೂ ಆದ ಜಾಗವಾಗಿ ಭಾವಿಸಿ ಅದರೊಳಗೆ ಮರೆಯಾಗಿದ್ದರು. -ಎಂಬಿರುವ ವಚನದಿಂದ ಹೇಳಲ್ಪಟ್ಟಿರುವಂತೆ ಹುಣಿಸೆ ಮರದ ಕೆಳಗೆ ಭಗವಂತನಾದ ಶ್ರೀನಿವಾಸನು ಆವಿರ್ಭವಿಸಿ ಪ್ರತ್ಯಕ್ಷನಾಗಿರುವಾಗ, ರಂಗದಾಸನೆಂಬೊಬ್ಬ ಭಗವದ್ಭಕ್ತನು ದಕ್ಷಿಣದೇಶದಿಂದ ಬಂದು, ವೈಖಾನಸರ ನಾಯಕನಾದ ಗೋಪೀನಾಥನೆಂಬ ಹೆಸರುಳ್ಳ ಅರ್ಚಕನೊಬ್ಬನನ್ನು ದಾರಿಯಲ್ಲಿ ಸಂಧಿಸಿ ತಾನು ಕಂಡ ಕನಸನ್ನು ಹೇಳಿದುದನ್ನು ಕೇಳಿ ಅವನೊಂದಿಗೆ ಶ್ರೀವೆಂಕಟಗಿರಿಗೆ ಬಂದು ಸ್ವಾಮಿ ಪುಷ್ಕರಿಣಿಯ ದಕ್ಷಿಣ ದಿಕ್ಕಿನಲ್ಲಿ ಹುಣಿಸೆಯ ಮರದ ಕೆಳಗೆ ವಿರಾಜಮಾನನಾಗಿದ್ದ ಭಗವಂತನನ್ನು ಆರಾಧಿಸಿ, ಈ ದೇವನಿಗೆ ಒಂದು ದೇಗುಲವನ್ನು ನಿರ್ಮಾಣ ಮಾಡಬೇಕು. ಒಂದು ನಂದನವನವನ್ನೂ ನಿರ್ಮಿಸಬೇಕು ಎಂದು ನೆನೆಸಿಕೊಂಡೇ, ಅಲ್ಲಿ ಭಗವಂತನ ಪಕ್ಕದಲ್ಲಿರುವುದೂ, ಮೇಲೆ ನಾಲ್ಕು ದಿಕ್ಕುಗಳಲ್ಲಿಯೂ ಹರಡಿ, ಅತ್ಯಂತ ಎತ್ತರವಾಗಿ, ಅಗಲವಾದ, ದೊಡ್ಡದಾದ, ಹಲವು ರೆಂಬೆಗಳನ್ನುಳ್ಳ ಹುಣಿಸೆಯ ಮರವೊಂದು ಚಿಗುರಿನಿಂದ ಕೂಡಿದ ಕೆಲವು ರೆಂಬೆಗಳಿಂದಲೂ, ಹೂಗಳಿಂದ ಕೂಡಿದ ಕೆಲವು ರೆಂಬೆಗಳಿಂದಲೂ, ಕಾಯಿಗಳಿಂದ ಕೂಡಿದ ಕೆಲವು ರೆಂಬೆಗಳಿಂದಲೂ ಕೂಡಿ, ಯಾವಾಗಲೂ, ಯಾವ ರೆಂಬೆಯಲ್ಲಿಯೂ, ಲೋಕಕ್ಕೆ ಸಹಾಯವಾಗುವ ಪ್ರಯತ್ನದಿಂದ ವಿರಮಿಸದಂತೆ, ನಿದ್ರಾರಹಿತವಾಗಿ, ದೊಡ್ಡ ಕೊಡೆ (ಛತ್ರಿ)ಯಂತೆ ಭಗವಂತನನ್ನು ಸುತ್ತಲೂ ಮರೆಸಿಕೊಂಡು ನಿಂತಿರುವುದನ್ನು ಕಂಡು, ಮನದಲ್ಲಿ ಆಶ್ಚರ್ಯಗೊಂಡು, ನಿದ್ರಿಸದ ಈ ಹುಣಿಸೆ ಮರವು ನಿಶ್ಚಯವಾಗಿ ನಿದ್ರಾರಹಿತರಾದ ನಿತ್ಯಸೂರಿಗಳಲ್ಲಿ ಒಬ್ಬರ

ಅಂಶವಾಗಿಯೇ ಇರಲು ತಕ್ಕುದು. ಅದರಲ್ಲಿಯೂ, ಯಾವಾಗಲೂ ವ್ಯಾಪಕವಾದ ತನ್ನ ಹೆಡೆಗಳಿಂದ ವಿಶಾಲವಾದ ಶ್ವೇತಚ್ಛತ್ರವನ್ನು ಹಿಡಿದು, ಭಗವಂತನಿಗೆ ಹಿಮ, ಬಿಸಿಲು ಮುಂತಾದುವುಗಳು ತಗಲದಂತೆ ತಡೆಯುವ ಸ್ವಭಾವವುಳ್ಳವನಾಗಿ, ಆ ಭಗವಂತನಿಗೆ ಅಂತರಂಗಕಿಂಕರನಾಗಿರುವ ಆದಿಶೇಷನೇ ಆಗಿರಲು ಸಾಧ್ಯವೆಂದು ತಿಳಿದು, ಈ ಹುಣಿಸೆಯ ಮರದ ನೈಋತ್ಯ ದಿಕ್ಕಿನಲ್ಲಿ ಅದೇ ಲಕ್ಷಣಗಳನ್ನುಳ್ಳ ಸಂಪಂಗಿ ಮರವನ್ನೂ ಕಂಡು, ಅದನ್ನೂ ಒಬ್ಬ ನಿತ್ಯಸೂರಿಯ ಅಂಶವೆಂದೇ ಭಾವಿಸಿ, ಇಲ್ಲಿ ಸುತ್ತಮುತ್ತಲೂ ಇರುವ ಮರಗಳನ್ನು ಕಡಿಯದೆ ಯಾವ ರೀತಿ ತೋಟವೋ, ದೇವಸ್ಥಾನವೋ ಕಟ್ಟಲು ಸಾಧ್ಯವು? ಎಂದು ಯೋಚಿಸುತ್ತಿರುವಾಗಲೇ, ಭಗವಂತನಿಂದ,'' ಈ ಹುಣಿಸೆಯ ಮರವು ನಾನು ವಾಸಿಸುವ ಪ್ರದೇಶ, ಈ ಸಂಪಿಗೆಯ ಮರವು ಶ್ರೀದೇವಿಯ ವಾಸಸ್ಥಾನ. ಆದುದರಿಂದ ಇವೆರಡನ್ನು ಬಿಟ್ಟು ಉಳಿದ ಮರ, ಗಿಡ, ಲತೆ ಮುಂತಾದುವುಗಳನ್ನು ಕಡಿದು ದೇವಾಲಯ, ತೋಟ ಮುಂತಾದುವುಗಳನ್ನು ನಿರ್ಮಿಸಬೇಕು'' ಎಂಬ ಆಜ್ಞೆಯನ್ನು ಪಡೆದವನಾಗಿ ಆ ರೀತಿಯೇ (ರಂಗದಾಸನು) ಮಾಡಿದನು.

ವರಾಹಪುರಾಣದ ಎರಡನೆಯ ಭಾಗದ ಒಂಭತ್ತನೆಯ ಅಧ್ಯಾಯದಲ್ಲಿ ರಂಗದಾಸನ ಬಗ್ಗೆ ತಿಳಿಸುವ ಸಂದರ್ಭದಲ್ಲಿಯೂ, - ದೇವತೆಗಳಿಂದ ನಮಸ್ಕರಿಸಲ್ಪಡುವ ಭಗವಂತನ ಆಸ್ಥಾನವಾದ (ಆವಾಸಸ್ಥಾನ) ಹುಣಿಸೆಯ ಮರವೂ, ಶ್ರೀಮಹಾಲಕ್ಷ್ಮಿಯ ಆಸ್ಥಾನವಾದ ಸಂಪಿಗೆಯ ಮರವೂ ಎಂಬ ಈ ಎರಡನ್ನೂ ಭಗವಂತನ ಆಜ್ಞೆಯಂತೆ ಬಿಟ್ಟು ಬಿಟ್ಟು, ರಂಗದಾಸನು ಭಗವಂತನ ಸುತ್ತಲೂ ಕೆಳಭಾಗದಿಂದ ಕಲ್ಲಿನ ಗೋಡೆಯನ್ನು ನಿರ್ಮಿಸಿದನು. ಅಂದವಾದ ಮರದ ತುಂಡು ಹಲಗೆಗಳಿಂದ ಭಗವಂತನಿಗೆ ವಾಸಸ್ಥಾನವನ್ನು (ಗರ್ಭಗೃಹವನ್ನು) ಶೀಘ್ರವಾಗಿ ಕಟ್ಟಿಸಿದನು. ಕಲ್ಲಿನ ಗೋಡೆಗಳ ಹೊರಗೆ ಸುತ್ತಲೂ ಹೂದೋಟವನ್ನು ನಿರ್ಮಿಸಿದನು - ಎಂದು ಹೇಳಲ್ಪಟ್ಟಿದೆ.

ಅದರಲ್ಲಿಯೇ ಹತ್ತನೆಯ ಅಧ್ಯಾಯದಲ್ಲಿ ತೊಂಡಮಾನ್ ಚಕ್ರವರ್ತಿಯ ಬಗೆಗಿನ ಕಥಾಭಾಗದಲ್ಲಿ - ದೇವಾಧಿದೇವನಾದ ಭಗವಂತನು ಹೇಳಿದ ರೀತಿಯಲ್ಲಿ, ಕ್ಷೀರಾಭಿಷೇಕ ಮುಂತಾದುವುಗಳನ್ನು ನೆರವೇರಿಸಿ ಪ್ರಾಕಾರದ ಗೋಡೆಗಳನ್ನು ಕಟ್ಟಲು ತೊಂಡಮಾನ್ ಚಕ್ರವರ್ತಿಯು ಪ್ರಯತ್ನಿಸಿದನು. ಆಗ ಅವನಿಗೆ ಭಗವಂತನಾದ ದೇವಾಧಿದೇವನು, ''ಹುಣಿಸೆ ಮತ್ತು ಸಂಪಿಗೆ ಎಂಬ ಅತ್ಯುನ್ನತವಾದ ಈ ಮರಗಳೆರಡನ್ನೂ ಕಾಪಾಡತಕ್ಕವನಾಗು. ನನ್ನ ಆಸ್ಥಾನವಾದ ಹುಣಿಸೆಮರ ಮತ್ತು ಲಕ್ಷ್ಮಿಯ ಆಸ್ಥಾನವಾದ ಸಂಪಿಗೆ ಮರ ಆದ ಇವೆರಡೂ ರಾಜರುಗಳಿಂದಲೂ, ಋಷಿಗಳಿಂದಲೂ, ದೇವತೆಗಳು ಮತ್ತು ಮಾನವರುಗಳಿಂದಲೂ ಸದಾಕಾಲವೂ

ನಮಸ್ಕರಿಸತಕ್ಕುವುಗಳಲ್ಲವೇ? ಆದುದರಿಂದ, ಅರಸರಿಗೆಲ್ಲ ಅರಸನಾದವನೇ! ಈ ಎರಡು ಮರಗಳನ್ನೂ ಬಿಟ್ಟು, ಉಳಿದ ಮರಗಳನ್ನು ಕಡಿಯತಕ್ಕವನಾಗು'' ಎಂದು ಆಜ್ಞಾಪಿಸಿದನು - ಎಂದು ಹೇಳಲ್ಪಟ್ಟಿದೆ.

ಇಲ್ಲಿ ಶ್ರೀಮಹಾವಿಷ್ಣುವಿಗೂ ಶ್ರೀಮಹಾಲಕ್ಷ್ಮಿಗೂ ಕ್ರಮವಾಗಿ ಆವಾಸಸ್ಥಾನಗಳಾದ ಹುಣಿಸೆಮರವೂ ಮತ್ತು ಸಂಪಿಗೆಯ ಮರವೂ,'' ಅವೆರಡೂ ದೇವತೆಗಳಿಂದ ನಮಸ್ಕರಿಸಲ್ಪಡತಕ್ಕವಲ್ಲವೇ!'' ಎಂದು ದೇವತೆಗಳು ಮುಂತಾದುವರುಗಳಿಂದ ವಂದಿಸತಕ್ಕವುಗಳಾಗಿಯೂ, ಕಡಿದು ಹಾಕಲ್ಪಡತಕ್ಕವುಗಳಲ್ಲವೆಂದೂ ಭಗವಂತನಿಂದಲೇ ಹೇಳಲ್ಪಟ್ಟಿರುವುದರಿಂದಲೂ, ಆಗಿಂದಾಗ್ಗೆ ಆ ದೇವನ ಸೇವಾದಿಗಳಿಗೆ ತಡೆಯುಂಟಾಗುವ ಕಾಲದಲ್ಲಿ ಭಕ್ತರುಗಳ ಪ್ರಾರ್ಥನೆಯಂತೆ ಮಗ್ಗುಲಾಗಿ ನಿಲ್ಲುವ ಗುಣವಿರುವುವುಗಳಾಗಿ, ಸೂರ್ಯನ ಚಲನೆಯನ್ನು ಹಿಂಬಾಲಿಸಿ ಯಾವ ಚಲನೆಯನ್ನೂ ಹೊಂದದೆ ಯಾವಾಗಲೂ ಒಂದೇ ವಿಧವಾಗಿ (ಚಲನೆಯಿಲ್ಲದೆ) ತಮ್ಮ ನೆರಳನ್ನು ಕೊಡುವುವುಗಳಾಗಿಯೂ, ಪ್ರಪಂಚದಲ್ಲಿ ಪ್ರಸಿದ್ಧಿ ಹೊಂದಿದ ಈ ಹುಣಿಸೆ ಮತ್ತು ಸಂಪಂಗಿ ಮರಗಳನ್ನು ಧ್ವಜಸ್ತಂಭಕ್ಕೆ ಸ್ವಲ್ಪ ದೂರದಲ್ಲಿ ಉತ್ತರದಲ್ಲೂ, ದಕ್ಷಿಣದಲ್ಲೂ ಕ್ರಮವಾಗಿ ಪ್ರತಿಷ್ಠೆಮಾಡಿಸಿ ಇವುಗಳಿಗೆ ಪ್ರತಿನಿತ್ಯವೂ ತಪ್ಪದೇ ಪೂಜೆಮಾಡಬೇಕೆಂದು ಕಟ್ಟಳೆಯನ್ನಿಟ್ಟು ಆರಾಧನೆಯನ್ನು ಶ್ರೀರಾಮಾನುಜರು ನೆರವೇರಿಸಿ ಕೃಪೆ ಮಾಡಿದರು.

### ನಾಗಾಭರಣ (ಹಾವಿನ ಆಭರಣ)

ಇನ್ನು ಬಂಗಾರದಿಂದಾದ ನಾಗಾಭರಣದ ಬಗೆಗಿನ ಒಂದು ಇತಿಹಾಸವು ಹೇಳಲ್ಪಡುತ್ತದೆ. ಹಿಂದೆ ಒಂದಾನೊಂದು ಕಾಲದಲ್ಲಿ ವೀರನರಸಿಂಹದೇವನೆಂಬ ಒಬ್ಬ ಗಜಪತಿಯು (ಗಜಪತಿ ಎಂಬುದು ವಿಜಯನಗರದ ಅರಸರುಗಳಿಗೆ ನೀಡುವ ಪಟ್ಟದ ಹೆಸರು), ತೀರ್ಥಯಾತ್ರೆ ಮಾಡುವ ಉದ್ದೇಶದಿಂದ, ಸೇತುದರ್ಶನವನ್ನು ಮಾಡಲು ಇಚ್ಛಿಸಿ ಹೊರಟು, ಮಾರ್ಗಮಧ್ಯದಲ್ಲಿ ಶ್ರೀವೇಂಕಟಾಚಲದ ವೈಭವವನ್ನು ಕೇಳಿ, ಆ ಬೆಟ್ಟವನ್ನು ಹತ್ತಿ, ಶ್ರೀಸ್ವಾಮಿ ಪುಷ್ಕರಿಣಿಯಲ್ಲಿ ಸ್ನಾನ ಮಾಡಿ, ಶ್ರೀ ಜ್ಞಾನವರಾಹನನ್ನೂ ಶ್ರೀವೆಂಕಟಾಚಲಾಧೀಶನನ್ನೂ ಪೂಜಿಸಿ, ಸ್ತುತಿಸಿ, ಕ್ಷೇತ್ರದಲ್ಲಿ ಉಪವಾಸವಿರುವಿಕೆ ಮುಂತಾದ ವಿಧಿಗಳನ್ನು ಅನುಷ್ಠಾನಮಾಡಿ, ಕಲಿಯುಗದಲ್ಲಿ ತಿರುವೇಂಕಟನಾಥನ ಅತ್ಯತಿಶಯವಾದ ಚರಿತ್ರೆಗಳನ್ನು ಕೇಳಿ, ಆ ಭಗವಂತನ ದಿವ್ಯ ಪಾದಾರವಿಂದಗಳಲ್ಲಿ ಅತ್ಯಂತ ಭಕ್ತಿಪರವಶನಾಗಿ ಆತನ ದಿವ್ಯದೇಗುಲದಲ್ಲಿ ಏನಾದರೂ ಒಂದು ದೇವಕೆಲಸವನ್ನು ಮಾಡಬೇಕೆಂದು ಆಸೆಪಟ್ಟು, 'ಯಾವ ರೀತಿಯ ಸೇವಾಕಾರ್ಯ ಮಾಡುವುದು ಸೂಕ್ತವು?' ಎಂದು ಅಲ್ಲಿದ್ದ

ವಿದ್ವಾಂಸರುಗಳನ್ನು ಕೇಳಿದನು. ಅದಕ್ಕೆ ಆ ವಿದ್ವಾಂಸರುಗಳು, "ಆಭರಣಗಳಲ್ಲಿ ಕಿರೀಟವೂ, ವಾಹನಗಳಲ್ಲಿ ರಥವೂ, ಗೋಪುರಗಳಲ್ಲಿ ವಿಮಾನವೂ, ರತ್ನಗಳಲ್ಲಿ ವಜ್ರವೂ, ಜಾತಿಗಳಲ್ಲಿ ಬ್ರಾಹ್ಮಣಜಾತಿಯೂ, ಆಶ್ರಮಗಳಲ್ಲಿ ಸನ್ಯಾಸಾಶ್ರಮವೂ, ಉತ್ತಮವಾದುವುಗಳು ಎಂದು ಶಾಸ್ತ್ರಗಳು ಹೇಳಿರುವುದರಲ್ಲಿ ಯಾವುದು ನಿನ್ನ ಮನಸ್ಸಿಗೆ ಹಿಡಿದಿದೆಯೋ ಅದನ್ನು ಮಾಡತಕ್ಕವನಾಗು" ಎಂದು ರಾಜನಿಗೆ ತಿಳಿಸಿದರು.

ನಂತರ ಆ ಗಜಪತಿಯು, "ಈ ದಿವ್ಯಸ್ಥಳದಲ್ಲಿ ಶ್ರೀವೆಂಕಟೇಶನ ಹಿರಿಮೆಗೆ ತಕ್ಕಂತೆ ಒಂದು ಗೋಪುರವು ಉಂಟಾಗಲಿಲ್ಲವಲ್ಲಾ! ಆದುದರಿಂದ ಇಲ್ಲಿ ಅತ್ಯಂತ ದೊಡ್ಡದಾದ ಗೋಪುರವನ್ನು ಕಟ್ಟಬೇಕು" ಎಂದು ನಿಶ್ಚಯಿಸಿ, ಅದಕ್ಕಾಗಿ ಅಧಿಕವಾದ ಧನವನ್ನುಕೊಟ್ಟು ಕೆಲಸಗಾರರನ್ನು ನೇಮಿಸಿ, ಗೋಪುರವನ್ನು ಕಟ್ಟಲು ಪ್ರಾರಂಭವನ್ನೂ ಮಾಡಿಸಿ, "ನಾನು ಪುನಃ ಇಲ್ಲಿಗೆ ಬರುತ್ತೇನೆ. ಈ ಕೆಲಸವನ್ನು ನಿರ್ವಿಘ್ನವಾಗಿ ಸಂಪೂರ್ಣಮಾಡಿ" ಎಂದು ಕಟ್ಟಳೆಯನ್ನಿಟ್ಟು, ಶ್ರೀ ಕಾಂಚೀಪುರ, ಶ್ರೀ ಶ್ರೀರಂಗ ಮುಂತಾದ ದಿವ್ಯ ದೇಶಗಳಲ್ಲಿ ದೇವಾಧಿದೇವರುಗಳನ್ನು ಆರಾಧಿಸಿಕೊಂಡೇ ನಡೆದು ಸೇತುವನ್ನು ದರ್ಶಿಸಿ ಹಿಂದಿರುಗಿ ಪುನಃ ಶ್ರೀ ವೆಂಕಟಗಿರಿಗೆ ಹತ್ತಿ ಬಂದು, ಅರ್ಧ ಭಾಗ ಕಟ್ಟಿದ್ದ ಗೋಪುರವನ್ನು ಕಂಡು ಸಂತೋಷಿಸಿ, ದಾನ ಮುಂತಾದ ಧರ್ಮಗಳಿಂದ, ಅಲ್ಲಿ ವಾಸಿಸುತ್ತಿರುವ ಪ್ರಜೆಗಳನ್ನು ಹಲವು ರೀತಿಯಲ್ಲಿ ಸಂತೋಷಗೊಳಿಸುತ್ತಾ, ಅಲ್ಲಿಯೂ ಕೆಲದಿನಗಳು ವಾಸವಾಗಿದ್ದನು.

ಆಗ, ಒಂದಿರಳು, ಆ ಗಜಪತಿಯ ಕನಸಿನಲ್ಲಿ ಉತ್ತಮವಾದ, ಹಿರಿದಾದ ಸರ್ಪವೊಂದು ಎದುರಿಗೆ ಬಂದು," ಎಲೈ ಗಜಪತಿಯೇ! ಈ ತಿರುವೇಂಕಟಗಿರಿಯು ನನ್ನ ಶರೀರವು. ಇದರಲ್ಲಿ ಅತ್ಯಂತ ದೊಡ್ಡ ಗೋಪುರವನ್ನು ಕಟ್ಟುವುದು ನನಗೆ ಅತೀವ ಭಾರವನ್ನು ಉಂಟುಮಾಡುತ್ತದೆ. ಅದರ ಕಾರಣದಿಂದ ನನಗೆ ಬಹಳ ತೊಂದರೆಯುಂಟಾಯಿತು. ಈ ರೀತಿ ನಿನ್ನಿಂದುಂಟಾದ ಇಂಥಹ ಕಷ್ಟವನ್ನು ನನ್ನ ಸ್ವಾಮಿಯ ಬಳಿ ಹೋದರಲ್ಲದೇ ಅನ್ಯಥಾ ನಿವಾರಿಸಿಕೊಳ್ಳಲಾಗುವುದಿಲ್ಲ" ಎಂದು ಹೇಳಿ ದೇವಸ್ಥಾನದೊಳಗೆ ಪ್ರವೇಶಿಸಿ ಭಗವಂತನ ವೈಕುಂಠ ಹಸ್ತದಲ್ಲಿ (ಶ್ರೀವೈಕುಂಠವನ್ನು ಸೇರಲು ಇದುವೇ ದಾರಿ ಎಂದು ತನ್ನ ಪಾದಗಳನ್ನು ತೋರಿಸುವ ಹಸ್ತ) ಸುತ್ತಿಕೊಂಡಿತು. ಈ ರೀತಿಯಾದ ಕನಸನ್ನು ಕಂಡು ಬಹಳವಾಗಿ ಅಂಜಿದ ವೀರನರಸಿಂಹ ದೇವನೆಂಬ ಆ ಗಜಪತಿಯು, ವಿದ್ವಾಂಸರೆಲ್ಲರನ್ನೂ ಆಮಂತ್ರಿಸಿ ತಾನು ಕನಸಿನಲ್ಲಿ ಕಂಡವೆಲ್ಲವನ್ನೂ ವಿಜ್ಞಾಪಿಸಿ, "ಈ ಕನಸಿಗೆ ಏನು ಅರ್ಥ?" ವೆಂದು ಕೇಳಿದನು.

ನಂತರ ಆ ವಿದ್ವಾಂಸರುಗಳು, "ಅರಸೇ! ಈ ತಿರುಮಲೆಯು ಆದಿಶೇಷನ

ಅವತಾರವೆಂಬುದು ಶ್ರೀ ವೆಂಕಟಾಚಲ ಮಾಹಾತ್ಮ್ಯೆಯನ್ನು ಹೇಳುವ ಪುರಾಣಗಳ ಭಾಗಗಳಲ್ಲಿ ಹಲವು ರೀತಿಯಲ್ಲಿ ವಿವರಿಸಲ್ಪಟ್ಟಿದೆ. ನಿನ್ನ ಕನಸನ್ನು ವಿಶ್ಲೇಷಿಸಿದಾಗ, ನೀನು ಕಟ್ಟುವ ಗೋಪುರವು ಆದಿಶೇಷನಿಗೆ ಭಾರ (ಹೊರೆ)ವನ್ನುಂಟಾಗಿಸಿ ಸಂಕಟಪಡಿಸುವುದರಿಂದ ಅದನ್ನು ಆತನು ಇಷ್ಟಪಡಲಿಲ್ಲವೆಂದೇ ಕಂಡುಬರುತ್ತದೆ. ಆದುದರಿಂದ ಅತ್ಯಂತ ದೊಡ್ಡದೂ ಮತ್ತು ಭಾರವಾದುದೂ ಆದ ಗೋಪುರವನ್ನು ಇಲ್ಲಿ ಕಟ್ಟಕೂಡದೆಂಬುದೇ ಈ ಕನಸಿನ ಉದ್ದೇಶವಾಗುತ್ತದೆ'' ಎಂದು ಗಜಪತಿಗೆ ಉತ್ತರ ನೀಡಿದರು.

ಅದರ ನಂತರ ಆ ರಾಜನು ಬಹಳವಾಗಿ ಅಂಜಿ, ಗೋಪುರ ಕಟ್ಟುವುದನ್ನು ಅಲ್ಲಿಗೇ ನಿಲ್ಲಿಸಿ, ಈ ರೀತಿಯ ಇಷ್ಟು ಮಾತ್ರ ಗೋಪುರ ಸೇವೆಯೇ ಶ್ರೀ ವೆಂಕಟಾಚಲಾಧೀಶನಿಗೆ ಇಷ್ಟವಾಗಿರಬೇಕೆಂದು ತಿಳಿದುಕೊಂಡು, ಆದಿಶೇಷನಲ್ಲಿ ತಾನು ಮಾಡಿದ ಅಪಚಾರಕ್ಕೆ (ತಪ್ಪಿಗೆ) ಪರಿಹಾರವನ್ನು ಮಾಡುವುದಕ್ಕಾಗಿ, ಆದಿಶೇಷನ ಆಕೃತಿಯುಳ್ಳದೊಂದು ಉತ್ತಮವಾದ ಆಭರಣವೊಂದನ್ನು ಮಾಡಿಸಿ, 'ಇದನ್ನು ಭಗವಂತನಿಗೆ ಧಾರಣೆ ಮಾಡಿಸಬೇಕು' ಎಂದು ಪ್ರಾರ್ಥಿಸಿ ಅದನ್ನು ಭಗವಂತನ ಸಮೀಪದಲ್ಲಿಟ್ಟನು.

ನಂತರ ಭಗವಂತನಿಗೆ ಸೇವೆ ಸಲ್ಲಿಸುವ ಪರಿಜನರುಗಳು ಅರಸನು ಸಮರ್ಪಿಸಿದ ನಾಗರೂಪವಾದ ಆಭರಣವನ್ನು ಕಂಡು, ''ಇದನ್ನು ದೇವನಿಗೆ ಎಲ್ಲಿ ಸಮರ್ಪಿಸಬೇಕು? (ಧರಿಸಬೇಕು?) ಮೇಲೂ, ನಾಗರೂಪವಾದ ಈ ಆಭರಣವು ಅನ್ಯದೇವತೆಗೆ ಸೇರಿದುದಲ್ಲವೇ? ಇದನ್ನು ಈ ದೇವನಿಗೆ ಧಾರಣೆ ಮಾಡುವುದು ಸರಿಯೇ ಅಥವಾ ತಪ್ಪೇ?'' ಎಂದು ಸಂದೇಹ ಪಡುತ್ತಿರುವಾಗ ಭಗವಂತನು ಒಬ್ಬನ ಮೇಲೆ ಆವೇಶಿಸಿ ''ಎಲೈ ಪರಿಜನರೇ! ಹಿಂದೆ ಆದಿಶೇಷನಿಗೂ ವಾಯುದೇವನಿಗೂ ನಡೆದ ವಿವಾದದಲ್ಲಿ ಆದಿಶೇಷ ಬೆಟ್ಟವನ್ನು ಇಲ್ಲಿ ತರುವುದಕ್ಕಾಗಿಯೇ ನಾನು ವಾಯುದೇವನಲ್ಲಿ ಮಾಡಿದ ಸ್ವಲ್ಪ ಪಕ್ಷಪಾತ (ವಾಯುದೇವನಲ್ಲಿ ತೋರಿಸಿದ ಹೆಚ್ಚಿನ ಪ್ರೇಮ) ದಿಂದ ಮನೋವ್ಯಾಕುಲಗೊಂಡ ಶೇಷನು, ಅಹಂಕಾರ ನಾಶಗೊಂಡು, ತನ್ನ ಅವತಾರವಾದ ಈ ತಿರುಮಲೆಯಲ್ಲಿ ದೇವಮಾನ ರೀತಿಯಲ್ಲಿ ಒಂದು ಸಾವಿರ ವರ್ಷಗಳ ಕಾಲ ಘೋರ ತಪಸ್ಸನ್ನಾಚರಿಸಿ, ತಾನೇ ನನ್ನನ್ನು ಇಲ್ಲಿಗೆ ಬರಮಾಡಿಸಿ (ನಾನು ಆವಿರ್ಭಾವ ಹೊಂದುವಂತೆ ಮಾಡಿ) ಹಾಸಿಗೆಯ ರೂಪವನ್ನು ತಾಳಿ ನನ್ನನ್ನು ಧರಿಸುವ ರೀತಿಯಲ್ಲಿ ಬೆಟ್ಟದ ಆಕೃತಿಗೊಂಡು, ನನ್ನನ್ನು ಧರಿಸಿ ನನ್ನ ಅಪಾರ ಪ್ರೀತಿಗೆ ಪಾತ್ರನಾಗಿ ಇರುತ್ತಿದ್ದಾನೆ. ನನ್ನಿಂದಲೇ ಹಿಂದೆ ಸ್ವಲ್ಪ ವ್ಯಾಕುಲಗೊಂಡ ಪುತ್ರನ ರೀತಿ, ನನ್ನ ಕೈಗಳಿನಿಂದಲೇ ಆತನನ್ನು ಧರಿಸಿ ಕೊಂಡಾಡುತ್ತೇನೆ. ಎಲ್ಲಾ ಜಾಗಗಳಲ್ಲಿಯೂ, ಎಲ್ಲಾ ಸ್ಥಿತಿಗಳಲ್ಲಿಯೂ ಮಾಡತಕ್ಕ

ಎಲ್ಲಾ ವಿಧವಾದ ಸೇವೆಗಳಲ್ಲಿ ಉಪಮಾನರಹಿತವಾದ ಪರಿಚರ್ಯೆ ಮಾಡುವ ಆಸಕ್ತಿಯುಳ್ಳವನೂ, ಮುಖ್ಯವಾಗಿ ಈ ಸ್ಥಳದಲ್ಲಿ ಎಲ್ಲಾ ವಿಧವಾಗಿಯೂ ಸೇವೆ ಮಾಡುವುದರಲ್ಲಿ (ಪರಿಚರ್ಯೆ ಮಾಡುವುದರಲ್ಲಿ) ಆಸಕ್ತಿಯುಳ್ಳವನೂ ಆಗಿ. ನನ್ನ ಅಂತರಂಗ ಸೇವಕನಾಗಿದ್ದುಕೊಂಡು ನನ್ನ ಪ್ರೀತಿಗೆ ಅತಿ ಹೆಚ್ಚು ಪಾತ್ರನಾಗಿ ಆದವನಲ್ಲವೇ ಈ ಆದಿಶೇಷನು? ಆದ್ದರಿಂದ ಅವನ ರೂಪದಲ್ಲಿರುವ ಈ ನಾಗಾಭರಣವನ್ನು ನನ್ನ ಹಸ್ತದಲ್ಲಿ ಧಾರಣೆ ಮಾಡಿ'' ಎಂದು ಕಟ್ಟಳೆಯಿಡಲು, ಅದನ್ನು ಪರಿಜನಗಳು ದೇವಾಧಿದೇವನ ವೈಕುಂಠ ಹಸ್ತದಲ್ಲಿ ಧರಿಸಿದರು.

ಶೇಷವಾಯುಗಳ ವಿವಾದದಲ್ಲಿ, ಶೇಷ ಪರ್ವತವನ್ನು ಕೊಂಡು ತರಲು ಕುತೂಹಲವನ್ನು ಕೊಂಡ ಭಗವಂತನು ವಾಯುದೇವನಲ್ಲಿ ಪಕ್ಷಪಾತವನ್ನು ಮಾಡಿದುದೂ ಅದರಿಂದ ಸ್ವಲ್ಪ ಕ್ಲೇಶವನ್ನು ಹೊಂದಿದ ಶೇಷನು, ಭಗವಂತನನ್ನು ಕುರಿತು ಅತ್ಯುಗ್ರವಾದ ತಪಸ್ಸನ್ನು ಮಾಡಿದುದೂ, ಶೇಷಪರ್ವತದಲ್ಲಿ ಭಗವಂತನು ಆವಿರ್ಭವಿಸುವುದಕ್ಕೆ ಅವನು ಕಾರಣವಾಗಿದ್ದುದೂ, ಭಗವಂತನ ಸೀಮಾತೀತವಾದ ಪ್ರೀತಿಗೆ ಅವನು ಪಾತ್ರನಾದುದೂ ಪುರಾಣಗಳಿಂದ ಅರಿಯಲ್ಪಡುತ್ತದೆ.

ಬ್ರಹ್ಮಪುರಾಣದಲ್ಲಿ ಶೇಷ ವಾಯು ವಿವಾದದ ಮೊದಲನೆಯ ಅಧ್ಯಾಯದಲ್ಲಿ - ವಿವಾದವು ಈ ರೀತಿಯಾಗಿ ನಡೆದಾಗ ಸರ್ವೇಶ್ವರನಾದ ಹರಿಯು ಅಲ್ಲಿಗೆ ಬಂದರು. 'ನಿಮ್ಮಗಳಿಗೆ ಈ ಜಗಳವೇತಕ್ಕೆ?' ಎಂದು ಕೇಳಿದರು. ನಡೆದುದೆಲ್ಲವನ್ನೂ ವಿವರವಾಗಿ ಶೇಷನು ತಿಳಿಸಿದನು. ಶೇಷನು ಮಿತಿಮೀರಿದವನಂತೆ ತಿಳಿದ ಆ ಭಗವಂತನು ಮುಂದಾಗಬೇಕಾದ ಕಾರ್ಯವನ್ನು ಪರಿಶೀಲಿಸಿ, ''ಎಲ್ಲರಲ್ಲಿಯೂ ಪ್ರಾಣವಾಗಿರುವವನೂ, ಬಲಶಾಲಿಯಾದ ದೇವತೆಯೂ ಆದ, ಪ್ರಾಣನಾದ ವಾಯುವನ್ನೇ ನಿಮ್ಮಗಳಲ್ಲಿ ಉತ್ತಮನೆಂದು ನಾನೂ ಪರಿಗಣಿಸುತ್ತೇನೆ. ಲೋಕವನ್ನು ನಾನಲ್ಲವೇ ಹೊರುತ್ತಿರುವನು ಎಂಬ ಅತ್ಯಹಂಕಾರದಿಂದ ಗರ್ವಿಯಾಗಿರುವೆ ನೀನು - ಎಲೈ ಶೇಷನೇ! ನಿನ್ನನ್ನೂ ಕೂರ್ಮ (ಆಮೆ)ವಲ್ಲವೇ ಹೊತ್ತುಕೊಂಡಿದೆ?'' ಎಂದು ಹೇಳಿದ ಭಗವಂತನಿಗೆ ವಾಯುದೇವನಲ್ಲಿ ಏಕ ಪಕ್ಷವಾದ ಪ್ರೀತಿಯಿರುವುದು ತೋರಿಸಲ್ಪಟ್ಟಿತು.

ಅದರಲ್ಲಿಯೂ ಎರಡನೆಯ ಭಾಗದಲ್ಲಿ - ಗರ್ವಭಂಗಗೊಂಡ ಆದಿಶೇಷನು ನಂತರ ಆ ಪರ್ವತದಲ್ಲಿಯೇ ಸ್ವಾಮಿ ಪುಷ್ಕರಿಣಿಯ ವಾಯವ್ಯ ದಿಕ್ಕಿನಲ್ಲಿರುವುದೂ ಹಲವು ತಪ್ಪಲುಗಳನ್ನುಳ್ಳದ್ದೂ, ಹಲವು ಬಗೆ ಮರಗಳಿಂದಲಂಕೃತವಾದದ್ದೂ, ಪುಣ್ಯವಾದುದೂ ಆದ ಬೆಟ್ಟದ ಶಿಖರದಲ್ಲಿ, ಮನಸ್ಸಂತೋಷಗೊಳಿಸುವ ಆನಂದವಾದ ನಾಗತೀರ್ಥದಲ್ಲಿ, ಲೋಕನಾಥನಾದ ಭಗವಂತನು (ಶ್ರೀನಿವಾಸನು) ಆವಿರ್ಭಸುವುದಕ್ಕಾಗಿ, ದೇವತೆಗಳ ಲೆಖ್ಖದಂತೆ ಸಾವಿರವರ್ಷಗಳು ಅತಿಘೋರವಾದ

ತಪಸ್ಸನ್ನು ಮಾಡಿದನು. ಆ ತಪಸ್ಸಿಗೆ ಸಂತೋಷಿಸಿದ ದೇವನು ಎದುರಿನಲ್ಲಿ ಪ್ರತ್ಯಕ್ಷನಾಗಿ, ''ಒಳ್ಳೆಯವನಾದ ಶೇಷನೇ ವರವನ್ನು ಕೇಳು'' ಎಂದು ಹೇಳಲು, ಶೇಷನು, ''ಕಿಂಕರ (ದಾಸ)ನಾದ ನನ್ನಲ್ಲಿ ದಯೆಯುಳ್ಳವರಾಗಿದ್ದರೆ, ದೇವನೇ! ಈ ವರವನ್ನು ಕೊಟ್ಟು ಅನುಗ್ರಹಿಸಿ. ಅದೇನೆಂದರೆ, ಉತ್ಕೃಷ್ಟವಾದ ಶ್ರೀವೈಕುಂಠ ಲೋಕದಲ್ಲಿ ಯಾವ ರೀತಿ ನನ್ನ ಶರೀರದ ಬಗ್ಗೆ ತಮ್ಮ ಕಟಾಕ್ಷವನ್ನು ತೋರಿಸುತ್ತೀರೋ ಅದೇ ರೀತಿ ಈ ನನ್ನ ಬೆಟ್ಟದಾಕೃತಿಯನ್ನು ಹೊಂದಿದ ಶರೀರದಲ್ಲಿಯೂ ಯಾವಾಗಲೂ ವಾಸಮಾಡುತ್ತಿರಬೇಕು ಎಂಬುದೇ ನಾನು ಕೇಳುವ ವರವು'' ಎಂದು ಪ್ರಾರ್ಥಿಸಿಕೊಂಡನು. ಅದನ್ನು ಕೇಳಿದ ಭಗವಂತನು, ''ನಾನು ಕ್ರೀಡೆಯಾಡಿ ಸಂತೋಷಗೊಳ್ಳಲು ಅರ್ಹವಾದ ಒಳ್ಳೆಯ ಪ್ರದೇಶವು ಭೂಲೋಕದಲ್ಲಿ ಎಲ್ಲಿದೆಯೆಂದು ಯೋಚಿಸಿ ನೋಡಿದೆ,'' ಎಂದು ಪ್ರಾರಂಭಿಸಿ, 'ಅಷ್ಟರಲ್ಲಿ ವಾಯುವಿಗೂ ನಿನಗೂ ಉಂಟಾದ ವಿವಾದದ ಕಾರಣವಾಗಿ ಪುಣ್ಯವಾದ ಈ ಬೆಟ್ಟವು ಇಲ್ಲಿಗೆ ಬಂದು ಸೇರಿತು. ನೀನು ತಪಸ್ಸುಮಾಡಿ ನನ್ನನ್ನು ಇಲ್ಲಿ ವಾಸಿಸುವಂತೆ ಪ್ರಾರ್ಥಿಸುತ್ತಿದ್ದೀಯೆ. ಇದು ನನಗೆ ಇಷ್ಟವಾಗಿ ಹಿಂದೆ ನನ್ನಿಂದ ಕೋರಲ್ಪಟ್ಟ ಪ್ರದೇಶವೇ ಆದುದರಿಂದ ನೀನು ಕೇಳಿದಂತೆಯೇ ಆಗಲಿ'! ಎಂದು ವರಪ್ರದಾನ ಮಾಡಿದನು. ಅದರಿಂದ ಭಗವಾನ್ ವಿಷ್ಣುವು ಉತ್ತಮವಾದ ಶ್ರೀ ವೈಕುಂಠವನ್ನು ಬಿಟ್ಟು ಈ ಬೆಟ್ಟಕ್ಕೆ ಬಂದು ಪುಷ್ಕರಿಣಿಯ ಮಗ್ಗುಲಲ್ಲಿ ಶ್ರೀ ಮಹಾಲಕ್ಷ್ಮಿಯೊಂದಿಗೆ ಕೂಡಿ ಕ್ರೀಡಿಸುತ್ತಿದಾನೆ - ಎಂಬುವುದು ಕೊನೆಯಲ್ಲಿ, ಶೇಷನು ಭಗವಂತನು ಮಾಡಿದ ವಾಯು ಪಕ್ಷಪಾತದ ಕಾರಣವಾಗಿ ಕಷ್ಟಪಟ್ಟದ್ದೂ, ಅದರಿಂದ ಘೋರ ತಪಸ್ಸನ್ನಾಚರಿಸಿದುದೂ, ಅದರಿಂದ ಭಗವಂತನು ಆವಿರ್ಭವಿಸಲು ಕಾರಣವಾಗಿದ್ದುದೂ ಹೇಳಲ್ಪಟ್ಟವು. ಈ ರೀತಿಯಾಗಿಯೇ ಭವಿಷ್ಯೋತ್ತರ ಪುರಾಣದ ಮೊದಲನೆಯ ಅಧ್ಯಾಯದಲ್ಲಿಯೂ ಶೇಷವಾಯು ವೃತ್ತಾಂತವು ಕಾಣತಕ್ಕದ್ದು.

ಬ್ರಹ್ಮಾಂಡ ಪುರಾಣದ ಎರಡನೆಯ ಅಧ್ಯಾಯದಲ್ಲಿ - ಭಗವಂತನು ತನ್ನ ಮುಂದೆ ನಿಂತಿರುವ ಶೇಷನನ್ನು ಕರೆದು ಸಂತೋಷದಿಂದ ವಿಕಸಿತ ಕಣ್ಣುಗಳುಳ್ಳವನಾಗಿ ಮೇಘ ಘರ್ಜನೆಯಂತೆ ಗಂಭೀರವಾದ ವಾಣಿಯಿಂದ, ''ಎಲೈ ಅನಂತನೇ, ಲೋಕದಲ್ಲಿ ನನಗೆ ಪ್ರಿಯವಾದವನು ನೀನು, ನಿನ್ನನ್ನು ಬಿಟ್ಟರೆ ಬೇರೊಬ್ಬನಿಲ್ಲ. ಅನಘನೇ! ನನಗೆ ಪ್ರಿಯವಾದುದೊಂದು ಕೆಲಸವನ್ನು ನೀನು ಮಾಡಬೇಕು. ನಾರದರು ಹೇಳಿದ ಮಾತುಗಳೆಲ್ಲವನ್ನೂ ನೀನು ಕೇಳಿದೆಯಲ್ಲವೇ? ಕ್ರೀಡಿಸುವುದಕ್ಕಾಗಿ ತಕ್ಕ ಜಾಗದಲ್ಲಿ ವಾಸಿಸಬೇಕೆಂಬುದು ನನ್ನ ಅಭೀಷ್ಟವು. ನೀನು ಭೂಲೋಕಕ್ಕೆ ಹೋಗಿ ಒಂದು ಬೆಟ್ಟದ ರೂಪವನ್ನು ತಾಳಿ ವಾಸ ಮಾಡು. ನಿನ್ನ ಫಣಿಗಳ (ಹೆಡೆಗಳ) ಕೆಳಗೆ ಮಹಾಲಕ್ಷ್ಮಿಯೊಂದಿಗೆ ನಾನು ವಾಸಿಸಬೇಕು'' -

ಎಂದು ಪ್ರಾರಂಭಿಸಿ, ಆದಿಶೇಷನು ಭಗವಂತನ ಪ್ರೀತಿಗೆ ಪಾತ್ರನಾದುದನ್ನೂ, ಅದರಿಂದ ಅವನು ಬೆಟ್ಟವಾಗಿ ಅವತರಿಸುದದನ್ನೂ ತಿಳಿಸಲ್ಪಟ್ಟಿದೆ.

ಈ ರೀತಿ ವೀರನರಸಿಂಹ ದೇವನೆಂಬ ಹೆಸರುಳ್ಳ ಗಜಪತಿ ಮಹಾರಾಜನ ಕಾಲದಿಂದ ಪ್ರಾರಂಭಿಸಿ ರಾಮಾನುಜಮುನಿವರ್ಯರ ಕಾಲದವರೆಗೆ, ಮುಂಚೆ ಹೇಳಿದ ಕಾರಣಗಳಿಂದ ಒಂದು ಶ್ರೀಹಸ್ತದಲ್ಲಿ ಮಾತ್ರವೇ ನಾಗಾಭರಣವನ್ನು ಧರಿಸಿಕೊಂಡು ಸೇವೆಯನ್ನು ಕೊಡುವ ಭಗವಾನ್ ಶ್ರೀನಿವಾಸನನ್ನು ಸೇವೆ ಮಾಡುತ್ತಿರುವ ಶ್ರೀ ರಾಮಾನುಜ ಮುನಿವರ್ಯರು, ನಾಗಾಭರಣವನ್ನು ಧರಿಸಿರುವುದರ ಬಗ್ಗೆ ಕಾರಣವಾಗಿ ಹಿರಿಯರು ಹೇಳಿದ ವೀರನರಸಿಂಹ ದೇವ ಗಜಪತಿಯ ಕಥೆಯನ್ನು ಕೇಳಿ ಭಗವಂತನಾದ, ಶ್ರೀವೇಂಕಟಾಚಲಪತಿಯಾದ, ಶ್ರೀನಿವಾಸನಿಗೆ ಶೇಷನಲ್ಲಿ ಅಧಿಕವಾದ ಪ್ರೀತಿಯಿರುವಿಕೆಯನ್ನು ಪುರಾಣ ಮೂಲಕವಾಗಿ ತಿಳಿಯಲ್ಪಡುವುದರಿಂದಲೂ, ಅದಕ್ಕೇ ಸೇರಿದಂತೆ ಅನಂತರದ ವೃತ್ತಾಂತಗಳೂ ಅದನ್ನು ಸ್ಥಿರಪಡಿಸಿದುದರಿಂದಲೂ ಭಗವಂತನ ಎರಡು ಶ್ರೀ ಹಸ್ತಗಳಲ್ಲಿಯೂ ಶೇಷನ ರೂಪದಲ್ಲಿ ರಚಿಸಲ್ಪಟ್ಟ ದಿವ್ಯಾಭರಣವನ್ನು ಧಾರಣೆ ಮಾಡಿಸುವುದು ಉಚಿತವು. ಒಂದು ಶ್ರೀ ಹಸ್ತದಲ್ಲಿದ್ದು ಮತ್ತೊಂದರಲ್ಲಿ ಇಲ್ಲದಿದ್ದಲ್ಲಿ 'ಅದು ಹಾಗಿರಬಾರದು' ಎಂಬುದಲ್ಲದೇ, ಭಗವಂತನಿಗೆ ಶೋಭೆ (ಸೌಂದರ್ಯವನ್ನು) ಯನ್ನು ಕಡಿಮೆ ಮಾಡುವುದಾಗಿ ಆಗುತ್ತದೆ. ಭಗವಂತನಿಗೆ ಶೇಷನಲ್ಲಿ ಪ್ರೀತಿಯಿರುವುದನ್ನು ಕಂಡು ಆಕಾಶರಾಜನು ಹಿಂದೆ ಪದ್ಮಾವತಿಯ ಮಂಗಳ ವಿವಾಹ ಸಂದರ್ಭದಲ್ಲಿ ಆಭರಣಗಳನ್ನು ತೊಡಿಸುವಾಗ ಭಗವಂತನಿಗೆ ಎರಡು ಹಸ್ತಗಳಲ್ಲಿಯೂ ಧಾರಣೆ ಮಾಡತಕ್ಕ ಎರಡು ನಾಗಾಭರಣಗಳನ್ನು ಸಮರ್ಪಿಸಿದುದು ಇದರಿಂದಲ್ಲವೇ?

ಭವಿಷ್ಯೋತ್ತರ ಪುರಾಣದ ಹನ್ನೊಂದನೆಯ ಅಧ್ಯಾಯದಲ್ಲಿ - ಎರಡು ನಾಗಾಭರಣಗಳನ್ನೂ, ತೋಳ್ಬಳೆ ಮುಂತಾದುವುಗಳನ್ನೂ, ಆಕಾಶರಾಜನು ಭಗವಂತನಿಗೆ ಅರ್ಪಿಸಿದನು - ಎಂದು ಹೇಳಲ್ಪಟ್ಟಿದೆ. ಈ ಭಗವಂತನಿಗೆ ಶೇಷನಲ್ಲಿ ಪ್ರೀತಿಯಿರುವಿಕೆಯು - ''ಅನಂತನೇ! ನಿನ್ನನ್ನು ಬಿಟ್ಟರೆ ನನಗೆ ಪ್ರಿಯವಾದವನು ಬೇರೊಬ್ಬನಿಲ್ಲ'' ಎಂದು ಬ್ರಹ್ಮಾಂಡ ಪುರಾಣದ ಎರಡನೆಯ ಅಧ್ಯಾಯದಲ್ಲಿರುವ ಭಗವಂತನ ಮಾತುಗಳಿಂದಲೂ, ಭವಿಷ್ಯೋತ್ತರ ಪುರಾಣ ಭಾಗದ ಹದಿನಾಲ್ಕನೆಯ ಅಧ್ಯಾಯದಲ್ಲಿ - ಆದಿಶೇಷನ ವಿಷಯದಲ್ಲಿ ದೃಷ್ಟಿಯಿಟ್ಟವರೂ, ಶೇಷಾಚಲವಾಸಿಯೂ, ಅನವರತವೂ ಆದಿಶೇಷನಲ್ಲಿ ಪ್ರೀತಿಯನ್ನಿಟ್ಟಿರುವವರೂ, ಶಾರ್ಙ್ಗವೆಂಬ ಧನುಸ್ಸನ್ನು ಹಿಡಿದ ಶ್ರೀನಿವಾಸನಿಗೆ ಬ್ರಹ್ಮೋತ್ಸವದಲ್ಲಿ ಮೊದಲನೆಯ ದಿನದ ರಾತ್ರಿ ಮಾತ್ರವಲ್ಲದೆ ಎರಡನೆಯ ದಿವಸದ ಬೆಳಿಗ್ಗೆಯೂ ಸಹ ಶೇಷವಾಹನದಲ್ಲಿ ಮೆರವಣಿಗೆಯು ನಡೆಯಿತು - ಎಂದಿರುವ ವಚನಗಳಿಂದಲೂ,

ಲ್ಲದೇ ಪುರಾಣಗಳಿಂದಲೂ ತಿಳಿಯಲ್ಪಡುವ ಅನ್ಯಚರಿತ್ರೆಗಳಿಂದಲೂ ವಿವರವಾಗಿ ಂಡುಬರುತ್ತದೆ.

ಹಿಂದಿನ ಕಾಲದಲ್ಲಿ ಶೇಷಪ್ರಿಯನಾದ ಭಗವಂತನ ಅಭಿಪ್ರಾಯವನ್ನು ರಿತ ಆಕಾಶರಾಜನು ಸಮರ್ಪಿಸಿದ ನಾಗಾಭರಣಗಳೆರಡೂ ಕಾಲಾನಂತರ ಪಹರಿಸಲ್ಪಟ್ಟು ಹೋದುವಲ್ಲಾ ಎಂದು ಯೋಚಿಸಿದ ಭಗವಂತನು ಬೇರೊಂದು ಭರಣವನ್ನು ಸೂಚಿಸಿ ತಾವೇ ಒಂದು ನಾಗಾಭರಣವನ್ನು ಈಗ ಮರ್ಪಿಸಿಕೊಂಡುಬಿಟ್ಟರು. ಮತ್ತೊಂದು ಇಲ್ಲದುದರಿಂದ ಕೊರೆಯಾಗಿ ಣುತ್ತದೆ. ಆದುದರಿಂದ ಮತ್ತೊಂದು ದಿವ್ಯಹಸ್ತಕ್ಕೂ ಇನ್ನೊಂದು ನಾಗಾಭರಣವನ್ನು ಸಮರ್ಪಿಸಿಯೇ ಆಗಬೇಕು ಎಂದು ಹೇಳಿ, ಹಾಗೆಯೇ ಮಾಡಿಸಿ ಎರಡು ನಾಗಾಭರಣಗಳನ್ನೂ, ಅಧಿಕವಾದ ಶೋಭೆಯನ್ನುಂಟು ಮಾಡುವುದಕ್ಕಾಗಿ ತೋಳ್ಬಳೆಗಳೊಂದಿಗೆ ಸೇರಿಸಿ, ಭಕ್ತರುಗಳ ಮನಸ್ಸನ್ನೂ ಣ್ಣುಗಳನ್ನೂ ಆಕರ್ಷಿಸುವಂತೆ ಭಗವಂತನ ದಿವ್ಯವಾದ ಶ್ರೀಹಸ್ತಗಳಲ್ಲಿ ಶ್ರೀರಾಮಾನುಜ ಮುನಿಗಳು) ಧಾರಣೆ ಮಾಡಿಸಿ ಕೃಪೆ ಮಾಡಿದರು.

**ನರಸಿಂಹ ದೇವರು**

ಇನ್ನು ಶ್ರೀನಿವಾಸದೇವನ ದೇವಾಲಯದಲ್ಲಿರುವ ಶ್ರೀನರಸಿಂಹ ದೇವರ ಚರಿತ್ರೆಯು ಹೇಳಲ್ಪಡುತ್ತದೆ. ''ಪವಿತ್ರವಾದ ಸ್ವಾಮಿ ಪುಷ್ಕರಿಣಿಯ ತೀರದಲ್ಲಿ, ಶಂಕರನು ನರಸಿಂಹದೇವನನ್ನು ಪರಮಭಕ್ತಿಯಿಂದ ಕೂಡಿ ಪೂಜೆ ಮಾಡಿದನು'' ಎಂದು ಸ್ಕಂದ ಪುರಾಣ ಭಾಗಕ್ಕೆ ಸೇರಿದ ಸುವರ್ಣಮುಖೀ ಮಾಹಾತ್ಮ್ಯದಲ್ಲಿರುವ ವಚನದಿಂದಲೂ, - ಸ್ವಾಮಿ ಪುಷ್ಕರಿಣಿಯ ತಟದಲ್ಲಿ ನೀಲಕಂಠನಾದ ವಿಶ್ವೇಶನು ಪರಮಶಿವನು) ನರಸಿಂಹದೇವರನ್ನು ಪ್ರೀತಿಯಿಂದ ಧ್ಯಾನಿಸಿಕೊಂಡು ಪಾರ್ವತಿಯೊಂದಿಗೆ ಕೆಲವು ದಿನಗಳು ವಾಸಿಸುತ್ತಾ ಇದ್ದರು - ಎಂಬ ವಾಮನ ಪುರಾಣದ ವಚನದಿಂದಲೂ, ವರಾಹ ಪುರಾಣದ ಮೊದಲನೆಯ ಭಾಗ, ಇಪ್ಪತ್ತೊಂಬತ್ತನೆಯ ಅಧ್ಯಾಯ, ೬೧ ಎಂಬ ಸಂಖ್ಯೆಯಿಂದ ಸೂಚಿಸಿರುವ ಅಷ್ಟೋತ್ತರ ಶತನಾಮಾವಳಿ (೧೦೮) ಯಲ್ಲಿರುವ - ಒಳ್ಳೆಯ ಭಕ್ತನಾದ (ಸದ್ಭಕ್ತನಾದ) ನೀಲಕಂಠನಿಂದ ಅರ್ಚಿಸತಕ್ಕ ನರಸಿಂಹನಿಗೆ ನಮಸ್ಕಾರಗಳು - ಎಂಬ ನಾಮಾವಳಿ (ವಚನ)ಯಿಂದಲೂ, ಸ್ವಾಮಿ ಪುಷ್ಕರಿಣಿಯ ಮೇಲ್ತಟದಲ್ಲಿ ಕಿಲಕಾಲ ತಪಸ್ಸನ್ನಾಚರಿಸಿ ಬಂದ ಪರಮಶಿವನ ಕಣ್ಣುಗಳಿಗೆ ವಿಷಯವಾದವರಾಗಿ ತಿಳಿಯಲ್ಪಡುವವರೂ, ಆ ಜಾಗದಲ್ಲಿಯೇ ಒಂದು ಗುಡಿಯಲ್ಲಿ ಶ್ರೀವೈಖಾನಸಾಗಮ ವಿಧಿಗಳಂತೆ ಆರಾಧಿಸಲ್ಪಟ್ಟು ಬರುವವರಾದ ನರಸಿಂಹ ದೇವರೂ, ಪರಮಶಿವನ ತಪಸ್ಸಿನ ಫಲವಾಗಿ ಆವಿರ್ಭವಿಸಿದರು ಎಂಬ ಅಭಿಮಾನದ ಕಾರಣವಾಗಿ ಶೈವರುಗಳು

ಅವರ ಪಕ್ಕದಲ್ಲಿ ಅವರ ಭಕ್ತರಾದ ಪರಮಶಿವನನ್ನೇ ಪ್ರತಿಷ್ಠೆ ಮಾಡಿಸಿಡಬೇಕೆಂದು ಹಿಂದೆ ಒಂದು ಕಾಲದಲ್ಲಿ ವಿವಾದ ಮಾಡಲು, ಆಗ ಆ ಸ್ಥಳದಲ್ಲಿದ್ದ ವೈಷ್ಣವರುಗಳು ರಾಜಸಭೆಗೆ ಹೋಗಿ - ಈ ಶ್ರೀವೇಂಕಟಗಿರಿಯು ಶ್ರೀವೈಕುಂಠದಿಂದ ತರಲ್ಪಟ್ಟುದಾದುದರಿಂದ ಅಪ್ರಾಕೃತವಾದ (ಇಲ್ಲಿರುವ ಪಂಚಭೂತಗಳಿಂದ ಉಂಟಾಗಲ್ಪಡದ) ಭಗವಂತನ ಸ್ಥಳವಾಗುತ್ತದೆ ಎಂದು ಶ್ರೀ ವೆಂಕಟಾಚಲ ಮಾಹಾತ್ಮ್ಯೆಯನ್ನು ಹೇಳುವ ಪುರಾಣಗಳಲ್ಲಿ ಎಲ್ಲ ಕಡೆಯೂ ಘೋಷಿಸಲ್ಪಟ್ಟಿದೆ. ಇಂತಹ ಅಪ್ರಾಕೃತವಾದ ವಿಷ್ಣುಕ್ಷೇತ್ರದಲ್ಲಿ ಪರಮಶಿವನನ್ನು ಪ್ರತಿಷ್ಠಾಪನೆ ಮಾಡುವುದು ಉಚಿತವಲ್ಲವೆಂದು ಪ್ರಮಾಣೋಪನ್ಯಾಸಗಳಿಂದ ಬಹಳ ಪ್ರಯಾಸದಿಂದ ಪ್ರತಿಪಾದಿಸಿ (ಸಮರ್ಥಿಸಿ), ಆಗ, ಅಲ್ಲಿದ್ದ ಶ್ರೀವೈಷ್ಣವರುಗಳೆಲ್ಲರೂ, ಈ ನರಸಿಂಹದೇವರು ಮಹಾಲಕ್ಷ್ಮಿಯಿಂದ ಕೂಡಿ ಇಲ್ಲದೇ ಇರುವುದರಿಂದ ಅತ್ಯಂತ ಉಗ್ರ (ಭಯಂಕರ) ರೂಪವನ್ನು ಹೊಂದಿರುವವರಾಗಿ ಇರುತ್ತಿದ್ದಾರೆ. ಮೇಲೂ ಆಗಾಗ ಶೈವರುಗಳು ಉಪಟಳಗಳನ್ನು ಕೊಡುವುದಕ್ಕೂ ಕಾರಣರಾಗಿದ್ದಾರೆ. ಆದುದರಿಂದ ಇನ್ನೂ ಇವರನ್ನು ಅತ್ಯಂತ ಪ್ರಸಿದ್ಧವಾದ ರೀತಿಯಲ್ಲಿ ಪೂಜಿಸಿ ಬರುವುದಾದಲ್ಲಿ, ಈ ಭಯಂಕರವಾದ ಕಲಿಯುಗದಲ್ಲಿ ವಿಧಿವತ್ತಾಗಿ ಪೂಜೆಯೂ ನಡೆಯದು. ಪೂಜೆಯಲ್ಲಿ ಕೆಲ ಅಂಶಗಳಿಗೆ ಲೋಪವುಂಟಾದಲ್ಲಿ ಇವರ ದಿವ್ಯ ಚಕ್ಷುಷಗಳು ಊರನ್ನೇ ಸುಟ್ಟುಹಾಕುವ, ಉಗ್ರವಾದ ದೃಷ್ಟಿಗಿರುವ ತೀಕ್ಷ್ಣತೆಯು ಕಡಿಮೆಯಾಗದೆ ಹೆಚ್ಚಾಗಿ ಬಿಡುತ್ತದೆ. ಮುಂಚೆ ಹೇಳಿದಂತೆ ಶೈವರುಗಳ ತೊಂದರೆಯನ್ನೂ ನಿವಾರಿಸಲಾಗುವುದಿಲ್ಲ. ಆದುದರಿಂದ ಇವರಿಗೆ ಪೂಜಾದಿಗಳನ್ನು ನಿಲ್ಲಿಸಿಬಿಡಬೇಕೆಂದು ಆಲೋಚಿಸಿ ಹಾಗೆಯೇ ಮಾಡಿದರು - ಎಂದು ಹಿರಿಯರು ಹೇಳಿದ ಕಥೆಯನ್ನು ಕೇಳಿದ ಶ್ರೀರಾಮಾನುಜ ಮುನಿವರ್ಯರು - ಪುರಾಣ ಪ್ರಸಿದ್ಧರಾದವರೂ, ಪರಕಾಲಸೂರಿ (ತಿರುಮಂಗೈ ಆಳ್ವಾರ್) ಯವರು ಹಾಡಿದ "ವೇಂಗಡತ್ತು ಅರಿಯೈ" ಪೆರಿಯ ತಿರುಮೊಳಿ (೭-೩-೫) ಎಂಬ ದಿವ್ಯಸೂಕ್ತಿಗೆ ಪಾತ್ರರಾದವರೂ, "ಸದ್ಭಕ್ತರಾದ ನೀಲಕಂಠ (ಪರಮಶಿವ) ರಿಂದ ಅರ್ಚಿಸತಕ್ಕ ನರಸಿಂಹನಿಗೆ ನಮಸ್ಕಾರ" ಎಂದು ಶ್ರೀವೆಂಕಟೇಶನ ನೂರೆಂಟು ನಾಮಾವಳಿಯಲ್ಲಿ ಓದಲ್ಪಟ್ಟು ಶ್ರೀನಿವಾಸನ ಪಂಚಬೇರಗಳ (ಐದು ಮೂರ್ತಿಗಳ) ರೀತಿಯಲ್ಲಿ, ಶ್ರೀನಿವಾಸನೊಂದಿಗೆ ಏಕತ್ವವನ್ನೇ ಉಳ್ಳವರೆಂದು ಅರಿಯಲ್ಪಡುವವರೂ, ಈ ಕ್ಷೇತ್ರದ ಅಧಿಪತಿಯಾದ ನರಸಿಂಹ ದೇವರಿಗೆ ಪೂಜೆಯಿಲ್ಲದೇ ಇದ್ದಲ್ಲಿ ಈ ಕ್ಷೇತ್ರಕ್ಕೆ ಮೇಲಿಂದ ಮೇಲೆ ಉಂಟಾಗಬೇಕಾದ ಅಭಿವೃದ್ಧಿಯು ನಾಶವಾಗುತ್ತದೆ ಎಂದು ಚಿಂತಿಸಿ, "ಇವರಿಗೆ ಸ್ವಾಮಿ ಪುಷ್ಕರಿಣಿಯ ಮೇಲ್ದಟದಲ್ಲಿ ಪ್ರತ್ಯೇಕ ದೇವಸ್ಥಾನವಿದ್ದಲ್ಲಿ ಹಿಂದೆ ತಿಳಿಸಿದಂತೆ ಶೈವರುಗಳ ಉಪದ್ರವವು ಉಂಟಾಗಬಹುದು. ಶ್ರೀವೆಂಕಟೇಶನ

ದಿವ್ಯ ದೇವಾಲಯದಲ್ಲಿಯೇ ಒಂದು ಜಾಗದಲ್ಲಿ ದೇವನಿಗೆ ವಾಸಸ್ಥಾನ ಕಲ್ಪಿಸಿದ್ದಲ್ಲಿ ಆ ಉಪದ್ರವವು ಸಂಭವಿಸಲಾರದು. ''ಶ್ರೀಮದಾನಂದ ನಿಲಯಂ'' ಎಂಬ ವೆಂಕಟೇಶನ ದಿವ್ಯವಿಮಾನಕ್ಕೆ ಎದುರು ಮುಖವಾಗಿ ಇವರನ್ನು ಪ್ರತಿಷ್ಠೆ ಮಾಡಿಸಿದರೆ, ಇವರ ಉಗ್ರದೃಷ್ಟಿಯ ತೀಕ್ಷ್ಣತೆಯು ತಾನಾಗಿ ತಣಿಸಲ್ಪಟ್ಟು, ಒಂದು ವೇಳೆ ಇವರ ಪೂಜೆಯಲ್ಲಿ ಕೆಲ ಅಂಶಗಳು ಕಡಿಮೆಯಾದಾಗಲೂ ಅದು ಊರನ್ನು ದಹಿಸುವುದು ಮುಂತಾದ ಎಂಥಹ ಕೆಟ್ಟದ್ದನ್ನೂ ಉಂಟು ಮಾಡಲಾರದು'' ಎಂದು ಹೇಳಿ ಶ್ರೀವೆಂಕಟೇಶನ ದೇವಸ್ಥಾನದಲ್ಲಿಯೇ ಈಶಾನ್ಯ ಮೂಲೆಯಲ್ಲಿ ಆನಂದ ನಿಲಯ ದಿವ್ಯವಿಮಾನವನ್ನು ನೋಡುತ್ತಿರುವಂತೆಯೇ ಶ್ರೀ ನರಸಿಂಹದೇವರನ್ನು ಪ್ರತಿಷ್ಠೆ ಮಾಡಿಸಿ, 'ನರಸಿಂಹನು ಪೂಜಿಸಲ್ಪಡುವ ಸ್ಥಳದಲ್ಲಿ ಶತ್ರುಗಳಿಂದ ತೊಂದರೆಯುಂಟಾಗದು' ಎಂದು ಶಾಸ್ತ್ರವು ಹೇಳಿರುವುದನ್ನು ತಮ್ಮ ದಿವ್ಯವಾದ ಮನಸ್ಸಿನಲ್ಲಿ ಇಟ್ಟುಕೊಂಡು, ಆ ಭಗವಂತನಿಗೆ ನಿತ್ಯಪೂಜೆಯನ್ನು ವಿಧಿವತ್ತಾಗಿ ನಡೆಸುವಂತೆ (ಶ್ರೀರಾಮಾನುಜರು) ಮಾಡಿ ಕೃಪೆ ತೋರಿದರು.

**ನಡುದಾರಿಯ ನರಸಿಂಹ ದೇವರು**

ಇನ್ನು ಶ್ರೀವೇಂಕಟಾಚಲದ ದಾರಿಯ ಮಧ್ಯದಲ್ಲಿರುವ ಶ್ರೀ ನರಸಿಂಗ ದೇವರ ಚರಿತ್ರೆಯು ಹೇಳಲ್ಪಡುತ್ತದೆ. ಮಾರ್ಕಂಡೇಯ ಪುರಾಣಭಾಗದ ಎರಡನೆಯ ಅಧ್ಯಾಯದಲ್ಲಿ - ಆ ಮಾರ್ಕಂಡೇಯರು ಶ್ರೀ ವೇಂಕಟಗಿರಿಯನ್ನು ಹತ್ತಿ ನಡುದಾರಿಯಲ್ಲಿರುವ, ನರಸಿಂಗ ದೇವರು ವಿರಾಜಮಾನರಾಗಿರುವ ಲೋಕಪ್ರಸಿದ್ಧವಾದ ಗುಹೆಯೊಂದನ್ನು ಕಂಡರು, - ''ಲಕ್ಷ್ಮೀನರಸಿಂಹನೇ, ಪ್ರಹ್ಲಾದನಿಗೆ ವರಪ್ರದಾನ ಮಾಡಿದವನೇ, ಪರಮಾನಂದಸ್ವರೂಪನೇ, ದೇವಾಧಿದೇವನೇ, ಮಧುಸೂದನನೇ, ದಾಸಾನುದಾಸನಾದ ನನ್ನನ್ನು ಕಾಪಾಡಿ ಕೃಪೆಮಾಡು'' - ಎಂದು ತೀರ್ಥಯಾತ್ರೆಯನ್ನು ಮಾಡಲು ಇಚ್ಛಿಸಿ ಶುದ್ಧನೆಂಬ ಅಗಸ್ತ್ಯ ಋಷಿಗಳ ಶಿಷ್ಯನೊಂದಿಗೆ ಹೋಗುತ್ತಿದ್ದ ಮಾರ್ಕಂಡೇಯ ಮಹಾಮುನಿಗಳು, ತಿರುವೇಂಕಟಗಿಯನ್ನು ಹತ್ತುವ ಮಾರ್ಗ ಮಧ್ಯದಲ್ಲಿ ನರಸಿಂಹಗುಹೆಯಲ್ಲಿ, ಲಕ್ಷ್ಮೀ ನರಸಿಂಹ ದೇವರು ಎದುರಿನಲ್ಲಿ ಪ್ರತ್ಯಕ್ಷವಾಗಿ ತೋರಿ ಅವರನ್ನು ನಮಸ್ಕರಿಸಿದನಂತರವೇ ಸ್ವಾಮಿ ಪುಷ್ಕರಿಣಿಗೆ ಹೋದುದಾಗಿ ಹೇಳಲ್ಪಡುವುದರಿಂದ, ಅಂಥಹ ಗುಹೆಯಲ್ಲಿ ಹಿಂದೆ ಹೇಳಿದ ಚರಿತೆಯನ್ನು ಜ್ಞಾಪಿಸಿಕೊಳ್ಳುವುದುಕ್ಕಾಗಿ ಶ್ರೀ ಲಕ್ಷ್ಮಿನರಸಿಂಹ ದೇವರಿಗೆ ಒಂದು ದೇವಸ್ಥಾನವನ್ನು ನಿರ್ಮಾಣ ಮಾಡಬೇಕೆಂದು ಯೋಚಿಸಿದ ಶ್ರೀ ರಾಮಾನುಜ ಯತಿವರ್ಯರು ಆ ಜಾಗದಲ್ಲಿ ಪುರಾಣದಲ್ಲಿ ಹೇಳಿರುವಂತೆ ಆ ಭಗವಂತನಿಗೆ ದೇವಸ್ಥಾನವನ್ನು ಕಟ್ಟಿ ಪ್ರತಿಷ್ಠೆ ಮಾಡಿಸಿ, ನಿತ್ಯಪೂಜಾದಿಗಳು ನಡೆಯುವಂತೆ ಏರ್ಪಾಟು ಮಾಡಿದರು.

## ಶ್ರೀನಿವಾಸದೇವನ ಗಲ್ಲದಲ್ಲಿ ಪಚ್ಚಕರ್ಪೂರವೂ ಮತ್ತು ಗೋಪುರದ್ವಾರದಲ್ಲಿ ಕಬ್ಬಿಣದ ಹಾರೆ ಇರುವುದೂ, ಇವುಗಳ ವೃತ್ತಾಂತ

ಇನ್ನು ಶ್ರೀನಿವಾಸನ ಗಲ್ಲದಲ್ಲಿ ಸಮರ್ಪಿಸಲ್ಪಡುತ್ತಿರುವ ಪಚ್ಚಕರ್ಪೂರದ ಹುಡಿ, ದೇವಾಲಯದ ಗೋಪುರದ್ವಾರದಲ್ಲಿ ತೂಗು ಬಿಟ್ಟಿರುವ ಕಬ್ಬಿಣದ ಹಾರೆ ಇವುಗಳ ಚರಿತ್ರೆಯು ಹೇಳಲ್ಪಡುತ್ತದೆ. ಶ್ರೀ ರಾಮಾನುಜ ಮುನಿಗಳಿಂದ ಶ್ರೀವೇಂಕಟೇಶನಿಗೆ ಕೈಂಕರ್ಯ ಮಾಡುವುದಕ್ಕಾಗಿ ನಿಯಮಿಸಲ್ಪಟ್ಟ ಶ್ರೀ ಅನಂದಾಳ್ವಾನ್ (ಶ್ರೀ ಅನಂತಾರ್ಯರು) ಅತ್ಯಂತ ಶ್ರದ್ಧೆಯಿಂದ ಮತ್ತೆ ಯಾರ ಸಹಾಯವನ್ನೂ ಪ್ರತೀಕ್ಷೆ ಮಾಡದೆಯೇ ತಮಗೆ ವಿಧಿಸಿರುವ ಕೈಂಕರ್ಯವನ್ನು ಮಾಡಬೇಕೆಂದು ನಿಶ್ಚಯಿಸಿ, ತಮ್ಮ ಪತ್ನಿಯು ಪೂರ್ಣ ಗರ್ಭಿಣಿಯಾಗಿದ್ದಾಗಲೂ, ಅವಳ ಸಹಾಯವನ್ನು ಮಾತ್ರ ಪಡೆದು ನಂದನವನವನ್ನು ರಚಿಸುವುದಕ್ಕಾಗಿ, ಕಬ್ಬಿಣದ ಹಾರೆಯನ್ನು ತೆಗೆದುಕೊಂಡು ತಾವೇ ಏರಿಯನ್ನು ನಿರ್ಮಿಸುವಾಗ ಭಾರವಾದ ಮಣ್ಣಿನ ಗೂಡೆಯನ್ನು ಹೊತ್ತುಕೊಂಡು ಹೋಗುತ್ತಿರುವ ತಮ್ಮ (ಅನಂತಾರ್ಯರ) ಪತ್ನಿಯ ಕಷ್ಟವನ್ನು ನೋಡಲಾರದೆ, ಆ ಗೂಡೆಯನ್ನು ತಾನೇ ತೆಗೆದುಕೊಂಡು ಹೋಗುತ್ತಿದ್ದ (ಬ್ರಹ್ಮಚಾರಿಯ ರೂಪದಲ್ಲಿ) ಶ್ರೀನಿವಾಸ ಭಗವಂತನ ಕೆಲಸವನ್ನು, ಮತ್ತೊಬ್ಬರ ಸಹಾಯವಿಲ್ಲದೆಯೇ ಈ ಕೈಂಕರ್ಯವನ್ನು ನೆರವೇರಿಸಬೇಕೆಂಬ ತಮ್ಮ ಮನಸ್ಸಿಗೆ ವಿರೋಧವಾಗಿದೆಯೆಂದು ತಿಳಿದು, ಕೋಪಿಸಿಕೊಂಡು, ಶ್ರೀನಿವಾಸನ ಗಲ್ಲಕ್ಕೆ ಹಾರೆಯಿಂದ ಹೊಡೆಯಲು, ನಂತರ ದೇವಾಲಯದಲ್ಲಿ ದೇವಾಧಿದೇವನು ಗಲ್ಲದಿಂದ ರಕ್ತವನ್ನು ಸುರಿಸುತ್ತಿರುವುದನ್ನು ಕಂಡು ಮನೋವ್ಯಾಕುಲ ಗೊಂಡ ಶ್ರೀ ಅನಂದಾಳ್ವಾನ್‌ರವರು, ''ಅಯ್ಯೋ! ಬೇರೆ ವೇಷದಿಂದ ಬಂದು ನನ್ನನ್ನು ಈ ರೀತಿ ಬುದ್ಧಿವ್ಯಾಮೋಹಗೊಂಡವನಂತೆ ಮಾಡಿದವನು ಈ ಭಗವಂತನೇ'' ಎಂದು ನಿಶ್ಚಯಿಸಿ ಅಗಲೇ ಪಚ್ಚಕರ್ಪೂರದ ಪುಡಿಯನ್ನು ಅವನ ಗಲ್ಲದ ಗಾಯದಲ್ಲಿ ಒತ್ತಿ ಇಟ್ಟು ತಾವು ಮಾಡಿದ ಅಪರಾಧವನ್ನು ಕ್ಷಮಿಸಬೇಕೆಂದು ಭಗವಂತನನ್ನು ಬೇಡಲು, ನಂತರ ಆಶ್ರಿತ ವಾತ್ಸಲ್ಯ ಸಾಗರನಾದ ಶ್ರೀನಿವಾಸ ಭಗವಂತನು ಶ್ರೀ ಅನಂದಾಳ್ವಾನ್‌ರವರಿಗೆ ತನಗೆ (ಶ್ರೀನಿವಾಸನಿಗೆ) ಮಾಡುವ ಕೈಂಕರ್ಯದಲ್ಲಿರುವ ಶ್ರದ್ಧೆಯನ್ನು ಕಂಡು ಸಂತೋಷಗೊಂಡವನಾಗಿ, 'ಹೇ ಅನಂತಾರ್ಯರೇ! ಕೈಂಕರ್ಯದಲ್ಲಿ ಶ್ರದ್ಧೆಗೊಂಡ ನೀವು ಹಾರೆಯನ್ನು ಕೊಂಡು ಗಲ್ಲದಲ್ಲಿ ಉಂಟುಮಾಡಿದ ಗಾಯವು ಅಲ್ಲಿ ಗುರುತನ್ನು ಮಾಡಿದೆ. ನನ್ನ ವಕ್ಷಸ್ಥಳದ ಶ್ರೀವತ್ಸ ಮಚ್ಚೆಯಂತೆ ಮುಖ ಮಂಡಲಕ್ಕೆ ಬಂದು ಸುಂದರವಾದ ಗುರುತಾಗಿ ಕಂಡು ಬರಲಿ. ನೀವು ಇದಕ್ಕಾಗಿ ದುಃಖಿಸುವುದು ಬೇಡ'' ಎಂದು ಹೇಳಿ ಅನಂದ್ವಾಳ್ವಾನ್‌ರವರಿಗೆ ಮನಸ್ಸಮಾಧಾನಮಾಡಿ- ಇಲ್ಲಿಂದ ಮುಂದೆ ಈ

ಚರಿತ್ರೆಯನ್ನು ಜ್ಞಾಪಿಸಿಕೊಳ್ಳುವುದಕ್ಕಾಗಿ ನನ್ನ ಗಲ್ಲದಲ್ಲಿ ಸುವಾಸನೆಯನ್ನು ಸೂಸುವ ಪಚ್ಚಕರ್ಪೂರದಿಂದ ಯಾವಾಗಲೂ ಧರಿಸಿಕೊಂಡಿರುವಂತೆ ಮಾಡಬೇಕು. ನನಗೆ ಈ ವ್ರಣವನ್ನುಂಟುಮಾಡಿಸಿದ ಹಾರೆಯನ್ನು ಎಲ್ಲರೂ ನೋಡತಕ್ಕ ನನ್ನ ದೇವಸ್ಥಾನದ ಗೋಪುರದಲ್ಲಿ ಒಂದು ಎತ್ತರವಾದ ಜಾಗದಲ್ಲಿ ಸ್ಥಾಪಿಸಬೇಕು - ಎಂದು (ಪರಿಜನರುಗಳಿಗೆ) ತಾನೇ ನಿಯಮಿಸಿದನು. ಅಂದಿನಿಂದ ಪ್ರತಿನಿತ್ಯವೂ ಆರಾಧನೆಯ ಸಮಯದಲ್ಲಿ ಶ್ರೀ ಶ್ರೀನಿವಾಸ ಭಗವಂತನ ಗಲ್ಲದಲ್ಲಿ ಸುವಾಸನೆಯಿಂದ ಕೂಡಿದ ಪಚ್ಚಕರ್ಪೂರದ ಹುಡಿಯು ಧಾರಣೆಮಾಡಲ್ಪಟ್ಟು ಬರುತ್ತಿದೆ. ಹಾರೆಯೂ ಸಹ ಶ್ರೀನಿವಾಸ ದೇವರ ಗೋಪುರದ್ವಾರದಲ್ಲಿ (ಒಳಗಡೆಯ ಉತ್ತರ ದಿಕ್ಕಿನ ಗೋಡೆಯ ಮೇಲ್ಭಾಗದಲ್ಲಿ) ಸ್ಥಾಪಿಸಲ್ಪಟ್ಟು ಎಲ್ಲರ ದೃಷ್ಟಿಗೂ ಗೋಚರವಾಗಿ ಕಂಡುಬರುತ್ತಿದೆ.

**ಅಪ್ರದಕ್ಷಿಣಯಾತ್ರೆಯೂ (ಮೆರವಣಿಗೆ) ಅಳಿಯನಿಗೆ ಬಹುಮಾನವೂ**

ಇನ್ನು ಶ್ರೀ ಶ್ರೀನಿವಾಸನಿಗೆ ಕನ್ಯಾಮಾಸದ ಬ್ರಹ್ಮೋತ್ಸವದಲ್ಲಿ ಏಳನೆಯ ದಿನ ಸಾಯಂಕಾಲದಲ್ಲಿ, ಉದ್ಯಾನವನ ವಿಹಾರೋತ್ಸವ ಯಾತ್ರೆಯ ಸಂದರ್ಭದಲ್ಲಿ, ದೇವನು ಅಪ್ರದಕ್ಷಿಣವಾಗಿ ಮೆರವಣಿಗೆ ಮಾಡುವುದೂ, ಎಂಟನೆಯದಿನ ಬೆಳಿಗ್ಗೆ ಶ್ರಿ ರಥೋತ್ಸವ ಯಾತ್ರೆಯ ಸಂದರ್ಭದಲ್ಲಿ ಅನಂದ್ವಾಳ್ವಾನ್‌ರವರು ಭಗವಂತನಿಗೆ ಜಾಮಾತೃ ಬಹುಮಾನ (ಅಳಿಯನಿಗೆ ಕೊಡುವ ಬಹುಮಾನ) ಕೊಡುವುದೂ ಇವುಗಳ ಚರಿತ್ರೆಗಳು ಹೇಳಲ್ಪಡುತ್ತವೆ.

ಶ್ರೀ ರಾಮಾನುಜ ಮುನಿರ್ವರು ಇಟ್ಟ ಕಟ್ಟಳೆಯಂತೆ ಶ್ರೀ ಆನಂದಾಳ್ವಾನ್‌ರವರು ಶ್ರೀವೇಂಕಟಗಿರಿಯಲ್ಲಿ ದೊಡ್ಡ ನಂದನವನವನ್ನೂ ಅದಕ್ಕೆ ಆಧಾರವಾಗಿ ಒಂದು ತಟಾಕ (ಕೆರೆ)ವನ್ನು ನಿರ್ಮಿಸಿ ನಿರವಧಿಕವಾಗಿ ಪುಷ್ಪಮಾಲೆಗಳನ್ನು ಕಟ್ಟಿ ಸಮರ್ಪಿಸುವ ಕೈಂಕರ್ಯದಿಂದ ಶ್ರೀ ಶ್ರೀನಿವಾಸನು ಸಂತೋಷಿಸುತ್ತಾ ಇರುವಾಗ ಪರಮ ದಯಾಳುವೂ, ಆಶ್ರಿತ ವಾತ್ಸಲ್ಯಜಲಧಿಯೂ ಆದ ಆ ಶ್ರೀನಿವಾಸನು, ತನ್ನ ಭಕ್ತರಾದ ಶ್ರೀ ಅನಂದಾಳ್ವಾನ್‌ರವರು ಮಾಡುವ ನಿರವಧಿಕ ಪುಷ್ಪಕೈಂಕರ್ಯವನ್ನು ತಾನು ಅತ್ಯಂತ ಪ್ರೀತಿಯಿಂದ ಸ್ವೀಕರಿಸುವುದನ್ನೂ, ಆ ಕೈಂಕರ್ಯದಲ್ಲಿ ಅವರಿಗಿರುವ ಶ್ರದ್ಧೆ ಮತ್ತು ಭಾವಶುದ್ಧಿಯನ್ನು ಎಲ್ಲರಿಗೂ ಪ್ರಕಾಶಪಡಿಸುವುದಕ್ಕಾಗಿ, ಒಂದಾನೊಂದು ಸಲ ತಾನು ಒಬ್ಬ ರಾಜಕುಮಾರನ ವೇಷವನ್ನು ಧರಿಸಿಕೊಂಡು, ರಾಜಕುಮಾರಿಯ ವೇಷವನ್ನು ಹಾಕಿಕೊಂಡಿದ್ದ ತನ್ನ ತನ್ನ ಪಟ್ಟದಣಿಯಾದ ಪದ್ಮಾವತಿ(ಅಲರ್‌ಮೇಲ್ ಮಂಗೈ) ದೇವಿಯೊಂದಿಗೆ, ರಾತ್ರಿ ಹೊತ್ತುಗಳಲ್ಲಿ, ಅನಂದಾಳ್ವಾನ್‌ರ ನಂದವನದಲ್ಲಿ (ಪುಷ್ಪೋದ್ಯಾನ) ಪ್ರವೇಶಿಸಿ, ಇಷ್ಟದಂತೆ ಕ್ರೀಡಿಸಿ, ಅಲ್ಲಿರುವ ಹೂವು, ಚಿಗುರು,ಹಣ್ಣುಗಳನ್ನು ಕಿತ್ತು

ಹೂದೋಟವನ್ನು ಚಿಂದಿ ಬಿಂದಿ ಮಾಡಿದರು.

ಇದರ ನಂತರ ಶ್ರೀ ಅನಂದಾಳ್ವಾನ್‌ರವರು ಸುಂದರವಾದ ನಂದನವನ ಹಾಳಾಗುತ್ತಿರುವುದನ್ನು ಕಂಡು, ''ಭಗವಂತನ ಈ ದೂದೋಟವನ ಹಾಳುಮಾಡುತ್ತಿರುವ ಕಳ್ಳನು ಯಾರಾಗಿರಬಹುದು?'' ಎಂದು ಯೋಚ ಮನೋವ್ಯಾಕುಲಗೊಂಡು, ಕಳ್ಳನನ್ನು ಹಿಡಿಯುವುದರಲ್ಲಿ ತಾವು ಎಷ್ಟೋ ಗಮನವಾಗಿದ್ದರೂ ಕಳ್ಳನು ಸಿಕ್ಕದೇ, ಎಂಟು ದಿನಗಳ ನಂತರ ಒಂಭತ್ತನೆಂ ದಿನದ ರಾತ್ರಿಯಲ್ಲಿ ಅರಸದಂಪತಿಗಳ ವೇಷವನ್ನು ಧರಿಸಿದ ಭಗವಂತನು ಮತ ಮಹಾಲಕ್ಷ್ಮಿಯ, ತಮ್ಮ ಕಾರುಣ್ಯದಿಂದಲೇ ಶ್ರೀ ಅನಂದಾಳ್ವಾನ್‌ರವರ ಕೈ ಸಿಕ್ಕಿಬೀಳಲು, ಅವರು (ಶ್ರೀ ಅನಂದಾಳ್ವಾನ್‌ರವರು) ಅವರುಗಳನ್ನು ಒಂದ ಲತೆಯಿಂದ ಮರಕ್ಕೆ ಕಟ್ಟಿಹಾಕಬೇಕೆಂದು ಸಂಕಲ್ಪಿಸಿ, ಅವರುಗಳನ್ನು ಎಳೆದು ತರುವಾ ಹೇಗೋ ಭಗವಂತನು ಅವರ ಕೈಯಿಂದ ಬಿಡಿಸಿಕೊಂಡು, ಅತ್ಯಂತ ಹೆದರಿಕೆಯಿಂ ಓಡಿ ಅಪ್ರದಕ್ಷಿಣವಾಗಿಯೇ ತನ್ನ ದೇಗುಲಕ್ಕೆ ಓಡಿಹೋಗಲು, ಓಡಲಾಗ ರಾಜಕುಮಾರಿಯ ವೇಷಧಾರಿಣಿಯಾದ (ಅಲರ್ ಮೇಲ್ ಮಂಗೈ ಪದ್ಮಾವತಿಯನ್ನು ಒಂದು ಸಂಪಿಗೆಯ ಮರಕ್ಕೆ ಕಟ್ಟಿ ಹೆದರಿಸಿ (ನೀನು ಯಾರು ನಿನ್ನ ಪತಿಯ ಎಲ್ಲಿಗೆ ಹೋದನು? ಯಾವುದಕ್ಕಾಗಿ ನೀವುಗಳು ಇಲ್ಲಿಗೆ ಬಂದಿರಿ? -ಎಂದೀರೀತಿ ಅವರುಗಳ ಚರಿತ್ರೆ ಪೂರ್ತಿಯನ್ನೂ ಕೇಳುತ್ತ ಸೂರ್ಯೋದಯವಾಗುವ ವರೆಗೂ ಗಮನದಿಂದ ಕೂಡಿ ಹತ್ತಿರದಲ್ಲೇ ಇದ್ದರ

ಆ ದೇವಿಯು, ''ಅಯ್ಯೋ ಅನಂತಾರ್ಯರೇ (ತಪ್ಪುಮಾಡಿದ ಅಪರಾಧಿಯಾದ ಆ ನನ್ನ ಪತಿಯನ್ನು ಹಿಡಿದುಕೊಳ್ಳಿ (ತಪ್ಪುಮಾಡದ ನಿರಪರಾಧಿಯಾದ ನನ್ನನ್ನು ಬಿಟ್ಟುಬಿಡಿ. ನಾನು ನಿಮಗೆ ಮಗಳಾಗಿ ಇರುತ್ತೇನೆ ಎಂದು ಅವರಲ್ಲಿ ಅಂಗಲಾಚಿದಳು.

ನಂತರ ಪರಿಜನರೆಲ್ಲರೂ ದೇವಸ್ಥಾನಕ್ಕೆ ಬಂದು, ಭಗವಂತನ ವಕ್ಷಃಸ್ಥಳದಲ್ಲಿ ಕಂಠಿಕೆಯಲ್ಲಿದ್ದ ಪದ್ಮಾವತೀದೇವಿಯು ಕಂಡುಬಾರದ್ದುದರಿಂದ ಅರ್ಚಕರುಗಳ ನಿರ್ಬಂಧಿಸಿಕೊಂಡಿರುವಾಗ, ಒಬ್ಬನ ಮೇಲೆ ಭಗವಂತನು ಆವೇಶಿಸಿ ನಡೆದುದ ಹಾಗೆಯೇ ತಿಳಿಸಲು, ಆ ದೇವನ ಆಜ್ಞೆಯಂತೆಯೇ ಆ ಪರಿಜನರು ಶ್ರೀದೇವಿಯನು ಅನಂದಾಳ್ವಾನ್‌ರವರನ್ನೂ ಕರೆದುಕೊಂಡು ಬರುವುದಕ್ಕಾಗಿ ನಂದನವನಕ್ಕೆ ಬಂದ ಶ್ರೀ ಅನಂದಾಳ್ವಾನ್‌ರವರಲ್ಲಿ ವೃತ್ತಾಂತವನ್ನು ತಿಳಿಸಿ, ಅವರು ಶ್ರೀ ದೇವಿಯನ ಸಂಪಿಗೆಯ ಮರದಿಂದ ಬಿಡಿಸಿಕೊಂಡು, ತಾವು ಮಾಡಿದ ಅಪರಾಧ ಕ್ಷಮಾಪಣೆಯನ್ನು ಕೇಳಿ, ಪ್ರಾತರನುಷ್ಠಾನವನ್ನು ಮುಗಿಸಿಕೊಂಡು,''ನಾನು ನಿಮ

ಮಗಳಾಗಿ ಇರುತ್ತೇನೆ'' ಎಂದು ತಾನು ಹೇಳಿದ ಮಾತನ್ನು ನಿಜವಾಗಿಸಲು ಇಚ್ಛಿಸಿ, ಅವರಿಗ ಮಗಳಾಗಿ ಮದುವೆಗೆ ಯೋಗ್ಯಳಾದ ಒಬ್ಬ ಕನ್ನಿಕೆಯ ನಿಲುವನ್ನು (ರೂಪವನ್ನು) ಹೊಂದಿದ ಶ್ರೀದೇವಿಯಾದ ಪದ್ಮಾವತೀ ದೇವಿಯನ್ನು, ಹೂಬುಟ್ಟಿಯೊಂದಿಗೆ ಕಂಕುಳಲ್ಲಿ ಎತ್ತಿಕೊಂಡು ಭಗವಂತನಲ್ಲಿಗೆ ಬಂದು ಅಪರಾಧ ಕ್ಷಮಾಪಣೆಮಾಡಿ, ಶ್ರೀದೇವಿಯನ್ನು ಸಮರ್ಪಿಸಿದರು.

ಆ ದೇವನೂ ತನ್ನ ಸ್ವರ್ಣಹಾರವೊಂದನ್ನು ಅನಂದಾಳ್ವಾನ್ ರವರ ಕೊರಳಿಗೆ ಪ್ರೀತಿಯಿಂದ ಅಲಂಕರಿಸಿ, ತನ್ನ ದೇವಿಯನ್ನು ಪಡೆದುಕೊಂಡನು. ಎಲ್ಲರೂ ನೋಡುತ್ತಿರುವಂತೆಯೇ, ನಂತರ ಆ ಶ್ರೀದೇವಿಯು, ಭಗವಂತನ ವಕ್ಷಃಸ್ಥಳದಲ್ಲಿರುವ ಕಂಠಿಕೆಯಲ್ಲಿ ಸೇರಿ ಮುಂಚಿನಂತೆಯೇ ಅರ್ಚಾರೂಪವನ್ನು ತಾಳಿ ತಂಗಿದಳು.

ಈ ರೀತಿಯಾದ ಕಥೆಯನ್ನು ಕೇಳಿದ ರಾಮಾನುಜ ಮುನಿವರ್ಯರು, ಶ್ರೀನಿವಾಸನಿಗೆ ಅನಂದಾಳ್ವಾನ್ ರವರಲ್ಲಿ ಅತಿಶಯವಾದ ಅಭಿಮಾನವಿರುವುದನ್ನು ತಿಳಿದು, ಹಿಂದೆ ಶ್ರೀನಿವಾಸನು ಅನಂದಾಳ್ವಾನ್‌ರ ಚರಿತ್ರೆಯನ್ನು ಜ್ಞಾಪಿಸಲು ಗಲ್ಲದಲ್ಲಿ ಪಚ್ಚಕರ್ಪೂರದ ಹುಡಿಯನ್ನು ಧರಿಸಿಸುವಂತೆಯೂ, ಗೋಪುರದ್ವಾರದ ಒಳಭಾಗದಲ್ಲಿ ಹಾರೆಯನ್ನು ಸ್ಥಾಪಿಸಿಸುವಂತೆಯೂ ನಿಯಮಿಸಿದ ರೀತಿಯಂತೆಯೇ, ತಾವೂ ಈ ಕಥೆಯನ್ನು ಎಲ್ಲರಿಗೂ ಜ್ಞಾಪಿಸುವುದಕ್ಕಾಗಿ ''ಇಂದಿನಿಂದ ವರ್ಷಾ ವರ್ಷಾನಡೆಯುವ ಕನ್ಯಾಮಾಸದ ಬ್ರಹ್ಮೋತ್ಸವದಲ್ಲಿ ಏಳನೆಯ ಉತ್ಸವದ ಸಾಯಂಕಾಲದಲ್ಲಿ, ಉದ್ಯಾನೋತ್ಸವ ಸಂದರ್ಭದಲ್ಲಿ, ಹಿಂದೆ ಭಗವಂತನು ಅಂಜಿಕೆಯಿಂದ ಓಡಿ ಅಪ್ರದಕ್ಷಿಣವಾಗಿ ಗುಡಿಗೆ ತೆರಳಿದ ಚರಿತ್ರೆಯನ್ನು ಜ್ಞಾಪಿಸುವ ರೀತಿಯಲ್ಲಿ, ಭಗವಂತನಿಗೆ ಅಪ್ರದಕ್ಷಿಣವಾಗಿಯೇ ಯಾತ್ರೆ (ಮೆರವಣಿಗೆ) ಯನ್ನು ನಡೆಸಿ ಬರಬೇಕೆಂದೂ, ಹಿಂದಿನಂತೆಯೇ ಭಗವಂತನು ನಂದನವನಕ್ಕೆ ಬಿಜಯಮಾಡಿಸುವಾಗ ಭಗವಂತನ ಮಾಲೆಯನ್ನು ಅನಂದಾಳ್ವಾನ್‌ರವರಿಗೆ ಧರಿಸಿ ಅಲಂಕರಿಸಬೇಕೆಂದೂ, ಎಂಟನೆಯದಿನ ದಿವ್ಯ ರಥೋತ್ಸವ ಯಾತ್ರೆಯ ಸಂದರ್ಭದಲ್ಲಿ, ಅನಂದಾಳ್ವಾನ್, ಭಗವಂತನನ್ನು ಮದುಮಗನಾಗಿ ಭಾವಿಸಿ ಹೊಸ ವಸ್ತ್ರವನ್ನು ಸಮರ್ಪಿಸಬೇಕೆಂದೂ ನಿಯಮಿಸಿದರು. ಅಂದಿನಿಂದ ಅದೇ ರೀತಿ ನಡೆದು ಬರುತ್ತಿದೆ. (ಸೂಚನೆ:- ಈ ನಂದನವನ ಉತ್ಸವವು ಈಗ ಕನ್ಯಾಮಾಸ ಬ್ರಹ್ಮೋತ್ಸವದ ಏಳನೆಯ ದಿನದ ಸಾಯಂಕಾಲ ನಡೆಯದೇ ಹತ್ತನೆಯ ದಿನದ ಸಾಯಂಕಾಲ ನಡೆಯುತ್ತಿದೆ ''ಬಾಗ್‌ಸವಾರಿ'' ಎಂದು ಇದಕ್ಕೆ ಹೆಸರು. ಪುಷ್ಪಮಾಲೆಯ ಬಹುಮಾನವು ಶ್ರೀ ಅನಂದಾಳ್ವಾನ್‌ರವರ ಕಾಲದವರೆಗೆ ಅವರಿಗೇ ನಡೆಯುತ್ತಿದ್ದು, ಅವರ ಪರಮಪದ ಪ್ರಾಪ್ತಿಯನಂತರ ಹಿಂದೆ ಅವರ ತೋಟದಲ್ಲಿ

ಹುಟ್ಟ, ಎಂಬೆರುಮಾನ್ ಪೊನ್ ಮಾಲೈಯಿಲ್ ಏದೇನುಮಾವೇನೆ (ಭಗವಂತನ ಸ್ವರ್ಣಬೆಟ್ಟದಲ್ಲಿ ಏನಾದರೂ ಆಗುತ್ತೇನೆ) ಎಂದು ಕುಲಶೇಖರಾಳ್ವಾರ್‌ರವರು ಹಾಡಿದಂತೆಯೇ, ಶ್ರೀ ಅನಂದಾಳ್ವಾನ್‌ರವರ ಅವತಾರವಾಗಿ ಹಿರಿಯರುಗಳ ಅಭಿಪ್ರಾಯ ಹೊಂದಿದ್ದ ಬಕುಳ ವೃಕ್ಷಕ್ಕೆ ಈಗಲೂ ಈ ಬಹುಮಾನವು ನಡೆಯುತ್ತಿದೆ)

### ಧನುರ್ಮಾಸ ಪೂರ್ತಿರಾತ್ರಿಯಲ್ಲಿ ಶ್ರೀಕೃಷ್ಣನಿಗೇ ಏಕಾಂತ ಸೇವೆ

ಇನ್ನು ಧನುರ್ಮಾಸದಲ್ಲಿ (ರಾತ್ರಿ) ಶ್ರೀ ಕೃಷ್ಣನಿಗೆ ದಿವ್ಯ ಪರ್ಯಂಕ ಶಯನ ಮತ್ತು ಭೋಗ ನಿರ್ವರ್ತನ ವೃತ್ತಾಂತವು ಹೇಳಲ್ಪಡುತ್ತದೆ. ಶ್ರೀ ಶ್ರೀನಿವಾಸನ ದೇವಸ್ಥಾನದಲ್ಲಿ (ಅಳಹಪ್ಪಿರಾನ್) ಎಂಬ ಭೋಗ ಶ್ರೀನಿವಾಸನಿಗೆ ಶಯನಮೂರ್ತಿಯಾಗಿ, ದಿವ್ಯಪರ್ಯಂಕ ಶಯನವಾಗಿರುವ ಅನುಭವವು, ಶ್ರೀ ವೈಖಾನಸಾಗಮದಲ್ಲಿ ಹೇಳಿರುವಂತೆಯೇ ನಡೆಸಲ್ಪಟ್ಟು ಬರುವಾಗ, ಶ್ರೀ ಭಗವದ್ರಾಮಾನುಜಮುನಿವರ್ಯರು ಶ್ರೀ ವೈಖಾನಸಾಗಮಕ್ಕೆ ಸೇರಿದ ಒಂದು ಸಂಹಿತೆಯಲ್ಲಿ ಧನುರ್ಮಾಸದಲ್ಲಿ ಶ್ರೀಕೃಷ್ಣನಿಗೆ ಪರ್ಯಂಕಶಯನೋತ್ಸವವನ್ನು (ಏಕಾಂತ ಸೇವೆ) ನಡೆಸಬೇಕೆಂಬ ವಿಧಿಯನ್ನೂ, ಒಂದು ದೇವಸ್ಥಾನದಲ್ಲಿ ಐದು ಮೂರ್ತಿಗಳಲ್ಲದೆ, ಮೂರು ಮೂರ್ತಿಗಳೇ ಇದ್ದರೆ ವರ್ಷಪೂರ್ತಿ ಶ್ರೀ ಕೃಷ್ಣನನ್ನೇ ಶಯನ ಮೂರ್ತಿಯಾಗಿ ಪರ್ಯಂಕದಲ್ಲಿ ಬಿಜಯ ಮಾಡಿಸಬೇಕೆಂಬ ವಿಧಿಯನ್ನೂ ಅವಲೋಕಿಸಿ, ಶ್ರೀ ಗೋದಾದೇವಿಯು (ಆಂಡಾಳ್), ಧನುರ್ಮಾಸದಲ್ಲಿ ಶ್ರೀಕೃಷ್ಣನೊಂದಿಗೆ ಸೇರಿಯೇ ತನಗೂ ಭಗವಂತನ ಪರ್ಯಂಕದಲ್ಲಿ ಲೀಲಾರಸಾನುಭವವು ಬೇಕೆಂದು ಆಸೆಪಟ್ಟು ಒಂದೊಂದು ದಿನವೂ ಒಂದೊಂದು ಪಾಶುರ (ಪದ್ಯ) ವಾಗಿ ಓದುವಂತೆ ಮೂವತ್ತು ಪಾಶುರಗಳನ್ನು ರಚಿಸಿಯೂ, ಶ್ರೀಕೃಷ್ಣನನ್ನು ಅಂತಃ ಪುರದಿಂದ ಬರುವಂತೆ ಮಾಡುವಂಥಹ ''ತಿರುಪ್ಪಾವೈ'' ಎಂಬ ದಿವ್ಯಪ್ರಬಂಧವನ್ನು ರಚಿಸಿದುದನ್ನೂ, ಅರ್ಚಾಮೂರ್ತಿಗಳಲ್ಲಿ, ಬೇರೆ ಮೂರ್ತಿಗಳಿಗೆಲ್ಲರಿಗಿಂತ ಶ್ರೀ ವೆಂಕಟೇಶನಾದ ಶ್ರೀನಿವಾಸನಲ್ಲಿ ಶ್ರೀಗೋದಾದೇವಿಗೆ ಆದರವು ಹೆಚ್ಚು ಎಂಬುವುದು, ಆಕೆಯ ಎರಡನೆಯ ಪ್ರಬಂಧವಾದ 'ನಾಚ್ಚಿಯಾರ್ ತಿರುಮೊಳಿ'ಯ ಮೊದಲ ಪದ್ಯದಲ್ಲಿಯೇ ''ಅನಂಗದೇವಾ.....ವೇಂಗಡವರ್ಕು ಎನ್ನೈವಿದಿಕ್ಕಿಟ್ರಿಯೇ'' ಎಂದು ಅಭಿವ್ಯಕ್ತವಾಗಿರುವುದನ್ನು ಪರ್ಯಾಲೋಚಿಸಿ, ಆಕೆಯ ಮನೋರಥಕ್ಕೆ ಅನುಗುಣವಾಗಿ ಶ್ರೀ ವೈಖಾನಸಾಗಮದಲ್ಲಿ ವಿಧಿಸಿರುವ ಅಂಶದ ಬಲವನ್ನು ಕೊಂಡೂ, ಶ್ರೀವೇಂಕಟೇಶನೇ ಕೃಷ್ಣನಾಗಿದ್ದು, ಆ ಗೋದಾದೇವಿಗೆ ಶಯನ ಭೋಗವನ್ನು ಕೊಡುತ್ತಾನೆ ಎಂಬ ಭಾವನೆಯಿಂದ ಧನುರ್ಮಾಸ ಪೂರ್ತಿಯಾಗಿ ಶ್ರೀ ಕೃಷ್ಣನಿಗೇ ಶಯನೋತ್ಸವನ್ನು ನಿರ್ವರ್ತಿಸಿ

ಕೊಡಬೇಕೆಂದೂ, ಮಿಕ್ಕಮಾಸಗಳಲ್ಲಿ ಭೋಗ ಶ್ರೀನಿವಾಸಮೂರ್ತಿಯಾದ ಶ್ರೀಸುಂದರಸ್ವಾಮಿ (ಅಳಹಸ್ಸಿರಾನ್)ಗೆ ನಿರ್ವರ್ತಿಸಿ ಕೊಡಬೇಕೆಂದೂ ವ್ಯವಸ್ಥೆಮಾಡಿದರು. ಆ ಕಾಲದಿಂದ ಪ್ರಾರಂಭಿಸಿ ಧನುರ್ಮಾಸದಲ್ಲಿ ಶ್ರೀಕೃಷ್ಣನಿಗೇ ದಿವ್ಯ ಪರ್ಯಂಕಶಯನ ಲೀಲಾ ಭೋಗರಸೋತ್ಸವವು (ಏಕಾಂತಸೇವೆ) ನಡೆಸಲ್ಪಟ್ಟು ಬರುತ್ತಿದೆ.

**ಬೆಟ್ಟಕ್ಕೆ ಹತ್ತುವ ಮೆಟ್ಟಲುಗಳು ಪ್ರಾರಂಭವಾಗುವ ಪ್ರದೇಶದಲ್ಲಿರುವ ಹುಣಿಸೆಯ ಮರದ ಕೆಳಗೆ ಶ್ರೀ ರಾಮಾಯಣ ಕಾಲಕ್ಷೇಪವೂ, ಅಲ್ಲಿ ಸ್ವಯಂ ವ್ಯಕ್ತವಾದ ಶ್ರೀನಿವಾಸನ ಪಾದಯುಗ್ಮಗಳು**

ಇನ್ನು ಶ್ರೀವೇಂಟಗಿರಿಯನ್ನು ಹತ್ತುವ ಮೆಟ್ಟಲುದಾರಿ ಪ್ರಾರಂಭಿಸುವ ಪ್ರದೇಶದಲ್ಲಿರುವ ಹುಣಿಸೆಯ ಮರದ ಕೆಳಗೆ ಇರುವ ವೇಂಕಟೇಶನ ದಿವ್ಯವಾದ ಶ್ರೀಚರಣಾಂಬುಜ ದ್ವಯಗಳ ಬಗೆಗಿನ ಚರಿತ್ರೆಯು ಹೇಳಲ್ಪಡುತ್ತದೆ. ಆಳವಂದಾರ್ (ಶ್ರೀಯಾಮುನಾಚಾರ್ಯರು)ರವರ ಆದೇಶದಂತೆ ತಿರುಮಲೈ ನಂಬಿ (ಶ್ರೀಶೈಲ ಪೂರ್ಣರು)ಎಂಬ ಆಚಾರ್ಯರು ಶ್ರೀವೇಂಕಟಗಿರಿಯಲ್ಲಿ ವಾಸಿಸುತ್ತಾ ತ್ರಿಸಂಧ್ಯೆಗಳಲ್ಲಿಯೂ ಶ್ರೀನಿವಾಸನ ಸೇವೆಯನ್ನು ಮಾಡುತ್ತಾ ಪ್ರತಿನಿತ್ಯವೂ ಭಗವಂತನ ದಿವ್ಯಾಭಿಷೇಕಕ್ಕೆ ಉಪಯೋಗವಾಗುವಂತೆ ಆಕಾಶಗಂಗೆಯಿಂದ ತೀರ್ಥವನ್ನು ತೆಗೆದುಕೊಂಡು ಬಂದು ಸಮರ್ಪಿಸುತ್ತಾ, ಭಗವಾನ್ ಶ್ರೀನಿವಾಸನಿಗೆ ಐಶ್ವರ್ಯವು ಅಪರಿಮಿತವಾಗಿ ಮೇಲಿಂದ ಮೇಲೆ ವೃದ್ಧಿಹೊಂದಬೇಕೆಂದು ಯಾವಾಗಲೂ ಮಂಗಳಾ ಶಾಸನವನ್ನು ಮಾಡುವುದರಲ್ಲಿಯೇ ಆಸಕ್ತಿಹೊಂದಿರುವ ಸಂದರ್ಭದಲ್ಲಿ, ಶ್ರೀಯಾಮುನಾಚಾರ್ಯರು (ಶ್ರೀ ಆಳವಂದಾರ್‌ರವರು) ಪರಮಪದ (ವೈಕುಂಠ)ವನ್ನು ಸೇರಿದಾಗ ಮಹಾಪೂರ್ಣರು (ಪೆರಿಯನಂಬಿ), ಶ್ರೀಶೈಲಪೂರ್ಣರು (ತಿರುಮಲೈನಂಬಿ), ಗೋಷ್ಠೀಪೂರ್ಣರು (ತಿರು ಕೊಟ್ಟಿಯೂರ್ ನಂಬಿ) ಶ್ರೀಮಾಲಾಧರಗುರು (ತಿರುಮಾಲೈಯಾಂಡಾನ್) ಮುಂತಾದವರುಗಳೊಂದಿಗೆ, "ರಾಮಾನುಜರಿಗಾಗಿ ನನ್ನಿಂದ ನಿಧಿಯಂತೆ ಮರೆಸಿ ಕಾಯತಕ್ಕ ಒಂದೊಂದು ವಿಶೇಷಾರ್ಥಗಳನ್ನೂ ನಿಮ್ಮಗಳಲ್ಲಿ ಉಪದೇಶ ಮೂಲಕವಾಗಿ ಇಡಲ್ಪಟ್ಟಿವೆ. ಅವುಗಳನ್ನು ತಕ್ಕ ಸಂದರ್ಭದಲ್ಲಿ ರಾಮಾನುಜರಿಗೆ ಸೇರುವಂತೆ ಮಾಡಬೇಕು. ಅವರು, ನಾನು ಜೀವಂತವಾಗಿರುವಾಗ ಇಲ್ಲಿಗೆ ಬಂದಿದ್ದಲ್ಲಿ ಅವುಗಳನ್ನು ಅವರು ನನ್ನಿಂದಲೇ ಅರಿತಿರುತ್ತಿದ್ದರು. ನನಗೆ ಭಾಗ್ಯವಿಲ್ಲದುದರಿಂದ ನನ್ನ ಜೀವಿತಕಾಲದಲ್ಲಿಯೇ ಅವರು ನನ್ನ ಬಳಿಗೆ ಬರಲಿಲ್ಲ. ಅವರು ಅತಿ ಶೀಘ್ರಕಾಲದಲ್ಲಿಯೇ ವಿಷ್ಣುವಿನ ಮತವನ್ನು ಅರಿಯುವವರಾಗುತ್ತಾರೆ.

ಅದನ್ನು ಇತರ ಸಮಯವಾದಿಗಳು ಯಾರೂ ಅಲುಗಾಡಿಸಲಾಗದಂತೆ ಸ್ಥಾಪಿಸುವವರೂ ಆಗುತ್ತಾರೆ. ಆಗ ಸಮಯನೋಡಿ ನಾನು ನಿಮ್ಮಲ್ಲಿಟ್ಟಿರುವ ಗ್ರಂಥಾರ್ಥಗಳನ್ನು ಅವರಿಗೆ ಸೇರುವಂತೆ ಮಾಡಿ'' ಎಂದು ಆದೇಶವಿತ್ತ ಗ್ರಂಥಾರ್ಥಗಳಲ್ಲಿ, ಶ್ರೀಶೈಲ್ಯಪೂರ್ಣರಲ್ಲಿ ಶ್ರೀರಾಮಾಯಣ ವಿಶೇಷಾರ್ಥಗಳನ್ನು ಕೇಳಿ ತಿಳಿದು ಕೊಳ್ಳುವುದಕ್ಕಾಗಿ ಬಂದ ರಾಮಾನುಜ ಮುನಿಗಳಿಗೆ ಶ್ರೀ ಶೈಲಪೂರ್ಣರು ತಮ್ಮ ಆಚಾರ್ಯರಾದ ಯಾಮುನಾಚಾರ್ಯರ ಆದೇಶವನ್ನು ನೆನೆಸಿಕೊಂಡು, ಅತ್ಯಂತ ಪ್ರೀತಿಯಿಂದ ಶ್ರೀ ರಾಮಾಯಣದಲ್ಲಿ ಉತ್ಕೃಷ್ಟ(ಗೂಢ)ವಾದ ಅರ್ಥಗಳನ್ನುಪದೇಶಿಸಿದರು. ಆ ರೀತಿ ಉಪದೇಶಿಸುತ್ತಿರಲು ರಾಮಾನುಜರು ಅಪಚಾರವುಂಟಾಗುವುದೆಂದು ಅಂಜಿಯೂ, ತಿರುಮಲೆ (ಬೆಟ್ಟ)ಯಲ್ಲಿ ತಾವು ವಾಸಿಸುವುದು ಆಗದೇ ಇದ್ದುದರಿಂದಲೂ, ಶ್ರೀಶೈಲಪೂರ್ಣರೂ ಸಹ ತಾವೂ ಆಚಾರ್ಯ ನೇಮನದಿಂದ ಶ್ರೀ ಶ್ರೀನಿವಾಸನಿಗೆ ಪ್ರತಿನಿತ್ಯವೂ ಅಭಿಷೇಕ ತೀರ್ಥವನ್ನು ತಂದು ಸಮರ್ಪಿಸುವ ಕೈಂಕರ್ಯವನ್ನೂ, ಪ್ರತಿದಿನವೂ ಶ್ರೀ ಶ್ರೀನಿವಾಸನನ್ನು ಸೇವೆಮಾಡಿ ಮಂಗಳಶಾಸನಮಾಡುವುದನ್ನೂ ಬಿಟ್ಟು ಇರಲಾರದವರಾಗಿ (ಕೆಳಗಿನ ತಿರುಪತಿಯಲ್ಲಿ ವಾಸಮಾಡಲು ಆಗದವರಾಗಿ), ''ರಾಮಾನುಜ ಮುನಿಗಳೇ! ಪ್ರತಿನಿತ್ಯವೂ ಶ್ರೀರಾಮಾಯಣ ಪಾಠದ ಕಾರಣವಾಗಿ ನೀವೂ ನಾವೂ ಸೇರುವ ಜಾಗವು ತಿರುಮಲೆಗೆ ಹತ್ತುವ ಮೆಟ್ಟಲುಗಳು ಪ್ರಾರಂಭಿಸುವ ಜಾಗದಲ್ಲಿರುವ ಹುಣಿಸೆಯ ಮರದ ಕೆಳಭಾಗದಲ್ಲಿರುವ ಗುಂಡು ಕಲ್ಲಿನ ಕೆಳಭಾಗವೇ ಆಗತಕ್ಕದ್ದು. ನಾನು ತಿರುಮಲೆಯಿಂದ ಬೆಳಗಿನ ಆರಾಧನೆ ಮುಗಿದ ನಂತರ ಭಗವಂತನ ಪ್ರಸಾದವನ್ನು ತೆಗೆದುಕೊಂಡು ಆ ಜಾಗಕ್ಕೆ ಬರುತ್ತೇನೆ ಮತ್ತು ನಿಮಗೆ ಆ ಪ್ರಸಾದವನ್ನು ಕೊಡುತ್ತೇನೆ. ನೀವೂ ಕೆಳಗಿನ ತಿರುಪತಿಯಿಂದ ಪ್ರಾತಃಕಾಲದ ನಿತ್ಯಕರ್ಮಗಳನ್ನು ಮುಗಿಸಿಕೊಂಡು ಬನ್ನಿ. ನಂತರ ಆ ಜಾಗದಲ್ಲಿ ಶ್ರೀರಾಮಾಯಣ ಪಾಠವು ನಡೆಯುತ್ತದೆ. ಭಗವಂತನ ಆರಾಧನೆಯನ್ನೂ ಭೋಜನವನ್ನೂ ಆ ಜಾಗದಲ್ಲಿಯೇ ಮಾಡಿಕೊಳ್ಳುತ್ತೇನೆ. ನಿಮಗೂ ಹಗಲಿನ ಅನುಷ್ಠಾನವೆಲ್ಲವೂ ನೆರವೇರಿದ ನಂತರ ಪುನಃ ಪಾಠವು ನಡೆಯುತ್ತದೆ. ಸಾಯಂಕಾಲದ ಆರಾಧನೆಗೆ ತಿರುಮಲೆಗೆ ಹೊರಟು ಹೋಗುತ್ತೇನೆ. ನೀವು ತಿರುಪತಿಗೆ ಹೋಗಬಹುದು.'' ಎಂಬ ನಿಯಮವನ್ನೇರ್ಪಡಿಸಿ, ಆ ರೀತಿಯಲ್ಲಿಯೇ ಒಂದು ವರ್ಷಕಾಲ, ಆಳವಂದಾರ್ ಎಂಬ ಯಾಮುನಾಚಾರ್ಯರು ಉಪದೇಶಿಸಿದ ಶ್ರೀರಾಮಾಯಣ ವಿಶೇಷಾರ್ಥಗಳನ್ನು ಇದ್ದಂತೆಯೇ ಸ್ವಾಮಿ ರಾಮಾನುಜರಿಗೆ (ಉಪದೇಶಿಸಿದರು) ಕಲಿಸಿದರು,

ಈ ರೀತಿ ಕಲಿಸುವ ಶ್ರೀಶೈಲಪೂರ್ಣರು

ಸಾಯಂಕಾಲದ ಆರಾಧನೆಯ ಕಾಲದಲ್ಲಿ ಸೇವೆಮಾಡಿ ತಮ್ಮ ಆವಾಸಸ್ಥಾನಕ್ಕೆ ಸೇರಿ ರಾತ್ರಿ ಶಯನಿಸುವ ಸಂದರ್ಭದಲ್ಲಿ ಭಗವಂತನನ್ನು ಧ್ಯಾನಿಸಿ, ''ಶ್ರೀವೇಂಕಟಗಿರಿಯ ಅರಸನಾದ ಶ್ರೀನಿವಾಸದೇವನೇ! ಶ್ರೀಯಾಮುನಾಚಾರ್ಯರ ಕಟಾಕ್ಷದಿಂದ, ಇಲ್ಲಿಯವರೆಗೂ ತ್ರಿಸಂಧ್ಯೆಗಳಲ್ಲಿಯೂ ನನಗೆ ದರ್ಶನ ಭಾಗ್ಯವನ್ನು ನೀಡುತ್ತಿರುವಿರಿ. ಈಗ ಈ ಶ್ರೀರಾಮಾಯಣ ಪಾಠದ ಕಾರಣದಿಂದ ಹಗಲಿನ ಆರಾಧನೆಯ ಸೇವೆಯು ದುರ್ಲಭವಾಗಿ ಬಿಟ್ಟದೆ'' ಎಂದು ಮನಸ್ಸಿನಲ್ಲಿ ಅಂದುಕೊಂಡೇ ನಿದ್ರಾದೇವಿಯ ಕೃಪಾಕಟಾಕ್ಷಕ್ಕೆ ಪಾತ್ರರಾದರು. ರಾತ್ರಿ ಕನಸಿನಲ್ಲಿ, ''ಓ ಶ್ರೀಶೈಲಪೂರ್ಣರೇ! ನಿಮಗೆ ಹಗಲಿನ ಆರಾಧನೆಯ ಸೇವೆಯನ್ನೂ ಕೊಟ್ಟೆವು, ವ್ಯಾಕುಲ ಪಡಬೇಡಿ'' ಎಂದ ಶ್ರೀ ಶ್ರೀನಿವಾಸನು ಎದುರಿನಲ್ಲಿ ನಿಂತು ಹೇಳಲು, ಬೆಳಿಗ್ಗೆ ನಿದ್ರೆಯಿಂದ ಎಚ್ಚೆತ್ತ ಅವರು ಪ್ರತಿನಿತ್ಯದಂತೆ ಆಕಾಶಗಂಗೆಯಿಂದ ಅಭಿಷೇಕ ತೀರ್ಥವನ್ನು ತಂದು ಸಮರ್ಪಿಸಿ, ಭಗವಂತನ ಬೆಳಗಿನ ಸೇವೆಯನ್ನೂ ಮಾಡಿ ನಂತರ ಶ್ರೀರಾಮಾಯಣ ಪಾಠಕ್ಕಾಗಿ ತಿರುಮಲೆಯ ತಪ್ಪಲಿನ ಹುಣಿಸೆಮರದ ಕೆಳಗಿರುವ ಗುಂಡಕಲ್ಲಿನಪಕ್ಕದಲ್ಲಿ ಬಂದು ತಮ್ಮನ್ನು ಪ್ರತೀಕ್ಷಿಸುತ್ತಿರುವ ಶ್ರೀರಾಮಾನುಜ ಮುನಿವರ್ಯರಿಗೆ ಶ್ರೀ ರಾಮಾಯಣವನ್ನು ಕಲಿಸಿಕೊಡುತ್ತಿದ್ದರು. ಅದರ ನಂತರ ಹಗಲು ಹೊತ್ತಿನಲ್ಲಿ ಕಸ್ತೂರಿ ಕೇಸರಿ, ಪಚ್ಚಕರ್ಪೂರ ಮುಂತಾದವುಗಳಿಂದುಂಟಾದ ಸುವಾಸನೆಯು ಘಮ ಘಮವೆಂದು ಹತ್ತು ದಿಕ್ಕುಗಳಲ್ಲಿಯೂ ಹರಡಿಕೊಂಡು ಚಂದನ, ಪುಷ್ಪ, ತುಳಸಿ ಇವುಗಳಿಂದ ಅಲಂಕರಿಸಲ್ಪಟ್ಟ ಶ್ರೀವೇಂಕಟಾಚಲಾಧೀಶನ ದಿವ್ಯಪಾದಗಳು ಗುಂಡು ಕಲ್ಲಿನ ಮೇಲೆ ಕಂಡು ಬಂದುವು. ನಂತರ ಶ್ರೀಶೈಲಪೂರ್ಣರೂ ಮತ್ತು ರಾಮಾನುಜರೂ ನಾಲ್ಕೂ ಕಡೆಯೂ ಹರಡಿದ ಆ ದಿವ್ಯವಾದ ಸುಗಂಧಪೂರ್ಣ ಸುವಾಸನೆಯನ್ನು ಆಘ್ರಾಣಿಸಿ, ''ಇದು ಯಾವ ಪರಿಮಳವು? ಎಂದೂ, ಎಲ್ಲಿಂದ ಬರುತ್ತಿದೆಯೆಂದೂ ಪರಿಶೀಲಿಸಲು, ನಾಲ್ಕು ಕಡೆಯೂ ತಮ್ಮ ದೃಷ್ಟಿಯನ್ನು ಬಿಟ್ಟನಂತರ, ಅಲ್ಲಿ ಗುಂಡುಕಲ್ಲಿನ ಮೇಲೆ ಮುಂಚೆ ಹೇಳಿದ ನೋಟವುಳ್ಳ ಶ್ರೀನಿವಾಸನ ದಿವ್ಯಚರಣಗಳನ್ನು ಕಂಡು ವಿಸ್ಮಿತಗೊಂಡರು. ಈ ರೀತಿ (ತೋರಿದ) ವ್ಯಕ್ತವಾದ ಭಗವಂತನ ದಿವ್ಯ ಶ್ರೀ ಚರಣಗಳನ್ನು ಕಂಡ ಶ್ರೀಶೈಲ ಪೂರ್ಣರು, ತಾವು ಕಂಡ ಸ್ವಪ್ನ ವೃತ್ತಾಂತವನ್ನು ಶ್ರೀರಾಮಾನುಜರಿಗೆ ತಿಳಿಸಿ ಅವರೊಂದಿಗೆ ಸೇರಿ ಅತ್ಯಂತ ಸಂತೋಷ ಮನಸ್ಕರಾದರು.

ಅದಾನಂತರ, ಆ ಇಬ್ಬರೂ ಆಶ್ಚರ್ಯಗೊಂಡು ಸ್ವಯಂ ವ್ಯಕ್ತವಾದ (ತಾನಾಗಿಯೇ ಕಂಡುಬಂದ) ಆ ದಿವ್ಯ ಚರಣಗಳನ್ನು ವಂದಿಸಿ, ಸೇವೆಮಾಡಿ, ಅದರ ಕೆಳಗಡೆಯೇ, ಆ ಗುಂಡುಕಲ್ಲಿನಲ್ಲಿಯೇ ಆ ಚರಣಗಳೊಂದಿಗೆ ಒಂದೇ ದೇಹ ಹೊಂದಿದಂತೆ ಆಳ್ವಾರುಗಳನ್ನು ಅವತರಿಸುವಂತೆ (ಬಿಂಬವಾಗಿ ಕೆತ್ತಿಸಿ)

ಮಾಡಿ, ಒಂದು ದೇವಾಲಯವನ್ನು ನಿರ್ಮಿಸಿ (ಆ ದಿವ್ಯಚರಣಗಳಿಗೂ ಆಳ್ವಾರುಗಳಿಗೂ) ಶ್ರೀವೈಖಾನಸಾಗಮ ಶಾಸ್ತ್ರವು ಹೇಳಿರುವ ರೀತಿ ವಿಧಿವತ್ತಾಗಿ ಪ್ರತಿಷ್ಠೆ, ಪೂಜೆ ಇತ್ಯಾದಿಗಳನ್ನು ನೆರವೇರಿಸಿ, ತೀರ್ಥಪ್ರಸಾದಗಳನ್ನು ಸ್ವೀಕರಿಸಿಕೊಂಡು, ತಿರುಮಲೆಯಲ್ಲಿರುವ ಹಿಂದೆ ಹೇಳಿದ, ನಿದ್ರಿಸದ ಹುಣಿಸೆ ಮರದಿಂತೆಯೇ ಕಂಡುಬರುತ್ತಿರುವ ಈ ಹುಣಿಸೆಯ ಮರವನ್ನು ಭಗವಂತನ ಶ್ರೀಚರಣಗಳು ಸ್ವಯಂ ವ್ಯಕ್ತವಾಗುವ ಮುಂಚೆಯೇ ಆ ದಿನಕ್ಕಾಗಿ ಅಲ್ಲಿ ನಿರೀಕ್ಷಿಸುತ್ತಿದ್ದ ಆದಿಶೇಷನನ್ನಾಗಿಯೇ ಭಾವಿಸಿ, ಆ ದಿವ್ಯ ಚರಣಗಳ ಕೆಳಗೇ ಶ್ರೀರಾಮಾಯಣ ಕಾಲಕ್ಷೇಪವನ್ನು ನಡೆಸುತ್ತಾ ಬಂದು ಕೆಲದಿನಗಳಲ್ಲಿ ಶಾತ್ತುಮುರೈ (ಸಮಾಪ್ತಿ)ಯನ್ನು ಮಾಡಿ ಮುಗಿಸಿದರು.

ಇದಾದನಂತರ ಪರಮ ದಯಾಳುವಾದ ಶ್ರೀಭಗವದ್ರಾಮಾನುಜ ಮುನಿಗಳು, ''ಕಲಿಯುಗದಲ್ಲಿ ಶ್ರೀವೇಂಕಟನಾಥನು ವಿಶೇಷವಾದ ಶಕ್ತಿಯುಳ್ಳವನು'' ಎಂದು ಪ್ರಸಿದ್ಧವಾದ ಹಿರಿಮೆಯನ್ನು (ಪ್ರಖ್ಯಾತಿ - ಮಹಿಮೆ)ಳ್ಳವನೂ, ''ಅತ್ಯಂತ ಕ್ರೂರವಾದ ಕಲಿಯುಗದಲ್ಲಿ ಇತರರನ್ನು ಪೀಡಿಸಿ ಪಾಪವೇ ರೂಪವೆತ್ತಿ ಬಂದ ಮನುಷ್ಯರುಗಳಿಗೂ ಪುಣ್ಯವನ್ನು ಹೊಂದತಕ್ಕ ಪ್ರದೇಶವು, ಭೂ ಗೋಳದಲ್ಲಿ ಪುಣ್ಯವಾದ ತಮಿಳುನಾಡಿನಲ್ಲುಳ್ಳ ಶ್ರೀವೇಂಕಟಗಿರಿಯೊಂದೇ, ಬೇರೆಯಾವುದೂ ಅಲ್ಲ'' ಎಂದು ಭವಿಷ್ಯೋತ್ತರ ಪುರಾಣಕ್ಕೆ ಸೇರಿದ ೮೦ ಎಂಬ ಸಂಖ್ಯೆಯಿಂದ ಸೂಚಿತವಾದ ಶ್ರೀವೇಂಕಟೇಶ ರಹಸ್ಯಾಧ್ಯಾದಲ್ಲಿ ಹೇಳಿರುವಂತೆ, ಅತ್ಯಂತ ಪ್ರಸಿದ್ಧವಾದ ವೈಭವವನ್ನುಳ್ಳ ಶ್ರೀವೇಂಕಟಗಿರಿಯ ಶಿಖರದಲ್ಲಿ ವಿರಾಜಮಾನವಾಗಿರುವನೂ, ಪಾಪದಲ್ಲಿಯೇ ಪ್ರವೃತ್ತಿಯುಳ್ಳವರುಗಳಿಂದ ದರ್ಪದಿಂದ ಆಳಲ್ಪಡುತ್ತಿರುವ ಕಲಿಯುಗದಲ್ಲಿ, ಎಲ್ಲರಿಗಿಂತಲೂ ಶ್ರೇಷ್ಠನಾದ ಶ್ರೀಮಹಾವಿಷ್ಣುವು, ಭಕ್ತರುಗಳಲ್ಲಿ ತಾನಿಟ್ಟಿರುವ ಅತ್ಯಂತ ಪ್ರೀತಿಯ ಕಾರಣದಿಂದ, ಎಲ್ಲರುನ್ನೂ ಕಾಪಾಡುವುದಕ್ಕೋಸ್ಕರ, ಶ್ರೀವೇಂಕಟಾಚಲದ ಅರಸನೆಂದು ಪ್ರಸಿದ್ಧಿಯಾದ ಅರ್ಚಾಮೂರ್ತಿಯಾಗಿ ಅವತರಿಸಿದನು,'' ಎಂಬುದೇ ಮೊದಲಾಗಿ ಇರುವ ವಾಕ್ಯಗಳಿಂದ ಹೇಳಲ್ಪಟ್ಟಿರುವುದರಿಂದ ಜಾತಿ ಮುಂತಾದುವಗಳ ಬೇದವಿಲ್ಲದೆ ಮಾನವರೆಲ್ಲರನ್ನೂ ಕಾಪಾಡುವುದಕ್ಕಾಗಿ ಅವತಾರವನ್ನು ಮಾಡಿದವನಾದ ಶ್ರೀವೇಂಕಟಗಿರಿನಾಥನನ್ನು ವಂದಿಸಿ ತಮ್ಮ ಬಾಳನ್ನು ಹಸನಾಗಿಸಿಕೊಳ್ಳುವಂತೆ ಮಾಡಿಕೊಳ್ಳುವ ಸಮಾರ್ಥ್ಯವು ಎಲ್ಲರಿಗೂ ಇರುವುದರಿಂದ, ಐದನೆಯ ವರ್ಣದಲ್ಲಿ ಜನಿಸಿರುವ ಹರಿದಾಸರಿಗೂ ಮತ್ತಿತರ ಕೀಳು ಜಾರಿಯ ಜನರಿಗೂ, ಶ್ರೀವೇಂಕಟಗಿರಿಯ ದಕ್ಷಿಣ ಶಿಖರದಿಂದ ಪ್ರವಹಿಸಿ ಕೆಳಕ್ಕೆ ಹರಿಯುವ, ಪ್ರಸಿದ್ಧವಾದ ಐದು ತೀರ್ಥಗಳಲ್ಲಿ ಚಾಂಡಾಲ ತೀರ್ಥ (ಮಾಲವಾರಿ ಕುಂಡ)ದಲ್ಲಿ ನೀರಾಡಿ

ಶುದ್ಧವಸ್ತ್ರವನ್ನುಟ್ಟುಕೊಂಡು, ಶ್ರೀವೇಂಕಟನಾಥನ ಈ ಸ್ವಯಂ ವ್ಯಕ್ತವಾದ ದಿವ್ಯ ಚರಣ ಯುಗ್ಮಗಳ ಬಳಿಸಾರಿ, ಕಂಡು, ಪ್ರದಕ್ಷಣೆ ಮುಂತಾದವುಗಳನ್ನು ಮಾಡಿ, ಸೇವೆಮಾಡಿ ಭಾಗ್ಯಶಾಲಿಗಳಾಗಿ ಸದ್ಗತಿಗಳನ್ನು ಹೊಂದಲಿ ಎಂದು ಆದೇಶಿಸಿದರು.

## ಗೋವಿಂದ ನಾಮೋಚ್ಚಾರಣದೊಂದಿಗೆ ತಿರುಮಲೆಯನ್ನು ಹತ್ತುವುದು

ಮೇಲೂ, ಆ ಶ್ರೀರಾಮಾನುಜ ಮುನಿವರ್ಯರು, ವರಾಹ ಪುರಾಣದ ಮೊದಲನೆಯ ಭಾಗ, ಮೂವತ್ತನೆಯ ಅಧ್ಯಾಯದ ೬೩ನೇ ಸಂಖ್ಯೆಯ ವಚನದಲ್ಲಿ - ಮಹರ್ಷಿಗಳು ಗುಂಪು ಗುಂಪಾಗಿಸೇರಿ "ಗೋವಿಂದಾ", "ಗೋವಿಂದಾ" ಎಂದು ಅವಿಚ್ಛಿನ್ನವಾಗಿ, ಘಟ್ಟಿಯಾದ ಸ್ವರದಿಂದ ಘೋಷವನ್ನು ಮಾಡುತ್ತಾ ಹೋದರು - ಎಂದು ಮುಂಚೆ ಶ್ರೀ ವೇಂಕಟಗಿರಿಯ ಮಹಿಮೆಯನ್ನು ಸೂತ ಮಹಾಮುನಿಗಳು ಹೇಳುವುದನ್ನು ಕೇಳಿ, ಆ ಬೆಟ್ಟಕ್ಕೆ ಯಾತ್ರಿಕರುಗಳಾಗಿ ಹೊರಟ ಮಹರ್ಷಿಗಳು, ಶ್ರೀ ಮಹಾವಿಷ್ಣುವಿನ ಇತರ ಹೆಸರುಗಳನ್ನು ಬಿಟ್ಟು "ಗೋವಿಂದಾ ಎಂದು ಹೇಳಬೇಕು' ಎಂದು ವಿಧಿಸಲ್ಪಟ್ಟ ಗೋವಿಂದ ನಾಮವನ್ನೇ ಉಚ್ಚಸ್ವರದಿಂದ ಘೋಷಿಸುತ್ತಾ ಶ್ರೀ ವೇಂಕಟಗಿರಿಯಾತ್ರೆಯನ್ನು ಮಾಡಿದುದಾಗಿ ಕಂಡುಬರುವುದರಿಂದ ಈಗ ತಿರುಮಲೆಯನ್ನು ಹತ್ತುವವರು, ಅದು ಬೇರೆ ದೇವತೆಗೆ ಸೇರಿದುದೆಂದು ನಡುವಿನಲ್ಲಿ ಉಂಟಾದ ವಾದವನ್ನು ಖಂಡ ತುಂಡ ಮಾಡುವುದಕ್ಕಾಗಿ, ಆ ದಿನಗಳಂತೆಯೇ ಗೋವಿಂದ ನಾಮವನ್ನೇ ಎಡೆ ಬಿಡದೆ ಘಟ್ಟಿಯಾದ ಸ್ವರದಿಂದ ಘೋಷಿಸುತ್ತಲೂ, ಅದರ ಮೂಲಕವಾಗಿ ಶ್ರೀವೇಂಕಟಗಿರಿಯನ್ನು ವಿಷ್ಣು ಕ್ಷೇತ್ರವೇ ಎಂಬುದನ್ನು ಪಂಡಿತ ಪಾಮರ ತಾರತಮ್ಯವಿಲ್ಲದೆಯೇ ಎಲ್ಲರಿಗೂ ತಿಳಿಸಿಕೊಂಡೂ, ಬಹಳದೂರದಿಂದ ಭಗವಂತನನ್ನು ದರ್ಶಿಸಲು ಆಸೆಪಟ್ಟು ಬರುವವರುಗಳಿಗೆ ದರ್ಶನವನ್ನು ಕೊಡುವುದಕ್ಕಾಗಿ ಪರಮಕಾರುಣ್ಯದಿಂದ ಶ್ರೀ ವೇಂಕಟಗಿರಿಯ ತಪ್ಪಲಲ್ಲಿಯೇ ವ್ಯಕ್ತವಾದ ಈ ದಿವ್ಯ ಚರಣಯುಗ್ಮಗಳನ್ನು ದರ್ಶನಮಾಡಿ ನಂತರವೇ ಶ್ರೀನಿವಾಸನನ್ನು ಸೇವೆಮಾಡಲು ತಿರುಮಲೆಯನ್ನು ಹತ್ತುವವರಾಗಲಿ ಎಂದು ನಿಯಮವನ್ನು ಏರ್ಪಡಿಸಿದರು.

## ಶ್ರೀ ರಾಮದೇವರು

ಇನ್ನು ಶ್ರೀ ವೇಂಕಟೇಶ್ವರನ ದಿವ್ಯ ದೇವಾಲಯದಲ್ಲಿ ಸೀತೆ, ಲಕ್ಷ್ಮಣ, ಹನುಮಂತ, ಸುಗ್ರೀವ, ಅಂಗದ ಮುಂತಾದವರೊಡನೆ ಕೂಡಿ ಸೇವೆಕೊಡುತ್ತಿರುವ ಶ್ರೀ ರಾಮ ದೇವರ ಇತಿಹಾಸವು ಹೇಳಲ್ಪಡುತ್ತದೆ. ಹಿಂದೆ "ಕೃತಮಾಲಾ" ನದಿ (ಈಗಿನ ವೈಗೈ ಎಂದು ಕರೆಯಲ್ಪಡುವ ನದಿ) ತೀರದಲ್ಲಿ ಶ್ರೀ ಮಹಾವಿಷ್ಣುವಿನ

ಅವತಾರವಾದ ''ಚಕ್ರವರ್ತಿ ತ್ತಿರುಮಹನ್'' (ಚಕ್ರವರ್ತಿಯ ಶ್ರೀಕುಮಾರ = ದಶರಥ ಚಕ್ರವರ್ತಿಯ ಪ್ರೀತಿಪಾತ್ರನಾದ ಮಗ = ರಾಮ)ನನ್ನು ವಿಶ್ವಂಭರರಿಗಾಗಿ, ವಿಭೀಷಣನಿಗೆ ಅಭಯವನ್ನು ಪ್ರಸಾದಿಸಿದ ದಿವ್ಯವಾದ ಅಲಂಕಾರದೊಂದಿಗೆ ಆವಿರ್ಭನಿಸಿದನು'' ಎಂದು ವಾಸಿಷ್ಠ ರಾಮಾಯಣದಲ್ಲಿ ಹೇಳಿದಂತೆಯೇ, ಕೃತಮಾಲಾ ಎಂದು ಹೆಸರುಳ್ಳ ನದಿಯ ತಟದಲ್ಲಿ ದಕ್ಷಿಣ ಮಧುರಾನಗರದ ಪಶ್ಚಿಮ ದಿಕ್ಕಿನಲ್ಲಿರುವ ಕಲವಿಂಕಾವತಾರ (ಕುರುವಿತ್ತುರ್ರೈ) ಎಂಬ ನಗರದಲ್ಲಿ ವಿಶ್ವಂಭರರೆಂಬ ಮಹಾಮುನಿವರು ''ವಾನವರರಸನಾದ ಸುಗ್ರೀವನೇ, ಈ ವಿಭೀಷಣನಿಗೆ ನನ್ನಿಂದ ಅಭಯಪ್ರದಾನವು ಮಾಡಲ್ಪಟ್ಟಿತು, ಅವನನ್ನು ಕರೆದು ತಾ'' ಎಂದು ಹೇಳಲ್ಪಟ್ಟುಳ್ಳ, ರಾಮಚಂದ್ರನು ವಿಭೀಷಣನಿಗೆ ಅಭಯವನ್ನು ಕೊಟ್ಟ ಚರಿತ್ರೆಯನ್ನು ಕೇಳಿ ಅದರಲ್ಲಿ ಸ್ಪಂದಿತ ಹೃದಯರಾಗಿ, ಆಗ ಇದ್ದ ಸ್ಥಿತಿಯಲ್ಲಿಯೇ ಇರುವ ಶ್ರೀರಾಮನನ್ನು ಪ್ರತ್ಯಕ್ಷವಾಗಿ ನೋಡುವುದಕ್ಕಾಗಿ ಆ ಭಗವಂತನನ್ನು ಕುರಿತು ತಪಸ್ಸುಮಾಡುವಾಗ, ಆ ರಾಮಚಂದ್ರನು ತಪಸ್ಸು ಮಾಡುತ್ತಿರುವ ಮಹಾಮುನಿಗಳ ವಿಷಯದಲ್ಲಿ ಕೃಪಾಪರವಶನಾಗಿ, ಒಂದು ದಿನ ಸ್ವಪ್ನದಲ್ಲಿ ಆತನಿಗೆ ತಾನೂ ಮತ್ತು ಲಕ್ಷ್ಮಣನೂ ಇಬ್ಬರೂ ಧನುರ್ಧಾರಿಗಳಾಗಿ ನಿಂತಿರುವಂತೆಯೂ, ತನ್ನ ಪಕ್ಕದಲ್ಲಿ ಸುಗ್ರೀವನು ವಿಭೀಷಣನಿಗೆ ಎಲ್ಲ ವಿಷಯಗಳನ್ನೂ ತಿಳಿಸಿ ಬಂದು, 'ಅರಸೋತ್ತಮನಾದ ಶ್ರೀರಾಮನೇ! ನಿಮ್ಮ ಇಷ್ಟದಂತೆಯೇ ಮಾಡಿ' ಎಂದು ಹೇಳಿ ಕೈಮುಗಿದು ನಿಂತನು,'' ಎಂದು ಹೇಳಿದಂತೆ ಆ ಸಮಯಕ್ಕೆ ತಕ್ಕ ಮಾತನ್ನು ನಿವೇದಿಸಿದ ನಂತರ, ''ದಾಸನು ಹೇಳಬೇಕಾದುದನ್ನು ಹೇಳಿ ಮುಗಿಸಿ ಬಿಟ್ಟೆನು. ಇನ್ನು ತಾವು ನೆನೆದು ಕೊಂಡಂತೆಯೇ ನಡೆಯುವವರಾಗಿ'' ಎಂದು ಹೇಳಿ ಜೋಡಿಸಿ ಮುಗಿದ ಕೈಗಳಿಂದ, ಹತ್ತಿರದಲ್ಲಿ ನಿಂತು ಸೇವೆಮಾಡುವವನಾಗಿಯೂ, ವಿಭೀಷಣನನ್ನು ಸೇರಿಸಿಕೊಳ್ಳುವುದಕ್ಕಾಗಿ, ಹನುಮಂತನು, 'ಇದೇ ಸರಿಯಾದ ಕಾಲ ಮತ್ತು ದೇಶವೂ ಸಹ' ಎಂಬಿವೇ ಮುಂತಾದ ಮಾತುಗಳನ್ನು ಹೇಳುತ್ತಾ ತಮ್ಮ ಪಾರ್ಶ್ವದಲ್ಲಿ ನಿಂತಿರುವವನಾಗಿಯೂ, ಅಂಗದನು,'' ಅತ್ಯಂತ ಪ್ರಕಾಶದಿಂದ ಕೂಡಿದ ವಾಯುಪುತ್ರನು ಅದೊ, ವಿಭೀಷಣನನ್ನು ಅಣುಗಿ ನಿಂತಿದ್ದಾನೆ ಎಂದು ಆಗ ಕೈಯನ್ನು ಎತ್ತಿ ಆಕಾಶದಲ್ಲಿ ತೋರಿಸಿದವನಾಗಿ ನಿಂತನು,'' ಎಂಬ ರೀತಿಯೇ ಮನಃಕ್ಲೇಶವನ್ನು ಕಳೆದ ವಿಭೀಷಣನನ್ನು ತನ್ನ ಕೈಬೆರಳುಗಳಿಂದ ಸೂಚಿಸಿ ತೋರಿಸಿಕೊಂಡೂ ನಿಂತಿರುವವನಾಗಿಯೂ, ವಾಸಿಷ್ಠರಾಮಾಯಣದಲ್ಲಿ ಹೇಳಿರುವ ಇಂಥಹ ವೇಷದೊಂದಿಗಿರುವ ಇವರೆಲ್ಲರನ್ನೂ ನೇರವಾಗಿ ಚೆನ್ನಾಗಿ ತೋರಿಸಿ ಕೃಪೆಮಾಡಿದನು.

ಈ ರೀತಿ ಸ್ವಪ್ನದಲ್ಲಿ ತಾವು ಇಚ್ಛಿಸಿದುದಕ್ಕೆ ಸರಿಯಾದ ಸ್ಥಿತಿಯೊಡನೆ ಪರಿಜನಗಳೊಂದಿಗೆ ಕೂಡಿದ ತನ್ನನ್ನು, ತನ್ನ ಕರುಣೆಯಿಂದ ಶ್ರೀರಾಮನು

ತೋರಿಸಲು, ಆ ರೀತಿಯೇ ಕಂಡು ನಿದ್ದೆಯಿಂದೆಚ್ಚೆತ್ತ ಆ ವಿಶ್ವಂಭರಮುನಿಗಳು, ಆ ಜಾಗದಲ್ಲಿಯೇ ಆ ಪರಿಜನರುಗಳೊಂದಿಗೆ ಕೂಡಿದ ಶ್ರೀರಾಮಚಂದ್ರನನ್ನು ಅರ್ಚಾರೂಪ (ಪಂಚಲೋಹ ಬಿಂಬ)ದಲ್ಲಿ ನಿರ್ಮಿಸಿ (ಪ್ರತಿಷ್ಠೆಮಾಡಿಸಿ) ಪೂಜೆಮಾಡುತ್ತಾ ಬಂದು ತಮ್ಮ ಇಷ್ಟಾರ್ಥ ಸಿದ್ಧಿಯನ್ನು ಪಡೆದರು.

ಅಂದಿನಿಂದ ಆ ಜಾಗದಲ್ಲಿ ಮುಂಚೆ ತಿಳಿಸಿದ ಪರಿವಾರಗಳೊಂದಿಗೆ ಕೂಡಿದ ಶ್ರೀರಾಮನು ಆರಾಧಿಸಲ್ಪಟ್ಟು ಬರುವಾಗ, ಒಂದಾನೊಂದು ಸಂದರ್ಭದಲ್ಲಿ ಆ ಕಲವಿಂಕಾವತಾರ (ಕುರುವಿತ್ತುರೈ) ನಗರದಲ್ಲಿ ದೊಡ್ಡದಾದ ಒಂದು ಜಗಳವು ಉಂಟಾದಾಗ, ಆ ಭಗವಂತನು ಒಬ್ಬ ಭಕ್ತನಿಗೆ, "ಅಪ್ಪಾ ನನ್ನನ್ನು ಈಗ ನನ್ನ ಪರಿವಾರದೊಂದಿಗೆ ಶ್ರೀವೇಂಕಟಾಚಲಕ್ಕೆ ತೆಗೆದುಕೊಂಡು ಹೋಗಿ ಸೇರಿಸಿ ಬಿಡು," ಎಂದು ಸ್ವಪ್ನದಲ್ಲಿ ಹೇಳಲು ಅವನು ಆ ದೇವನನ್ನು ಆತನ ಪರಿವಾರದೊಂದಿಗೆ ತೆಗೆದುಕೊಂಡು ಹೋಗಿ, ಶ್ರೀವೇಂಕಟಗಿರಿಯ ಕೆಳಭಾಗದಲ್ಲಿ, ಹುಣಿಸೆಯ ಮರದಕೆಳಗಿನ ಗುಂಡುಕಲ್ಲಿನ ಪಕ್ಕದಲ್ಲಿ ಶ್ರೀರಾಮಾಯಣವನ್ನು ಹೇಳಿಯೂ, ಕೇಳಿಯೂ, ಸತ್ಕಾಲಕ್ಷೇಪಮಾಡಿ ಬರುತ್ತಿರುವವರೂ, ಆಗತಾನೇ ವಿಭೀಷಣನಿಗೆ ಅಭಯ ಪ್ರದಾನ ಮಾಡುವ ಘಟ್ಟವನ್ನು ಕುರಿತು ವಿಮರ್ಶಿಸುತ್ತಿರುವವರೂ ಆದ ಶ್ರೀ ಶೈಲಪೂರ್ಣರೂ ಮತ್ತು ರಾಮಾನುಜರೂ ಆದ ಇಬ್ಬರ ಪಕ್ಕದಲ್ಲಿ ಇಟ್ಟನು. ಆ ಇಬ್ಬರೂ, ಅನಿರೀಕ್ಷಿತವಾಗಿ ತಮ್ಮ ಪಕ್ಕದಲ್ಲಿ ಕಂಡು ಬಂದ ಶ್ರೀರಾಮ, ಲಕ್ಷ್ಮಣ, ಸುಗ್ರೀವ, ಅಂಗದ, ಹನುಮಂತ ಮೂರ್ತಿಗಳು ವಿಭೀಷಣನಿಗೆ ಅಭಯವನ್ನು ನೀಡಿದ ಸ್ಥಿತಿಯಲ್ಲಿರುವ ವೇಷದಿಂದ ಕೂಡಿಯಿರುವುದನ್ನು ಕಂಡು, ಇವರುಗಳು ಇದ್ದಕ್ಕಿದ್ದಂತೆ (ಹಠಾತ್ತನೆ) ಬಿಜಯಮಾಡಿಸಲು ಕಾರಣವಾದ ಚರಿತ್ರೆ ಯೆಲ್ಲವನ್ನೂ ಕೇಳಿ ಅತ್ಯಂತ ಆನಂದಪರವಶರಾಗಿ, "ಇವರುಗಳು ಮುಂಚೆ ಹೇಗೆ ವಿಭೀಷಣನಿಗೆ ಅಭಯವನ್ನುಕೊಟ್ಟು ಕೃಪೆ ತೋರಿಸಿದರೋ, ಆ ರೀತಿಯೇ ಆ ವಿಭೀಷಣನ ಅಭಯದಾನ ಘಟ್ಟವನ್ನು ಓದಿ ವಿಮರ್ಶಿಸುತ್ತಿರುವ ತಮಗೂ ಅಭಯವನ್ನು ಕೊಡುವ ಇಷ್ಟದಿಂದಲೇ ಆ ಸಮಯಕ್ಕೆ ತಕ್ಕ ವೇಷದೊಂದಿಗೆ ಕೂಡಿ ಇಲ್ಲಿಗೆ ವಿಜಯಮಾಡಿಸಿದರು ಎಂದು ಹೇಳಿ, ಮುಂಚೆ ವಿಭೀಷಣನಿಗೆ ಅಭಯವನ್ನಿತ್ತ ಈ ಶ್ರೀರಾಮಚಂದ್ರನಿಗೆ ರಾವಣ ಭವನದಿಂದ ಬಿಜಯಮಾಡಿದ ಶ್ರೀ ಜಾನಕೀ (ಸೀತಾ) ದೇವಿಯೊಂದಿಗೆ ಹೇಗೆ ಶೇರ್ತಿ (ಒಟ್ಟಾಗಿಸೇರುವಿಕೆ) ಉಂಟಾಯಿತೋ, ಆ ರೀತಿಯೇ ಇಲ್ಲಿಯೂ (ಅರ್ಚಾಮೂರ್ತಿಯಾದ) ಶ್ರೀಜಾನಕೀ ದೇವಿಯೊಂದಿಗೆ ಶೇರ್ತಿಯನ್ನು (ಸಮಾಗಮನವನ್ನು ಉಂಟಮಾಡಬೇಕೆಂದು ಯೋಚಿಸಿ, ಶ್ರೀ ಜಾನಕೀ ದೇವಿಯನ್ನು ಒಂದು ಒಳ್ಳೆಯ ದಿನದಲ್ಲಿ, ಒಂದು ಒಳ್ಳೆಯ ಕಾಲದಲ್ಲಿ ಅರ್ಚಾರೂಪಿಯಾಗಿ ಅವತರಿಸುವಂತೆ ಮಾಡಿ (ಪ್ರತಿಷ್ಠೆ ಮಾಡಿ) ಮುಂಚೆ ಹೇಳಿದ

ಇವರುಗಳೆಲ್ಲರಿಗೂ ಶ್ರೀ ವೈಖಾನಸಾಗಮದಲ್ಲಿ ವಿಧಿಸಲ್ಪಟ್ಟಿರುವ ಕ್ರಮದಂತೆ ಸಂಪ್ರೋಕ್ಷಣೆಯನ್ನು ಮಾಡಿ, ಸೀತಾದೇವಿಗೂ, ಶ್ರೀರಾಮನಿಗೂ ದಿವ್ಯ ವಿವಾಹ ಮಹೋತ್ಸವವನ್ನು ನಡೆಯಿಸಿ, ಅವರುಗಳಿಗೆ ನಿತ್ಯಪೂಜಾದಿಗಳು, ಮೇಲಿಂದ ಮೇಲೆ ಅಭಿವೃದ್ಧಿ ಗೊಳ್ಳುವುದಕ್ಕಾಗಿ ಮಂಗಳಾಶಾಸನವನ್ನು ಮಾಡಿ, ''ಮಥಿಸಲ್ಪಟ್ಟ ಕ್ಷೀರಸಾಗರದಲ್ಲಿ ಶಯನಿಸಿಕೊಂಡು ಕಾಲನೇಮಿಯೆಂಬ ಅಸುರನನ್ನು ಜಯಿಸಿ, ಶ್ರೀರಾಮನಾಗಿ ಅವತರಿಸಿ, ಮನೋವ್ಯಾಕುಲಗೊಂಡ ವಾಲಿಸಹೋದರನಾದ ಸುಗ್ರೀವನಿಗೆ ಸಹಾಯ ಮಾಡಲು ಬಂದು ಒತ್ತಾದ (ನಿಬಿಡವಾದ) ಮರಗಳೆಲ್ಲವನ್ನೂ ಬಾಣದಿಂದ ಭಂಜಿಸಿದ, ಶ್ರೀವೇಂಕಟಗಿರಿಯನ್ನು ಬಂದು ಸೇರಿದ ಶ್ರೀ ವಿಷ್ಣುವಾದ ನಾಥನ ಶ್ರೀ ಚರಣಗಳನ್ನೇ ಯಾವಾಗಲೂ ಪಡೆದು ಉಜ್ಜೀವನವನ್ನು ಪಡೆಯುವರಾಗಿ'' ಎಂಬ ಈ ಅರ್ಥವನ್ನು ಕೊಂಡ ಶ್ರೀ ಭಕ್ತಿಸಾರರು (ತಿರುಮಳಿಶೈ ಆಳ್ವಾರ್) ಹಾಡಿದ ತಿರುಚ್ಛಂದ ವಿರುತ್ತಮ್ (ಶ್ರೀಮಚ್ಛಂದೋವೃತ್ತ) ಎಂದು ಹೆಸರುವಾಸಿಯಾದ ಪಾಶುರಗಳಲ್ಲಿ (ಪದ್ಯ) ಎಂಭತ್ತೊಂದನೆಯ ಪಾಶುರವನ್ನು ಸತ್ಯವೆಂದು ತೋರಿಸುವುದಕ್ಕೆ ಆಸೆಪಟ್ಟವರಾಗಿ, ಶ್ರೀವೇಂಕಟಗಿರಿಯಲ್ಲಿ ಭಗವಾನ್ ಶ್ರೀನಿವಾಸನ ದಿವ್ಯದೇವಾಲಯದಲ್ಲಿಯೇ ಅವರುಗಳ ಆರುವಮೂರ್ತಿಗಳನ್ನೂ ಪ್ರತಿಷ್ಠೆಮಾಡಿಸಿ, ಪ್ರತಿವರ್ಷವೂ ಶ್ರೀರಾಮನವಮಿಯ ಮಾರನೆಯ ದಿವಸ ಈ ಶ್ರೀ ಸೀತಾರಾಮರುಗಳಿಗೆ ಶುಭ ಕಲ್ಯಾಣೋತ್ಸವವನ್ನು ಮಾಡಬೇಕೆಂದು ನಿಯಮವನ್ನು ಮಾಡಿ, ಅವರುಗಳೆಲ್ಲರಿಗೂ ನಿತ್ಯ ಪೂಜೆಗಳನ್ನು ನಡೆಸಿ ಬರುವಂತೆ ಶ್ರೀರಾಮಾನುಜರು ಏರ್ಪಾಡು ಮಾಡಿದರು.

### ಶ್ರೀ ವರಾಹ ದೇವರು

ಇನ್ನು ಶ್ರೀ ವರಾಹದೇವರ ಇತಿಹಾಸವು ಹೇಳಲ್ಪಡುತ್ತದೆ. ಪಾದ್ಮಪುರಾಣಭಾಗದಲ್ಲಿರುವ ಆರನೆಯ ಅಧ್ಯಾಯದ ೨೯ ಎಂಬ ಸಂಖ್ಯೆಯಿಂದ ಸೂಚಿಸಲ್ಪಟ್ಟ ವಚನದಲ್ಲಿ - ಸ್ವರ್ಣಮಯ ಕೊಡಗಳಿಂದ ಒಂದೇ ಸಮನೆ, ಎಡಬಿಡದೆ, ಧಾರೆಯಾಗಿ ಪ್ರವಹಿಸುವ ಹಸುವಿನ ಹಾಲಿನಿಂದ ಅರಸನು ಹುತ್ತದ ದ್ವಾರದ ಒಳಭಾಗಕ್ಕೆ ಅಭಿಷೇಕ ಮಾಡಲು ಪಕ್ರಮಿಸಿದನು. ಆ ರೀತಿ ಮಾಡುತ್ತಿರಲು ಆ ಹುತ್ತದ ಒಳಭಾಗದಿಂದ ಪೂಜಿಸತಕ್ಕ ವರಾಹ ರೂಪವನ್ನು ಧರಿಸಿದ ದೇವನು ಆವಿರ್ಭವಿಸಿದನು - ಎಂದಿವೇ ಮೊದಲಾಗಿ ಹೇಳಲ್ಪಟ್ಟ ವೈಭವವನ್ನುಳ್ಳವರೂ, ವೇಂಕಟಾಚಲ ಮಹಾತ್ಮೆಯನ್ನು ಹೇಳುವ ಪುರಾಣಗಳೆಲ್ಲವುಗಳಲ್ಲಿಯೂ ಹೇಳಲ್ಪಟ್ಟ ಅತ್ಯಂತ ಪ್ರಸಿದ್ಧವಾದ ವೈಭವವನ್ನು ಹೊಂದಿದವರೂ, ಶ್ರೀ ಸ್ವಾಮಿ ಪುಷ್ಕರಿಣಿಯ ಪಶ್ಚಿಮ ತೀರದಲ್ಲಿ ವಿರಾಜಮಾನರಾದವರೂ ಆದ ಶ್ರೀವರಾಹದೇವರು ಶ್ರೀ ಶ್ರೀನಿವಾಸನಿಗಿಂತ ಮುಂಚೆಯೇ ಶ್ರೀವೇಂಕಟಗಿರಿಗೆ ಬಂದು

ವಿರಾಜಮಾನವಾಗಿದ್ದಾಗಲೂ, ಶ್ರೀಶ್ರೀನಿವಾಸನಿಗೇ ಇದಕ್ಕೆ ಮುಂಚೆ ಬ್ರಹ್ಮನೇ ಮುಂತಾದವರುಗಳಿಂದ ಪ್ರಬಲವಾದ ಬ್ರಹ್ಮೋತ್ಸವ ಮುಂತಾದುವುಗಳು ನಡೆಸಲ್ಪಟ್ಟಿರುವುದು ಪುರಾಣಗಳಿಂದ ತಿಳಿಯ ಬರುವುದರಿಂದಲೂ, ಈಗಲೂ ಆ ದೇವನಿಗೇ ಬ್ರಹ್ಮೋತ್ಸವಾದಿಗಳು ನೆರವೇರಿಸಲ್ಪಟ್ಟು ಬರುವುದರಿಂದಲೂ, ಅವರ ಉತ್ಸವಗಳನ್ನು ಕಡಿಮೆಮಾಡುವುದು ಸರಿಯಲ್ಲ. ಮೇಲೂ, ವೈಖಾನಸಾನಂದ ಸಂಹಿತೆಯಲ್ಲಿ ಬಲಿಪ್ರದಾನ ಮಾಡಲ್ಪಡುವ ಒಂದು ಮಾರ್ಗದ ಮಧ್ಯೆ (ಇರುವ ಎರಡು ದೇವತೆಗಳಲ್ಲಿ) ಒಂದು ದೇವತೆಯನ್ನು ಬಲಿಹೋಮವಿಲ್ಲದೆ ಅಮುಖ್ಯವಾಗಿ ಪೂಜಿಸಬೇಕು, ಉತ್ಸವಾದಿಗಳನ್ನು ಮಾಡಕೂಡದು, ಎಂಬಿರುವ ವಚನದಿಂದ, ಒಂದು ಸ್ಥಳದಲ್ಲಿ ಬಲಿಪೂಜೆ ನಡೆಯುತ್ತಿರುವ ಒಂದು (ನಾಲ್ಕು) ಮಾರ್ಗದಲ್ಲಿ ಬಿಜಯ ಗೈದಿರುವ ದೇವರುಗಳಿಬ್ಬರಿಗೂ ಸರಿಸಮವಾದ ಮುಖ್ಯತ್ವವನ್ನು ಕೊಟ್ಟು ಬಲಿಪೀಠಾರ್ಚನೆ, ನಿತ್ಯಹೋಮ ಬ್ರಹ್ಮೋತ್ಸವ ಮುಂತಾದವುಗಳನ್ನು ಮಾಡಕೂಡದೆಂದೂ, ಇಬ್ಬರಲ್ಲೊಬ್ಬರನ್ನು ಅಮುಖ್ಯರನ್ನಾಗಿ ಮಾಡಿ ಬಲಿಹೋಮಗಳಿಲ್ಲದೆಯೇ ನಿತ್ಯಪೂಜೆಯನ್ನು ಮಾತ್ರ ಮಾಡಬೇಕೆಂದು ಕಂಡುಬರುತ್ತದೆ. ಆದುದರಿಂದ ಈ ವರಾಹಮೂರ್ತಿಗೆ ಬಲಿಪೀಠ ಪೂಜೆ, ನಿತ್ಯಹೋಮ ಬ್ರಹ್ಮೋತ್ಸವ ಇವುಗಳಿಲ್ಲದೆ ತ್ರಿಸಂಧ್ಯೆಗಳಲ್ಲೂ ಪೂಜೆಯನ್ನು ಮಾತ್ರ ನೆರವೇರಿಸಬೇಕು.

ಆ ರೀತಿ ವರಾಹದೇವನಿಗೆ ಮಾಡಲ್ಪಡುವ ಪೂಜೆಯೂ - ಬ್ರಹ್ಮಾಂಡ ಪುರಾಣದ ಎಂಟನೆಯ ಅಧ್ಯಾಯದಲ್ಲಿ - ಅತ್ಯಂತ ಶ್ರೇಷ್ಠವಾದ ಸತ್ಯಲೋಕದಲ್ಲಿ ಇರುವ ಪಿತಾಮಹರು (ಚತುರ್ಮುಖ ಬ್ರಹ್ಮದೇವರು) ಎಲ್ಲರೂ ನೋಡುತ್ತಿರುವಾಗ, ''ಈ ಭಾಗವು ವರಾಹ ತೀರ್ಥವೆಂಬ ಹೆಸರಿನಿಂದ ಮುಂದೆ ಪ್ರಸಿದ್ಧಿಯನ್ನು ಹೊಂದುತ್ತದೆ. ಇಲ್ಲಿಗೆ ಬರುವವರು ಈ ತೀರ್ಥದಲ್ಲಿ ಸ್ನಾನಮಾಡದೆ ಅಶುದ್ಧರಾಗಿ ವರಾಹದೇವನನ್ನು ನಮಸ್ಕರಿಸ ಕೂಡದು. ವರಾಹಮೂರ್ತಿಯನ್ನು ನಮಸ್ಕರಿಸುವ ಮುಂಚೆ ಶ್ರೀನಿವಾಸನನ್ನು ನಮಸ್ಕರಿಸಕೂಡದು. ವರಾಹಭಗವಂತನನ್ನು ನಮಸ್ಕರಿಸುವ ಮುಂಚೆ ತನ್ನನ್ನು ನಮಸ್ಕರಿಸಿದರೆ ಶ್ರೀನಿವಾಸನು ತೃಪ್ತಿಯನ್ನು ಹೊಂದಲಾರ''. ಎಂದು ಹೇಳಿ ಈ ರೀತಿ ಒಂದು ನಿಯಮವನ್ನೇರ್ಪಡಿಸಿದರು, ನಂತರ ಅವರು ಶ್ರೀನಿವಾಸ ದೇವನನ್ನು ನಮಸ್ಕರಿಸಿ ಹಲವು ಸ್ತೋತ್ರಗಳಿಂದ ಸ್ತುತಿಸಿ ಅವನ ಶ್ರೀ ಪಾದಗಳನ್ನು ಹಿಡಿದು ಕೊಂಡು, ''ಮಹಾವಿಷ್ಣುವೇ! ನಿಮಗೆ ಪೂಜಾದಿಗಳು ನಡೆಯುವುದಕ್ಕೆ ಮುಂಚೆಯೇ ದಾಸನಾದ ನಾನು ಸ್ಥಾಪಿಸಿದ ವರಾಹದೇವನಿಗೆ ಅಭಿಷೇಕ, ಚಂದನ ಪುಷ್ಪ ನೈವೇದ್ಯ, ದಾನಗಳು, ದರ್ಶನ ಮುಂತಾದ ಪೂಜೆ ನಡೆಯಬೇಕು,'' ಎಂದು ವರವನ್ನು ಯಾಚಿಸಿದರು, ಶ್ರಿಯಃ

ಪತಿಯಾದ ಶ್ರೀನಿವಾಸನು ಹಾಗೆಯೇ ಆಗಲೆಂದು ವರವನ್ನು ಕರುಣಿಸಿ ಅದನ್ನು ಅದೇ ರೀತಿಯಲ್ಲಿಯೇ ನಡೆಸಿ ಬಂದನು - ಎಂಬ ವಚನವಿರುವುದರಿಂದಲೂ, ವರಾಹರೂಪವನ್ನು ಧರಿಸಿದ ಶ್ರೀ ವಿಷ್ಣುವು ಆ ಬೇಡನನ್ನು ಕುರಿತು - ಶ್ರೀನಿವಾಸನ ತೀರ್ಥದಲ್ಲಿ (ಸ್ವಾಮಿ ಪುಷ್ಕರಿಣಿಯಲ್ಲಿ) ಸ್ನಾನಮಾಡುವುದಕ್ಕೆ ಮುಂಚೆ ನನ್ನ ತೀರ್ಥದಲ್ಲಿ ಸ್ನಾನಮಾಡ ಬೇಕು, ಶ್ರೀನಿವಾಸನ ವಿಮಾನವನ್ನು ದರ್ಶಿಸುವುದಕ್ಕೆ ಮುಂಚೆ ನನ್ನ ವಿಮಾನವನ್ನು ದರ್ಶಿಸಬೇಕು - ಎಂದು ತಾನೇ ಹೇಳಿದರು. ಆಂದಿನಿಂದ ಆ ತೀರ್ಥವು ಮೊದಲು ಸ್ನಾನಮಾಡತಕ್ಕದಾಗಿ ಆಯಿತು- ಎಂಬ ವಚನವಿರುವುದರಿಂದಲೂ,

ಭವಿಷ್ಯೋತ್ತರ ಪುರಾಣದ ಐದನೆಯ ಅಧ್ಯಾಯದಲ್ಲಿ ಶ್ರೀ ವರಾಹದೇವನಿಗೂ ಶ್ರೀನಿವಾಸನಿಗೂ ನಡೆದ ಸಂಭಾಷಣೆಯಲ್ಲಿ, ಶ್ರೀನಿವಾಸನು ವರಾಹದೇವನನ್ನು ಕುರಿತು, ''ಭೂದೇವಿಯ ನಾಥನೇ! ಈ ಬೆಟ್ಟದಲ್ಲಿ ನನ್ನ ಭಾಗ್ಯದಿಂದ ನಿಮ್ಮನ್ನು ನೋಡಿದೆ. ಇಲ್ಲಿಯೇ ವಾಸಿಸಬೇಕೆಂಬ ದೃಢವಾದ ಮನಸ್ಸು ನನಗೆ ಉಂಟಾಗಿದೆ. ಕಲಿಯುಗಾಂತ್ಯದವರೆಗೂ ನನಗೆ ವಾಸಿಸಲು ಜಾಗವನ್ನು ಕೊಡಬೇಕೆಂದು ಪ್ರಾರ್ಥಿಸುತ್ತೇನೆ,'' ಎಂದು ಪ್ರಾರ್ಥಿಸಲು, ಅದಕ್ಕೆ ವರಾಹದೇವನು ''ನನ್ನಿಂದ ಬೆಲೆಕೊಟ್ಟು ಜಾಗವನ್ನು ಕೊಂಡುಕೊಳ್ಳಿ'' ಎಂದು ಹೇಳಲು, ಅದನ್ನು ಕೇಳಿದ ಶ್ರೀ ಶ್ರೀನಿವಾಸನು, ''ನಿಮ್ಮನ್ನೇ ಎಲ್ಲರೂ ಮುಂಚೆ ನಮಸ್ಕರಿಸುವರು, ಕ್ಷೀರಾಭಿಷೇಕವು ಮುಂಚೆಯೇ ನಿಮಗಾಗುತ್ತದೆ. ನೈವೇದ್ಯವೂ ಮುಂಚೆಯೇ ನಿಮಗೆ ನಡೆಯುತ್ತದೆ. ಇದನ್ನೇ (ಹೀಗೆ ನಡೆಸುವುದನ್ನೇ) ಉತ್ಕೃಷ್ಟ ಬೆಲೆಯೆಂದು ಕೊಡುತ್ತೇನೆ. ಕರುಣಾನಿಧಿಯಾದ ಭೂದೇವಿ ನಾಥನೇ, ನಾನು ಕೊಡುವುದನ್ನು ಸ್ವೀಕರಿಸಿಕೊಳ್ಳಿ, ಓ ಭೂದೇವಿ ರಮಣನೇ! ಮಾಧವನೇ! ದಯಾನಿಧಿಯೇ! ಇದು (ನಾನು ಹೇಳಿದ) ಅತ್ಯಂತ ಶ್ರೇಷ್ಠವಾದ ದ್ರವ್ಯವು (ಬೆಲೆಯು). ಆದುದರಿಂದ ನನ್ನಲ್ಲಿ ದಯೆಯಿಡಲು ಇಚ್ಛಿಸುತ್ತೇನೆ,'' ಎಂದು ಅತ್ಯಂತ ಮಧುರವಾದ ವಾಕ್ಯಗಳಿಂದ ಮಾತನಾಡಲು, ಅದನ್ನು ಕೇಳಿದ ವರಾಹದೇವನು ಶ್ರೀದೇವಿಯನಾಥನಾಗಿ ವಾಸಿಸಲು ಜಾಗವನ್ನು ಕೇಳುವ ಭಗವಾನ್ ಶ್ರೀನಿವಾಸನಿಗೆ ನೂರಡಿಯಿರುವ ಸ್ಥಳವನ್ನು ಕೊಟ್ಟರು,- ಎಂಬ ವಚನವಿರುವುದರಿಂದಲೂ, ಶ್ರೀನಿವಾಸದೇವನಿಗೆ ಪೂಜೆಮಾಡುವುದಕ್ಕೆ ಮುಂಚೆಯೇ (ವರಾಹ ಭಗವಂತನಿಗೆ) ಪೂಜೆ ಮಾಡಬೇಕು, ಯಾತ್ರಿಕರೂ ಮುಂಚೆ ವರಾಹ ತೀರ್ಥದಲ್ಲಿ ಸ್ನಾನಮಾಡಿ ವರಾಹ ವಿಮಾನವನ್ನು ದರ್ಶನ ಮಾಡಬೇಕು. ಎಂದು ನಿಯಮವನ್ನು ಮಾಡಿ, ವರಾಹಭಗವಂತನಿಗೆ ಒಬ್ಬ ಉತ್ತಮ ಮೂರ್ತಿಯನ್ನು ನಿರ್ಮಿಸಿ, ಪ್ರತಿಷ್ಠೆ ಮಾಡಿಸಿ ಅವರಿಗೆ ಒಂದು ದಿನ, ಅಧ್ಯಯನೋತ್ಸವವನ್ನು ನಡೆಸಬೇಕೆಂದು, ಸ್ವಾಮಿ

ಪುಷ್ಕರಿಣಿಯ ತೀರದಲ್ಲಿ ತುಲಾಮಾಸ ಶ್ರವಣ ನಕ್ಷತ್ರ ಶುಭದಿನದಲ್ಲಿ ಅವತರಿಸಿ ದಿವ್ಯಮಂಗಳ ವಿಗ್ರಹವನ್ನು ಕೊಂಡ ಶ್ರೀವೇಂಕಟಗಿರಿಯ ವರಾಹಭಗವಂತನಿಗೆ ನಮಸ್ಕಾರಗಳು'' - ಎಂದು ಹೇಳಲ್ಪಟ್ಟ - ವರಾಹದೇವನು ಆವಿರ್ಭವಿಸಿದ ನಕ್ಷತ್ರವಾದ ಶ್ರವಣ ನಕ್ಷತ್ರದಲ್ಲಿಯೂ, ಶ್ರೀ ವರಾಹ ಜಯಂತಿಯಂದೂ, ವೈಭವದಿಂದ ಉತ್ಸವವನ್ನು ನಡೆಸಿಕೊಂಡು ಬರಬೇಕೆಂದೂ, ಶ್ರೀ ಭಗವದ್ರಾಮಾನುಜ ಮುನಿವರ್ಯರು ನಿಯಮವನ್ನು ಅನುಷ್ಠಾನಕ್ಕೆ ತಂದರು.

**ಪಾರಪತ್ಯದಾರ**

ಇನ್ನು ಶ್ರೀ ವೇಂಕಟೇಶನ ದೇವಾಲಯದಲ್ಲಿ ಕೈಂಕರ್ಯಗಳೆಲ್ಲವನ್ನೂ ನೆರವೇರಿಸಿಡುವ ಮುಖ್ಯ ಅಧಿಕಾರಿಯಾದ - ಪಾರುಪತ್ಯವೆಂಬ ಅಧಿಕಾರಸ್ಥಾನವನ್ನು ವಹಿಸುವ ಶ್ರೀ ವೈಷ್ಣವನಿಗೆ ಒಂದು ಬಗೆಯ ಮರ್ಯಾದೆಯನ್ನು ಮಾಡಿಸಿಟ್ಟ ಚರಿತ್ರೆಯು ಹೇಳಲ್ಪಡುತ್ತದೆ. ಶ್ರೀವೇಂಕಟನಾಥನ ಅಭಿಮಾನಕ್ಕೆ ಪಾತ್ರವಾದ ''ಶ್ರೀ ಪದಪುರೀ'' ಎಂಬ ತಿರುಪತಿ ಕ್ಷೇತ್ರದಲ್ಲಿ ಕ್ರಿಮಿಕಂಠ ಚೋಳನ ಉಪದ್ರವದ ಕಾರಣದಿಂದ ಶ್ರೀ ಚಿತ್ರಕೂಟನಾಥನಾದ ಶ್ರೀಗೋವಿಂದರಾಜನು ಬಿಜಯಗೈದು ಶ್ರೀವೇಂಕಟನಾಥನ ದಿವ್ಯವಾದ ಐಶ್ವರ್ಯದಿಂದ ತಮ್ಮ ಸಕಲ ಉತ್ಸವ ಭೋಗ. ಸಾಮ್ರಾಜ್ಯವನ್ನು (ಅತ್ಯಂತ ಉತ್ಕೃಷ್ಟವಾದ ಸ್ಥಿತಿ)ಅನುಭವಿಸಿಕೊಂಡು ಬರುವ ದಿನದಲ್ಲಿ, ಶ್ರೀವೇಂಕಟಗಿರಿ (ತಿರುಮಲೆ)ಯೂ ತಿರುಪತಿನಗರವೂ ಒಂದೇ ದಿವ್ಯದೇಶವೆಂದು (ರಾಮಾನುಜರು) ನಿಯಮಿಸಿದನಂತರ, ಶ್ರೀವೇಂಕಟಗಿರಿಯಲ್ಲಿ, ಭಗವಂತನ ದಿವ್ಯ ದೇವಾಲಯದಲ್ಲಿ ಪ್ರತಿನಿತ್ಯವೂ ರಾತ್ರಿಯಲ್ಲಿ ಪರ್ಯಂಕಶಯನ ಭೋಗವು ಸಂಪೂರ್ಣವಾದ ನಂತರ, ಅರ್ಚಕರು ''ಶಠಕೋಪ'' (ಶಠಾರಿ=ಭಗವಂತನ ಪಾದುಕೆಗಳು) ನನ್ನು ಕೊಡೆ, ಚಾಮರ ಮುಂತಾದ ಉಪಚಾರಗಳೊಡನೆ ಬಾಗಿಲಿಗೆದುರಿನಲ್ಲಿರುವ ಕೃಷ್ಣಮಂಟಪಕ್ಕೆ ಬಿಜಯಮಾಡಿಸಿಕೊಂಡು, ''ಭಗವಂತನ ಅರುಳ್ (ಕೃಪೆ) ಪ್ರವಹಿಸುತ್ತಿದೆ (ನಿಮ್ಮ ಬಗ್ಗೆ) (ಇದಕ್ಕೆ ಅರುಳಿಪ್ಪಾಡು ಎಂದು ಕರೆಯುತ್ತಾರೆ) ಬನ್ನಿ, ಶ್ರೀವೇಂಕಟನಾಥ ಮತ್ತು ಶ್ರೀ ಚಿತ್ರಕೂಟನಾಥ ದೇವರುಗಳಿಬ್ಬರ ಸರ್ವಕೈಂಕರ್ಯಭಾರವನ್ನು ವಹಿಸುತ್ತಿರುವವರೇ! ವಿಷ್ವಕ್ಸೇನರೇ! ಬನ್ನಿ'' ಎಂದು ಪರಿಚಾರಕರು ಬಿರುದನ್ನು ಪಠಿಸಿ ಕರೆಯಲು, ''ಈ ದಾಸನಾದ ನಾನು (ಇಲ್ಲಿ) ಉಳ್ಳೇನ್ (ಇದೇನೆ) (ನಾಯನ್‌ತೇ) ಎಂದು ಬಿನ್ನವಿಸಿಕೊಂಡು ಹತ್ತಿರ ಬರುವ ಶ್ರೀವೇಂಟಕನಾಥನ ದಿವ್ಯ ದೇವಾಲಯದಲ್ಲಿ ಪಾರಪತ್ಯಾಧಿಕಾರವನ್ನು ವಹಿಸುವ ಶ್ರೀ ವೈಷ್ಣವನಿಗೆ ಭಗವಂತನ ಶೇಷ ವಸ್ತ್ರವನ್ನು (ಭಗವಂತನಿಗೆ ಧರಿಸಿದನಂತರ ಹೊರತೆಗೆದ ವಸ್ತ್ರ) ತಲೆಯ ಸುತ್ತಲೂ ಕಟ್ಟಿ, ಶ್ರೀ ಶಠಾರಿಯನ್ನು ತಲೆಯ ಮೇಲಿಟ್ಟು ಮರ್ಯಾದೆಯನ್ನು

ಕೊಡಬೇಕು. ಅದರ ನಂತರವೇ ದೇವಸ್ಥಾನದ ಬಾಗಿಲುಗಳನ್ನು ಹಾಕಿ, ಮುದ್ರೆ ಹಾಕಿ, ದೇವಸ್ಥಾನದ ಕೆಲಸಗಳನ್ನು ಪೂರ್ಣಗೊಳಿಸಬೇಕು, ಎಂದು ಈ ಕಟ್ಟಳೆಯನ್ನೂ ಸ್ವಾಮಿ ರಾಮಾನುಜ ಮುನಿಗಳು ಕೃಪೆಮಾಡಿದರು.

ಅನಂತಾರ್ಯರು ಕಟ್ಟಿದ ಶ್ರೀವೇಂಕಟಾಚಲ ಇತಿಹಾಸಮಾಲೆಯಲ್ಲಿ ಐದನೆಯ ಪುಷ್ಪಗುಚ್ಛವು ಸಂಪೂರ್ಣವು.

ಶ್ರೀಮತೇ ರಾಮಾನುಜಾಯ ನಮಃ



# ಆರನೆಯ ಪುಷ್ಪಗುಚ್ಛ

## ಶ್ರೀ ಶ್ರೀಶೈಲಪೂರ್ಣರ (ತಿರುಮಲೈ ನಂಬಿಗಳು) ಇತಿಹಾಸ.

ಇನ್ನು ಶ್ರೀಶೈಲಪೂರ್ಣರು (ತಿರುಮಲೈನಂಬಿಗಳು) ಎಂಬ ಆಚಾರ್ಯರ ಚರಿತ್ರೆಯು ಹೇಳಲ್ಪಡುತ್ತದೆ. ಮುಂಚೆ ಪೂಜ್ಯರಾದ ಯಾಮುನ ಮುನಿಗಳು (ಶ್ರೀ ಆಳವಂದಾರ್) ಸಕಲಶಾಸ್ತ್ರ ಪಾರಂಗತರಾಗಿ ಶ್ರೀರಂಗ ದಿವ್ಯ ಕ್ಷೇತ್ರದಲ್ಲಿ ವಾಸಿಸುತ್ತಿದ್ದು, ಸಕಲ ಶಾಸ್ತ್ರಾರ್ಥಗಳನ್ನೂ ಪ್ರವಚನ (ಬೋಧನೆ) ಮಾಡುವುದರ ಮೂಲಕ ಪರಮ ವೈದಿಕ ಸಿದ್ಧಾಂತವು (ವೇದವನ್ನು ಪ್ರಮಾಣವಾಗಿ ಪರಿಗಣಿಸುವವರಲ್ಲಿ ಅತ್ಯಂತ ಶ್ರೇಷ್ಠರುಗಳ ಮತವು) ಎಂದು ಕರೆಯಲ್ಪಡುವ ಶ್ರೀವೈಷ್ಣವ ಮತವನ್ನು ಮೇಲಿಂದ ಮೇಲೆ ಅಭಿವೃದ್ಧಿ ಮಾಡುತ್ತಾ, ಶ್ರೀರಂಗನಾಥನನ್ನು ಮಂಗಳಾಶಾಸನ ಮಾಡುವುದರಲ್ಲಿ ಮುಖ್ಯವಾದ ಗುರಿಯನ್ನು ಹೊಂದಿದವರಾಗಿ, ಆ ದೇವನ ಗುಣಗಳನ್ನು ಅನುಭವಿಸುವುದರಲ್ಲಿಯೂ ಅವನಿಗೆ ಸೇವೆ ಸಲ್ಲಿಸುವುದರಲ್ಲಿಯೂ ಆಸಕ್ತಿಯುಳ್ಳವರಾಗಿದ್ದರು.

ಆಗ ಒಂದು ಸಲ ಆ ಯಾಮುನ ಮುನಿಗಳು ತಿರುವಾಯ್ಮೊಳಿ (ಸಹಸ್ರಗೀತೆ) ಎಂದು, ಪ್ರಖ್ಯಾತರಾದ ನಮ್ಮಾಳ್ವಾರ್ (ಪರಾಂಕುಶ ಮುನಿ = ಶಠಕೋಪ) ರವರು ಕರುಣಿಸಿದ ತಮಿಳುವೇದ (ದ್ರಾವಿಡ ವೇದ) ಪಾಶುರಗಳಲ್ಲಿ ಮೂರನೆಯ ಶತಕದಲ್ಲಿನ (ಒಳಿವಿಲ್ ಕಾಲಮೆಲ್ಲಾಂ - ಎಂದು ಪ್ರಾರಂಭಿಸುವ) ಮೂರನೆಯ ದಶಕವನ್ನು ಓದಿ ಅದರ ಅರ್ಥವನ್ನು ಚಿಂತಿಸಿ ಅದರಲ್ಲೇ ಮಗ್ನವಾದ ಮನಸ್ಸುಳ್ಳವರಾಗಿ, ಪ್ರಪನ್ನ ಜನಕೂಟಸ್ಥರಾದ ಮೋಕ್ಷಸಾಮ್ರಾಜ್ಯ = (ವೀಡು-ಮನೆ) ವನ್ನು ಪಡೆಯುವುದಕ್ಕಾಗಿ ಕರ್ಮ ಜ್ಞಾನ ಭಕ್ತಿಗಳಾದ ಉಪಾಯಗಳಲ್ಲಿ ಮನಸ್ಸನ್ನು ಕೊಡದೆ, ಶ್ರೀಮಹಾವಿಷ್ಣುವನ್ನೇ ಉಪಾಯವಾಗಿ ತಿಳಿದು ಅವನಲ್ಲಿಯೇ ಶರಣಾಗತಿ ಮಾಡುವ (ಶರಣು ಹೋಗಿ) ಮತ್ತು ಅವನನ್ನೇ ಹೊಂದಲಪೇಕ್ಷಿಸುವ ಶ್ರೀವೈಷ್ಣವ ಜನರ ಮೂಲಪುರುಷರಾದ) ಪರಾಂಕುಶರೆಂಬ ನೂಮ್ಮಾಳ್ವಾರ್‌ರವರು, ಪಾರತಂತ್ರ್ಯ (ಎಲ್ಲಾವಿಧಗಳಿಂದಲೂ ಶ್ರೀ ಮಹಾವಿಷ್ಣುವಿಗೇ ವಶಪಟ್ಟಿರುವಿಕೆ) ವೆಂಬ

ತಮ್ಮ ಸತ್ವದ ನಿಲುವಿಗೆ ಸರಿಯಾದ, ಪೂರ್ಣವಾದ ಪ್ರಪತ್ತಿಯನ್ನು (ಶ್ರೀದೇವಿಯನ್ನು ಮುಂದಿಟ್ಟು ಶ್ರೀಮಹಾವಿಷ್ಣುವಿನಲ್ಲಿ ಮೋಕ್ಷ ಸಾಮ್ರಾಜ್ಯವನ್ನು ಪಡೆಯಲು ತಮ್ಮಲ್ಲಿ ಏನೂ ಇಲ್ಲವೆಂದೂ, ಆತನನ್ನು ಬಿಟ್ಟರೆ ಬೇರೆ ಗತಿಯಿಲ್ಲವೆಂದೂ, ತಾವು ಆ ದೇವನಿಗೆ ದಾಸನೆಂಬುದನ್ನು ತಿಳಿಸುತ್ತಾ, ಇವುಗಳಿಂದ ಪೂರ್ತಿಯಾದ ಪ್ರಪತ್ತಿಯನ್ನು - ಅವನನ್ನೇ, ಆ ಭಗವಂತನನ್ನೇ ಶರಣ್ಯನೆಂದು ತಿಳಿಯುವಿಕೆ) ಶ್ರೀವೇಂಕಟೇಶನಲ್ಲಲ್ಲವೇ ಅನುಷ್ಠಿಸಿದರು? ಅತ್ಯಂತ ಶ್ರೇಷ್ಠವಾದ ಪುರುಷಾರ್ಥವಾದ (ಜೀವಿಗಳು ಇಚ್ಛಿಸುವ ಫಲಗಳು) ಕೈಂಕರ್ಯ(ಸೇವೆ)ವನ್ನು ಈ ದೇವನಿಗೆ ಮಾಡಬೇಕೆಂದಲ್ಲವೇ ತಿಳಿಸಿದರು? ನಾವೆಲ್ಲರೂ ಹೊಂದತಕ್ಕ ಅತ್ಯಂತ ಉತ್ಕೃಷ್ಟ ಸ್ಥಳವಾದ ಪರಮಪದದಲ್ಲಿ (ಶ್ರೀವೈಕುಂಠದಲ್ಲಿ) ವಾಸಿಸುವ ನಿತ್ಯಸೂರಿಗಳೂ ಈ ದೇವನಲ್ಲಲ್ಲವೇ ಪೂಜೆಗೆ ಬೇಕಾದ ಶ್ರೇಷ್ಠವಾದ ಪುಷ್ಪ, ತೀರ್ಥ, ಧೂಪ, ದೀಪ ಮುಂತಾದುವುಗಳನ್ನು ಪ್ರೀತಿಯಿಂದ ತೆಗೆದುಕೊಂಡು ಬಂದು ಸಮರ್ಪಿಸಿ, ''ನಾವು ಮಾಡುವುದನ್ನು ಮಾಡಿಬಿಟ್ಟೆವು'' ಎಂದು ತೃಪ್ತಿಹೊಂದುತ್ತಿದಾರೆ? ಈ ರೀತಿಯಾದ ಈ ದಿವ್ಯದೇಶದಲ್ಲಿ ಭಗವಂತನ ಅಭಿಷೇಕಕ್ಕಾಗಿ ತೀರ್ಥ, ಶ್ರೇಷ್ಠವಾದ ಪುಷ್ಪಗಳು ಮುಂತಾದುವುಗಳನ್ನು ತೆಗೆದುಕೊಂಡು ಬಂದು ಕೊಡುತ್ತಿದ್ದು ಶ್ರೀ ವೇಂಕಟನಾಥನನ್ನು ಸಂತೋಷಪಡಿಸಲು ಆಸೆಪಡುತ್ತೇನೆ. ಅಭಾಗ್ಯನಾದ ನನಗೆ ಈ ವಿಧವಾದ ಕೈಂಕರ್ಯವು ಹೇಗೆ ಲಭ್ಯವಾಗುತ್ತದೆ?'' ಎಂದು ಹೇಳಿದ ಸಂದರ್ಭದಲ್ಲಿ, ಸತ್ವಗುಣವು ಇದಕ್ಕಿಂತ ಹೆಚ್ಚಾಗಿ ಇನ್ನು ಯಾರಲ್ಲಿಯೂ ಇಲ್ಲವೆಂದು ಹೇಳುವಂತೆ, ಅಂಥಹ ಸತ್ವಗುಣಗಳಿಂದ ಅಧಿಕವಾಗಿ ತುಂಬಿರುವವರೂ (ಅತ್ಯಂತ ಸಾತ್ವಿಕರಾದ)ವರೂ, ಆ ಯಾಮುನ ಮುನಿವರ್ಯರ ಶಿಷ್ಯರುಗಳಲ್ಲಿ ಒಬ್ಬರೂ ಆದ ಶ್ರೀಶೈಲಪೂರ್ಣರು ತಮ್ಮ ಆಚಾರ್ಯರ ಇಷ್ಟಾರ್ಥವನ್ನು ತಾವೇ ನೆರವೇರಿಸುವುದಕ್ಕಾಗಿ, ಅವರಿಗೆ ಪ್ರತಿನಿಧಿಯಾಗಿ, ಅವರು ಇಷ್ಟಪಟ್ಟ ಕೈಂಕರ್ಯವನ್ನು ತಾವು ಮಾಡಲು ಇಷ್ಟಪಟ್ಟು ಅವರ ಅನುಮತಿಯನ್ನು ಪಡೆದು, ಶ್ರೀವೇಂಕಟಾಚಲಕ್ಕೆ ಬಂದು ವಾಸಿಸುತ್ತಾ, ಭಗವಂತನ ಅಭಿಷೇಕಕ್ಕೆ ಶುದ್ಧವಾದುದೂ, ರುಚಿಯುಳ್ಳದ್ದೂ, ಆರೋಗ್ಯವನ್ನು ಕೊಡುವುದೂ ಆದ ಪಾಪನಾಶಿನಿಯೆಂಬ ಪುಣ್ಯತೀರ್ಥದ ತಣ್ಣೀರನ್ನು ಭಕ್ತಿಯಿಂದ ತಿರುಮಂಗೈಯಾಳ್ವಾರ್‌ರವರು (ಕಲಿವೈರಿ ದಿವ್ಯಸೂರಿ=ಪರಕಾಲಸೂರಿ) ಹಾಡಿದ ತಮಿಳು ವೇದಪಾಶುರಗಳ ಭಾಗವಾದ ''ಪೆರಿಯ ತಿರುಮೊಳಿ''ಯನ್ನು ಹಾಡಿಕೊಂಡೇ, ತಂದು ಸಮರ್ಪಿಸಿಯೂ, ಪುಷ್ಪಾದಿಗಳನ್ನು ಎಷ್ಟು ಸಾಧ್ಯವೋ ಅಷ್ಟು ಸಂಗ್ರಹಿಸಿ ತಂದುಕೊಟ್ಟೂ ಶ್ರೀವೇಂಕಟೇಶನನ್ನು ಸಂತೋಷಗೊಳಿಸುತ್ತಿದ್ದರು.

ಈ ರೀತಿ ಪರಮಭಕ್ತಿಯುಕ್ತರಾದ ಶ್ರೀ ಶ್ರೀಶೈಲಪೂರ್ಣರು ಪ್ರೀತಿಯಿಂದ ಪ್ರತಿನಿತ್ಯವೂ ಮಾಡುತ್ತಾ ಬರುವ - ಪಾಪನಾಶಿನಿಯಿಂದ ತೀರ್ಥವನ್ನು ಅಭಿಷೇಕಕ್ಕಾಗಿ

ತರುವುದಾದ ಕೈಂಕಾರ್ಯವು, ತನ್ನಿಂದ (ಭಗವಂತನಿಂದ) ಪರಮಪ್ರೀತಿಯಿಂದ ಅಂಗೀಕರಿಸಲ್ಪಡುತ್ತಿದೆ ಎನ್ನುವ ಈ ವಿಷಯವನ್ನು ಜನಗಳೆಲ್ಲರೂ ಅರಿತುಕೊಳ್ಳಲಿ ಎಂದಾಲೋಚಿಸಿದ ಭಗವಾನ್ ಶ್ರೀನಿವಾಸನು, ಒಂದು ಸಮಯ ಬೇಡನೊಬ್ಬನ ವೇಷತಾಳಿ ಬಿಲ್ಲುಬಾಣಗಳೊಂದಿಗೆ, ಪಾಪನಾಶಿನಿಯಿಂದ ಶುಚಿಯೂ ಮತ್ತು ರುಚಿಯೂ ಆದ ಭಗವಂತನ ಅಭಿಷೇಕ ತೀರ್ಥವನ್ನು ಅತ್ಯಂತ ಆದರದೊಂದಿಗೆ ತರುತ್ತಿದ್ದ ಶ್ರೀ ತಿರುಮಲೈ ನಂಬಿಗಳ (ಶ್ರೀ ಶ್ರೀಶೈಲ ಪೂರ್ಣರ) ಎದುರಿಗೆ ಬಂದು, ''ಅಯ್ಯಾ ತಾತ (ತಾತ=ತಂದೆ) ದಾಹದಿಂದ ಪರಿತಪಿಸುತ್ತಿದ್ದೇನೆ. ನನಗೆ ತಣ್ಣೀರನ್ನು ಕೊಡಿ'' ಎಂದು ಕೇಳಲು, ''ಎಲೈ ಬೇಡನೇ, ಶ್ರೀವೇಂಕಟನಾಥನಿಗೆ ಕೊಂಡು ಹೋಗುತ್ತಿರುವ ಈ ದಿವ್ಯತೀರ್ಥವು ಮಾನವರಿಗೆ ಸೇರಿದುದಲ್ಲ'' ಎಂದು ಅವರು ತಿರಸ್ಕರಿಸಿ, ತಿರುಮಂಗೈಯಾಳ್ವಾರ್‌ರವರ ಪೆರಿಯ ತಿರುಮೊಳಿಯನ್ನು ಅನುಸಂಧಾನ ಮಾಡುತ್ತಲೇ ಭಗವಂತನನ್ನನುಭವಿಸುವುದರಲ್ಲಿ ಉಂಟಾದ ಅಧಿಕ ಸಂತೋಷದಿಂದ ಕೊಡವನ್ನು ಹೊತ್ತುಕೊಂಡು ಹೋಗುತ್ತಿರುವಾಗಲೇ, ಆ ವೇಂಕಟನಾಥನಾದ ಬೇಡನು ತಾನೇ ಅವರನ್ನು ಹಿಂಬಾಲಿಸುತ್ತಾ ಹೋಗಿ, ಬಿಲ್ಲಿನಲ್ಲಿ ಏರಿಸಿದ ಬಾಣದಿಂದ, ಅತ್ಯಂತ ಸಾಮರ್ಥ್ಯದಿಂದ ಆ ಕೊಡದ ಹಿಂಭಾಗದಲ್ಲಿ ದ್ವಾರವನ್ನುಂಟುಮಾಡಿ, ಅದರಿಂದ ಧಾರೆಯಾಗಿ ಹೊರಬಂದ ನೀರನ್ನು ಪೂರ್ಣವಾಗಿ ಕುಡಿದುಬಿಟ್ಟನು.

ಆ ಶ್ರೀಶೈಲಪೂರ್ಣರೋ ಎಂದರೆ, ತಿರುಮಂಗೈಯಾಳ್ವಾರ್ ಪಾಶುರಗಳನ್ನು (ಪದ್ಯ) ಅನುಸಂಧಾನ ಮಾಡುತ್ತಾ ಅದರಲ್ಲಿ ಹೇಳಲ್ಪಟ್ಟ ಭಗವಂತನ ದಿವ್ಯಗುಣಗಳನ್ನು ಅನುಭವಿಸುವುದರಲ್ಲಿ ಮನಸ್ಸು ಪೂರ್ಣವಾಗಿ ಮಗ್ನವಾಗಿದ್ದುದರಿಂದ ಬೇಡನ ವೇಷವನ್ನು ತಾಳಿದ ಭಗವಂತನ ಕೆಲಸವು ಸ್ವಲ್ಪವೂ ತಿಳಿಯದೆಯೇ ಸ್ವಲ್ಪ ದೂರ ನಡೆದು, ಅದರ ನಂತರ ನೀರು ಸೋರುತ್ತಿರುವುದರಿಂದ ನಿಧಾನವಾಗಿ ಭಾರರಹಿತವಾಗುತ್ತಿರುವ ಕೊಡದಿಂದ, ನೀರು ಹೊರಗೆ ಹೋಗಿ ಬಿಟ್ಟಿದೆಯೆಂದು ಅರಿತು, ''ಇದೇನು?'' ಎಂದು ಹಿಂದಿರುಗಿ ನೋಡಲು, ನೀರು ಧಾರೆಯನ್ನು ಕುಡಿಯುತ್ತಿದ್ದ ಆ ಬೇಡನನ್ನು ಕಂಡು, ''ಎಲವೋ ಬೇಡನೇ, ಭಾಗ್ಯಹೀನನಾದವನೇ, ಭಗವಂತನಿಗಾಗಿ ತೆಗೆದುಕೊಂಡು ಹೋಗುತ್ತಿರುವ ತೀರ್ಥದಲ್ಲಿ ಏಕೆ ಈ ರೀತಿಯಾದ ದ್ರೋಹವನ್ನು ಮಾಡಿದೆ?'' ಎಂದು ಅವನನ್ನು ನಿಂದಿಸಲು, ''ಓ, ತಾತ, ನೀವು ಪಶ್ಚಾತ್ತಾಪ ಪಡಬೇಡಿ. ಇಲ್ಲಿ ಹತ್ತಿರದಲ್ಲೇ ಒಂದು ದಿವ್ಯವಾದ ತೀರ್ಥವನ್ನು ತೋರಿಸುತ್ತೇನೆ. ಅದರಿಂದ ಭಗವಂತನಿಗೆ ತೀರ್ಥವನ್ನು ತೆಗೆದುಕೊಂಡು ಹೋಗಿ'' ಎಂದು ಮುಂದೆ ಹೋಗುತ್ತಿರುವ ಬೇಡನಿಂದ ದಾರಿ ತೋರಿಸಲ್ಪಟ್ಟು, ಆಕಾಶಗಂಗಾ ತೀರ್ಥವನ್ನು ಸೇರಿ, ಆಗ ಅಲ್ಲಿ ನೀರು ಕಂಡು ಬಾರದೇ ಇದ್ದು, ನಂತರ ಆ ಬೇಡನು ತನ್ನ ಬಿಲ್ಲಿನಲ್ಲಿ ಅಂಬಿನ ರೀತಿ ಬಂದು

ಹುಲ್ಲುಕಡ್ಡಿಯನ್ನು ಏರಿಸಿ, ಅಲ್ಲಿದ್ದ ಒಂದು ಬೆಟ್ಟದ ಶಿಖರವನ್ನು ನಾಟುವಂತೆ ಮಾಡಿ, ನಂತರ ನಾಟಿದ ಹುಲ್ಲುಕಡ್ಡಿಯ ಬಾಣವನ್ನು ಹಿಡಿದೆಳೆದಾಗ ಅದರಿಂದ ಅತ್ಯಂತ ವೇಗವಾಗಿ ಹಾಯುತ್ತಿರುವ ನಿರ್ಮಲವಾದ ಧಾರೆಯುಳ್ಳ ಆಕಾಶಗಂಗಾ ನದಿಯನ್ನು ತೋರಿಸಿ, ''ಓ ತಂದೆಯೇ, ಇದು ಆಕಾಶಗಂಗೆ ಯಲ್ಲವೇ? ಇದು ಭಗವಂತನಿಗೆ ಅತ್ಯಂತ ಪ್ರಿಯವಾದುದೂ ಆಗುತ್ತದೆ. ಇನ್ನು ಮುಂದೆ ಇದರಿಂದಲೇ ನನಗೆ ತೀರ್ಥವನ್ನು ತೆಗೆದುಕೊಂಡು ಬನ್ನಿ'' ಎಂದು ಹೇಳಿ ತಾನು ಭಗವಂತನಾದ ಶ್ರೀನಿವಾಸನೇ ಎಂಬುದನ್ನು ಸೂಚಿಸಿ ಅಂತರ್ಧಾನವಾಗಲು, ಆ ಆಶ್ಚರ್ಯವನ್ನು ಕಂಡು, ''ಇದೇನಾಶ್ಚರ್ಯ! ಭಗವಂತನಾದ ಶ್ರೀವೇಂಕಟೇಶನಿಗೆ ತನ್ನನ್ನು ಶರಣಾದವರ ವಿಷಯದಲ್ಲಿ ಇರುವ ಕ್ರೀಡಿಸುವ ರುಚಿಯು ಪರಮಾಶ್ಚರ್ಯವನ್ನುಂಟು ಮಾಡುತ್ತದೆ'' ಎಂದು ಮನಸ್ಸಿನಲ್ಲಿ ಚಿಂತಿಸುತ್ತಾ, ಆಕಾಶಗಂಗಾ ನದಿಯಿಂದಲೇ ಕೊಡದಲ್ಲಿ ನೀರನ್ನು ತುಂಬಿಕೊಂಡು ಹಿಂದಿನಂತೆಯೇ ಆ ತೀರ್ಥದ ಕೊಡವನ್ನು ತಂದು ದೇವಾಲಯದಲ್ಲಿ ಶ್ರೀವೇಂಕಟೇಶನ ಮುಂದಿಟ್ಟರು.

ನಂತರ ಶ್ರೀವೇಂಕಟನಾಥನೂ, ಅರ್ಚಕರನ್ನು ಆವೇಶಿಸಿ, ಅವರ ಮೂಲಕ, ''ಹೇ ಶ್ರೀಶೈಲಪೂರ್ಣರೇ, ತಾವು ತಂದ ಶುಚಿರುಚಿಯಾದ ದಿವ್ಯ ತೀರ್ಥದಿಂದ ಮಧ್ಯದಾರಿಯಲ್ಲಿಯೇ ನನ್ನ ದಾಹವು ತೀರಿಹೋಯಿತು,'' ಎಂದು ಹೇಳಿ ಸಂತೋಷಪಡಿಸಿ, ಅದರ ಮೂಲಕವಾಗಿ, ಅವರು ಅಭಿಷೇಕ ತೀರ್ಥವನ್ನು ತರುವ ಕೈಂಕರ್ಯವು ತನಗೆ ನಿರತಿಶಯ ಪ್ರೀತಿಜನಕವೆಂಬುವುದನ್ನು ಸಮಸ್ತ ಲೋಕಗಳಿಗೂ ಚೆನ್ನಾಗಿ ತಿಳಿಯುವಂತೆ ಮಾಡಿದನು.

ಅದಾದನಂತರ ಶ್ರೀ ಶ್ರೀಶೈಲಪೂರ್ಣರೂ, ಅಭಿಷೇಕ ತೀರ್ಥವನ್ನು ಕೊಂಡು ಬರುವುದಾದ, ತಾವುಮಾಡುವ ಕೈಂಕರ್ಯದಿಂದ ತಮ್ಮಲ್ಲಿ ಅಪರಿಮಿತವಾದ ಭಗವಂತನ, ಕರುಣೆಯಿಂದ ಕೂಡಿದ ಶೀತಲವಾಸ ದೃಷ್ಟಿಯು ಬಿದ್ದುದನ್ನು ನೆನೆಯುತ್ತಾ, ತಮ್ಮನ್ನು ಅತ್ಯಂತ ಭಾಗ್ಯಶಾಲಿಯೆಂದು ನಂಬಿಕೊಂಡು, ಅದೇಮೊದಲಾಗಿ ಆ ಕೈಂಕರ್ಯದಲ್ಲಿ ಮತ್ತೂ ಹೆಚ್ಚಾದ ಅಭಿನಿವೇಶ ಹೊಂದಿದವರಾಗಿ ಆಕಾಶಗಂಗೆಯಿಂದಲೇ ದಿನವೂ ಅಭಿಷೇಕತೀರ್ಥವನ್ನು ತಂದು ಸಮರ್ಪಿಸಿ ಭಗವಂತನನ್ನು ಸಂತೋಷಗೊಳಿಸುತ್ತಾ ಇದ್ದರು.

ಪರಮ ಸಾತ್ವಿಕ ಮತ್ತು ಶಮದಮಾದಿ ಆತ್ಮಗುಣಗಳನ್ನು ಅಧಿಕವಾಗಿ ಹೊಂದಿದ್ದ ಶ್ರೀ ಶೈಲ ಪೂರ್ಣರು, ಸ್ವಾನುರೂಪ ಗುಣಗಳ ಒಳ್ಳೆಯ ಸೌಂದರ್ಯ, ನಯವಿನಯಾದಿ ಗುಣಗಳನ್ನು ಹೊಂದಿದ ತಮ್ಮ ಅಭಿಮಾನ ಪುತ್ರರಿಗೆ ಪಿಳ್ಳೈ

ತಿರುಮಲೈನಂಬಿ ''ಕುಮಾರ ಶ್ರೀಶೈಲಪೂರ್ಣರು'' ಎಂಬ ಹೆಸರು ಉಂಟಾದ ನಂತರ, ಪೆರಿಯ ತಿರುಮಲೈನಂಬಿ (ಮಹಾ ಶ್ರೀಶೈಲಪೂರ್ಣರು)ಗಳೆಂದೂ (ಆಳವಂದಾರ್) ಯಾಮುನ ಮುನಿಗಳ ಅಪ್ಪಣೆಯೆಂತೆ ಶ್ರೀವೇಂಕಟಗಿರಿಗೆ ಬಂದು, ನಿತ್ಯವಾಸವನ್ನು ಮಾಡಿಕೊಂಡು ಭಗವಂತನಿಗೆ ಸೇವೆಸಲ್ಲಿಸುವುದರಲ್ಲಿಯೇ ಮಗ್ನರಾಗಿರುವಾಗ, ಬೇಡನಾಗಿ ಬಂದ ಭಗವಂತನು 'ತಾತ' (ಅಪ್ಪ) ಎಂದು ಕರೆದನಂತರ ಶ್ರೀಶೈಲನಾಥ ತಾತಾಚಾರ್ಯರು (ತಿರುಮಲೈನಾಥ ತಾತಾಚಾರ್ಯರು) ಎಂಬ ಪ್ರಸಿದ್ಧವಾದ ಎರಡು ಹೆಸರುಗಳುಳ್ಳವರಾದರು.

ಈ ರೀತಿ ಭಗವಂತನಿಗೆ ಅಭಿಷೇಕ ಜಲವನ್ನು ಕೊಂಡುಬರುವ ಕೈಂಕರ್ಯ (ಸೇವೆ) ಒಂದರಲ್ಲಿಯೇ ಮಗ್ನರಾಗಿರುವವರೂ, ಅದೇ ಕಾರಣವಾಗಿ ಭಗವಂತನ ಅಪರಿಮಿತವಾದ ಪ್ರೀತಿಗೆ ಪಾತ್ರರಾದವರೂ, ಪರಮ ಭಾಗವತೋತ್ತಮರೂ ಆದ ಶ್ರೀಶೈಲಪೂರ್ಣರ ಶ್ರೀ ಚರಣಗಳಲ್ಲಿ ಅತ್ಯಂತ ಪ್ರೀತಿಯುಕ್ತವಾದ ಮನಸ್ಸುಳ್ಳ ಹಿರಿಯರುಗಳಿಂದ ಯಾವಾಗಲೂ ಪಠಿಸುವಂಥಾವುಗಳಾಗಿ, ಅವರ ಸೇವೆಯಿಂದ ಆನಂದ ಗೊಂಡ ಭಗವಂತನ ಅತ್ಯಂತ ಉತ್ಕೃಷ್ಟ ಕೃಪೆಯಿಂದುಂಟಾದ ಫಲ ಮುಂತಾದವುಗಳನ್ನು ಸೂಚಿಸತಕ್ಕ ಶ್ಲೋಕಗಳು ಮೂರು ಇವೆ. ಅವುಗಳ ತಾತ್ಪರ್ಯವು ಕೆಳಕಂಡಂತೆ ಇದೆ.

೧) ಪುಂಡರೀಕಾಕ್ಷನಾದ, ಶ್ರೀವೇಂಕಟನಾಥನು ಅಂಜನಾದ್ರಿ (ತಿರುಮಲೆ)ಯಲ್ಲಿ ಯಾರೊಬ್ಬರನ್ನು 'ತಾತ' ಎಂದು ಕರೆದು, ನೀರು ತುಂಬಿದ ಕಲಶ(ಕೊಡ)ದಿಂದ ಪ್ರೀತಿಯಿಂದ ನೀರನ್ನು ಕುಡಿದನೋ ಆ ಶ್ರೀಶೈಲಪೂರ್ಣರಿಗೆ (ನನ್ನ) ನಮಸ್ಕಾರವು.

೨) ವೃದ್ಧಾಪ್ಯದಿಂದುಂಟಾದ ನಿಶ್ಶಕ್ತಿಯನ್ನೂ ಕಡೆಗಣಿಸಿ ಪಾಪವಿನಾಶಿನಿ ತೀರ್ಥದಿಂದ ಜಲತುಂಬಿದ ಕೊಡವನ್ನು ತಲೆಯಮೇಲಿಟ್ಟುಕೊಂಡು ಬರುತ್ತಿರುವ ಶ್ರೀಶೈಲಪೂರ್ಣರೆಂಬ ಆಚಾರ್ಯರನ್ನು ''ತಾತ'' ಎಂದು ಕರೆದು ಬೇಡನ ವೇಷಧರಿಸಿದ ಮಹಾವಿಷ್ಣುವು (ಶ್ರೀನಿವಾಸನು)ಯಾಚಿಸಿದನೊ, ಅವರು ತೀರ್ಥವನ್ನು ಕೊಡದೆ ಇದ್ದುದರಿಂದ ಶ್ರೀ ದೇವಿನಾಥನಾದ ಆ ಬೇಡನು ಬಾಣವನ್ನು ಬಿಟ್ಟು ಕೊಡದಲ್ಲಿ ರಂಧ್ರವನ್ನೇರ್ಪಡಿಸಿ ನಂತರ ಆ ನೀರನ್ನು ಕುಡಿದನು.

೩) ನಂತರ ತೀರ್ಥವು ಕಳುವಾದುದರಿಂದ, ಶ್ರೀಶೈಲಪೂರ್ಣರ ದಿವ್ಯವಾದ ಮನಸ್ಸು ವಿಷಾದಗೊಳ್ಳಲು, ಕಾರುಣ್ಯದಿಂದ ಬೇಡ ವೇಷಧಾರಿಯಾದ ಶ್ರಿಯಃಪತಿಯು ಅವರ ಕೈಹಿಡಿದು ಕರೆದುಕೊಂಡು ಹೋಗಿ ಅಂಜನಾದ್ರಿ (ತಿರುಮಲೆ)ಯಲ್ಲಿ ಬಾಣವನ್ನು ಬಿಟ್ಟು ಆಕಾಶಗಂಗಾನದಿಯನ್ನುಂಟಾಗಿಸಿ, ''ಈ ತೀರ್ಥವು ಶ್ರೀವೇಂಕಟನಾಥನಿಗೆ ಪ್ರಿಯವಾದುದು, ಆದುದರಿಂದ ಇದರ

ತೀರ್ಥವನ್ನೇ ನಿತ್ಯವೂ ನನಗೆ ತೆಗೆದುಕೊಂಡು ಬನ್ನಿ'' ಎಂದು ಹೇಳಿ ಕೊನೆಯಲ್ಲಿ ಅಂತರ್ಧಾನನಾದನು. (ಇವುಗಳೇ ಆ ಶ್ಲೋಕಗಳ ಸಾರಾಂಶ)

**ಶ್ರೀ ಶೈಲಪೂರ್ಣರ ಮಂತ್ರ**

**''ಪಿತಾಮಹಸ್ಯಾಪಿ ಪಿತಾಮಹಾಯ ಪ್ರಾಚೇತಸಾದೇಶ ಫಲಪ್ರದಾಯ। ಶ್ರೀಭಾಷ್ಯಕಾರೋತ್ತಮದೇಶಿಕಾಯ ಶ್ರೀ ಶೈಲಪೂರ್ಣಾಯ ನಮೋ ನಮಸ್ತಾತ್॥** (ಪಿತಾಮಹರು ಎನ್ನುವ ಚತುರ್ಮುಖ ಬ್ರಹ್ಮದೇವರಿಗೆ ಪಿತಾಮಹರಾದವರು ಎಂದರೆ ಬ್ರಹ್ಮ ದೇವನಿಗೆ ತಂದೆಯಾದ ಶ್ರೀಮನ್ನಾರಾಯಣನಿಗೆ ತಂದೆಯಾದವರೂ, ಶ್ರೀ ಭಾಷ್ಯಕಾರರಾದ ಶ್ರೀರಾಮಾನುಜ ಮುನಿವರರೆಂಬ ಅತ್ಯಂತ ಶ್ರೇಷ್ಠ ಆಚಾರ್ಯರಿಗೆ ವಾಲ್ಮೀಕಿಯ ಉಪದೇಶವಾದ ಶ್ರೀ ರಾಮಾಯಣದ ಸಾರವಾದ ಅರ್ಥಗಳನ್ನು ಉಪದೇಶಿಸಿದ ಆಚಾರ್ಯರಾಗಿಯೂ ಇರುವ ಶ್ರೀಶೈಲಪೂರ್ಣರಿಗೆ (ನಮ್ಮ) ವಂದನೆಗಳು ಸೇರಲಿ.) ಇದು ಅವರ ಬಗ್ಗೆ ಶಿಷ್ಯರುಗಳು ಪ್ರತಿನಿತ್ಯವೂ ಪಠಿಸುವ ಮಂತ್ರವಾಗುತ್ತದೆ.

**ಶ್ರೀಶೈಲಪೂರ್ಣರ ಅವತಾರ ನಕ್ಷತ್ರ**

''ಶ್ರೀ ಮಲ್ಲಕ್ಷ್ಮಣಯೋಗೀಂದ್ರ ಶ್ರೀರಾಮಾಯಣ ದೇಶಿಕಂ। ವಂದೇ ಶ್ರೀ ಶೈಲಪೂರ್ಣಾಯಂ ಮೇಷೇ ಸ್ವಾತಿ ಸಮುದ್ಭವಂ॥ (ಶ್ರೀಮದ್ರಾಮಾನುಜರು ಎಂಬ ಮುನಿವರ್ಯರಿಗೆ ಶ್ರೀ ರಾಮಾಯಣವನ್ನು ಕಲಿಸಿದ ಆಚಾರ್ಯರೂ, ಮೇಷಮಾಸದಲ್ಲಿ ಸ್ವಾತಿ ನಕ್ಷತ್ರದಲ್ಲಿ ಜನಿಸಿದವರೂ ಆದ ಶ್ರೀ ಶೈಲಪೂರ್ಣರನ್ನು ನಮಸ್ಕರಿಸುತ್ತೇನೆ) ಇದರಿಂದ ಅವರ ಅವತಾರ ನಕ್ಷತ್ರವು ಮೇಷ (ಚಿತ್ತಿರೈ) ಮಾಸದ ಸ್ವಾತಿ ನಕ್ಷತ್ರವು ಎಂದು ತಿಳಿದುಕೊಳ್ಳತಕ್ಕ ಶ್ಲೋಕವಾಗುತ್ತದೆ.

ಶ್ರೀ ಶೈಲಪೂರ್ಣರಿಗೆ, ರಾಮಾನುಜ ಎಂದು ಹೆಸರುಳ್ಳ ತಮ್ಮ ಕುಮಾರರು ಪರಮಪದವನ್ನು ಹೊಂದಿದ ನಂತರ, ತಮಗೆ ಸರಿಯಾದ ಸೌಂದರ್ಯಾದಿ ಗುಣಗಳನ್ನು ಹೊಂದಿದವರೂ, ಅದೇ ಕಾರಣಕ್ಕಾಗಿ (ಪಿಳ್ಳೈತಿರುಮಲೈನಂಬಿಗಳು) ಕುಮಾರ ಶ್ರೀ ಶೈಲಪೂರ್ಣರು ಎಂಬ ಹೆಸರಿನಿಂದ ಪ್ರಸಿದ್ಧಿ ಹೊಂದಿ, ತೋಳಪ್ಪರ್ ಎಂಬ ಮತ್ತೊಂದು ಹೆಸರನ್ನು ಕೊಂಡವರೂ, ಸಕಲವೇದಾಂತಾರ್ಥಗಳನ್ನೂ ಶೋಧಿಸಿ ಅರಿತವರೂ ಆದ - ಅಭಿಮಾನಕ್ಕೆ ಪಾತ್ರರಾದ ಇಬ್ಬರು ಕುಮಾರರಿದ್ದರು. ಅತ್ಯಂತ ಶ್ರೇಷ್ಠವಾದ ಭಗವದ್ಭಕ್ತಿಯನ್ನುಳ್ಳವರೂ, ತಮ್ಮಂತೆಯೇ ಸದ್ಗುಣಗಳಿಂದ ತುಂಬಿದವರೂ ಆದ ಆ ಕುಮಾರರಲ್ಲಿ ಅಸೀಮ ಪ್ರೀತಿಯಿಂದ ಶ್ರೀಶೈಲಪೂರ್ಣರು 'ತಾತ' (ಅಪ್ಪ) ಎಂದು ಕರೆದು ಬಂದುದರಿಂದ ಈ ಕುಮಾರರಿಗೆ 'ಅಪ್ಪರ್' ಎಂಬ ಹೆಸರೂ, ಸಕಲ ವೇದಾನ್ತಸಾರವನ್ನರಿತ ಇವರನ್ನು ಶ್ರೀ ವೇಂಕಟನಾಥನು ಒಂದು ಸಮಯ ರಾಮಾನುಜಮುನಿಗಳಿಗೆ ಕನಸಿನಲ್ಲಿ ಬಂದು, ವಾದಿಗಳನ್ನು ಜಯಿಸಲು,

ವಾದ ಮಾಡುವಾಗ ಜೊತೆಯಲ್ಲಿ ಸಹಕರಿಸುವ ಸ್ನೇಹಿತರಾಗಿ ಸ್ವೀಕರಿಸಬೇಕೆಂದು ಹೇಳಿದುದರಿಂದಲೂ, ನಂತರ ರಾಮಾನುಜರು ಸಕಲಲೋಕ ಪ್ರಜೆಗಳಿಗೆಲ್ಲ ಉಪಕಾರವಾದ ಮಾಯಾವಾದಿ ವಿಜಯದಲ್ಲಿ (ಅದ್ವೈತಿಗಳನ್ನು ಗೆಲ್ಲುವುದರಲ್ಲಿ) ಅನುಕೂಲವಾಗಿ ಭಗವಂತನಿಂದ ಸೂಚಿಸಲ್ಪಟ್ಟ ಈ ಶ್ರೀಶೈಲ ಪೂರ್ಣ ಕುಮಾರರನ್ನು ಲೋಕದ ಸಮಸ್ತ ಜನಗಳಿಗೆ ಸ್ನೇಹಿತರಾಗಿಯೇ ಪ್ರಸಿದ್ಧಿಪಡಿಸಿದುದರಿಂದಲೂ, 'ತೋಳರ್' ಎಂಬ ಹೆಸರೂ ಸೇರಿ, ಎರಡೂ ಒಟ್ಟಾಗಿ ಸೇರಿ 'ತೋಳಪ್ಪಾರ್ಯರ್' ಎಂಬ ಶ್ರೀನಾಮವು ಈ ಕುಮಾರ ಶ್ರೀಶೈಲ ಪೂರ್ಣರಿಗೆ ಅತ್ಯಂತ ಪ್ರಸಿದ್ಧವಾದ ಹೆಸರಾಯಿತು.

ಇವರ ಬಗ್ಗೆಯೂ ಈ ರೀತಿ ಮೂರು ಶ್ಲೋಕಗಳನ್ನು ಹಿರಿಯರು ಅನುಸಂಧಾನ ಮಾಡುತ್ತಿದ್ದರು.

೧) ಶ್ರೀಭಾಷ್ಯಕಾರರಾದ ಶ್ರೀರಾಮಾನುಜಮುನಿಗಳಿಗೆ ಅದ್ವೈತವಾದಿಗಳೊಂದಿಗೆ (ಆದಿ ಶಂಕರಾಚಾರ್ಯರಮತ - ಅದ್ವೈತಮತ) ವಾದವೆಂಬ ಪಂದ್ಯವು (ಸ್ಪರ್ಧೆ) ಆರಂಭಿಸಿದಾಗ, ಶ್ರೀ ವೇಂಕಟನಾಥನು ಶ್ರೀರಾಮಾನುಜಾಚಾರ್ಯರಿಗೆ ರಾತ್ರಿಯ ಕನಸಿನಲ್ಲಿ, ಬ್ರಹ್ಮದೊಂದಿಗೆ ಜೀವಾತ್ಮನಿಗಿರುವ ಸಮಾನತೆ, ಹೊಂದಾಣಿಕೆ ಮತ್ತು ಭಿನ್ನತೆಗಳನ್ನು ಹೇಳುವ ವೇದಾಂತ ವಾಕ್ಯಗಳಿಗೆ (ಸಾಮ್ಯೈಕಶ್ರುತಿ ಭೇದವಾಕ್ಯಗಳು) ಒಂದಕ್ಕೊಂದು ವಿರುದ್ಧವಾಗದಂತೆ ಹೇಳಬೇಕಾದ ಗೂಢ ಅಭಿಪ್ರಾಯಗಳನ್ನುಪದೇಶಿಸಿ, ಯಾರನ್ನು ಮಿತ್ರನನ್ನಾಗಿ ಸ್ವೀಕರಿಸುವಂತೆ ಹೇಳಿದನೋ, ಯಾರನ್ನು ರಾಮಾನುಜಮುನಿವರ್ಯರು ಲೋಕದವರಿಗೆಲ್ಲಾ ಮಿತ್ರರಾದವರೆಂದು ಬಹಿರಂಗಪಡಿಸಿದರೋ (ಅಂತಹ) ಶ್ರೀಶೈಲ ಪೂರ್ಣರ (ಅಭಿಮಾನ) ಪುತ್ರರಾದ ಕುಮಾರ ಶ್ರೀಶೈಲ ಪೂರ್ಣರನ್ನು ಧ್ಯಾನಮಾಡುತ್ತೇನೆ.

೨. ಭಾರದ್ವಾಜ ಗೋತ್ರ (ಕುಲ)ವೆಂಬ ಸಾಗರಕ್ಕೆ ಚಂದ್ರನಂತಿರುವವರೂ, ಜ್ಞಾನ ಭಕ್ತಿಗಳೆಂಬ ಅಮೃತವುಂಟಾಗುವ ಸಾಗರದಂತಿರುವವರೂ, ಶ್ರೀಶೈಲಪೂರ್ಣರ (ಅಭಿಮಾನ) ಪುತ್ರರಾದ ತೋಳಪ್ಪಾಚಾರ್ಯರನ್ನು ಚಿಂತಿಸುತ್ತೇನೆ (ಧ್ಯಾನಿಸುತ್ತೇನೆ)

೩. ಬೇಡನ ರೂಪಗೊಂಡ ಶ್ರೀವೆಂಕಟನಾಯಕನು 'ತಾತ' ಎಂದು ಕರೆದು ಮಾತನ್ನಾಡಿದನಂತರ ಯಾವ ಶ್ರೀಶೈಲಪೂರ್ಣರ ಮಹಿಮೆಯು ಲೋಕದಲ್ಲಿ ಪ್ರಸಿದ್ಧಿಗೊಳ್ಳಲ್ಪಟ್ಟಿತೋ ಆ ತಾತರಿಗೂ ತಾತರೂ (ಶ್ರೀಶೈಲಪೂರ್ಣರಿಂದ 'ತಾತ' ಎಂದು ಕರೆಯಲ್ಪಟ್ಟವರು) ಭಾರದ್ವಾಜಕುಲೋದ್ಭವರಾದವರೂ, ತಮ್ಮನ್ನಾಶ್ರಯಿಸಿದವರಿಗೆ ನಿಧಿಯಾದವರೂ, ಜ್ಞಾನಭಂಡಾರವಾದವರೂ ಆದ ಕುಮಾರ ಶ್ರೀ ಶೈಲಪೂರ್ಣರನ್ನು ಶರಣು ಹೋಗುತ್ತೇನೆ. ಇವು ಆ ಮೂರು

ಶ್ಲೋಕಗಳ ತಾತ್ಪರ್ಯವಾಗುತ್ತದೆ. (ಕುಮಾರ ಶ್ರೀ ಶೈಲಪೂರ್ಣರು ಚಿನ್ನತಿರುಮಲೈನಂಬಿ (ಚಿಕ್ಕ ಶ್ರೀಶೈಲಪೂರ್ಣ), ತೋಳಪ್ಪಾಚಾರ್ಯರೆಂಬ ಈ ಮೂರು ನಾಮವೂ ಒಬ್ಬರನ್ನೇ ಸೂಚಿಸುತ್ತದೆ).

**ಶ್ರೀಶೈಲಪೂರ್ಣರು ಪರಮಪದವನ್ನು ಸೇರಿದುದು**

ಶ್ರೀಶೈಲಪೂರ್ಣರು ಮುಂಚೆ ಹೇಳಿದ ರೀತಿಯಲ್ಲಿಯೇ ಅತ್ಯಂತ ಪ್ರಸಿದ್ಧವಾದ ಗುಣಗಳನ್ನು ಪಡೆದವರೂ, ತೋಳಪ್ಪರ್ ಎಂಬ ಮತ್ತೊಂದು ಹೆಸರನ್ನುಳ್ಳವರಾದ ತಮ್ಮ (ಅಭಿಮಾನ) ಪುತ್ರರಾದ ಕುಮಾರ ಶ್ರೀಶೈಲ ಪೂರ್ಣರೊಂದಿಗೆ ಸೇರಿ ತಮ್ಮ ಆಚಾರ್ಯರಾದ ಯಾಮುನಾಚಾರ್ಯರು (ಆಳವಂದಾರ್) ಆಜ್ಞಾಪಿಸಿದ ಭಗವಂತನ ಅಭಿಷೇಕ ಜಲವನ್ನು ತರುವ ಕೈಂಕರ್ಯವನ್ನು ಆದರದಿಂದ ಮಾಡುತ್ತಿದ್ದು ಸ್ವಲ್ಪ ದಿನಗಳ ನಂತರ ಆ ಕುಮಾರರ ಮುಂದೆ ತಾವೂ ಪರಮಪದ ಪ್ರಾಪ್ತಿಯನ್ನು ಪಡೆದರು.

ಆ ಮಹಾ ಶ್ರೀಶೈಲಪೂರ್ಣರು ಪರಮಪದವನ್ನು (ಶ್ರೀ ವೈಕುಂಠವನ್ನು) ಸೇರಲು ಇಷ್ಟಪಟ್ಟು ತಾವು ಪೂಜಿಸುವ ನೃತ್ಯಭಂಗಿಯಲ್ಲಿರುವ ನವನೀತ ಕೃಷ್ಣ (ಬೆಣ್ಣೆಯನ್ನು ಕೈಯಲ್ಲಿ ಹಿಡಿದು ಅದು ದೊರೆತ ಸಂತೋಷದಿಂದ ಕುಣಿಯುತ್ತಿರುವ ಕೃಷ್ಣ) ಪರಮಾತ್ಮನ (ಮೂರುಕಡೆ ಮುಚ್ಚಿರುವ, ಒಂದು ಕಡೆ ಬಾಗಿಲಿರುವ) ಚಿಕ್ಕ ಮಂಟಪ (ಮರದಿಂದ ಮಾಡಿರುವುದು) ದ ಬಾಗಿಲನ್ನು ತೆರೆದು, ಒಳಗೆ ಇರುವ ತೆರೆಯನ್ನೂ ಪಕ್ಕಕ್ಕೆ ಸರಿಸಿ, ಆ ಪರಮಾತ್ಮನ ಎದುರಿನಲ್ಲಿ ನಿಂತುಕೊಂಡು ಕೈಜೋಡಿಸಿ ''ಶಾಯಲೋಡು ಮಣಿಮಾಮೈ ತಳರ್‌ನ್ದೇನ್ ನಾನ್ - ಇನಿಯುನದು ವಾಯಲಗಿಲ್ ಇನ್ನಡಿಶಲ್ ವೈಪ್ಪಾರೈ ನಾಡಾಯೇ (ಪ್ರಕಾಶದಿಂದ ಕೂಡಿದ ಅಂದವಾದ ವರ್ಣವನ್ನು ನಾನು ಕಳೆದುಕೊಂಡೆನು - (ಅಂದರೆ ಈ ಶರೀರವನ್ನು ಬಿಡುವ ತರುಣದಲ್ಲಿದೇನೆ) - ಇನ್ನು ನಿನ್ನ ಬಾಯೊಳಗೆ ಸಿಹಿಯಾದ ಊಟ ತಿಂಡಿಗಳನ್ನು ಉಣಿಸುವ ಸಾಮರ್ಥ್ಯಶಾಲಿಗಳನ್ನು ನೀನು ಹುಡುಕಿಕೋ'' ಎಂದು ನಮ್ಮಾಳ್ವಾರ್ (ಪರಾಂಕುಶ ಸೂರಿ) ದಯಪಾಲಿಸಿದ ಸಹಸ್ರಗೀತೆಯ (೧-೪-೮) ಪಾಶುರವನ್ನನುಸಂಧಾನ ಮಾಡುತ್ತಲೇ, ''ಹೇ ಭಗವನ್, ಇನ್ನು ಮೇಲೆ ನಿನ್ನ ತೊಂಡೆ ಹಣ್ಣಿನ ರೀತಿಯಲ್ಲಿರುವ ಅಧರಗಳನ್ನುಳ್ಳ ದಿವ್ಯವಾದ ಬಾಯಿಯಲ್ಲಿ ಉತ್ಕೃಷ್ಟವಾದ ಪ್ರಸಾದಗಳನ್ನು ಸಮರ್ಪಿಸುವವರನ್ನು ಹುಡುಕಿಕೋ ಎಂದು ಹೇಳುವುದಕ್ಕೆ ಇರುವ ಸ್ಥಿತಿಯನ್ನುಳ್ಳ ದಾಸನಾದ ನಾನು ಇದೋ (ಈ ಶರೀರವನ್ನು ಬಿಟ್ಟು) ಹೋಗುತ್ತಿದ್ದೇನೆ'' ಎಂದು ಭಿನ್ನವಿಸಿಕೊಂಡು, ಶ್ರೀ ವೇಂಕಟನಾಥನನ್ನು ಧ್ಯಾನಿಸಿ, ''ಸ್ವಾಮಿ, ಆಚಾರ್ಯ ಶ್ರೀಯಾಮುನಮುನಿಗಳ ನಿಯಮನವನ್ನು ಪಾಲಿಸುತ್ತಾ ತಮ್ಮ ಅಭಿಷೇಕಕ್ಕಾಗಿ ತೀರ್ಥವನ್ನು ಕೊಂಡು ತರುವ ಕೈಂಕರ್ಯವನ್ನು ಇಂದಿನವರೆಗೂ ನನ್ನಿಂದಾದ ಮಟ್ಟಿಗೆ ನೆರವೇರಿಸಿರುತ್ತೇನೆ. ಇನ್ನು ಮೇಲೆ ಆ

ಕೈಂಕರ್ಯ ಮಾಡುವವರನ್ನು ಹುಡುಕಿಕೊಳ್ಳಿ, ತಮ್ಮ ನಿತ್ಯ-ವಿಭೂತಿಯನ್ನು (ಪರಮ ಪದ- ಶ್ರೀ ವೈಕುಂಠ) ದಾಸನು ಪಡೆಯುವಂತೆ ಅನುಗ್ರಹಿಸಬೇಕು'' ಎಂದು ಪ್ರಾರ್ಥಿಸಿಕೊಂಡು, ದೇವಸ್ಥಾನದಲ್ಲಿ ಭಗವಂತನಿಗೆ ಕೈಂಕರ್ಯಮಾಡುವ ಎಲ್ಲರನ್ನೂ ಮತ್ತಿತರ ಭಗವದ್ಭಕ್ತರುಗಳನ್ನೂ ಕರೆದು, ತಾವು ಅವರುಗಳಲ್ಲಿ ಏನಾದರೂ ಅಪಚಾರ (ಅಪರಾಧ)ವೆಸಗಿದ್ದೇ ಆದಲ್ಲಿ ಅವುಗಳನ್ನು ಸಹಿಸಿಕೊಂಡು ಕ್ಷಮಿಸಬೇಕೆಂದು. ಪ್ರಾರ್ಥಿಸಿ, ದ್ವಯಮಂತ್ರವನ್ನು ಅನುಸಂಧಾನ ಮಾಡುವುದರಲ್ಲಿಯೇ ಆಸಕ್ತಿಗೊಂಡವರಾಗಿ, ಪರಮಪದವೆಂಬ ಮೇಲಾದ (ಶ್ರೇಷ್ಠವಾದ) ಲೋಕಕ್ಕೆ ಹೋಗಲು ಸಹಾಯ ಮಾಡುವ ಅರ್ಚಿರಾದಿ ಲೋಕಗಳೆಂಬ ದಾರಿಯಾದ ಉತ್ಕೃಷ್ಟವಾದ ಸೋಪಾನದ ಮೆಟ್ಟಲುಗಳನ್ನು ಏರುವುದಕ್ಕೆ ಮುಖ್ಯ ಕಾರಣರಾದ ಶ್ರೀ ಆಳವಂದಾರ್ (ಶ್ರೀಯಾಮುನಾಚಾರ್ಯರು) ರವರ ಶ್ರೀ ಚರಣಾಂಬುಜದ್ವಯಗಳನ್ನು ಧ್ಯಾನಿಸುತ್ತಲೇ ನಿತ್ಯವಿಭೂತಿಗೆ ಪದಾರ್ಪಣೆ ಮಾಡಿದರು.

**ಶೀತಲ ತೀರ್ಥಾಮೃತವನ್ನು ಎದುರುಗೊಂಡು ಸ್ವಾಗತಿಸುವ ಉತ್ಸವ**

ಈ ರೀತಿ ಶ್ರೀಶೈಲ ಪೂರ್ಣರ ಅವತಾರ ಸಮಾಪ್ತಿಯಾದ ನಂತರ ಅವರ ಚರಣಾಂಭೋಜಗಳಲ್ಲಿ ಅಪರಿಮಿತ ಪ್ರೀತಿಯನ್ನಿಟ್ಟ ಭಗವದ್ರಾಮಾನುಜ ಮುನಿವರ್ಯರು ''ಶ್ರೀ ಶ್ರೀಶೈಲಪೂರ್ಣರು ಮಾಡಿದ ಅಭಿಷೇಕ ಜಲವನ್ನು ತರುವ ಕೈಂಕರ್ಯವು ಪರಮಾತ್ಮನಾದ ಶ್ರೀ ಶ್ರೀನಿವಾಸನಿಗೆ ಅತ್ಯಂತ ಸಂತೋಷವನ್ನುಂಟು ಮಾಡಿರುವುದರಿಂದಲೂ, ಅದೇ ಕಾರಣದಿಂದ ಭಗವಂತನು ಅವರಲ್ಲಿ ಅತ್ಯಂತ ಉತ್ಕೃಷ್ಟವಾದ ಕೃಪೆಯನ್ನು ಮಾಡಿದುದರಿಂದಲೂ, ಅದನ್ನು ಶ್ಲಾಘಿಸಿಕೊಳ್ಳುವುದಕ್ಕಾದ ಒಂದು ಉತ್ಸವವನ್ನು ಪರಮಾತ್ಮನಿಗೆ ಮಾಡಬೇಕು. ಆ ಉತ್ಸವವನ್ನು ಅಧ್ಯಯನೋತ್ಸವ ಮುಗಿದ ಮಾರನೆಯ ದಿನ ಶ್ರೀ ಶೈಲ ಪೂರ್ಣರಲ್ಲಿ ಭಗವಂತನು ವಿಶೇಷವಾದ ಅನುಗ್ರಹ ಮಾಡಿರುವುದರಿಂದ, ಆ ದಿನದಲ್ಲಿಯೇ ನಡೆಸಬೇಕು'' ಎಂದು ದೇವಸ್ಥಾನದಲ್ಲಿ ಕೈಂಕರ್ಯ ಮಾಡುವವರಿಗೆ ತಿಳಿಸಿದರು. ನಂತರ ಸ್ಥಳವಾಸಿಗಳಾದ ಹಿರಿಯರುಗಳೂ, ಭಗವತ್ಕೈಂಕರ್ಯ ಮಾಡುವವರೆಲ್ಲರೂ, ಶ್ರೀ ವೇಂಕಟನಾಥನ ಅಧ್ಯಯನೋತ್ಸವವು ಸಮಾಪ್ತಿಯಾದ ಮಾರನೆಯ ದಿನ ಮುಂಚೆ ಬೇಡರ ರೂಪವನ್ನು ತಾಳಿದ ಭಗವಂತನು, ಅಭಿಷೇಕ ತೀರ್ಥವನ್ನು ಕೊಂಡು ಬರುವ ಶ್ರೀ ಶೈಲಪೂರ್ಣರನ್ನು ನಡುದಾರಿಯಲ್ಲಿ ಎದುರುಗೊಂಡು ಹೋಗಿ ಅವರ ಕೊಡದಲ್ಲಿದ್ದ ತೀರ್ಥವನ್ನು ಪಾನಮಾಡಿದ ಕಥೆಯನ್ನು ಎಲ್ಲರೂ ನೆನೆಸಿಕೊಂಡು, 'ಒಳ್ಳೆಯ ದಾರಿಯಲ್ಲಿ ಹೋಗುವ' ಎಂದು ಕೊಂಡವರಾಗಿ, ಶ್ರೀರಾಮಾನುಜ ಮುನಿವರ್ಯರನ್ನು ಮುಂದಿಟ್ಟುಕೊಂಡು ಶ್ರೀ ವೇಂಕಟನಾಥನನ್ನು ಮಂಗಳ ಗಿರಿಯನ್ನು ಹತ್ತಿ ಬಿಜಯ ಮಾಡಿಸಿಕೊಂಡು, ಆಕಾಶಗಂಗೆಗೆ ಹೋಗುವ

ದಾರಿಯಲ್ಲಿ ಸ್ವಲ್ಪ ದೂರ ಹೋಗಿ, ಆಕಾಶಗಂಗೆಯಿಂದ ತೀರ್ಥತುಂಬಿದ ಕೊಡಗಳನ್ನು ಎತ್ತಿಕೊಂಡು ಬರುವ ಕೆಲವು ಶ್ರೀ ವೈಷ್ಣವರುಗಳನ್ನು ಎದುರುಗೊಂಡು, ಶ್ರೀ ಪರಕಾಲಸೂರಿ (ಶ್ರೀ ತಿರುಮಂಗೈಯಾಳ್ವಾರ್) ಯವರು ಹಾಡಿದ ''ಪೆರಿಯ ತಿರುಮೊಳಿ''ಯನ್ನು ಹಾಡುತ್ತಾ, ಊರಿಗೆ ಬಂದು, ನಾಲ್ಕು ಬೀದಿಗಳಲ್ಲಿ ಎಲ್ಲ ಜಾಗಗಳಲ್ಲಿಯೂ ಹೋಗಿ, ಅಲ್ಲಲ್ಲಿ ಶ್ರೀ ವೈಷ್ಣವರುಗಳಿಂದ ತಮ್ಮ ತಮ್ಮ ಗೃಹಗಳ ಮುಂಭಾಗದಲ್ಲಿ ಪಾದಗಳಿಗೆ ತೀರ್ಥವನ್ನು ಸುರಿಸಿ, ಚಂದನ, ಪುಷ್ಪ, ದೀಪ, ಧೂಪ, ತಾಂಬೂಲ, ದಕ್ಷಿಣೆ ಮುಂತಾದುವುಗಳನ್ನು ಸಮರ್ಪಿಸಿ ಸತ್ಕರಿಸಲ್ಪಟ್ಟು ಪುನಃ ದೇವಾಲಯಕ್ಕೆ ಪ್ರವೇಶಿಸಿ ಶ್ರೀ ಪುರುಷ ಸೂಕ್ತವನ್ನು ಪಠಿಸುತ್ತಾ, ಆಗಲೇ ತಂದ ಆಕಾಶಗಂಗೆಯ ತೀರ್ಥದ ಕೊಡಗಳಲ್ಲಿ ಕೆಲವು ಕೊಡಗಳ ತೀರ್ಥದಿಂದ, ಸತತವಾಗಿ ಧರಿಸಿಕೊಂಡಿರುವ ಪುಷ್ಪಗಳಿಂದ, ಘಮಘಮವೆಂದು ಸುವಾಸನೆಯನ್ನು ಸೂಸುವ ಶ್ರೀ ವೇಂಕಟನಾಥನ ದಿವ್ಯ ಪಾದಗಳಿಗೂ, ಶ್ರೀಶಠಕೋಪ (ಶಠಾರಿ) ವೆಂಬ ಪಾದುಕೆಗಳಿಗೂ ಅಭಿಷೇಕ ಮಾಡಿ, ಚಂದನ ಪುಷ್ಪ ಧೂಪ ದೀಪಾದಿಗಳಿಂದ ಉಪಚರಿಸಿ, ಮಿಕ್ಕ ಕೊಡಗಳಲ್ಲಿನ ಸಮಸ್ತ ಪರಿಮಳಗಳನ್ನುಳ್ಳ ಸುವಾಸನಾಭರಿತವಾದ ತೀರ್ಥವನ್ನು ಶ್ರೀನಿವಾಸನಿಗೆ ಕುಡಿಯುವ ತೀರ್ಥವಾಗಿ ನಿವೇದನ ಮಾಡಿಸಿದರು. ಅದೇ ಮೊದಲಾಗಿ ಶ್ರೀ ಅಧ್ಯಯನೋತ್ಸವವು ಸಮಾಪ್ತಿ ಹೊಂದಿದ ಮಾರನೆಯ ದಿನ ''ಶೀತಲ ತೀರ್ಥಾಮೃತವನ್ನು ಎದುರುಗೊಂಡು ಹೋಗುವ ಉತ್ಸವ'' ಎಂಬುವ ಪ್ರಖ್ಯಾತ ಉತ್ಸವವು ಪ್ರತಿವರ್ಷವೂ ಅನುಷ್ಠಿಸಲ್ಪಡುತ್ತಾ ಬರುತ್ತಿದೆ. (ಈಗ ಇದು 'ಶೀತಲ ತೀರ್ಥಾಮೃತೋತ್ಸವ' ವೆಂದು ಕರೆಯಲ್ಪಡುತ್ತದೆ.

**ತಿರುಮಲೈ ಅನಂದಾಳ್ವಾನ್‌ರವರ ಚರಿತ್ರೆ :- ಅವತಾರ**

ಶ್ರೀ ಭಗವದ್ರಾಮಾನುಜರಾಗಿ ಅವತರಿಸಿದ ಆದಿಶೇಷನು ಸಕಲ ಶಾಸ್ತ್ರಾರ್ಥಗಳನ್ನೂ ಉಪದೇಶಿಸುವುದರಲ್ಲಿಯೇ ಅಧಿಕವಾದ ಆಸಕ್ತಿಯನ್ನುಳ್ಳವರಾಗಿ, ಅವುಗಳನ್ನು ಉಪದೇಶ ಮಾತ್ರವಲ್ಲದೆಯೇ ಅನುಷ್ಠಾನ (ಆಚರಣೆ) ಮೂಲಕವಾಗಿ ತೋರಿಸಿ ಲೋಕದ ಜನಗಳನ್ನು ಉಜ್ಜೀವನಗೊಳಿಸಬೇಕೆಂಬ ಅಪೇಕ್ಷೆಗೊಂಡು, ಈ ಎರಡೂ ಕೆಲಸಗಳನ್ನೂ ಒಂದೇ ಒಂದು ರೂಪವನ್ನು ತಾಳಿ ಮಾಡಲಾಗುವುದಿಲ್ಲವೆಂದು ಭಾವಿಸಿ, ಶ್ರೀ ಬದರಿಕಾಶ್ರಮದಲ್ಲಿ 'ನರ' ಮತ್ತು 'ನಾರಾಯಣ' ರೆಂಬ ಎರಡು ರೂಪಗಳನ್ನು ಧರಿಸಿದ ಭಗವಂತನಂತೆ, ತಾನೂ ಎರಡು ರೂಪಗಳನ್ನು ಕೊಳ್ಳಲು ಆಸೆ ಪಟ್ಟು, ಮೇಲ್ನಾಡಿನಲ್ಲಿ ಕಾವೇರಿ ನದಿಯ ತೀರದಲ್ಲಿ ಶಿರುಪುತ್ತೂರ್ ಎಂಬ ಸ್ಥಳದಲ್ಲಿ (ಮೇಲ್ನಾಡು - ಕರ್ನಾಟಕ, ಶಿರುಪುತ್ತೂರು - ಹಳೆಯ ಕಿರಂಗೂರು 'ಶ್ರೀರಂಗ ಪಟ್ಟಣದ ಸಮೀಪ) ಶ್ರೇಷ್ಠವಾದ ಭಾರದ್ವಾಜಗೋತ್ರದಲ್ಲಿ ಉದಿಸಿದ ಶ್ರೀ ವೈಷ್ಣವ ಕುಲಕ್ಕೆ ಅಗ್ರಮಾನ್ಯರಾದ, ಶ್ರೀ ಕೇಶವಾಚಾರ್ಯರಿಂದ ಕಲಿವರ್ಷಗಳು ೪೧೫೪,

ಶಾಲಿವಾಹನ ಶಕವರ್ಷಗಳು ೯೦೫ ಕಳೆದನಂತರ ವಿಜಯನಾಮ ಸಂವತ್ಸರದಲ್ಲಿ, ಸೂರ್ಯನು ಮೇಷರಾಶಿಗೆ ಪ್ರವೇಶಿಸಿದಾಗ (ಚಿತ್ತಿರೈಮಾಸ) ಚಿತ್ತಾನಕ್ಷತ್ರದಲ್ಲಿ ತಮ್ಮ ಅಂಶವಾಗಿಯೇ ಒಬ್ಬರನ್ನು ಅವತಾರಮಾಡಿಸಲು - ಅವರೇ ಶ್ರೀ ಅನಂದಾಳ್ವಾನ್ (ಅನಂತಾರ್ಯ) ರಾಗಿ ಅವತರಿಸಿದರು.

ಅದಾದನಂತರ ಕೇಶವಾಚಾರ್ಯರಿಂದ, ಆದಿಶೇಷನನ್ನು ತಾವು ಕನಸಿನಲ್ಲಿ ಕಂಡದುದರಿಂದ ತಮ್ಮ ಕುಮಾರರ ಸತ್ಯತೆಯನ್ನು ಊಹಿಸಿ ತಿಳಿದು ಅದಕ್ಕೆ ತಕ್ಕ ರೀತಿಯಲ್ಲಿಯೇ ಅನಂತಾಚಾರ್ಯ (ಅನಂದಾಳ್ವಾನ್) ಎಂದು ಹೆಸರಿಡಲ್ಪಟ್ಟು, ಕ್ರಮವಾಗಿ ಚೌಳ, ಮುಂಜಿ ಮುಂತಾದ ಎಲ್ಲಾ ಶಾಸ್ತ್ರೋಕ್ತ ದೀಕ್ಷೆಗಳನ್ನು ಮಾಡಿಸಿ, ಅವರು ತಮ್ಮಿಂದಲೇ ಎಲ್ಲಾ ಕಲೆಗಳ ಉಪದೇಶವನ್ನು ಹೊಂದಿ, ಶುಕ್ಲ ಪಕ್ಷ ಚಂದ್ರನಂತೆ ಪ್ರತಿನಿತ್ಯವೂ ಜ್ಞಾನ ಮುಂತಾದುವುಗಳ ತೇಜಸ್ಸಿನಿಂದ ಬೆಳೆಯುತ್ತಿರುವ ಅನಂದಾಳ್ವಾನ್, ಶ್ರೀರಂಗದಲ್ಲಿ ಶ್ರೀರಾಮಾನುಜರಾಗಿ ಬಿಜಯಗೈದಿರುವ ತಮ್ಮ ಅಂಶಿಯಾದ ಆದಿಶೇಷನನ್ನು, ಲಕ್ಷ್ಮಣನು ಶ್ರೀರಾಮಚಂದ್ರನನ್ನೂ, ಶತ್ರುಘ್ನನು ಭರತನನ್ನೂ ತಮ್ಮಗಳ ನಾಯಕರಾಗಿ ಅನುಸರಿಸಿದ ರೀತಿಯಲ್ಲಿ, ಆಚಾರ್ಯರನ್ನಾಗಿ ಪಡೆಯಲು ಅಭಿಪ್ರಾಯಪಟ್ಟು ಯಜ್ಞೇಶರು (ಎಚ್ಚಾನ್) ಮುಂತಾದವರುಗಳೊಂದಿಗೆ ಶ್ರೀರಂಗ ನಗರವನ್ನು ಹೋಗಿ ಸೇರಿದರು.

**ಅನಂದಾಳ್ವಾನ್‌ರನ್ನು ರಾಮಾನುಜರು ಶಿಷ್ಯನನ್ನಾಗಿ ಸ್ವೀಕರಿಸಿದುದು**

ಇವರುಗಳು ಹೋಗಿ ಸೇರುವುದಕ್ಕೆ ಕೆಲ ದಿನಗಳ ಮುಂಚೆ ಶ್ರೀ ರಾಮಾನುಜಮುನಿವರ್ಯರು ಯಜ್ಞಮೂರ್ತಿಯೆಂಬ ಹೆಸರನ್ನುಳ್ಳ, ತಮ್ಮೊಂದಿಗೆ ವಾದ ಮಾಡಲು ಬಂದ ಮಹಾಪಂಡಿತರೊಬ್ಬರನ್ನು ವಾದದಲ್ಲಿ ಸೋಲಿಸಿ ಶ್ರೀ ವೈಷ್ಣವರನ್ನಾಗಿ ಮಾಡಿ, ಮಹಾಜ್ಞಾನಾಧಿಕರಾಗಿಯೂ ಪರಮಭಾಗವತೋತ್ತಮರಾಗಿಯೂ ಮಾರ್ಪಟ್ಟ ಅವರಿಗೆ ತಮ್ಮ "ಎಂಬೆರುಮಾನಾರ್" ಎಂಬ ಸ್ವನಾಮಗರ್ಭಿತವಾದ "ಅರುಳಾಳಪ್ಪೆರುಮಾಳ್ ಎಂಬೆರುಮಾನಾರ್" (ದಯಾಪಾಲ ಮನ್ನಾಥಮುನಿ) ಎಂಬ ದಿವ್ಯನಾಮದಿಂದ ಭೂಷಿಸಿ, ಅವರಿಗೆ ತಮ್ಮ ಸಮಾನವಾದ ಗೌರವವನ್ನುಂಟುಮಾಡಬೇಕೆಂಬ ಅಭಿಪ್ರಾಯದಿಂದ ಅವರನ್ನು ಪ್ರತ್ಯೇಕವಾಗಿ ಒಂದು ಸ್ಥಾನದಲ್ಲಿ ಆಚಾರ್ಯರಾಗಿ ಇರಬೇಕೆಂದು ನಿಯಮಿಸಿದರು. ಈಗ ಶ್ರೀ ಅನಂದಾಳ್ವಾನ್ ಮುಂತಾದವರು ತಮ್ಮನ್ನಾಶ್ರಯಿಸಬರಲು, ರಾಮಾನುಜಮುನಿಗಳು ಅವರುಗಳನ್ನು ಆ ಅರುಳಾಳಪ್ಪೆರುಮಾಳ್ ಎಂಬೆರುಮಾನಾರ್‌ರವರಲ್ಲಿ ಒಪ್ಪಿಸಿ ಭಗವದಾಶ್ರಯಣ (ಪಂಚಸಂಸ್ಕಾರಗಳು) ವನ್ನು ಅವರ ಮೂಲಕವಾಗಿಯೇ ಮಾಡಿಸಿದರು.

ಆ ಅರುಳಾಳಪ್ಪೆರುಮಾಳ್ ಎಂಬೆರುಮಾನಾರ್ಯರೋ ಎಂದರೆ ತಮ್ಮನ್ನು

ಆಶ್ರಯಿಸಿ ತಮಗೆ ಸೇವೆ ಮಾಡಿಕೊಂಡು ಶಿಷ್ಯರುಗಳಾಗಿ ಇರಬೇಕೆಂದು ಅನಂದಾಳ್ವಾನ್ ಮುಂತಾದವರುಗಳನ್ನೂ, ಅವರುಗಳಿಗೆ ಆಚಾರ್ಯರಾಗಿರುವಂತೆ ತಮ್ಮನ್ನೂ ಮಾಡಿದ ಶ್ರೀ ರಾಮಾನುಜ ಮುನಿವರರನ್ನು ಕುರಿತು "ಸ್ವಾಮಿ, ಶ್ರೀ ರಾಮಾನುಜಮುನಿಗಳೇ, ದಾಸನಾದ ನಾನು ಈ ಆಚಾರ್ಯಪದವಿಯಾದ ಭಾರವನ್ನು ಧರಿಸಲಾರದವನಾಗಿದ್ದೇನೆ. ಈ ಅನಂದಾಳ್ವಾನ್ ಮುಂತಾದವರುಗಳನ್ನು ತಮ್ಮ ಶಿಷ್ಯರುಗಳನ್ನಾಗಿಯೇ ತಾವು ಸ್ವೀಕರಿಸುವಂತೆ ಪ್ರಾರ್ಥಿಸುತ್ತೇನೆ" ಎಂದೂ ಅನಂದಾಳ್ವಾನ್ ಮುಂತಾದವರುಗಳನ್ನು ಕುರಿತು "ಹೇ ಅನಂದಾಳ್ವಾನ್ ಮುಂತಾದ ಹಿರಿಯರುಗಳೇ, ಭಗವದ್ರಾಮಾನುಜಮುನಿಗಳು ಗುಬ್ಬಚ್ಚಿಯ ಕತ್ತಿನಲ್ಲಿ ತಾಳೆಕಾಯಿಯನ್ನುಕಟ್ಟಿದ ರೀತಿಯಲ್ಲಿ ದಾಸನ ಕತ್ತಿನಲ್ಲಿ ಈ ಆಚಾರ್ಯಪದವಿಯನ್ನು ಕಟ್ಟಿದರು. ಇದನ್ನು ಹೊರಲು ದಾಸನಾದ ನನಗೆ ಶಕ್ತಿಯಿಲ್ಲ. ಆದುದರಿಂದ ಹಿರಿಯರುಗಳಾದ ನೀವುಗಳು ಈ ರಾಮಾನುಜ ಮುನಿವರ್ಯರ ಪಾದದ್ವಯಗಳನ್ನೇ ಶರಣವಾಗಿ ತಿಳಿದುಕೊಳ್ಳಿ" ಎಂದು ಹೇಳಿ ಅವರುಗಳನ್ನು ಭಗವದ್ರಾಮಾನುಜರ ಚರಣಾಂಭೋರುಹದ್ವಯದಲ್ಲಿಯೇ ಸಮರ್ಪಿಸಿಬಿಟ್ಟರು.

ಅದರ ನಂತರ ನಾರಾಯಣನು ನರನೊಂದಿಗೆ ಸೇರಿದ ರೀತಿಯಲ್ಲಿ ರಾಮಾನುಜರು ತಮಗೆ ಶಿಷ್ಯರಾಗಿ ಆದ ಅನಂದಾಳ್ವಾನ್‌ರೊಂದಿಗೆ ಸೇರಿ ಕ್ರಮವಾಗಿ ಶಾಸ್ತ್ರಾರ್ಥೋಪದೇಶವನ್ನೂ ಅದರ ಅನುಷ್ಠಾನ (ಆಚರಣೆ)ವನ್ನೂ ತಮ್ಮ ಇಷ್ಟದಂತೆಯೇ ನೆರವೇರಿಸಿಕೊಂಡು ಬಂದರು. ಉಡೈಯವರು (ಶ್ರೀರಾಮಾನುಜರು) ಉಪದೇಶಿಸಿದುದನ್ನು ಕೇಳಿ ಅದಕ್ಕೆ ಸೇರುವ ರೀತಿಯಲ್ಲಿ ಶಾಸ್ತ್ರಾರ್ಥಗಳನ್ನು ಕ್ರಮವಾಗಿ ಆಸಕ್ತಿಯಿಂದ ಆಚರಿಸುತ್ತಾ ಬಂದ ಶ್ರೀ ಅನಂದಾಳ್ವಾರ್‌ರವರಲ್ಲೂ ಅನೇಕರು ಶಿಷ್ಯರಾಗಿ ಆಶ್ರಯ ಹೊಂದಿದರು.

## ಶ್ರೀರಾಮಾನುಜಾಚಾರ್ಯರ ಸಹಸ್ರಗೀತೆ (ತಿರುವಾಯ್ಮೊಳಿ) ಕಾಲಕ್ಷೇಪ

ಹಿಂದೆ ಒಂದು ಸಲ ಶಠಕೋಪಸೂರಿ (ನಮ್ಮಾಳ್ವಾರ್) ಯವರು ಕರುಣಿಸಿದ ತಿರುವಾಯ್ಮೊಳಿ ಪ್ರವಚನದಲ್ಲಿ (ಅರ್ಥವನ್ನು ವಿಸ್ತಾರವಾಗಿ ವಿವರಿಸಿ ಪಾಠ ಹೇಳುವ ಕ್ರಮ) ಅತ್ಯಂತ ಆಸಕ್ತಿಗೊಂಡ ಶ್ರೀ ರಾಮಾನುಜ ಮುನಿವರ್ಯರು, "ಎನ್ನೈ ತಂದೈ" ಎಂದು ಪ್ರಾರಂಭಿಸುವ (೩-೩-೨) ಪಾಶುರಕ್ಕೆ (ಪದ್ಯಕ್ಕೆ) ಅರ್ಥವನ್ನು ವಿವರಿಸುವ ಸಂದರ್ಭದಲ್ಲಿ ತಮ್ಮ ಗೋಷ್ಠಿಯಲ್ಲಿದ್ದ ಎಲ್ಲರನ್ನೂ ಕುರಿತು, "ಅಯ್ಯಾ ಆರ್ಯರುಗಳೇ, ಪರಮಪದದಲ್ಲಿರುವ ನಿತ್ಯ ಸೂರಿಗಳೂ ತಮಗೆಲ್ಲರಿಗೂ ನಾಯಕನಾದ ಶ್ರೀ ವಿಷ್ವಕ್ಸೇನರೊಡಗೂಡಿ ಇಲ್ಲಿ ಭಗವದಾರಾಧನೆಗಾಗಿ ದಿವ್ಯವಾದ ಪುಷ್ಪಗಳನ್ನು ಕೈಗಳಲ್ಲಿಟ್ಟುಕೊಂಡು ಈ ತಿರುಮಲೆ (ಶ್ರೀ ವೆಂಕಟಾಚಲ) ಯಲ್ಲಿರುವ

ಗವಂತನ ಸೀಮಾತೀತವಾದ ಸೌಶೀಲ್ಯ (ಅತ್ಯಂತ ದೊಡ್ಡವರು ಅತ್ಯಂತ ಧಾರಣರೊಡನೆ ಭೇದಭಾವವಿಲ್ಲದೆಯೇ ನಡೆದುಕೊಳ್ಳುವ ಗುಣ) ಮುಂತಾದ ಣಗಳನ್ನನುಭವಿಸಿ ಅದರಿಂದುಂಟಾದ ಆನಂದದಿಂದ ತಮ್ಮನ್ನು ಮರೆತು ೇತುಹೋದ ಕೈಗಳಿಂದ ಅರ್ಚಿಸಿದ ದಿವ್ಯವಾದ ಪುಷ್ಪಗಳೂ ಕೂಡ ಬಾಡದೆ ವಾಸನೆಯೊಂದಿಗೆ ಕೂಡಿ ಇರುವುದಕ್ಕೆ ಪ್ರಶಸ್ತವಾದ ಜಾಗವಾಗಿರುವ ಶ್ರೀ ಂಕಟಗಿರಿಯಲ್ಲಿ, ಪರಮ ಪದ (ವೈಕುಂಠ)ದಲ್ಲಿಯೂ ಪಡೆಯಲಶಕ್ಯವಾದ ಆ ವಿಶೇಷಗಳನ್ನು ಹೊಂದಿ ನೀಲಮೇಘದಂತೆ ಕಪ್ಪಾದ ದಿವ್ಯಮಂಗಳ ವಿಗ್ರಹ ಂದರ್ಯವುಳ್ಳ ಸ್ವಾಮಿಯಾದವನು ನನ್ನ ತಂದೆ, ಅವರ ತಂದೆ, ಅವರ ತಂದೆ ದೀರೀತಿಯಾಗಿ ಹಲವರು ಸೇರಿದ ತಮ್ಮ ನಾಯಕನ ಪಂಕ್ತಿಯಲ್ಲಿ ುದಲಿಗನಲ್ಲವೇ? ಎಂದು ತಿಳಿಸಿರುವ ನಮ್ಮಾಳ್ವಾರ್‌ರವರು - ಪರಮಪದ ಸಿಗಳೂ ಸಹ ಇಲ್ಲಿಗೆ ಬಂದು ಸೇವೆ ಮಾಡುವುದರಿಂದ ಈ ವೇಂಕಟಗಿರಿಯು ಗವಂತನಿಗೆ ಅತ್ಯಂತ ಮುಖೋಲ್ಲಾಸವನ್ನುಂಟು ಮಾಡುವ, ಸೇವೆಗಳನ್ನು ಡುವುದಕ್ಕೆ ತಕ್ಕ ಜಾಗವೆಂದೂ, ಸುವಾಸನಾಭರಿತ ದಿವ್ಯವಾದ ಪುಷ್ಪಗಳನ್ನು ಳಲ್ಲಿ ಎತ್ತಿಕೊಂಡು ಬಂದರೆಂದು ಹೇಳಿರುವುದರಿಂದ ಪುಷ್ಪ ಕೈಂಕರ್ಯವು ಈ ಂಕಟನಾಥನಿಗೆ ಅತ್ಯಂತ ಪ್ರಿಯವಾದುದೆಂದೂ, ಚೆಲ್ಲಾಪಿಲ್ಲಿಯಾಗಿ ಉದುರುವ ಷ್ಪಗಳಿಗೂ ಸಹ ಉಲ್ಲಾಸವಾಗಿರಲು ಈ ವೇಂಕಟಗಿರಿಯು ಕಾರಣವಾದುದರಿಂದ, ಬೆಟ್ಟವು ಉತ್ಕೃಷ್ಟವಾದ ಹೂವುಗಳಿಂದ ತುಂಬಿ ತುಳುಕುತ್ತಿರುವುದಕ್ಕೆ ರಣವೆಂದೂ, ಅನವಧಿಕ ಸೌಶೀಲ್ಯಗುಣವನ್ನು ಹೊಂದಿ, ್ಯಸೌಂದರ್ಯಶಾಲಿಯಾಗಿ, ಶ್ರೇಷ್ಠರೆಲ್ಲರಿಗಿಂತಲೂ ಅತಿಶ್ರೇಷ್ಠನಾಗಿ, ,ಪ್ತಸ್ವಾಮಿಯಾಗಿ, ಪರಾತ್ಪರನಾಗಿ, ಶೇಷಿಯಾಗಿ ಈ ಶ್ರೀ ಂಕಟನಾಥಸ್ವಾಮಿಯು ಇರುತ್ತಿದ್ದಾನೆ - ಎಂದು ಹೇಳಿರುವುದರಿಂದ, ಈ ದೇವನು ಡಿತವಾಗಿಯೂ ಆರಾಧಿಸಲ್ಪಡಬೇಕಾದವನು ಎಂದು ಹೇಳುತ್ತಾ, ಈ ಶ್ರೀ ಂಕಟನಾಥನು ಪುಷ್ಪಕೈಂಕರ್ಯ ಮಾಡಿಯೇ ಪೂಜಿಸತಕ್ಕವನೆಂದಲ್ಲವೇ ಹುಬರುತ್ತದೆ? ಆದುದರಿಂದ ಪುಷ್ಪಮಂಟಪವೆಂದು ಪ್ರಸಿದ್ಧಿ ಹೊಂದಿದ ಈ ಂಕಟಗಿರಿಯಲ್ಲಿ ತಿರುವೇಂಕಟನಾಥನ ದಿವ್ಯಮುಖೋಲ್ಲಾಸಕ್ಕಾಗಿ ದನವನವೊಂದನ್ನು ನಿರ್ಮಿಸಿ, ಸುವಾಸನೆಯೊಂದಿಗೆ ಕೂಡಿದ ಪುಷ್ಪಗಳಿಂದಲೂ, ತುಳಸಿಯಿಂದಲೂ ಮಾಲೆಗಳನ್ನು ಕಟ್ಟಿ ಸಮರ್ಪಿಸಿ ಸೇವೆ ಮಾಡಲಿಚ್ಛಿಸುವವರು ರಾದರೂ ಈ ಗೋಷ್ಠಿಯಲ್ಲಿದಾರೆಯೇ? - ಎಂದು ಎಲ್ಲಾ ಹಿರಿಯರನ್ನೂ ದರು.

ಈ ರೀತಿ ಶ್ರೀರಾಮಾನುಜ ಮುನಿವರ್ಯರಿಂದ ಕೇಳಲ್ಪಟ್ಟ ಪ್ರಶ್ನೆಗೆ ಹಿರಿಯರ ೇಷ್ಠಿಯಲ್ಲಿ, ತಿರುಮಲೆಯ ಛಳಿಗೆ ಅಂಜಿ ಯಾರೂ ಉತ್ತರ ಕೊಡದೆ ಇರಲು,

ಅನಂದಾಳ್ವಾನ್‌ರವರು - (ಸ್ವಗತದಲ್ಲಿ) ದೇವನಿಗೆ ದಾಸನಾದವನು ಅತ್ಯಂತ ಚಿಕ್ಕವಿಷಯವಾದ ಈ ಛಳಿಗೆ ಹೆದರಿ ನಡುಗಬೇಕೇ? ಮೇಲ್ಲೋಕ (ಪರಮಪದ) ವು ಸಿಕ್ಕದೇ ಹೋಗಬಹುದು ಎಂಬ ಭೀತಿಯಿಂದಲೂ, ಸೀಮಾತೀತವಾದ ಸದ್ಗುಣಗಳಿಂದ ತುಂಬಿದ ಆಚಾರ್ಯನ ಅಪ್ಪಣೆಯನ್ನು ಮೀರುವುದರಿಂದುಂಟಾಗುವ . ಭೀತಿಯಿಂದಲೂ ಸ್ವಲ್ಪವಾದರೂ ನಡುಕವುಂಟಾಗಬೇಡವೇ? ಇದು ಬಹಳ ಚೆನ್ನಾಗಿದೆ. ಆಚಾರ್ಯರು ನಿಯಮಿಸಿದ ಕೆಲಸವಲ್ಲವೇ ಮೋಕ್ಷವನ್ನು ಆಶಿಸುವ ಶಿಷ್ಯನಿಗೆ ಒಳ್ಳೆಯದನ್ನು ಮಾಡುವುದು? ಆಚಾರ್ಯನ ಅಪ್ಪಣೆಯನ್ನು ಮೀರುವವನಿಗೆ ಶಿಷ್ಯತ್ವವು ಯಾಕಿರಬೇಕು? ಆದುದರಿಂದ ಎಷ್ಟು ಕಠಿಣವಾದರೂ ಸರಿಯೇ ಆಚಾರ್ಯರು ನಿಯಮಿಸಿದ ಈ ವೇಂಕಟಾಚಲಾಧೀಶನ ಕೈಂಕರ್ಯವನ್ನು ಮಾಡಲು ಒಪ್ಪಿಗೆಯನ್ನು ನೀಡುವುದು ತಕ್ಕುದಾದದೂ, ಉತ್ಕೃಷ್ಟವಾದ ಮೋಕ್ಷಸಾಮ್ರಾಜ್ಯವನ್ನು ಪಡೆಯುವುದೂ ಆಗುತ್ತದೆ - ಎಂದು ತಮ್ಮ ಮನಸ್ಸಿನಲ್ಲೇ ಚಿಂತಿಸಿ, ಎದ್ದು ತಮ್ಮ ಎರಡೂ ಕರಗಳನ್ನೂ ಜೋಡಿಸಿಕೊಂಡು, ''ಸ್ವಾಮಿ, ಪರಮಾಚಾರ್ಯರೇ (ರಾಮಾನುಜರೇ), ದಾಸನು ಶ್ರೀವೇಂಕಟನಾಥನಿಗೆ ಪುಷ್ಪಕೈಂಕರ್ಯಮಾಡಲು ಸಿದ್ಧನಾಗಿದೇನೆ. ದಾಸನನ್ನು ಆ ಕೆಲಸಕ್ಕೆ ನಿಯಮಿಸಿ ಕೃತಾರ್ಥನನ್ನಾಗಿ ಮಾಡಬೇಕು'' ಎಂದು ತಮ್ಮ ಅವತಾರದ ಫಲವಾದ ಕೈಂಕರ್ಯದಲ್ಲಿ (ಶಾಸ್ತ್ರಾರ್ಥಾನುಷ್ಠಾನದಲ್ಲಿ) ಅಭಿರುಚಿಯನ್ನು ತಿಳಿಸಿ ಬೇಡಿಕೊಂಡರು.

**ಅನಂದಾಳ್ವಾನ್‌ರನ್ನು ತಿರುಮಲೆಗೆ ಕಳುಹಿಸಿದುದು**

ಈ ರೀತಿ ಪ್ರಾರ್ಥಿಸಿಕೊಂಡ ಅನಂದಾಳ್ವಾನ್‌ರವರನ್ನು ಕಂಡ ಶ್ರೀ ರಾಮಾನುಜ ಮುನಿವರ್ಯರು ಸಂತೋಷಗೊಂಡು, ''ಸ್ವಾಮಿ, ಅನಂದಾಳ್ವಾನ್‌ವರೇ, ನೀವಲ್ಲವೇ ಈ ಗೋಷ್ಠಿಯಲ್ಲಿ ಆಣ್‌ಪಿಳ್ಳೈ (ಗಂಡುಮಗ)? ಪರಿಪೂರ್ಣವಾದ ಆತ್ಮಗುಣ ವಿಶಿಷ್ಟರಾದ, ಆಚಾರ್ಯ ನಿಯಮವನ್ನು ಮೀರುವುದನ್ನು ಸಹಿಸಲಾರದ ನಿಮಗೇ ಅಲ್ಲವೇ ಆಚಾರ್ಯಪುರುಷ ಎನ್ನುವ ಪದವು ಸೂಕ್ತವಾಗುತ್ತದೆ?'' ಎಂದು ಅವರನ್ನು ಕೊಂಡಾಡಿ, ಗೋಷ್ಠಿಯಲ್ಲಿದ್ದ ಎಲ್ಲರೊಡನೆ ಒಡನೆಯೇ ಎದ್ದು ಅತಿ ತ್ವರೆಯಿಂದ ಅವರ ಬಳಿಬಂದು ಆಲಂಗಿಸಿಕೊಂಡು ''ಆಣ್‌ಪಿಳ್ಳೈ'' ಎಂದು ಬಿರುದುಕೊಟ್ಟು ಗೌರವಿಸಲ್ಪಟ್ಟ ಈ ಅನಂದಾಳ್ವಾನ್‌ರವರನ್ನು (ಅರ್ಥಾತ್ ಆಣ್‌ಪಿಳ್ಳೈಯನ್ನು ಶ್ರೀವೇಂಕಟಗಿರಿಗೆ ಕಳುಹಿಸಿಕೊಟ್ಟರು.

**ಅನಂದಾಳ್ವಾನ್‌ರವರು ಮಾಡಿ ಸೇವೆಗಳು.**

ನಂತರ ಅನಂದಾಣ್ ಪಿಳ್ಳೈಯಾಚಾರ್ಯರು ಎಂದು ನಾಲ್ಕೂ ದಿಕ್ಕಿನಲ್ಲಿ

ಕರಡಿದ ಹೆಸರುಗೊಂಡ ಶ್ರೀ ಅನಂದಾಳ್ವಾನ್‌ರವರು ತಮ್ಮ ಪತ್ನಿಯೊಂದಿಗೆ
ತಿರುಮಲೆಗೆ ಹೋಗಿ, ಶ್ರೀವೇಂಕಟನಾಥನನ್ನು ಪ್ರತಿನಿತ್ಯವೂ, ಸೇವೆಮಾಡಿಕೊಂಡು,
ಅಲ್ಲಿ ವಿಶಾಲವಾದುದೊಂದು ನಂದನವನವನ್ನೂ, ಅದಕ್ಕೆ ಸಹಾಯವಾಗುವುದಕ್ಕಾಗಿ
ಒಂದು ಏರಿಯನ್ನೂ, ನಡುವಿನಲ್ಲಿ ಒಂದು ನಡೆಭಾವಿಯನ್ನೂ ನಿರ್ಮಿಸಿ
ಇವೆಲ್ಲವುಗಳಿಗೂ 'ರಾಮಾನುಜ'' ಎಂದು ದಿವ್ಯನಾಮಕರಣಮಾಡಿ (ಹೆಸರಿಟ್ಟು),
ರಾಮಾನುಜರು ನಿಯಮಿಸಿದಂತೆಯೇ ಪುಷ್ಪಕೈಂಕರ್ಯವನ್ನು ಶ್ರದ್ಧೆಯಿಂದ
ನಡೆಸುತ್ತಿದ್ದರು. ಮೇಲೂ, ನಂದನವನದಲ್ಲಿರುವ ಫಲವೃಕ್ಷಗಳು, ಪುಷ್ಪವೃಕ್ಷಗಳು,
ಪೊದೆಗಳು, ಬಳ್ಳಿಗಳು ಮುಂತಾದುವುಗಳ ಪಾತಿಗಳಲ್ಲಿಯೂ, ನಡೆಭಾವಿಯಲ್ಲಯೂ
ಆಗಾಗ ತಳಿಯುವುದು (ಚಿಮುಕಿಸುವುದು), ಹಾಯಿಸುವುದೂ, ಶೇಖರಿಸುವುದೂ,
ಸಂಬಿಕೊಳ್ಳುವುದೂ ಮುಂತಾದುವುಗಳಿಗಾಗಿ ನೀರನ್ನು ಕೊಂಡು ಬರಲು
ಸಹಾಯವಾಗುವಂತೆ ಏರಿಯ ಮಧ್ಯದಲ್ಲಿ ಒಂದು ತೂಬನ್ನು ಏರ್ಪಡಿಸಿದರು.

ಈ ರೀತಿಯೇ ಭಗವಂತನ ದೇವಾಲಯದಲ್ಲಿ ಗೋಪುರದೊಂದಿಗೆ ಕೂಡಿದ
ಪ್ರಾಕಾರವನ್ನೂ ಅದರೊಳಗೆ ಹೂಭಾವಿ (ಪೂಲಭಾವಿ)ಯ ಪಕ್ಕದಲ್ಲಿ
ಪರಮಾಚಾರ್ಯರ ಆಣತಿಯಂತೆ, ಅವರ ಪರಮಾಚಾರ್ಯರಾದ ಶ್ರೀಯಾಮುನಾಚಾರ್ಯರ,
'ಯಮುನೈತ್ತುರವರ್'' ಎಂಬ ಹೆಸರು ಗೊಂಡದ್ದೂ, ಅವರ
ಅರ್ಚಾವಿಗ್ರಹದೊಂದಿಗೆ ಕೂಡಿದುದೂ ಆದ, ಹೂಮಾಲೆಗಳನ್ನು ಕಟ್ಟುವ
ಮಂಟಪವೊಂದನ್ನು ಶ್ರೀ ಅನಂದಾಳ್ವಾನ್ ಕಟ್ಟಿಸಿದರು.

ಶ್ರೀ ಯಾಮುನಮುನಿವರ್ಯರು ಹಲವಾರು ದಿನಗಳ ಹಿಂದೆ ಒಂದು
ಮಯ ಇಲ್ಲಿವಾಸಿಸುತ್ತಿದ್ದು ಒಂದು ಕುಠೀರವನ್ನು ನಿರ್ಮಿಸಿ ಅಲ್ಲಿ ಅಧಿಕವಾಗಿ
ಹೂಮಾಲೆಗಳನ್ನು ಕಟ್ಟಿ ಶ್ರಿ ಶ್ರೀನಿವಾಸದೇವನಿಗೆ ಸಮರ್ಪಿಸುತ್ತಿದ್ದರು ಎಂದು
ಹಿರಿಯರುಗಳಿಂದ ಹೇಳಲ್ಪಟ್ಟ ಕಥೆಯನ್ನು ಕೇಳಿದ ಶ್ರೀಭಾಷ್ಯಕಾರರು
ಶ್ರೀರಾಮಾನುಜರು) ಯಾಮುನಾಚಾರ್ಯರ ಹೆಸರಿನಿಂದ ಹೂಮಾಲೆಗಳನ್ನು ಕಟ್ಟಲು
ಒಂದು ಸೂಕ್ತವಾದ ಮಂಟಪವನ್ನು ಕಟ್ಟಿ, ಶ್ರೀಯಾಮುನಾಚಾರ್ಯರನ್ನು
ಅರ್ಚಾರೂಪವಾಗಿ ನಿರ್ಮಿಸಿ (ವಿಗ್ರಹವನ್ನು ಮಾಡಿಸಿ) ಪ್ರತಿಷ್ಠೆಮಾಡಿಸಿ,
ಆರಾಧನೆಯನ್ನೂ ನಡೆಸಬೇಕೆಂದು ನಿಯಮಿಸಿದುದರಿಂದ ಶ್ರೀ ಅನಂದಾಳ್ವಾನ್
ಆ ಮಂಟಪಕ್ಕೆ ''ಯಮುನೈತ್ತುರೈವರ್'' (ಯಾಮುನಾಚಾರ್ಯರು) ಎಂಬ ಶ್ರೀ
ನಾಮದೊಂದಿಗೆ ತಮ್ಮ ಆಚಾರ್ಯರಾದ ಭಗವಾದ್ರಾಮಾನುಜರ ಹೆಸರಾದ
ರಾಮಾನುಜನ್'' ಎಂಬ ಶ್ರೀನಾಮವನ್ನೂ ಇಟ್ಟು ಅವರ ನಿಯಮನ ದಂತೆಯೇ
ಎಲ್ಲವನ್ನೂ ನೆರವೇರಿಸಿದರು, ತಾವೂ ಸಹ ಆ ಮಂಟಪದಲ್ಲಿಯೇ ರಾಮಾನುಜ
ನಂದನವನದಿಂದ ಪುಷ್ಪಗಳನ್ನು ಬಿಡಿಸಿ ತಂದಿಟ್ಟುಕೊಂಡು ಮಾಲೆಗಳನ್ನು ಅಲ್ಲಿಯೇ
ಕಟ್ಟಿ, ನಂತರ ಮಾಲೆಗಳಿಂದ ತುಂಬಿದ ಹೂಬುಟ್ಟಿಯನ್ನು ತಲೆಯ ಮೇಲಿಟ್ಟು,

ಸುವಾಸನೆಯು ತಮ್ಮ ಮೂಗಿಗೆ ಬಂದರೆ ಅಪಚಾರವುಂಟಾಗುತ್ತದೆಯೆಂದು, ಅದಾಗದೇ ಇರುವುದಕ್ಕಾಗಿ ಬಟ್ಟೆಯಿಂದ ತಮ್ಮ ಮೂಗನ್ನೂ ಬಾಯಿಯನ್ನೂ ಮುಚ್ಚುವಂತೆ ಕಟ್ಟಿಕೊಂಡು ಅಪರಿಮಿತವಾದ ಭಕ್ತಿಯಿಂದ ಕೊಡೆ, ಚಾಮರ ಮೊದಲಾದುವುಗಳೊಂದಿಗೆ ಮತ್ತು ಮಂಗಳವಾದ್ಯ ಗಳೊಂದಿಗೆ ಆ ಮಂಟಪದಿಂದ ಹೊರಟು ದೇವಾಲಯವನ್ನು ಪ್ರದಕ್ಷಿಣೆ ಮಾಡಿ, ಆಲಯದೊಳಗೆ ತೆಗೆದುಕೊಂಡು ಹೋಗಿ ಭಗವಂತನ ಆರಾಧನೆಯ ಸಂದರ್ಭದಲ್ಲಿ ಪ್ರತಿನಿತ್ಯವೂ ಹೂಮಾಲೆಗಳನ್ನು ಧರಿಸುವಂತೆ ಮಾಡಿ, ಶ್ರೀವೇಂಕಟನಾಥನನ್ನು ಸೇವೆಮಾಡುತ್ತಿದ್ದರು.

### ಅನಂದಾಳ್ವಾನ್‌ರವರು ಅರಿಯದೇ ಮಾಡಿದ ಅಪಚಾರ

ಅನಂದಾಳ್ವಾನ್‌ರವರು ತುಂಬು ಗರ್ಭಿಣಿಯಾದ ತಮ್ಮ ಹೆಂಡತಿಯೂ, ಮಗನೂ ಮತ್ತು ತಾವೂ ಸೇರಿಯೇ ಅತ್ಯಂತ ಆದರದಿಂದ ಶ್ರೀರಾಮಾನುಜನೆಂಬ ಕೆರೆಯನ್ನು ನಿರ್ಮಿಸುವ ಸಂದರ್ಭದಲ್ಲಿ, ಆ ಪತ್ನಿಯು ಮಣ್ಣಿನ ಭಾರವನ್ನು ಹೊತ್ತು ಶ್ರಮಪಡುತ್ತಿದ್ದಾಗ ಪರಮ ಕಾರುಣಿಕನಾದ ಶ್ರೀನಿವಾಸನು ಪೂರ್ಣಗರ್ಭಿಣಿಯಾದ ಮಣ್ಣುಹೊರುತ್ತಿರುವ ಆಕೆಯನ್ನು ನೋಡಲಾರದೆ, ಒಬ್ಬ ಬ್ರಹ್ಮಚಾರಿಯ ರೂಪವನ್ನು ತಾಳಿ ಅವಳ ಬಳಿಗೆ ಬಂದು ತಾನೇ ಆ ಮಣ್ಣಿನ ಭಾರವನ್ನು ಹೊರಲು ಪ್ರಾರಂಭಿಸಲು, ತಾವು ಮಾಡುವ ಕೈಂಕರ್ಯದಲ್ಲಿ ಇತರರು ತಲೆಯಿಟ್ಟು ಪ್ರವೇಶಿಸುವುದನ್ನು ಸಹಿಸಲಾರದ ಅನಂದಾಳ್ವಾನ್‌ರವರು, ಅದನ್ನು ತಡೆದರೂ ಸಹ, ಅವರ ಪತ್ನಿಯ ವಿಷಯದಲ್ಲಿ ಅಧಿಕವಾಗಿ ಕರುಣೆಯನ್ನು ಹರಿಸಿದ ಆ ಭಗವಂತನು ನಡುದಾರಿಯಲ್ಲಿ ಆವಾಗಾವಾಗ ಬಂದು ಬಲವಂತಮಾಡಿ ಅವಳ ಕೈಯಿಂದ ಮಣ್ಣಿನ ಗೂಡೆಯನ್ನು ಕಿತ್ತುಕೊಂಡು ತಾನೇ ಹೊತ್ತುಕೊಂಡು ನಡೆಯುತ್ತಿದ್ದನು.

ಈ ಸುದ್ದಿಯನ್ನರಿತ ಶ್ರೀ ಅನಂದಾಳ್ವಾನ್‌ರವರು ಬ್ರಹ್ಮಚಾರಿಯ ರೂಪವನ್ನು ತಾಳಿದ ಭಗವಂತನನ್ನು ಹಿಂಬಾಲಿಸಿ ಓಡಿ ದೊಡ್ಡಹಾರೆಯನ್ನು ಅವನ ಗಡ್ಡಕ್ಕೆ (ಗಲ್ಲಕ್ಕೆ) ಎಸೆದರು, ಭಾರವಾದ ಹಾರೆಯಿಂದ ಪೆಟ್ಟುಬಿದ್ದ ಭಗವಂಥನ ಗಲ್ಲದಿಂದ ರಕ್ತಧಾರೆಯು ಹರಿಯಲು, ಅವನು (ಬ್ರಹ್ಮಚಾರಿ ಭಗವಂತನು) ಓಡಿಹೋಗಿ ತನ್ನ ಆನಂದನಿಲಯ ವಿಮಾನ ದೊಳಗೆ ಹೊಕ್ಕನು.

ನಂತರ ಅನಂದಾಳ್ವಾನ್‌ರವರು ಗುಡಿಯೊಳಗೆ ಹೋಗಿ ಭಗವಂತನ ಗಲ್ಲದಿಂದ ರಕ್ತವು ಧಾರೆಯಾಗಿ ಪ್ರವಹಿಸುತ್ತಿರುವುದನ್ನು ಕಂಡು ತಾವು ಅತ್ಯಂತ ಅಪಚಾರ ಮಾಡಿದುದಾಗಿ ತಿಳಿದುಕೊಂಡು ಅದಕ್ಕಾಗಿ ಭಗವಂತನಲ್ಲಿ ತಮ್ಮನ್ನು ಕ್ಷಮಿಸಬೇಕೆಂದು ಯಾಚಿಸಿ, ನಮಸ್ಕರಿಸಿ, ವ್ರಣದಲ್ಲಿ ರಕ್ತವು ಸೋರುವುದನ್ನು

ತಡೆಯುವುದಕ್ಕಾಗಿ ಹೂವಿನಲ್ಲಿರುವ ಮಕರಂದದ ಹುಡಿಯನ್ನು ಇಟ್ಟು ಒತ್ತಿಹಿಡಿದರು.

ನಂತರ ಭಗವಂತನಾದ ಶ್ರೀನಿವಾಸನು, ಅವನ ಸೇವೆ ಮಾಡುವುದರಲ್ಲಿ ಅನಂದಾಳ್ವಾನ್‌ರವರಿಗಿರುವ ಅಧಿಕವಾದ ಆಸಕ್ತಿಯನ್ನು ತಿಳಿದು ಸಂತೋಷಪಟ್ಟು, ಅವರನ್ನು ಒಳ್ಳೆಯ ಮಾತುಗಳಿಂದ ಸಂತೈಸಿಸಿ ಆ ವ್ರಣದಿಂದುಂಟಾದ ಗುರುತನ್ನು ತಮ್ಮ ವೆಕ್ಷಃ ಸ್ಥಳದಲ್ಲಿರುವ ಶ್ರೀವತ್ಸ ಚಿಹ್ನೆಯಂತೆಯೇ ಉತ್ಕೃಷ್ಟವಾದ ಲಕ್ಷಣವೆಂದು ತಿಳಿದು, ಅನಂದಾಳ್ವಾನ್‌ರವರ ಮಹಿಮೆಯನ್ನು ಎಲ್ಲರಿಗೂ ತಿಳಿಸುವುದಕ್ಕಾಗಿ ಗಲ್ಲದಲ್ಲಿ ವ್ರಣವುಂಟಾದ ಜಾಗದಲ್ಲಿ ಸುವಾಸನೆಯುಳ್ಳ ಪಚ್ಚಕರ್ಪೂರದ ಹುಡಿಯನ್ನು ಯಾವಾಗಲೂ ಧರಿಸಿಯೂ, ಆ ಹಾರೆಯನ್ನು ಎಲ್ಲರೂ ನೋಡತಕ್ಕ ಜಾಗದಲ್ಲಿ (ಗೋಪುರದ್ವಾರದಲ್ಲಿ) ನಿಲ್ಲಿಸಿಯೂ, ಅವರಿಗೆ ತನ್ನ ಪೀತಾಂಬರ, ಆಭರಣ, ಹೂವಿನಹಾರ ಮುಂತಾದುವುಗಳನ್ನು ಕೊಟ್ಟು ಗೌರವಿಸಿದನು.

**ಅನಂದಾಳ್ವಾನ್‌ರವರು ಶ್ರೀನಿವಾಸನಿಗೆ ಮಾವನಾದುದು**

ಒಂದು ಸಮಯ, ಅನಂದಾಳ್ವಾನ್‌ರವರು ನಿರ್ಮಿಸಿದ ನಂದನವನದಲ್ಲಿ, ಬಹಳದಿನಗಳಿಂದ ತಮ್ಮ ಇಚ್ಛಾನುಸಾರವಾಗಿ ವಿಹರಿಸುತ್ತಿದ್ದ, ಅರಸ ದಂಪತಿಗಳಂತೆ ವೇಷಹಾಕಿದ ಶ್ರೀ ಪದ್ಮಾವತೀ ದೇವಿಯನ್ನೂ ಮತ್ತು ಶ್ರೀನಿವಾಸನನ್ನೂ, ಅನಂದಾಳ್ವಾನ್‌ರವರು ಒಂದು ರಾತ್ರಿ ಒಂದು ಪೊದೆಯಲ್ಲಿ ಅಡಗಿದ್ದು, ಅವರುಗಳನ್ನು ಹಿಡಿದು, ಒಂದು ಬಳ್ಳಿಯನ್ನು ತೆಗೆದುಕೊಂಡು ಮರದಲ್ಲಿ ಕಟ್ಟುವುದಕ್ಕಾಗಿ ಎಳೆಯಲು, ಶ್ರೀನಿವಾಸನು ಅವರಕೈಯನ್ನು ಬಿಡಿಸಿಕೊಂಡು ಓಡಿಹೋಗಲು, ತಾನು ಓಡಲಾರದೆ ''ಅಪ್ಪಾ, ಅಪ್ಪಾ, ನಾನುನಿಮಗೆ ಹೆಣ್ಣುಮಗಳಾಗಿರುತ್ತೇನೆ, ತಪ್ಪುಯಾವುದನ್ನೂ ಮಾಡದ ಹೆಣ್ಣುಮಗಳಾದ ನನ್ನನ್ನು ಬಿಟ್ಟು ಬಿಡಿ'' ಎಂದು ಎಲ್ಲರ ಮನಸ್ಸುಗಳೂ ಕರಗಿ ನೀರಾಗುವಂತೆ ದೀನಳಾಗಿ ಬೇಡುತ್ತಿರುವ ಪದ್ಮಾವತಿಯನ್ನು ಒಂದು ಸಂಪಿಗೆಯ ಮರಕ್ಕೆ ಬಳ್ಳಿಗಳಿಂದ ಕಟ್ಟಿಹಾಕಿ, ಹೆದರಿಸಿ, ಅವಳ ಕಥೆಯನ್ನು ಕೇಳುತ್ತಾ ಪಕ್ಕದಲ್ಲಿಯೇ (ರಾತ್ರಿ ಪೂರ್ತಾಕಾವಲಾಗಿ) ಇದ್ದರು. ಇದು ಈ ರೀತಿ ಇರಲು, ಬೆಳಿಗ್ಗೆ ದೇವಾಲಯಕ್ಕೆ ಬಂದ ಅರ್ಚಕರು ಭಗವಂತನ ದಿವ್ಯ ವಕ್ಷಃಸ್ಥಳದ ಕಂಠಿಕೆಯಲ್ಲಿ ಇದ್ದ ಪದ್ಮಾವತಿಯನ್ನು ಕಾಣದೇ ಇದ್ದಾಗ, ಒಡನೆಯೆ ಆ ಭಗವಂತನು ಒಬ್ಬನ ಮೇಲೆ ಆವೇಶಿಸಿ ಸಮಾಚಾರವನ್ನು ತಿಳಿಸಲು, ಅವನ ಅಪ್ಪಣೆಯಂತೆ, ಪದ್ಮಾವತಿಯನ್ನೂ ಅನಂದಾಳ್ವಾನ್‌ರವರನ್ನೂ ಕರೆದುಕೊಂಡು ಬರುವುದಕ್ಕಾಗಿ ತೋಟಕ್ಕೆ ಬರಲು, ಅವರುಗಳ ಮೂಲಕವಾಗಿ ವಿಷಯವನ್ನರಿತ ಅನಂದಾಳ್ವಾನ್‌ರವರು, ''ಇದು ಮಹಾಪಚಾರ'' (ಅತ್ಯಂತ ದೊಡ್ಡ ತಪ್ಪು) ಎಂದು ತಿಳಿದು, ಪದ್ಮಾವತೀ ದೇವಿಯನ್ನು ಸಂಪಿಗೆಯ ಮರದಲ್ಲಿ

ಕಟ್ಟಿದ ಕಟ್ಟಿನಿಂದ ಬಿಡುಗಡೆಮಾಡಿ, ಆಕೆಯಲ್ಲಿ ತಾವು ಮಾಡಿದ ಅಪರಾಧವನ್ನು ಕ್ಷಮಿಸಬೇಕೆಂದು ಪ್ರಾರ್ಥಿಸಿ, ತಮ್ಮ ಪ್ರಾತಃಕಾಲದ ಅನುಷ್ಠಾನಗಳನ್ನು ಮುಗಿಸಿಕೊಂಡವರಾಗಿ, ತಾನು ಮುಂಚೆ ಹೇಳಿದ ವಾಕ್ಯವನ್ನು ಸತ್ಯವಾಗಿಸಲು ಇಷ್ಟಪಟ್ಟು, ವಿವಾಹಯೋಗ್ಯಳಾದ ಕನ್ನಿಕೆಯ ಸ್ಥಿತಿಯನ್ನು ಹೊಂದಿ, ತಮಗೆ ಮಗಳಾಗಿ ಆದ ಪದ್ಮಾವತೀದೇವಿಯನ್ನು ಹೂಬುಟ್ಟಿಯೊಡನೆ ತಮ್ಮ ಕಂಕುಳಲ್ಲಿ ಹೊತ್ತುಕೊಂಡು ಶ್ರೀನಿವಾಸದೇವನ ಬಳಿಸಾರಿ ನಿಂತು, ನಮಸ್ಕರಿಸಿ ತಾವುಮಾಡಿದ ಅಪರಾಧವನ್ನು ಕ್ಷಮಿಸಬೇಕೆಂದು ಬೇಡಿದರು. ನಂತರ ಭಗವಂತನು ಒಂದು ಮಾಲೆಯನ್ನು ತನ್ನ ಕೊರಳಿನಿಂದ ತೆಗೆದು ಅದನ್ನು ಅನಂದಾಳ್ವಾನ್‌ರ ಕೊರಳಿಗೆ ಹಾಕಿ ಗೌರವಿಸಿ, ''ಅನಂದಾಳ್ವಾನ್‌ರವರೇ, ನಿಮ್ಮ ಈ ಕನ್ನಿಕೆಯನ್ನು ನನಗೆ ಕೊಡಿ'' ಎಂದು ಪ್ರಾರ್ಥಿಸಲು, ಅನಂದಾಳ್ವಾನ್ ಶ್ರೀನಿವಾಸನಿಗೆ ಪದ್ಮಾವತೀ ದೇವಿಯನ್ನು ಸಮರ್ಪಿಸಲು, ಆ ದೇವಿಯು ಅರ್ಚಕರೂ, ಪರಿಚಾರಕರೂ, ಮತ್ತು ಇತರ ಎಲ್ಲರೂ ನೋಡುತ್ತಿದ್ದಂತೆಯೇ ಹಠಾತ್ತನೆ ಹೊರಟು ಮುಂಚೆ ಇದ್ದ ರೀತಿಯಲ್ಲಿಯೇ ಭಗವಂತನ ವಕ್ಷಃಸ್ಥಳದಲ್ಲಿರುವ ಕಂಠಿಕೆಯಲ್ಲಿ ಕನಕಮಯವಾದ ಪದ್ಮಾವತೀರೂಪವುಳ್ಳವಳಾಗಿ, ಮಾರ್ಪಾಟು ಹೊಂದಿ ನಿಲ್ಲಲು, ಅದನ್ನು ಎಲ್ಲರೊಡನೆಯೂ, ಆಶ್ಚರ್ಯದಿಂದ ಕಂಡ ಅನಂದಾಳ್ವಾನ್‌ವರವರು ಅಂದಿನಿಂದ ಅಲರ್‌ಮೇಲ್ ಮಂಗೈಯ ತಂದೆಯೆಂದೂ (ಪದ್ಮಾವತಿಯತಂದೆ), ಶ್ರೀವೇಂಕಟನಾಥನಿಗೆ ಮಾವ (ಶ್ವಶುರ)ನೆಂದೂ ಎಲ್ಲೆಲ್ಲೂ, ಎಲ್ಲರಿಂದಲೂ, ಕರೆಯಲ್ಪಟ್ಟರು.

### ಆನಂದಾಳ್ವಾರ್ ತಮ್ಮ ಮಗಳಿಗೆ ''ಎನ್ತಿರುಮಗಳ್'' ಎಂದು ಹೆಸರಿಟ್ಟುದುದು

ಅನಂದಾಳ್ವಾರ್ ಶ್ರೀವೇಂಕಟನಾಥನನ್ನು ಸೇವೆಮಾಡುವ ಕಾಲಗಳ್ಲಿ ''ದಕ್ಷಿಣ ಶ್ರೀರಂಗವನ್ನು ದೇವಾಲಯವಾಗಿ ಪರಿಗಣಿಸಿದ ಹೇ ದೇವನೆ, ನನ್ನ ಮಗಳು - ನನ್ನ ಶ್ರೀದೇವಿಯು ಸೇರಿರುವ ವಕ್ಷಃಸ್ಥಳವುಳ್ಳವನೇ, ನನ್ನ ಪ್ರಾಣನಾದವನೇ ಎಂದು ಹೇಳುತ್ತಾಳೆ. ನಿನ್ನ ಘೋರ ದಂಷ್ಟ್ರಗಳಿಂದ ಅಂಡ ಭಿತ್ತಿಯಿಂದ (ಅಂಡದ ಕೆಳಭಾಗದ ಗೋಡೆ) ನೀನು ಕಿತ್ತು ತೆಗೆದ ಭೂಮಿದೇವಿಯ ರಮಣನೇ ಎನ್ನುತ್ತಾಳೆ, ಹಿಂದೊಂದು ಸಂದರ್ಭದಲ್ಲಿ ಸಿಡಿಲಿನಂತೆ ಭಯಂಕರವಾಗಿ ಘರ್ಜಿಸುತ್ತಿದ್ದ ದೊಡ್ಡದಾದ ಏಳು ವೃಷಭಗಳನ್ನು ಗೆದ್ದು ನೀನು ಸ್ವೀಕರಿಸಿದ ನಪ್ಪಿನ್ನೈ (ನೀಳಾದೇವಿ)ಗೆ ಪ್ರಿಯನಾದವನ್ನೆ (ಸ್ನೇಹಿತನೇ) ಎನ್ನುತ್ತಾಳೆ (ಈ ರೀತಿ ನಿಮ್ಮನ್ನೇ ನೆನೆದುಕೊಂಡು ಪರಿತಪಿಸುತ್ತಿರುವ) ಇವಳ ಸಂಕಟಕ್ಕೆ ಕೊನೆಯಾವುದೊಂದೂ ಗೊತ್ತಾಗುತ್ತಿಲ್ಲ'' ಎಂಬ ಅರ್ಥವನ್ನುಳ್ಳ ಸಹಸ್ರಗೀತೆಯ ಏಳನೆಯ ಶತಕದ ಎರಡನೆಯ ದಶಕದ ಒಂಭತ್ತನೆಯ ಪಾಶುರವನ್ನು ''ಏಕಾಕನ್ಯಾ'' ಮುಂತಾದ

ಪ್ರಮಾಣಗಳಲ್ಲಿ 'ಕನ್ಯಾ' ಎಂಬುದರಿಂದ ಸೂಚಿಸಲ್ಪಟ್ಟ (ತಮ್ಮ) ಮನಸ್ಸನ್ನು (ತಮ್ಮ) ಕನ್ನಿಕೆಯಾಗಿಯೂ, ತಮ್ಮನ್ನು ತಾಯಿಯಾಗಿಯೂ, ಶ್ರೀವೇಂಕಟೇಶನನ್ನು ಶ್ರೀರಂಗನಾಥನನ್ನಾಗಿಯೂ ಭಾವಿಸಿ, ''ಎನ್ ತಿರುಮಗಳ್'' ಎಂಬ ಶಬ್ದಗಳಿಗೆ ಅರ್ಥವಾಗಿ ತಮಗೆ ಈಗ ಮಗಳಾಗಿ ಆದ ಪದ್ಮಾವತಿ ದೇವಿಯನ್ನೂ ನೆನೆಸಿಕೊಂಡು ಶ್ರೀವೇಂಕಟನಾಥನ ವಿಷಯವಾಗಿಯೇ ಅನುಸಂಧಾನ ಮಾಡಿಕೊಂಡು ಬಂದವರು ನಂತರ ತಮಗೆ ಹುಟ್ಟಿದ ಮಗಳೊಬ್ಬಳಿಗೆ ''ಎನ್ ತಿರುಮಗಳ್'' (ನನ್ನ ಶ್ರೀದೇವಿ) ಎಂದು ನಾಮಕರಣ ಮಾಡಿದರು.

**ಅನಂದಾಳ್ವಾನ್‌ರನ್ನು ಸರ್ಪವು ಕಚ್ಚಿದುದು**

ಒಂದಾನೊಂದು ಸಲ ಶ್ರೀ ಅನಂದಾಳ್ವಾನ್ ಶ್ರೀರಾಮಾನುಜನೆಂಬ ತಮ್ಮ ತೋಟದಲ್ಲಿ ಶ್ರೀತುಳಸಿ, ಪುಷ್ಪಗಳು ಮುಂತಾದವುಗಳನ್ನು ಬಿಡಿಸುತ್ತಿದ್ದಾಗ ಸರ್ಪವೊಂದು ತಮ್ಮ ಕೈಯನ್ನು ಕಚ್ಚಲು, ''ಶ್ರೀರಾಮಾನುಜ ಚರಣೌ ಶರಣಂ ಪ್ರಪದ್ಯೇ (ಎಂಬಿರುಮಾನರ್ ತಿರುವಡಿಗಳೇ ಶರಣಂ) ಎಂದು ಹೇಳಿ ಆ (ಕಚ್ಚಿದ ಜಾಗವನ್ನು) ಕೈಯನ್ನು ಹೂವಿನಿಂದ ಒರೆಸಿಬಿಟ್ಟು ಸ್ವಾಮಿಪುಷ್ಕರಿಣಿಯಲ್ಲಿ ಸ್ನಾನಮಾಡಿ, ವಿಷವನ್ನು ಹೋಗಲಾಡಿಸಲು ಪ್ರಯತ್ನಪಟ್ಟ ತಮ್ಮ ಶಿಷ್ಯರುಗಳನ್ನು ದೂರಸರಿಸಿಕೊಂಡು ದೇವಸ್ಥಾನಕ್ಕೆ ಹೋಗಿ ಶ್ರೀನಿವಾಸನ ದರ್ಶನ ಮಾಡಿದರು. ''ವಿಷವನ್ನು ಹೋಗಲಾಡಿಸುವ ಪ್ರಯತ್ನದಿಂದ ಏಕೆ ಹೊರಗಾದಿರಿ?''ಎಂದು ಭಗವಂತನು ಕೇಳಲು,, ಆದಿಶೇಷಾಂಶವಾಗಿ ತಮ್ಮನ್ನು ಭಾವಿಸಿದ ಅನಂದಾಳ್ವಾನ್‌ರವರು, ''ಕಚ್ಚಿದ ಹಾವು ಬಲಶಾಲಿಯಾದರೆ ವಿರಜಾ ನದಿಯಲ್ಲಿ ಸ್ನಾನವಮಾಡಿ ಪಾಪವನ್ನು ನಾಶಪಡಿಸಿಕೊಂಡು ಶ್ರೀವೈಕುಂಠನಾಥನಾದ ಶ್ರಿಮನ್ನಾರಾಯಣನಿಗೆ ಸೇವೆಮಾಡಬಹುದು. ಕಡಿತಕ್ಕೆ ಒಳಗಾದ ಸರ್ಪವು (ಶ್ರೀ ಅನಂದಾಳ್ವಾನ್) ಬಲಶಾಲಿಯಾದಲ್ಲಿ ಇಲ್ಲಿಯೇ ಸ್ವಾಮಿ ಪುಷ್ಕರಿಣಿಯಲ್ಲಿ ಸ್ನಾನಮಾಡಿ ದೇವಾಧಿದೇವನಾದ ತಮಗೇ ಸೇವೆಮಾಡ ಬಹುದು, ಈ ಎರಡು ಬಗೆಯಲ್ಲಿಯೂ ತೊಂದರೆ ಏನೂ ಇಲ್ಲವೆಂದು ತಿಳಿದು ವಿಷವನ್ನು ನಾಶಮಾಡಲು ಪ್ರಯತ್ನಿಸದೇ ಸುಮ್ಮನಾಗಿಬಿಟ್ಟೆ'', ಎಂದು ಬಿನ್ನವಿಸಿ ಸುಖವಾಗಿಯೇ ಇದ್ದರು.

**ಶ್ರೀ ಅನಂದಾಳ್ವಾರ್‌ರವರ ಆಚಾರ್ಯಭಕ್ತಿಯಲ್ಲಿನ ನಿಶ್ಚಲತೆ**

ಒಂದು ಸಲ ಯಮುನೈತ್ತುರೈವರ್ ಮಂಟಪದಲ್ಲಿ ಅಧಿಕವಾದ ಪುಷ್ಪ ಮಾಲೆಗಳನ್ನು ಕಟ್ಟುವುದರಲ್ಲಿಯೇ ನಿರತರಾಗಿದ್ದ ಅನಂದಾಳ್ವಾನ್‌ರವರ ದೃಢ ಮನಸ್ಸನ್ನು ಪರೀಕ್ಷಿಸಲು ಇಚ್ಛೆಪಟ್ಟು, ಭಗವಾನ್ ಶ್ರೀನಿವಾಸನು ಅವರನ್ನು ಕರೆದುಕೊಂಡು ಬರುವಂತೆ ಅರ್ಚಕಮುಖೇನ ಒಬ್ಬ ದೂತನನನ್ನು ಕಳುಹಿಸಲು, ಅವನು ಬಂದು ಅವರನ್ನು ಕರೆಯಲು, ಆಗಲೇ ಬರದೇ ಪುಷ್ಪಮಾಲೆಗಳ ಕಟ್ಟುವ

ಕೆಲಸವನ್ನು ಮುಗಿಸಿ, ನಂತರ ಹೂಮಾಲೆಗಳು ತುಂಬಿದ ಬುಟ್ಟಿಯನ್ನು ಶಿರಸ್ಸಿನಲ್ಲಿಟ್ಟುಕೊಂಡು ಬಂದ ಅನಂದಾಳ್ವಾನ್‌ರನ್ನು, ''ನಾನು ಕರೆದಾಗಲೇ ಏಕೆ ಬರಲಿಲ್ಲ? ನನ್ನ ಆಜ್ಞೆಯನ್ನು ವಿರೋಧಿಸಿದ ನಿಮ್ಮನ್ನು ಇಲ್ಲಿಂದ ಓಡಿಸಿದೆನೆಂದರೆ ನೀವು ಏನು ಮಾಡುತ್ತೀರಿ?'' ಎಂದು ಭಗವಂತನು ಕೇಳಲು, ''ಭಗವಂತನೇ, ಶ್ರೀವೇಂಕಟನಾಥನೇ, ನಿಮಗೇನು ನಷ್ಟ? ನನಗೋ ಎಂದರೆ ಮಾಲತಿ ಮೊಗ್ಗುಗಳು ಅರಳಿಬಿಟ್ಟರೆ ನಂತರ ಮಾಲೆ ಕಟ್ಟುವುದು ಸಾಧ್ಯವಾಗುವುದಿಲ್ಲವೆಂದೂ, ಸುವಾಸನೆಯು ಕಡಿಮೆಯಾಗಿ ಬಿಡುತ್ತದೆಂದೂ ಭಾವಿಸಿದುದರಿಂದ ಆಗಲೇ ಬರಲು ಅವಕಾಶವಿಲ್ಲದೆಯೇ ಹೋಯಿತು. ಮೇಲೂ ಆಚಾರ್ಯರಾದ ಎಂಬೆರುಮಾನಾರ್ (ಶ್ರೀರಾಮನುಜರು) ನನಗೆ ಆಜ್ಞೆ ಮಾಡಿದ ಕೈಂಕರ್ಯವನ್ನು ಬಿಟ್ಟು ಬಿಟ್ಟು ಬೇರೆಯಾದ ನಿಮ್ಮಕೈಂಕರ್ಯ ಮಾಡಬೇಕೆಂಬ ನಿರ್ಬಂಧವು ಯಾವುದೂ ಇಲ್ಲ, ''ಪರನ್ ಶೆನ್ರುಶೇರ್ ತಿರುವೇಂಗಡ ಮಾಮಲೈ' (ಸಹಸ್ರಗೀತೆ:- ೩-೩-೮) ಎಂದು ಹೇಳುವ ತತ್ವದರ್ಶಿಗಳಲ್ಲಿ (ಆತ್ಮಸಾಕ್ಷಾತ್ಕಾರ ಪಡೆದವರಲ್ಲಿ) ನಾಯಕರಾದ ನಮ್ಮಾಳ್ವಾರ್‌ರವರು - ಇಲ್ಲಿರುವ ಶ್ರೀವೇಂಕಟಾಚಲದಲ್ಲಿ ಮಧ್ಯದಲ್ಲಿ (ಪ್ರಾರಂಭದಿಂದಲ್ಲದೆ) ಬಂದು ದೇವಾಧಿದೇವನಾದ ತಾವು ಸೇರಿದಿರೆಂದು ಹೇಳಿರುವುದರಿಂದ, ತಮಗೂ ಮತ್ತು ದಾಸನಾದ ನನಗೂ ಸಮನಾದ ಬಾಧ್ಯತೆಯುಳ್ಳ ಈ ಬೆಟ್ಟದಲ್ಲಿ ಒಂದು ವಾರ ಮುಂಚೆ ಬಂದಿದ್ದ ಮಾತ್ರಕ್ಕೆ ತಾವು ದಾಸನನ್ನು ಯಾವರೀತಿ ಹೊರದೂಡತಕ್ಕವರಾಗುವಿರಿ? ಮಧುರಕವಿಯಾಳ್ವಾರ್ ರಚಿಸಿದ 'ಕಣ್ಣಿನುಣ್ ಶಿರುತ್ತಾಂಬು' ಪ್ರಬಂಧವನ್ನು ಕಲಿತು ಅವರ ನಿಷ್ಠೆಯನ್ನು (ನಿಲುವನ್ನು) ಆಚರಣೆಮಾಡಿ, ಆಚಾರ್ಯರನ್ನೇ ಶರಣರನ್ನಾಗಿ ಪಡೆದುದರಿಂದ ಮಧುರಕವಿದಾಸನಾಗುವ ಸ್ಥಿತಿಯನ್ನು ಹೊಂದಿರುವವನಾಗಿ ನನ್ನನ್ನು ತಾವು ತಿಳಿದಿಲ್ಲವೇ?'' ಎಂದು ಪ್ರತ್ಯುತ್ತರ ನೀಡಿದರು. ಅವರಿಗೆ ಆಚಾರ್ಯನಲ್ಲಿರುವ ಭಕ್ತಿಯಲ್ಲಿನ ನಿಶ್ಚಲತೆಯನ್ನು ಕಂಡ ಭಗವಂತನು, ಅತ್ಯಂತ ಸಂತೋಷಗೊಂಡು, ''ಆಚಾರ್ಯರಲ್ಲಿ ನಿಮಗುಂಟಾದ ನಿಶ್ಚಲವಾದ ಭಕ್ತಿಸ್ಥಿತಿಯನ್ನು ನೋಡಿ ನಾವು ಅತೀವ ಸಂತೋಷಗೊಂಡೆವು. ನಿಮಗೆ ಬೇಕಾದುದೇನು? ಮೋಕ್ಷವೋ ಎಂದರೆ ಅದು ರಾಮಾನುಜರ ಅಡಿದಾವರೆಗಳನ್ನು ಶರಣರಾಗಿ ಪಡೆದ ನಿಮ್ಮ ಕೈಯಲ್ಲೇ ಇದೆ. ಬೇರೆ ಏನನ್ನಾದರೂ ಅಪೇಕ್ಷೆ ಪಟ್ಟುಕೇಳಿ'' ಎಂದು ಹೇಳಲು, ತಮ್ಮನ್ನು ಅತ್ಯಂತ ಭಾಗ್ಯಶಾಲಿಯೆಂದು ತಿಳಿದುಕೊಂಡ ಶ್ರೀ ಅನಂದಾಳ್ವಾನ್‌ರವರು, ''ದೇವಾಧಿದೇವನಾದ ತಮಗೆ ಸೇವೆ ಮಾಡುವುದೊಂದನ್ನು ಬಿಟ್ಟರೆ ದಾಸನಾದ ನಾನು ಇಚ್ಛಿಸುವುದು ಬೇರೆ ಏನಿದೆ? ಅದನ್ನೇ ಇಲ್ಲಿಯೂ (ಇಹದಲ್ಲಿಯೂ - ಈಲೋಕದಲ್ಲಿಯೂ) ಅಲ್ಲಿಯೂ (ಪರದಲ್ಲಿಯೂ-ವೈಕುಂಠದಲ್ಲಿಯೂ) ತಾವು

ನಡೆಸಿಕೊಡಬೇಕು'' ಎಂದು ಪ್ರಾರ್ಥಿಸಿಕೊಂಡರು. ಅವರ ನಿಷ್ಕಾಮತ್ವವನ್ನು ಕಂಡು ಅತೀವ ಸಂತೋಷಗೊಂಡ ಭಗವಂತನು, ''ನಿಮ್ಮನ್ನು ಸೇರಿದವರೊಂದಿಗೆ ಸಂಬಂಧವಿರುವ ಮನುಷ್ಯರುಗಳಿಗೂ, ಪಶುಗಳು, ಪಕ್ಷಿ ಮುಂತಾದುವುಗಳಿಗೂ ನಾನು ಮೋಕ್ಷವನ್ನು ಕೊಡುವೆನು,'' ಎಂದು ವಿಶೇಷ ವರದಾನ ಬಹುಮಾನವನ್ನು ಕೊಡಲು, ಅದನ್ನು ಪಡೆದ ಅನಂದಾಳ್ವಾನ್‌ರವರು ಸಂತೋಷಗೊಂಡು, ಮಧುರ ಕವಿಗಳ ಮನೋದೃಢತೆಯನ್ನು ಪಡೆದ ತಮಗೆ ಇಂಥಹ ಪರಮ ಪುರುಷನ ಕೃಪೆಯು ಲಭ್ಯವಾದುದರಿಂದ, ಇದೇ ಮೊದಲಾಗಿ ನಮ್ಮನ್ನು ಸೇರಿದವರುಗಳಿಗೆ 'ಮಧುರ ಕವಿದಾಸ' ಎಂಬುವುದೇ ದಾಸ್ಯನಾಮವಾಗಿ ಆಗಲಿ ಎಂಬ ನಿಯತಿಯನ್ನು ಏರ್ಪಡಿಸಿದರು. ಅದರಿಂದ ಪ್ರಾರಂಭಿಸಿ ಅವರು ಎಲ್ಲರಿಗೂ ಆಚಾರ್ಯರಾಗಿ ಆದರು.

**ಅನಂದಾಳ್ವಾನ್‌ರವರು ಪ್ರಾಕಾರವನ್ನು ಕಟ್ಟುವ ದಾರಿಯಿಂದ ಸಂಪಿಗೆಯ ಮರವು ದೂರ ಸರಿದು ಅವಕಾಶಮಾಡಿಕೊಟ್ಟುದುದು.**

ಅನಂದಾಳ್ವಾನ್‌ರವರು ದೇವಸ್ಥಾನದ ಪ್ರಾಕಾರ ಮತ್ತು ಗೋಪುರಗಳನ್ನು ಕಟ್ಟಿಸುವಾಗ, ಅದರ ಪಕ್ಕದಲ್ಲಿ ಹುಟ್ಟಿದ್ದ ನಾಲ್ಕೂ ಕಡೆಗಳಲ್ಲಿ ಹರಿಡಿಕೊಂಡಿದ್ದ ಹಲವಾರು ರೆಂಬೆಗಳುಳ್ಳ ಒಂದು ಸಂಪಿಗೆಯ ಮರವು ಪ್ರಾಕಾರವನ್ನು ಕಟ್ಟಲು ತಡೆಯಾಗಿ ಅಡ್ಡವಾಗಿ ನಿಂತಿರಲು, ಅದನ್ನು ಕಡಿದುಹಾಕಬೇಕೆಂಬ ಸಂದರ್ಭದಲ್ಲಿ ಅವರು- ''ಶ್ರೀ ವೇಂಕಟವೆಂಬ ಭಗವಂತನ ಸ್ವರ್ಣಬೆಟ್ಟದ ಮೇಲೆ ಏನಾದರೂ ಒಂದಾಗಿ ನಾನು ಆಗುತ್ತೇನೆ'' ಎಂದು ಕುಲಶೇಖರಾಳ್ವಾರ್‌ರವರು ಪೆರುಮಾಳ್ ತಿರುಮೊಳಿ (೪-೧೦)ಯಲ್ಲಿ ಹಾಡಿದ ಪ್ರಬಂಧದಲ್ಲಿನ ಪದ್ಯದಲ್ಲಿ ಹೇಳಿದಂತೆ ಯಾವ ಆಳ್ವಾರ್‌ರವರು ಇಲ್ಲಿ ಈ ಮರವಾಗಿ ಅವತರಿಸಿದ್ದಾರೆಯೋ ಗೊತ್ತಾಗಲಿಲ್ಲ, ಈ ಶ್ರೀವೇಂಕಟಗಿರಿಯಲ್ಲಿರುವ ಸ್ಥಾವರ ಜಂಗಮಗಳು ಎಲ್ಲವೂ ಅಪ್ರಾಕೃತ (ಪರಮಪದದಿಂದ ಬಂದ - ಭೂಮಿಯಲ್ಲಿನ ಪಂಚಭೂತಗಳಿಂದಾಗದ) ಪ್ರಾಣಿಗಳು (ಮತ್ತು ವಸ್ತುಗಳು) ಎಂಬುದಾಗಲ್ಲವೇ ಪುರಾಣಗಳಲ್ಲಿ ಹೇಳಲ್ಪಟ್ಟಿವೆ? ಆದುದರಿಂದ ಈ ಮರವು ಕಡಿದುಹಾಕಲ್ಪಡತಕ್ಕದಲ್ಲ - ಎಂದು ಭಾವಿಸಿ, ಆ ರಾತ್ರಿ ಭಗವಂತನನ್ನು ಧ್ಯಾನಿಸಿ, ಮರದ ರೂಪಧರಿಸಿದ ನಿತ್ಯಸೂರಿಯನ್ನೂ ಉದ್ದೇಶಿಸಿ, ''ಸ್ವಾಮಿ, ಭಗವಂತನಿಗೆ ಕಟ್ಟುವ ಪ್ರಾಕಾರದ ದಾರಿಯಿಂದ ಸ್ವಲ್ಪ ಪಕ್ಕಕ್ಕೆ ಸರಿದುಕೊಳ್ಳಿ'' ಎಂದು ಪ್ರಾರ್ಥಿಸಿ, ನಿದ್ದೆಮಾಡಿ, ಬೆಳಗಿನ ಜಾವ ಎದ್ದು, ಆ ಸಂಪಿಗೆಯ ಮರವು ಪ್ರಾಕಾರ ಕಟ್ಟುವ ಮಾರ್ಗದಿಂದ ದೂರ ಸರಿದು ನಿಂತಿರುವುದನ್ನು ಕಂಡ ಅನಂದಾಳ್ವಾನ್‌ರವರು ಓರೆಯಾಗದಂತೆ ನೇರವಾಗಿಯೇ ಪ್ರಾಕಾರದ ಗೋಡೆಯನ್ನು ಕಟ್ಟಿಸಿದರು. ಆದುದರಿಂದ ಈ ಪ್ರಾಕಾರವು ಚಂಪಕ ಪ್ರಾಕಾರವೆಂದು ಸುಪ್ರಸಿದ್ಧವಾಯಿತು.

**ಶ್ರೀನಿವಾಸನು ಅನಂದಾಳ್ವಾನ್‌ರವರಿಗೆ ಧ್ಯಾನಶ್ಲೋಕ (ತನಿಯನ್) ವನ್ನು ರಚಿಸಿ ಕೊಟ್ಟದ್ದು.**

ಹಿಂದೊಂದು ಸಂದರ್ಭದಲ್ಲಿ ತಿರುಮಲೆಯಪ್ಪ (ಶ್ರೀನಿವಾಸ) ನನ್ನು ಸೇವೆ ಮಾಡಲು ಶ್ರೀರಂಗಕ್ಷೇತ್ರದಿಂದ ವಾತ್ಸ್ಯವರದಾಚಾರ್ ಮುಂತಾದ ಕೆಲವು ಶ್ರೀವೈಷ್ಣವರು ತಿರುಪತಿ ಬೆಟ್ಟವನ್ನು ಹತ್ತುವಾಗ ಮೆಟ್ಟಲುಗಳ ನೀಳವಾದ ಸರಣಿಯಲ್ಲಿ ಹತ್ತಿ ಬಂದುದರಿಂದ ಆಯಾಸಗೊಂಡು, ಹಸಿವು ಮತ್ತು ದಾಹಗಳಿಂದ ಸಂಕಟ ಪಡುತ್ತಿದ್ದಾಗ ಪರಮದಯಾಳುವಾದ ಶ್ರೀ ವೇಂಕಟನಾಥನು ಒಬ್ಬ ಶ್ರೀವೈಷ್ಣವ ಬ್ರಹ್ಮಚಾರಿಯ ರೂಪವನ್ನು ಧರಿಸಿ, ಚಿತ್ರಾನ್ನ (ಪುಳಿಯೋಗರೆ) ಪಾತ್ರೆಯನ್ನು ಕೈಯಲ್ಲಿ ಹಿಡಿದು ಎದುರಿನಲ್ಲಿ ಬಂದು ನಿಂತು ಅವರುಗಳಿಗೆ ಆ ಪುಳಿಯೋಗರೆಯನ್ನು ಕೊಡುವಾಗ, ''ಇವನು ಮುಟ್ಟಿದುದನ್ನು ನಾವು ಉಣ್ಣಬಹುದೋ ಅಥವಾ ಕೂಡದೋ,'' ಎಂದು ಸಂದೇಹಿಸಿ, ''ಓ ಬ್ರಹ್ಮಚಾರಿಯೇ, ನೀನು ಯಾರಶಿಷ್ಯನು? ನಿನ್ನ ಹೆಸರೇನು? ಈ ಪುಳಿಯೋಗರೆಯು ಎಲ್ಲಿಯದು? 'ಪದ್ಯಂ ಅಂಗುಳಿ ವಿಚ್ಛೇದಃ' (ಧ್ಯಾನಶ್ಲೋಕವನ್ನು ರಚಿಸುವುದು-ಏಕಲವ್ಯನಂತೆ ಬೆರಳನ್ನು ಕತ್ತರಿಸಿಕೊಳ್ಳುವುದು) ಮೊದಲಾದ ಶಾಸ್ತ್ರದಿಂದ ದಾಸನಾದವನ ಲಕ್ಷಣವಾಗಿ ವಿಧಿಸಲ್ಪಟ್ಟು, ಶಿಷ್ಯನು ದಿನವೂ ಅನುಸಂಧಾನ ಮಾಡತಕ್ಕದಾದ ನಿನ್ನ ಆಚಾರ್ಯನ ಧ್ಯಾನ ಶ್ಲೋಕ (ತನಿರ್ಯ) ಯಾವುದು? ಇದೆಲ್ಲವನ್ನೂ ಹೇಳು,'' ಎಂದೆನ್ನಲು, ''ದಾಸನು ಶ್ರೀವೈಷ್ಣವನು. ತಿರುಮಲೆಯನಂದಾಳ್ವಾನ್‌ರವರ ಶಿಷ್ಯನು ಮಧುರಕವಿದಾಸನೆಂಬುದು ನನ್ನ ಹೆಸರಾಗುತ್ತದೆ. ಒಬ್ಬ ದಾರಿಹೋಕನ ಬಾಯಿಯಿಂದ ತಮ್ಮಗಳ ಆಯಾಸ ಮುಂತಾದವುಗಳನ್ನು ತಿಳಿದುಕೊಂಡು ಶ್ರೀ ಅನಂದಾಳ್ವಾನ್‌ರವರು ಶ್ರೀವೇಂಕಟನಾಥನಿಗೆ ನೈವೇದ್ಯಮಾಡಿದ ಈ ಪುಳಿಯೋಗರೆಯನ್ನು ತಮಗಾಗಿ ಕಳುಹಿಸಿದರು. ಇದನ್ನು ಸ್ವೀಕರಿಸಿ ಭುಜಿಸಿರಿ'' ಎಂದು ಹೇಳಿ, ''ಅಖಿಲಾತ್ಮಗುಣಾವಾಸಮಜ್ಞಾನತಿಮಿರಾಪಹಂ ಆಶ್ರಿತಾನಾಂ ಸುಶರಣಂ ವಂದೇಽನಂತಾರ್ಯದೇಶಿಕಂ॥ (ಆತ್ಮಗಳಿಗಿರಬೇಕಾದ ಸದ್ಗುಣಗಳೆಲ್ಲಕ್ಕೂ ಆವಾಸಸ್ಥಾನವಾಗಿರುವವರೂ, ಅಜ್ಞಾನವೆಂಬ ಕತ್ತಲೆಯನ್ನು ಸಂಪೂರ್ಣವಾಗಿ ಹೋಗಲಾಡಿಸುವವರೂ, ತಮ್ಮನ್ನಾಶ್ರಯಿಸಿದ ಶಿಷ್ಯರುಗಳಿಗೆ ಉತ್ಕೃಷ್ಟರಾದ ಶರಣರಾದವರೂ ಆದ ಅನನ್ತಾರ್ಯ (ಅನಂದಾಳ್ವಾನ್) ರೆಂಬ ಆಚಾರ್ಯರನ್ನು ನಮಸ್ಕರಿಸಿ ಸುತ್ತಿಸುತ್ತೇನೆ) ಎಂದು ಒಂದು ಮಂತ್ರ (ಶ್ಲೋಕ) ವನ್ನು ಅಲ್ಲಿಯೇ ರಚಿಸಿ ಹೇಳಿ - ''ಇದೇ ದಾಸನಾದ ನಾನು ಪ್ರತಿನಿತ್ಯವೂ ಹೇಳುವ ಮಂತ್ರವಾದ ಆಚಾರ್ಯಧ್ಯಾನ ಶ್ಲೋಕವು,'' ಎಂದು ಹೇಳಿದನು.

ನಂತರ ಆ ಶ್ರೀವೈಷ್ಣವರುಗಳು, ''ಎಲೈ ವಟುವೇ, ಈ ಧ್ಯಾನ ಶ್ಲೋಕದಲ್ಲಿ

ನಿನ್ನ ಆಚಾರ್ಯರಿಗೆ ಪರಮಾಚಾರ್ಯರಾದ ರಾಮಾನುಜರೊಂದಿಗೆ ಇರುವ ಸಂಬಂಧವು ಏಕೆ ಹೇಳಲ್ಪಡಲಿಲ್ಲ? ಇದನ್ನು ಈಗ ನೀವೇ ರಚಿಸಿದಿರೋ?'' ಎಂದು ಕೇಳಲು ಅವನು ''ಹೇ ಆರ್ಯರುಗಳೇ! ನನ್ನ ಆಚಾರ್ಯರ ಬಗೆಗಿನ ಧ್ಯಾನಶ್ಲೋಕಗಳು ಎರಡು ಇವೆ. ಅವುಗಳಲ್ಲಿ ಒಂದು ಆಚಾರ್ಯರಿಗೆ ಇರಬೇಕಾದ ಲಕ್ಷಣಗಳಾದ ಗುಣಾತಿಶಯಗಳನ್ನು ಹೇಳುವುದು, ಮತ್ತೊಂದು ಅವರಿಗೆ ಸದಾಚಾರ್ಯರೊಂದಿಗೆ ಇರುವ ಸಂಬಂಧದ ಹಿರಿಮೆಯನ್ನು ಪ್ರದರ್ಶಿಸುವುದು, ಮೊದಲನೆಯದರ ಧ್ಯಾನ ಶ್ಲೋಕವನ್ನು ಮುಂಚೆಯೇ ಹೇಳಿದೆ. ಎರಡನೆಯದನ್ನು ಕೃಪೆ ಮಾಡಿ ಕೇಳಿ'' ಎಂದು ಹೇಳಿ, ''ಶ್ರೀಮದ್ರಾಮಾನುಜಾಚಾರ್ಯ ಶ್ರೀಪಾದಾಂಭೋರುಹದ್ವಯಂ। ಸದುತ್ತಮಾಂಗ ಸಂಧಾರ್ಯಮನಂತಾರ್ಯಮಹಂ ಭಜೇ॥ (ಶ್ರೀಮದ್ರಾಮಾನುಜಾಚಾರ್ಯರ ಶ್ರೀಪಾದಾಂಭೋರುಹಗಳ ಸಮಾನರಾದವರೂ, ಸತ್ಪುರುಷರುಗಳಿಂದ ಶಿರಸ್ಸಿಗೆ ಭೂಷಣವಾಗಿ ಧರಿಸಲ್ಪಡುವವರೂ ಆದ (ಅನಂದಾಳ್ವಾನ್) ಅನಂತಾರ್ಯರು ಎಂಬ ಆಚಾರ್ಯರನ್ನು ನಮಸ್ಕರಿಸುತ್ತೇನೆ) ಎಂದು ಎರಡನೆಯದಾಗಿ ಮತ್ತೊಂದು ಧ್ಯಾನ ಶ್ಲೋಕವನ್ನು ರಚಿಸಿ ಹೇಳಿದನು. ನಂತರ ಆ ಶ್ರೀವೈಷ್ಣವರುಗಳು ಸಂದೇಹ ನಿವಾರಿಸಲ್ಪಟ್ಟವರಾಗಿ ಪ್ರಸಾದವನ್ನು ತೆಗೆದುಕೊಂಡು ಭುಜಿಸಲು ಪ್ರಾರಂಭಿಸಿದಾಗ, ಅವರುಗಳ ಅನುಮತಿಯನ್ನು ಪಡೆದು ಆ ಬ್ರಹ್ಮಚಾರಿಯು ಸ್ವಲ್ಪ ಮುಂಚೆಯೇ ಹಿಂದಿರುಗಿಬಿಟ್ಟನು.

ಅದಾದನಂತರ ಆ ಶ್ರೀವೈಷ್ಣವರು ಆ ಭಗವಂತನ ಪ್ರಸಾದವನ್ನು ಭುಜಿಸಿ ಆಯಾಸ ಪರಿಹಾರಗೊಂಡವರಾಗಿ ಮೆಲ್ಲ ಮೆಲ್ಲನೆ ಬೆಟ್ಟವನ್ನು ಹತ್ತಿ ಶ್ರೀ ಅನಂದಾಳ್ವಾನ್‌ರವರನ್ನು ಕಂಡು ನಮಸ್ಕರಿಸಿದಾಗ (ಸುಖವಾಗಿ ಬಂದು ಸೇರಿದಿರಾ? ಎಂದು) ಸ್ವಾಗತವನ್ನು ಹೇಳಲು, ''ಸ್ವಾಮಿ, ತಮ್ಮ ಶಿಷ್ಯನಾದ ಮಧುರಕವಿದಾಸನೆಂಬ ಬ್ರಹ್ಮಚಾರಿಯ ಕೈಯಲ್ಲಿ ತಾವು ಕೃಪೆಯಿಟ್ಟು ಕಳುಹಿಸಿದ ಭಗವತ್ಪ್ರಸಾದವನ್ನು ಭುಜಿಸಿ ಅತಿಯಾದ ತೃಪ್ತಿಹೊಂದಿ, ದಾರಿನಡೆದ ಶ್ರಮವನ್ನು ಹೋಗಲಾಡಿಸಿಕೊಂಡು ಸುಖವಾಗಿಯೇ ಬಂದು ತಲುಪಿದೆವು'' ಎಂದು ಹೇಳಿದರು.

''ಮಧುರಕವಿದಾಸ ನೆಂಬ ಬ್ರಹ್ಮಚಾರಿ ಶಿಷ್ಯನು ದಾಸನಿಗೆ ಇಲ್ಲಿ ಯಾರೂ ಇಲ್ಲ, ತಮ್ಮಗಳಿಗೆ ದಾಸನು ಭಗವತ್ಪ್ರಸಾದವನ್ನು ಕೊಟ್ಟುಕಳುಹಿಸಲೇ ಇಲ್ಲವಲ್ಲಾ! ಅದೂ ಅಲ್ಲದೆ ತಾವುಗಳು ಇಲ್ಲಿಗೆ ಬರುವ ಸಮಾಚಾರವೂ ದಾಸನಿಗೆ ಗೊತ್ತಿಲ್ಲ. ಇದೆಲ್ಲವೂ ತಾವುಗಳು ದಾರಿ ನಡೆದು ಬಂದ ಶ್ರಮವನ್ನು ಸಹಿಸಲಾರದ ಆ ಭಗವಂತನ ಒಂದು ದಿವ್ಯವಾದ ಆಟವಷ್ಟೆ'' ಎಂದು ಅನಂದಾಳ್ವಾನ್ ಹೇಳಲು, ಅವರುಗಳು ಆ ಬ್ರಹ್ಮಚಾರಿಯು ದಾರಿನಡುವೆ ಮಾಡಿದ ದಿವ್ಯ ಆಟಗಳನ್ನೆಲ್ಲಾ ಸವಿಸ್ತಾರವಾಗಿ ಅವರಿಗೆ ತಿಳಿಸಿದರು.

ನಂತರ ಆ ಸುದ್ದಿಯನ್ನು ಕೇಳಿ ಆಶ್ಚರ್ಯಪಟ್ಟ ಶ್ರೀ ಅನಂದಾಳ್ವಾನ್‌ರವರ ಗೋಷ್ಠಿಯಲ್ಲಿದ್ದ ಎಲ್ಲ ಹಿರಿಯರೂ ಆಶ್ವರ್ಯ ಭರಿತರಾಗಿ, ''ಶ್ರೀವೇಂಕಟನಾಥನು ಶ್ರೀ ಅನಂದಾಳ್ವಾನ್‌ರವರ ಸದಾಚಾರ್ಯ ಲಕ್ಷಣ ಪೂರ್ತಿಯನ್ನೂ, ಆಚಾರ್ಯ (=ಶ್ರೀರಾಮಾನುಜ) ಸಂಬಂಧದ ಹಿರಿಮೆಯನ್ನೂ ತಾನೇ ಹೇಳಿ ಅವರಿಗೆ ಶಿಷ್ಯನಾಗಿರುವ ಆಸೆಯನ್ನು ವ್ಯಕ್ತಪಡಿಸಿ, ಅವರಲ್ಲಿ ತನಗೆ ಅತ್ಯಂತ ಶ್ರೇಷ್ಠವಾದ ಅಭಿಮಾನವಿರುವುದೆಂಬುದನ್ನು ಸಮಸ್ತರಿಗೂ ತಿಳಿಸುತ್ತಿದಾನೆ. ಇದು ಮಹದಾಶ್ವರ್ಯವು. ಶ್ರೀವೇಂಕಟನಾಥನು ಶ್ರೀ ಅನಂದಾಳ್ವಾನ್ ರವರ ಶಿಷ್ಯನಾಗಿ ಭಾವಿಸಿದುದಕ್ಕೆ ಕಾರಣವೇನೆಂದರೆ - ತನಗೆ ಶಂಖ ಚಕ್ರಗಳನ್ನು ಕೊಟ್ಟ ರಾಮಾನುಜಮುನಿವರು ಶ್ರೀ ಅನಂದಾಳ್ವಾನ್‌ರವರಿಗೆ ಆಚಾರ್ಯರಾದುದರಿಂದಲೂ, ಆದಿಶೇಷನ ಅವತಾರವಾದ ಈ ಅನಂದಾಳ್ವಾನ್‌ರವರಿಗೆ ಅಂಶಿಯಾದ ಭಗವದ್ರಾಮಾನುಜ ಮುನಿವರ್ಯರೊಂದಿಗಿರುವ ಹೊಂದಾಣಿಕೆಯಿಂದ, ''ಶ್ರೀಮದ್ರಾಮಾನುಜಾಚಾರ್ಯ ಶ್ರೀಪಾದಾಂಭೋರುಹದ್ವಯಂ'' ಎಂದು ಶ್ರೀ ಅನಂದಾಳ್ವಾನ್‌ರವರನ್ನು ರಾಮಾನುಜರ ಪಾದ್ಮಯುಗಳವಾಗಿ ಹೇಳುವ ಮೂಲಕ ರಾಮಾನುಜರ ಅಂಶವಾಗಿ ತಾನೇ (ಭಗವಂತನೇ) ಪ್ರಸಿದ್ಧಿಯಾಗಿಸಿದುದರಿಂದಲೂ, ರಾಮಾನುಜರನ್ನು ಆಚಾರ್ಯರನ್ನಾಗಿ ಭಾವಿಸಿದ್ದಕ್ಕೆ ಪರಿವಾಹರೂಪವಾಗಿ (ಫಲವಾಗಿ) ಅನಂದಾಳ್ವಾನ್‌ರವರ ಆಚಾರ್ಯತ್ವವನ್ನು ಭಾವಿಸಿದುದೇ ಅದಕ್ಕೆ ಕಾರಣವಾಗತಕ್ಕದ್ದು - ಎಂದು ನಿಶ್ಚಯಿಸಿ, ಅದರಿಂದ ಅನಂದಾಳ್ವಾನ್‌ರ ವಿಷಯದಲ್ಲಿ ಅಧಿಕವಾದ ಗೌರವವನ್ನು ಕೊಂಡವರಾಗಿ, ''ಇದು ಮೊದಲಾಗಿ ಶ್ರೀವೇಂಕಟನಾಥ ಸ್ವಾಮಿಯು ಪರಮ ಪ್ರೀತಿಯಿಂದ ರಚಿಸಿಕೊಟ್ಟ ಈ ಎರಡು ಮಂತ್ರಗಳೇ ಅನಂದಾಳ್ವಾನ್‌ರವರ ಶಿಷ್ಯರುಗಳಿಂದ ಆಚಾರ್ಯರ ಧ್ಯಾನಶ್ಲೋಕಗಳಾಗಿ ಆದರಿಸಲ್ಪಡತಕ್ಕವೆಂದೂ, ಮುದಲಿಯಾಂಡಾನ್ (ದಾಶರಥಿ), ಕೂರೇಶರು (ಕೂರತ್ತಾಳ್ವಾನ್) ಮೊದಲಾದವರೊಡನೆ ರಾಮಾನುಜ ಮುನಿವರ್ಯರ ತ್ರಿದಂಡ (ಮೂರು ಕೋಲುಗಳು), ಪಾದುಕೆ, ಜಲಪವಿತ್ರ (ತ್ರೀದಂಡದ ತುದಿಯಲ್ಲಿ ಕಟ್ಟಿರುವ ಬಿಳಿಯ ಬಟ್ಟೆಯ ಚೀಲ) ವಾಗುವರೀತಿ, ವೇಂಕಟನಾಥನ ವಾಕ್ಯದಲ್ಲಿ ನಂಬಿಕೆಯಿಂದ ಅನಂದಾಳ್ವಾನ್‌ರಲ್ಲಿ ರಮಾನುಜಮುನಿವರ್ಯರ ಶ್ರೀಪಾದಪದ್ಮಯುಗಳವಾಗುವ ರೀತಿಯು, ತಪ್ಪದೆಯೇ ಎಲ್ಲರಿಂದಲೂ ಅನುಸಂಧಾನ ಮಾಡತಕ್ಕದೆಂದು ಒಂದು ನಿಯಮವನ್ನೇರ್ಪಡಿಸಿದರು.

**ಶಿರಿಯಾಂಡಾನ್ (ಲಕ್ಷ್ಮಾಚಾರ್ಯರು)ರವರು ಅನಂದಾಳ್ವಾನ್‌ರವರನ್ನು ಮುಂದಿಟ್ಟುಕೊಂಡು ಮುಕ್ತಿಹೊಂದಿದುದು.**

ಒಮ್ಮೆ ಶ್ರೀರಂಗದಲ್ಲಿ ಪಿಳ್ಳೆಯುರಂಗಾವಿಲ್ಲದಾಸರ್ (ಕುಮಾರ ಅನಿದ್ರಾ

ದನುರ್ದಾಸರು), ಪಿಳ್ಳೈಮಹಾಬಲಿ ಬಾಣರಾಯನ್ (ಕುಮಾರ ಮಹಾಬಲಿ ಬಾಣಾಧಿರಾಜ), ಮರದೂರ್‌ನಂಬಿ (ಅರ್ಜುನಗ್ರಾಮಪೂರ್ಣರು) ಮತ್ತು ಶಿರಿಯಾಂಡಾನ್ (ಲಘ್ವಾಚಾರ್ಯರು) ಎನ್ನುವ ಈ ನಾಲ್ವರೂ, ಈ ಪ್ರಾಪಂಚಿಕ ಜೀವನದಲ್ಲಿನ ಅತೀವ ಕಷ್ಟಗಳನ್ನು ಕಂಡು, ತಕ್ಷಣವೇ ಮೋಕ್ಷವನ್ನು ಹೊಂದಬೇಕಾದ ತ್ವರೆಯಿಂದ ಕೂಡಿದವರಾಗಿ, ಭಗವದ್ರಾಮಾನುಜ ಮುನಿವರ್ಯರನ್ನು ಶರಣುಹೊಂದಲು, ಅವರುಗಳಲ್ಲಿ ಮೊದಲಿಗರಾದ ಮೂವರೂ ಆ ಮುನಿಶ್ರೇಷ್ಠರ ಆಜ್ಞೆಯಂತೆ ತಮ್ಮ ತಮ್ಮ ಇಷ್ಟಾರ್ಥ, ತ್ವರೆ ಇವುಗಳ ಪಕ್ವಸ್ಥಿತಿಗೆ ತಕ್ಕದಾಗಿ ಅಲ್ಲಲ್ಲಿ ಹೋಗಿ ತಾವು ತಾವು ಹೊಂದುವ ಫಲವನ್ನು ಹೊಂದಿ ತೃಪ್ತಿಹೊಂದಿರುವಾಗ, ನಾಲ್ಕನೆಯವರಾದ ಲಘ್ವಾಚಾರ್ಯರು (ಶಿರಿಯಾಂಡಾನ್)ಆಗಲೇ ಮೋಕ್ಷವನ್ನು ಹೊಂದುವ ಅಪೇಕ್ಷೆಯಿಂದ ಕೂಡಿ, ''ಯಾವರೀತಿ, ಕುಡಿಯಲು ನೀರು ಸಿಗದೇ ನಾಲಿಗೆಯು ಬತ್ತಿಹೋಗಿ ಮರಣದ ಅಂಚಿನಲ್ಲಿರುವ ಒಬ್ಬ ಅತೀವ ದಾಹವುಳ್ಳ ವ್ಯಕ್ತಿಯಂತೆ, ಈ ಸಂಸಾರ ಮರುಕಾಂತಾರದಲ್ಲಿ ಶರೀರಕ್ಕೆ ಉಂಟಾಗುವ ಜ್ವರವೇ ಮುಂತಾದ ರೋಗಗಳು, ಮನುಷ್ಯ, ಪ್ರಾಣಿಗಳು ಮುಂತಾದುವುಗಳಿಂದಾಗುವ ತೊಂದರೆಗಳು, ಸಿಡಿಲು, ಮಿಂಚು, ಬಿಸಿಲಿನ ತಾಪ, ಅಗ್ನಿ ಮುಂತಾದ ದೇವತೆಗಳಿಂದುಂಟಾಗುವ ದುಃಖಗಳು ಎಂಬ ಮೂರ ಬಗೆಯ ತಾಪಗಳಿಂದ ಸಂಕಟಗೊಂಡಿರುವ ದಾಸನಾದ ನಾನು ಈಗಲೇ ಅಪರ್ಯಾಪ್ತಾಮೃತವಾದ ಮೋಕ್ಷವನ್ನು ಹೊಂದದೇ ಇದ್ದಲ್ಲಿ ಪ್ರಾಣವನ್ನು ಧರಿಸಿರಲು ಸಾಧ್ಯವಿಲ್ಲದವನಾಗಿದೇನೆ'' - ಎಂದು ಶ್ರೀ ರಾಮಾನುಜ ಮುನಿವರ್ಯರಲ್ಲಿ ವಿಜ್ಞಾಪಿಸಲು, ''ಸ್ವಾಮಿ ಲಘ್ವಾಚಾರ್ಯರೇ, ನೀವು ಇಚ್ಛಿಸುವ ಫಲವನ್ನು ಕೊಡುವವನು ಶ್ರೀವೇಂಕಟನಾಥನಲ್ಲವೇ? ಅವನಲ್ಲಿ ಹೋಗಿ ಅನಂದಾಳ್ವಾನ್‌ರವರ ಸೂಕ್ತ ಪುರುಷಕಾರ (ಶಿಫಾರಿಸು)ದಿಂದ ಆ ಭಗವಂತನನ್ನು ಶರಣುಹೋಗಿ ಫಲವನ್ನು ಪಡೆಯುವವರಾಗಿ'' ಎಂದು ಶ್ರೀರಾಮಾನುಜರು ಪ್ರತ್ಯುತ್ತರಿಸಲು, ಲಘ್ವಾಚಾರ್ಯರು ಶ್ರೀವೇಂಕಟನಾಥನಲ್ಲಿ ತಮಗಿರುವ ಅತ್ಯಂತ ಭಕ್ತಿಯಿಂದ ಒಡನೆ ಹೊರಟು ತಿರುಮಲೆಯನ್ನು ಸೇರಿ ಅನಂದಾಳ್ವಾನ್‌ರನ್ನು ನಮಸ್ಕರಿಸಿ ತಮ್ಮ ಅಭೀಷ್ಟವನ್ನೂ, ಶ್ರೀರಾಮಾನುಜರ ದಿವ್ಯಾಜ್ಞೆಯನ್ನೂ ಅವರಲ್ಲಿ ತಿಳಿಸಿ, ''ಸ್ವಾಮಿ, ಅನಂದಾಳ್ವಾನ್‌ರವರೇ. ತಮ್ಮ ಪುರುಷಕಾರದಿಂದ ಮಾತ್ರವೇ ಶ್ರೀವೇಂಕಟನಾಥನು ಒಡನೆಯೇ ದಾಸನನ್ನು ಕಾಪಾಡತಕ್ಕವನು. ಆದುದರಿಂದ ತಾವು ಮನಸ್ಸುಮಾಡಿ ಅನುಗ್ರಹಿಸಬೇಕು'' ಎಂದು ಯಾಚಿಸಲು, ಅನಂದಾಳ್ವಾನ್‌ರವರು,(ಸ್ವಗತ) ''ಈ ಲಘ್ವಾಚಾರ್ಯರಿಗೆ, ಪರಮಾರ್ಥಿಸಂಪನ್ನರೂ ಸಕಲ ಕಲ್ಯಾಣ ಗುಣಗಳನ್ನು ಹೊಂದಿದವರೂ, ಸದಾಚಾರ್ಯರೆಂಬ ವಾರ್ತೆಗೆ ಎಲ್ಲ ವಿಧದಲ್ಲಿಯೂ ಅರಿಹೊಂದತಕ್ಕವರೂ ಆದ ಶ್ರೀರಾಮಾನುಜ ಮುನಿವರು ಆಚಾರ್ಯರು.

ಸರ್ವಜ್ಞನೂ, ಸರ್ವಶಕ್ತನೂ, ಸಮಸ್ತ ಕಲ್ಯಾಣ ಗುಣಗಳ ಮಹೋದಧಿಯೂ, ಪುರುಷಾರ್ಥಪ್ರದಾತನೂ ಆದ ಶ್ರೀವೇಂಕಟನಾಥನು ಇವರು ಇಚ್ಛಿಸುವ ಫಲವನ್ನು ಕೊಡುವವನು. ಆದುದರಿಂದ ಇವರು ಇಚ್ಛಿಸುವ ಪುರುಷಾರ್ಥವು (ಮೋಕ್ಷವು) ಈಗಲೇ ಸಿದ್ಧಿಸತಕ್ಕದೇ. ಸರ್ವಜ್ಞನಾದ, ಸರ್ವಶಕ್ತನಾದ, ಪರಮಪುರುಷನು ಇವರು ಪ್ರಾರ್ಥಿಸಿದುದನ್ನು ಕೊಡಲು ಇಷ್ಟ ಪಟ್ಟರೆ ಅದನ್ನು ತಡೆಯಬಲ್ಲವರಾರು? ಸರ್ವಲೋಕಕ್ಕೂ ಮಾತೆಯಾದ ಶ್ರೀ ಮಹಾಲಕ್ಷ್ಮಿಯು ಈ ದೇವನ ವಕ್ಷಃಸ್ಥಳದಲ್ಲಿ ಯಾವಾಗಲೂ ಕದಲದಂತೆ ವಿರಾಜಮಾನಳಾಗಿರುತ್ತಿದ್ದಾಳೆ, ಈ ರೀತಯಾಗಿರಲು, ಈಗಲೇ ಇವರಿಗೆ ಮೋಕ್ಷವು ಸಿದ್ಧಿಸುವುದರಲ್ಲಿ ಸ್ವಲ್ಪವೂ ಸಂದೇಹವಿಲ್ಲ. ಆದುದರಿಂದ ಇವರು ನನ್ನ ಪುರುಷಕಾರವನ್ನು ಬರಿದೇ ಆಶಿಸುತ್ತಿದಾರೆ. ಪುರುಷಕಾರ ಮಾಡಬೇಕೆಂದು ಭಗವದ್ರಾಮಾನಜರು ನನ್ನನ್ನು ನಿಯಮಿಸಿರುತ್ತಾರೆ. ಆದುದರಿಂದ ಅವಶ್ಯಕವಾಗಿ ಇವರಿಗಾಗಿ ಪುರುಷಕಾರವನ್ನು ಮಾಡಬೇಕು,'' ಎಂದು ಮನಸ್ಸಿನಲ್ಲಿ ಚಿಂತಿಸಿ ಶಾಂತಮನಸ್ಕರಾಗಿ, ''ಹೇ ಲಘ್ವಾಚಾರ್ಯರೇ, ಹಾಗಾದರೆ ಬನ್ನಿ, ಭಗವದ್ರಾಮಾನುಜರ ದಿವ್ಯಾಜ್ಞೆಯಂತೆ ಶ್ರೀವೇಂಕಟನಾಥನ ಬಳಿಗೆ ಹೋಗೋಣ,'' ಎಂದು ಹೇಳಲು, ಅವರೊಡನೆ ಲಘ್ವಾಚಾರ್ಯರು ಕೂಡಿ ಶ್ರೀ ವೇಂಕಟನಾಥನನ್ನು ಅಣುಗಿದರು.

ಈ ರೀತಿ ಅನಂದಾಳ್ವಾನ್‌ರೊ, ಲಘ್ವಾಚಾರ್ಯರೂ ಭಗವಂತನನ್ನು ದಂಡವತ್ಪ್ರಣಾಮಮಾಡಿ, ದೇವಾಲಯದೊಳಗೆ ನಡೆದು ದೇವಾಧಿದೇವನ ಮುಂದೆ ನಿಂತಿರಲು, ಭಗವಂತನೂ ಸಹ ಶೀತಲವಾದ ತನ್ನ ಓರೆನೋಟ ಕರುಣಾರಸ ಪ್ರವಾಹದಿಂದ ಆಳ್ವಿರ್ವರನ್ನೂ ಅಭಿಷೇಕಮಾಡಿಸಿ, ತೀರ್ಥ, ಶ್ರೀಶಠಗೋಪ (ಶಠಾರಿ), ಪುಷ್ಪಮಾಲೆ, ಉಟ್ಟು ಕಳೆದ ವಸ್ತ್ರ (ಶೇಷವಸ್ತ್ರ), ಶ್ರೀಗಂಧ ಮುಂತಾದವುಗಳನ್ನು ಕೊಟ್ಟು ಅನುಗ್ರಹಿಸಲು, ಅವುಗಳನ್ನು ಪಡೆದು ಅಲಂಕರಿಸಿಕೊಂಡ ಆ ಈರ್ವರೂ, ದೇವಾಧಿದೇವನ ಪ್ರಸಾದವನ್ನು ಪಡೆದನಂತರವೂ ಅಲ್ಲಿಯೇ ನಿಂತು ಕೊಂಡಿರುವುದನ್ನು ಕಂಡು ಸಂದೇಹಗೊಂಡ ಶ್ರೀವೇಂಕಟನಾಥನು, ''ಹೇ ಆನಂದಾಳ್ವಾನ್, ಯಾವುದೋ ವಿಷಯವನ್ನು ವಿಜ್ಞಾಪಿಸಲು ಇಷ್ಟಪಡುವವರಂತೆ ನಿಂತಿರುವಿರಲ್ಲಾ? ಹಾಗೇನಾದರೂ ಇದ್ದಲ್ಲಿ ಸಂಕೋಚಪಡದೆ ವಿಜ್ಞಾಪಿಸಿ'' ಎಂದು ಆಜ್ಞಾಪಿಸಲು, ಅದನ್ನು ಕೇಳಿದ ಶ್ರೀ ಆನಂದಾಳ್ವಾನ್, ''ಹೇ ದೇವಾ! ಈ ಲಘ್ವಾಚಾರ್ಯರು ಪ್ರಾಪಂಚಿಕ ಜೀವನದಲ್ಲಿ ಅತೀವ ಸಂಕಟವನ್ನು ಪಟ್ಟು ಮೋಕ್ಷವನ್ನು ಹೊಂದಲು ಪ್ರಪತ್ತಿಯನ್ನು ಮಾಡಿದವರಾಗಿ, ಭಗವದ್ರಾಮಾನುಜ ಮುನಿವರ್ಯರಿಂದ ನಿಯಮಿಸಲ್ಪಟ್ಟು, ಮೋಕ್ಷವನ್ನು ತಕ್ಷಣವೇ ದೇವಾಧಿದೇವನಾದ ತಮ್ಮಿಂದ ಪಡೆಯಲು ಬಂದಿರುತ್ತಾರೆ. ಆದುದರಿಂದ ಇವರಿಗೆ ಈ ಕ್ಷಣವೇ ಅದನ್ನು ತಾವು ಅನುಗ್ರಹಿಸಿ ಕೃಪೆತೋರಬೇಕು.

ತಾವು ಪರಮಕಾರುಣಿಕರು, ಆಶ್ರಿತ ವಾತ್ಸಲ್ಯೈಕ ಸಾಗರವು, ಸರ್ವಶಕ್ತಿ ಸಂಪನ್ನರು, ಸಕಲ ಕಲ್ಯಾಣ ಗುಣಗಳ ಸಾಗರವು ಅಲ್ಲವೇ? ಇದಕ್ಕಿಂತ ಹೆಚ್ಚೇನು ಬಿನ್ನವಿಸಲು ಸಾಧ್ಯ'' ಎಂದು ಹೇಳಲು, ಭಗವಂತನು ಅದನ್ನು ಕೇಳಿ, ''ಹೇ ಲಘ್ವಾಚಾರ್ಯರೇ, ನಿತ್ಯಸೂರಿಗಳ ರಾಜಧಾನಿಯಾದ ಪರಮಾಕಾಶವೆಂಬ ಪರಮಪದವನ್ನು ನಿಮಗೆ ಕೊಟ್ಟೆನು, ಪಡೆದುಕೊಳ್ಳಿ'' ಎಂದು ''ವಾನವರ್ ನಾಟ್ಟೈಯುಂ ನೀ ಕಂಡುಕೊಳ್ಳೆನ್ರು ವೀಡುಂ ತರುಂ'' ಎಂದು ನಮ್ಮಾಳ್ವಾರ್‌ರವರು ಸಹಸ್ರಗೀತೆ (೪-೮-೯)ಯಲ್ಲಿ ಹೇಳಿರುವಂತೆ- ''ದಿವಿಜರ ರಾಷ್ಟ್ರವನ್ನು ಕೂಡ ನೀವು ನೋಡಿ ವೈಕುಂಠವನ್ನು ಪಡೆಯಿರಿ'' ಎಂದು ಪಡೆಯಬಹುದಾದ ಫಲಗಳಿಗೆ ಎಲ್ಲೆಯಾದ ಪರಮಪದವನ್ನು ಲಘ್ವಾಚಾರ್ಯರಿಗೆ ಕರುಣಿಸಿದನು.

ಅದಾದನಂತರ, ಶ್ರೀಲಘ್ವಾಚಾರ್ಯರು ಶ್ರೀವೇಂಕಟನಾಥನ ಮಹೌದಾರ್ಯವನ್ನು ಕಂಡು, ಸಂತೋಷಗೊಂಡು, ''ಅನಂದಾಳ್ವಾನ್‌ರವರೇ, ಶ್ರೀ ವೇಂಕಟನಾಥನು ತನ್ನ ಸ್ವರೂಪವನ್ನು ಮರೆತು ನನ್ನ ಸ್ವರೂಪವನ್ನು ನೋಡಿದ್ದೇ ಆಗಿದ್ದರೆ, ಹಳೆಯ ನರಕಗಳು ಸಾಲದೆ, ಕೊಡುವುದಕ್ಕಾಗಿ ಹಲವು ನರಕಗಳನ್ನು ಸೃಷ್ಟಿ ಮಾಡಬೇಕಾಗಿ ಬರುತ್ತದೆ. ಅನಾದಿಯಾದ ನನ್ನ ಜನ್ಮ ಪರಂಪರೆಗಳಲ್ಲಿ ನಾನು ಮಾಡಿದ ಪಾಪಗಳು ಅಸಂಖ್ಯಾತವಾದುದರಿಂದ, ಸ್ವತಂತ್ರನಾದ ಆ ದೇವನು, ಆ ಪಾಪಗಳನ್ನು ವಿಮರ್ಶಿಸಿದ್ದೇ ಆಗಿದ್ದರೆ, ದಂಡಿಸುವುದು ಆತನಿಗೆ ತಡೆಯಲಾಗಲಾರದಲ್ಲವೇ? ನನ್ನ ಸ್ವರೂಪವನ್ನು ನೋಡದೆ ತನ್ನ ಸ್ವರೂಪವನ್ನು ನೋಡಿದ್ದೇ ಆಗಿದ್ದಲ್ಲಿ ಪರಮೌದಾರ್ಯನಾದ ಆತನಿಗೆ ಈಗಿರುವ ಪರಮಪದವು ಸಾಲದೆ ನನಗೆ ಕೊಡುವುದಕ್ಕೋಸ್ಕರ ಹೊಸದಾದ ಹಲವು ಪರಮಪದಗಳನ್ನು ಸೃಷ್ಟಿಸಬೇಕಾಗಿ ಬರುತ್ತಿತ್ತು, 'ಅಲಂ ಪುರಿಂದ ನೆಡುತ್ತಡಕ್ಕೈ' (ತಿರುನೆಡುಂದಾಂಡಕಂ-೬) ಎಂದು ತಿರುಮಂಗೈಯಾಳ್ವಾರ್ (ಕಲಿಯನ್) ಹಾಡಿರುವುದರಿಂದ ದೀರ್ಘವಾದ ದೊಡ್ಡ ಕೈಗಳಿರುವ ಗುಣ (=ಅತ್ಯಂತವಾದ ಔದಾರ್ಯಗುಣ) ಆ ದೇವನಲ್ಲಿರುವುದು ತಿಳಿಯಲ್ಪಡುತ್ತದೆಯಲ್ಲವೇ? ಹಾಗಲ್ಲವೆಂದರೆ ನಮ್ಮ ಪ್ರಾರ್ಥನೆಯು ಮುಕ್ತಾಯಗೊಳ್ಳುವುದರೊಳಗೇ 'ಸೋऽಧ್ವನಃ ಪರಮಾಪ್ನೋತಿ ತದ್ವಿಷ್ಣೋಃ ಪರಮಂ ಪದಂ' (ಕಠೋಪನಿಷತ್ತು ೧-೩-೯) ಎಂದು ಹೇಳಿದಂತೆ ಜೀವಾತ್ಮನು ಅಲೆದಾಡುವ, ಜನ್ಮ ಮರಣ ಪರಂಪರೆಯಾದ ಸಂಸಾರದ ಮಾರ್ಗಕ್ಕೇ ಎಲ್ಲೆಯ ದಡವಾದ, ಯಾರಿಗೂ ಸಿಗಲು ಅಸಾಧ್ಯವಾದ ಪರಮಪದವನ್ನು ನನಗೆ ಅವನು ಕೊಟ್ಟು ಕೃಪೆಮಾಡಿದುದು ಯಾವರೀತಿಯಲ್ಲಿ ಸರಿಯಾಗುತ್ತದೆ?'' ಎಂದು ಹೇಳಿ ಆಗಲೇ ಪರಮಪದವನ್ನು ಸೇರಿದರು.

ಆದರ ನಂತರ ಅನಂದಾಳ್ವಾನ್ ಅತ್ಯಂತ ಆಶ್ಚರ್ಯಹೊಂದಿದವರಾಗಿ- ''ಬ್ರಹ್ಮವನ್ನು ಇರುವಂತೆಯೇ ತಿಳಿದ ತಮ್ಮ ತಂದೆಯ ಕೊನೆಯಕಾಲದಲ್ಲಿ (ಮರಣ ಸಂದರ್ಭದಲ್ಲಿ) ಮಗನು ವೈಷ್ಣವರುಗಳನ್ನು ಮುಂದಿಟ್ಟುಕ್ಕೊಂಡು ಅವರಿಗೆ ಶ್ರೀ ಚೂರ್ಣ ಸಂಸ್ಕಾರವನ್ನು ಮಾಡಿಸಬೇಕು. ಮಹಾತ್ಮರುಗಳಾದ ಆಚಾರ್ಯರುಗಳ ಅಂತಿಮ ಕಾಲದಲ್ಲಿ ಅವರುಗಳ ದಿವ್ಯದೇಹವನ್ನು ಮಂತ್ರಗಳಿಂದ ಪರಿಶುದ್ಧ ಮಾಡಲ್ಪಟ್ಟ ಶ್ರೀಚೂರ್ಣ (ಕೆಂಪುನಾಮ) ದಿಂದ ಅಲಂಕಾರ ಮಾಡಬೇಕು. ಪುರುಷಸೂಕ್ತದಿಂದ ಅಭಿಷೇಕವನ್ನೂ, ಬ್ರಹ್ಮಮೇಧ ಸಂಸ್ಕಾರವನ್ನೂ ಮಾಡಬೇಕು. ಇವುಗಳನ್ನು ವಿಳಂಬವಿಲ್ಲದೆಯೇ ಹಿರಿಯರುಗಳು ಮರಣಹೊಂದಿದೊಡನೆಯೇ ಆಚರಿಸಬೇಕು'' ಎಂದು ಹೇಳಿರುವ ಶ್ರೀಸಂಹಿತೆಯ ವಚನದಂತೆಯೂ, ''ಶುದ್ಧಾತ್ಮರಾದ ಬ್ರಾಹ್ಮಣರುಗಳು, ಒಳ್ಳೆಯದನ್ನುಂಟುಮಾಡುವುದಾದ, ಅರ್ಚಿರಾದಿ ಮಾರ್ಗವೆಂದು ಹೇಳಲ್ಪಡುವ ಮೋಕ್ಷದ ದಾರಿಯಲ್ಲಿ ಜೀವಾತ್ಮನು ಹೋಗುವುದರ ಬಗ್ಗೆ ಚಿಂತನೆ ಮಾಡುವುದನ್ನು ಹೇಳುವ ಅಧ್ಯಾಯವನ್ನೂ, ಇತರ ಮುನಿವರ್ಯ (ಋಷಿ) ರುಗಳೂ, ಮನುಷ್ಯರುಗಳೂ ರಚಿಸಿದ ಭಗವಂತನನ್ನು ಕುರಿತ ಸ್ತೋತ್ರಗಳನ್ನೂ - ಪಿತೃಗಳ ಮರಣ ವೈಭೋಗದಲ್ಲಿ ಓದತಕ್ಕವರುಗಳು, ಸುಂದರವಾದ ಚಪ್ಪರವನ್ನು ಕಟ್ಟಿ, ಅಲ್ಲಿ ಒರಳಿನಲ್ಲಿ ಶುದ್ಧವಾದ ಅರಿಶಿನವನ್ನು ಸೇರಿಸಿ, ಭಗವಂತನ ದಾಸಿ (ದೇವದಾಸಿ) ಗಳಿಂದ ಒನಕೆಯಿಂದ ಕುಟ್ಟಿ ಪುಡಿಮಾಡಿಸಿ ಬುದ್ಧಿವಂತನಾದ ಮಗನು ಅದನ್ನು ಮಂತ್ರಗಳಿಂದ ಪರಿಶುದ್ಧಮಾಡ ತಕ್ಕವನು,'' ಎಂದಿರುವ ಬೇರೆ ಸಂಹಿತೆಗೆ ಸೇರಿದ ವಚನದಂತೆಯೂ, ಶ್ರೀ ಪಾಂಚರಾತ್ರ ಶಾಸ್ತ್ರದ ಉತ್ತರಖಂಡದಲ್ಲಿರುವುದಾಗಿ ಶೌನಕರಿಗೂ ಬ್ರಹ್ಮದೇವನಿಗೂ ಸಂವಾದ ರೂಪವಾದ ಮೂವತ್ತೊಂದನೆಯ ಅಧ್ಯಾಯದಲ್ಲಿ ''ಪೂಜಿಸಲ್ಪಡತಕ್ಕ ಬ್ರಹ್ಮದೇವನೇ, ಬ್ರಹ್ಮಮೇಧಿಗಳ (ಬ್ರಹ್ಮಜ್ಞಾನವಳ್ಳವರ) ಸಂಸ್ಕಾರವನ್ನು (ಪ್ರಾಣಹೋದನಂತರ ಆ ಶರೀರಕ್ಕೆ ಮಾಡುವ ಅಂತಿಮ ಸೇವೆ) ಕೇಳಲು ಇಚ್ಛಿಸುತ್ತೇನೆ. ಅದು ವೈಷ್ಣವರುಗಳಿಗೆ ಹೇಗೆ ವಿಧಿಸಲ್ಪಟ್ಟಿದೆಯೋ ಹಾಗೆ ನನಗೆ ಹೇಳುವವರಾಗಿ'' ಎಂದು ಪ್ರಾರಂಭದಲ್ಲಿ ಕೇಳಿದ ಶೌನಕರಿಗೆ, ''ಇಂಥಹ ಬ್ರಹ್ಮಮೇಧಿಗಳ ಸಂಸ್ಕಾರವನ್ನು ಯಾವ ವೈಷ್ಣವರುಗಳು ತಮ್ಮ ತಂದೆಯವರುಗಳಿಗೂ, ಆಚಾರ್ಯರುಗಳಿಗೂ, ಇತರ ಹಿರಿಯರುಗಳಿಗೂ ಈ ಲೋಕದಲ್ಲಿ ಮಾಡುತ್ತಾರೆಯೋ ಅವರುಗಳೆಲ್ಲರೂ ಪಾಪಗಳ ನಾಶವನ್ನು ಹೊಂದಿ ಪರಮಪದವನ್ನು ಸೇರುತ್ತಾರೆ.'' ಎಂದು ಬ್ರಹ್ಮದೇವನು ಹೇಳಿರುವಂತೆಯೂ, ಆ ಲಕ್ಷ್ವಾಚಾರ್ಯರಿಗೆ ಸ್ವಲ್ಪವೂ ವಿಳಂಬ ಮಾಡದಂತೆ, ಶ್ರೀಚೂರ್ಣ ಪರಿಪಾಲನವನ್ನು ಮಾಡಿ, ಬ್ರಹ್ಮರಥದಲ್ಲಿ ಅವರನ್ನು ಬಿಜಯಗೈದಿಸಿ, ಬ್ರಹ್ಮಮೇಧ ಸಂಸ್ಕಾರ ಮೊದಲಾದ ಚರಮ (ಅಂತಿಮ) ಕೈಂಕರ್ಯಗಳನ್ನು ತಾವೇ ಅತ್ಯಂತ ಆದರದಿಂದ ಮಾಡಿ ಮುಗಿಸಿದರು. ಹೀಗೆಯೇ ವಳರ್ತಾನ್ ಮಂಗಳ

(ವರ್ಧಿತ ಸನ್ನಂಗಳ)ವುಳ್ಳ ಶ್ರೀ ವೈಷ್ಣವರುಗಳಿಗೂ, ಹುಲಿಯೊಂದಕ್ಕೂ ಅನಂದಾಳ್ವಾನ್‌ರು ಮೋಕ್ಷವನ್ನು ಕೊಡಿಸಿದ ವೃತ್ತಾಂತಗಳೇ ಮುಂತಾದವುಗಳು ಜ್ಞಾಪಿಸಿಕೊಳ್ಳತಕ್ಕವುಗಳು.

ಈ ರೀತಿ ಭಗವದ್ರಾಮಾನುಜ ಮುನಿಗಳ ನಿರತಿಶಯ ಕೃಪಾಕಟಾಕ್ಷಕ್ಕೆ ಪಾತ್ರರಾದವರೂ, ಅದೇಕಾರಣಕ್ಕಾಗಿ ಶ್ರೀವೇಂಕಟನಾಥನ ಅಪಾರವಾದ ಕರುಣಾಸಾಗರದಲ್ಲಿ ನೀರಿನ ಮನುಷ್ಯರಂತೆ (ನೀರಿನಲ್ಲೇ ವಾಸಿಸುವ ಮಾನವರಂತೆ) ನಿರಂತರವಾಗಿ ವಾಸಿಸುವ ಅನಂದಾಳ್ವಾನ್‌ರವರ, ಅತ್ಯಂತ ಆಶ್ಚರ್ಯವನ್ನುಂಟುಮಾಡುವುದಾದ ಶ್ರೀವೇಂಕಟನಾಥನ ಕಟಾಕ್ಷ ವಿಶೇಷದಿಂದ ಕಾಣಬರುವ ಇತರ ಚರಿತ್ರೆಗಳನ್ನು ಇತರ ಗ್ರಂಥಗಳಿಂದ ಅರಿಯತಕ್ಕದ್ದು.

ಅನಂದಾಳ್ವಾನ್‌ರವರ ಗುಣ, ವೈಭವ ಮುಂತಾದವುಗಳ ಬಗ್ಗೆ ಹಿರಿಯರುಗಳೂ ಕೆಲವು ಶ್ಲೋಕಗಳನ್ನು, ಅವರನ್ನು ಸೇರಿದ (ಸಂಬಂಧಿಗಳು)ವರಿಂದ ಅನುಸಂಧಾನ ಮಾಡುವುದಾಕ್ಕಾಗಿ ರಚಿಸಿದರು.

**ಅವುಗಳ ಅರ್ಥವೇನೆಂದರೆ (ಸಾರಾಂಶ)–**

೧) ವೇದವಾಕ್ಯಗಳಿಗೂ ಸಿಲುಕದ ಹಿರಿಮೆಯನ್ನುಳ್ಳವನಾಗಿ ಶ್ರೀವೇಂಕಟಗಿರಿಯಾದ ದಿವ್ಯದೇಶದಲ್ಲಿ ವಾಸಿಸುವ ದೇವಾಧಿದೇವನು ಹಿಂಬಾಲಿಸಿ ಬಂದು ಯಾವೊಬ್ಬನಿಗೆ ತನ್ನ ಮಾಲೆಯನ್ನು ಹಾಕಿ ಅಲಂಕರಿಸಿದನೋ ಅಂಥಹ ಶ್ರೇಷ್ಠರಾದ ಅನನ್ತಾಚಾರ್ಯರನ್ನು (ಅನಂದಾಳ್ವಾನ್‌ರನ್ನು) ವಂದಿಸುತ್ತೇನೆ.

೨) ಯತಿರಾಜರಾದ ರಾಮಾನುಜರ ಚರಣಾಂಬುಜದ್ವಯಗಳಲ್ಲಿ ಭ್ರಮರದಂಥಹವರೂ, ಶ್ರೀಮದ್ದಯಾಪಾಲಮುನಿಯ ದಯೆಗೆ (ಕೃಪೆಗೆ) ಮುಖ್ಯಪಾತ್ರರಾದವರೂ, ಶ್ರೀವೇಂಕಟನಾಥನ ಶ್ರೀಚರಣಗಳಲ್ಲಿ ಅತ್ಯಂತ ಪ್ರೀತಿಯನ್ನಿಟ್ಟವರೂ ಆದ ಶ್ರೀ ಅನಂತಾರ್ಯರನ್ನು (ಅನಂದಾಳ್ವಾನ್‌ರನ್ನು) ಸತತವಾಗಿ ಹಲವುಬಾರಿ ವಂದಿಸುತ್ತೇನೆ.

೩) ತಮ್ಮ ಪತ್ನಿಯ ಸಹಾಯವನ್ನು ಕೊಂಡು ಹಿರಿದಾದ ಕೆರೆಯೊಂದನ್ನು ನಿರ್ಮಾಣಿಸುವಾಗ, ಬ್ರಹ್ಮಚಾರಿ ವೇಷಧರಿಸಿದ ಶ್ರೀವೇಂಕಟನಾಥನು ಬಂದು ಮಣ್ಣಿನ ಭಾರವನ್ನು ಹೊರುವಂತೆ ಆದ ಹಿರಿಮೆಯನ್ನುಳ್ಳವರೂ, ಆ ದೇವನು ಧರಿಸಿದನಂತರ ಕಳೆದುಕೊಟ್ಟ ಸುಂದರವಾದ ಸುವಾಸನೆಯುಳ್ಳ ಮಾಲೆಯಿಂದ ಸುವಾಸನೆ ಸೂಸುವ ದಿವ್ಯಕಂಠ (ಕುತ್ತಿಗೆ)ವನ್ನು ಪಡೆದವರೂ ಆದ ಶ್ರೀ ಅನಂತಾರ್ಯ (ಅನಂದಾಳ್ವಾನ್)ರನ್ನು ಶರಣು ಹೊಂದುತ್ತೇನೆ.

೪) ತಮ್ಮ ತೋಟದಲ್ಲಿ ಆಗತಾನೆ ಅರಳಿ, ಅಮೋಘವಾಗಿ ಪರಿಮಳವನ್ನು ಸೂಸುವ ಪುಷ್ಪಗಳಿಂದ, ಯಾವ ಫಲಾಪೇಕ್ಷೆಯನ್ನೂ ಆಶಿಸದೆ, ಕೈಂಕರ್ಯ

(ಸೇವೆ) ಮಾಡಿ ಶ್ರೀವೇಂಕಟನಾಥನನ್ನು ಸಂತೋಷಿಸುವಂತೆ ಮಾಡುವ ಅನಂತಾರ್ಯರು (ಅನಂದಾಳ್ವಾನ್) (ದಾಸನು ಧ್ಯಾನಮಾಡುವಂತೆ) ಮನಸ್ಸಿನಲ್ಲಿ ಯಾವಾಗಲೂ ಕಾಣಬರಲಿ, ಎಂಬುದೇ ಆಗುತ್ತದೆ.

ಈ ಅನಂದಾಳ್ವಾನ್‌ರವರು ಭಗದ್ರಾಮಾನುಜರ ಶ್ರೀಪಾದ ಕಮಲಗಳಲ್ಲಿ ಅತಿಶಯ ಭಕ್ತಿಹೊಂದಿದ ಮನಸ್ಸನ್ನುಳ್ಳವರಾಗಿ, ಅವರು ಇತರ ಮತೀಯರನ್ನು ವಾದದಲ್ಲಿ ಗೆದ್ದು ವಿಜಯಯಾತ್ರೆಯನ್ನು ಮಾಡಿದಾಗ ಓದತಕ್ಕ ಬಿರುದುಗಳನ್ನು ಹೇಳುವ ಐದು ಶ್ಲೋಕಗಳುಳ್ಳ ಗ್ರಂಥವನ್ನೂ, ಅವರಿಗೆ ಮಂಗಳವನ್ನುಂಟುಮಾಡುವ, ನಿತ್ಯವೂ ಅನುಸಂಧಾನ ಮಾಡತಕ್ಕ ಹತ್ತು ಶ್ಲೋಕಗಳುಳ್ಳ ಒಂದು ಗ್ರಂಥವನ್ನೂ, ನಮ್ಮಾಳ್ವಾರ್ (ಶ್ರೀಶಠಕೋಪಸೂರಿ) ರವರು ರಚಿಸಿದ (ತಿರುವಾಯ್ಮೊಳಿ) ಸಹಸ್ರಗೀತೆಯನ್ನು ಪಠಿಸುವುದಕ್ಕೆ ಮುಂಚೆ, ಧ್ಯಾನಶ್ಲೋಕವಾಗಿ ಓದತಕ್ಕ ಮಂತ್ರವಾದ (ಐಯ್‌ನ್ದಕೀರ್ತಿ - ಎಂದು ಪ್ರಾರಂಭಿಸುವ) ಒಂದು ತಮಿಳು ಪದ್ಯವನ್ನೂ ರಚಿಸಿದರು.

ಇವರ ಕುಮಾರರು ರಾಮಾನುಜರೆಂಬ ಹೆಸರನ್ನು ಹೊಂದಿ ಇವರಂತೆಯೇ ಸೇವೆಮಾಡುವುದರಲ್ಲಿ ಅತಿ ಮಾತ್ರ ಪ್ರವಣರಾಗಿದ್ದು ತಮ್ಮ ತಂದೆಯಿಂದ ಶ್ರೀವೇಂಕಟನಾಥನ ದೇವಸ್ಥಾನಕ್ಕೆ ನೈರುತ್ಯ ದಿಕ್ಕಿನಲ್ಲಿ ನಿರ್ಮಿಸಲ್ಪಟ್ಟು ಅವರ ಆಚಾರ್ಯರಾದ ಶ್ರೀರಾಮಾನುಜರ ದಿವ್ಯನಾಮದಿಂದ ಹೆಸರಿಡಲ್ಪಟ್ಟ ತೋಟ, ಕೆರೆ ಮುಂತಾದವುಗಳನ್ನು ಕಂಡು ತಾವೂ ಸಹ ಅದರ ಈಶಾನ್ಯದಿಕ್ಕಿನಲ್ಲಿ ತಮ್ಮ ಆಚಾರ್ಯರಾದ ಅನಂದಾಳ್ವಾನ್‌ರ ಹೆಸರಿನಿಂದ ತೋಟ, ಕೆರೆ ಮುಂತಾವುಗಳನ್ನು ನಿರ್ಮಿಸಿ ತಮ್ಮ ತಂದೆಯವರೊಂದಿಗೆ ಕೂಡಿಯೇ ಪ್ರತಿ ನಿತ್ಯವೂ ಹಲವು ಬಗೆಯ ಸೇವೆಗಳನ್ನು ಮಾಡಿಕೊಂಡು ಶ್ರೀವೇಂಕಟನಾಥನನ್ನು ಅತ್ಯಂತವಾಗಿ ಸಂತೋಷಗೊಳ್ಳುವಂತೆ ಮಾಡುತ್ತಿದ್ದರು.

ಈ ರೀತಿ ಅನಂದಾಳ್ವಾನ್‌ರವರು ಹಲವು ಬಗೆಯಾದ ಭಗವತ್ಕೈಂಕರ್ಯಗಳನ್ನು ಮಾಡಿಕೊಂಡು, ಹಲವು ವಿಧವಾದ ವೈಷ್ಣವಾಚಾರಗಳನ್ನು ಮೇಲಿಂದ ಮೇಲೆ ಅಭಿವೃದ್ಧಿಗೊಳಿಸುತ್ತಾ ಆ ಕ್ಷೇತ್ರದಲ್ಲಿ ವಾಸಿಸುತ್ತಿದ್ದರು.

ಅನಂತಾರ್ಯರು ರಚಿಸಿದ ಶ್ರೀವೇಂಕಟಾಚಲ ಇತಿಹಾಸ ಮಾಲೆಯಲ್ಲಿ ಆರನೆಯ (ಸ್ತಬಕ) ಪುಷ್ಪಗುಚ್ಛವು ಸಮಾಪ್ತವು.

ಶ್ರೀಮತೇ ರಾಮಾನುಜಾಯ ನಮಃ



# ಏಳನೆಯ (ಸ್ತಬಕ) ಪುಷ್ಪಗುಚ್ಛವು.

ಇನ್ನು ಶ್ರೀ ವೇಂಕಟಾಚಲ ಮಾಹಾತ್ಮ್ಯೆಯನ್ನು ಪರಿಶೀಲನೆ ಮಾಡಿದುದರ ಮೂಲಕ ಶ್ರೀರಾಮಾನುಜ ಮುನಿವರ್ಯರು ಆ ಗಿರಿಗಾಗಿಯೇ ಏರ್ಪಾಡಾದ ಕೆಲವು ಧರ್ಮಗಳನ್ನು ಅನುಷ್ಠಿಸತಕ್ಕವುಗಳಾಗಿ ನಿಯಮಿಸಿದುದರ ಚರಿತ್ರೆಯು ಹೇಳಲ್ಪಡುತ್ತದೆ.

## ಶ್ರೀವೇಂಕಟಗಿರಿಯ ವೈಭವ

ಭಗವದ್ರಾಮಾನುಜ ಮುನಿವರ್ಯರು ಶ್ರೀವೇಂಕಟಗಿರಿ ಮಹಾತ್ಮ್ಯೆಯನ್ನು ಹೇಳುವ ಪುರಾಣ ಭಾಗವನ್ನು ಸಂಪೂರ್ಣವಾಗಿ, ವಿಶದವಾಗಿ ಪರಿಶೀಲನೆ ಮಾಡಲಾದರು.

''ಶ್ರೀವೇಂಕಟವೆಂದು ಹೆಸರುವಾಸಿಯಾದ ಶ್ರೀಮಹಾವಿಷ್ಣುವಿನ ಕ್ರೀಡಾಚಲವು ವೈಕುಂಠಲೋಕದಿಂದ ತೆಗೆದುಕೊಂಡು ಬಂದು ಭಗವಂತನು ವಾಸಿಸುವುದಕ್ಕಾಗಿ ಸುವರ್ಣಮುಖೀ ನದಿಯ ಸಮೀಪದಲ್ಲಿ ಗರುತ್ಮಂತನಿಂದ ಇಡಲ್ಪಟ್ಟಿತು,'' ಎಂದು ಮಾರ್ಕಂಡೇಯ ಪುರಾಣದ ಎರಡನೆಯ ಅಧ್ಯಾಯದಲ್ಲಿರುವ ವಚನದಿಂದಲೂ, ''ತಿರು (ಶ್ರೀದೇವಿ)ವಿನ ಪತಿಯಾದ ಭೂವರಾಹದೇವನು ಲೋಕದ ಜನರಿಗೆಲ್ಲಾ ಕೃಪೆಮಾಡುವುದಕ್ಕಾಗಿ ಆಸೆಗೊಂಡು ಭೂಮಿಯಲ್ಲಿ ತಾವು ವಾಸಿಸತಕ್ಕ ಒಳ್ಳೆಯ ಪ್ರದೇಶವನ್ನು ಪರಿಶೀಲಿಸಿ, ನಿಶ್ಚಯಿಸಿ - ''ಮಹಾಬಲಶಾಲಿಯಾದ ಗರುಡನೇ, ನೀನು ಅತ್ಯಂತ ವೇಗವಾಗಿ ಪರಮಪದಕ್ಕೆ ಹೋಗಿ ಕ್ರೀಡಾಚಲವನ್ನು ಇಲ್ಲಿಗೆ ತೆಗೆದುಕೊಂಡು ಬಾ'' - ಎಂದು ಹೇಳಿ ಗರುಡನನ್ನು ಕಳುಹಿಸಿದರು'' ಎಂದೂ, 'ಗರುಡನೂ ಪರಮಪದಕ್ಕೆ ಹೋಗಿ ದಿವ್ಯವಾದ, ಅಪ್ರಾಕೃತವಾದ, ಅಪ್ರಮೇಯವಾದ, ಸರ್ವರತ್ನಗಳಿಂದ ಕೂಡಿದ, ಸುವರ್ಣಮಯವಾದ, ಮಹಾನ್ ಶೃಂಗಗಳನ್ನು ಹೊಂದಿದ, ಪಂಚೋಪನಿಷದಾತ್ಮಕವಾದ (ಪರಮಪದದಲ್ಲಿನ ಪಂಚಭೂತಗಳಿಂದಾದ)

ಗಿರಿಯನ್ನು ಕಂಡನು' ಎಂದೂ, ಆ ರೀತಿ ಕಂಡ ಸುವರ್ಣಕಾಂತಿಯ ಗರುಡನು, ನಾರಾಯಣ ಗಿರಿಯೆಂದು ಹೆಸರುವಾಸಿಯಾದುದೂ, ಶ್ರೀವೈಕುಂಠನಾಥನು ಕ್ರೀಡಿಸುವ ಗಿರಿಯಾದುದೂ, ಮೂರು ಯೋಜನೆಗಳ ಅಗಲ ಮೂವತ್ತು ಯೋಜನೆಗಳ ಉದ್ದವನ್ನು ಕೊಂಡುದುದೂ (ಒಂದು ಯೋಜನೆ ಎಂದರೆ ಸುಮಾರು ಎಂಟು ಮೈಲಿಗಳು ಅಥವಾ ಹದಿಮೂರು ಕಿಲೋಮೀಟರ್ ದೂರ) ಆದಿಶೇಷನ ರೂಪವನ್ನು ಹೊಂದಿರುವುದೂ, ಶ್ರೀಹರಿಯನ್ನು ಸಂತೋಷಗೊಳಿಸುವ ಪ್ರದೇಶವಾದುದರಿಂದ ಎಲ್ಲರಿಂದಲೂ ನಮಸ್ಕರಿಸಲ್ಪಡತಕ್ಕದ್ದೂ, ಅತ್ಯಂತ ಸುಂದರ ರೂಪವನ್ನು ಹೊಂದಿರುವುದೂ, ಅತ್ಯಂತ ಪುನೀತವಾದುದೂ, ನೋಡುವವರಿಗೆ ಮೋಕ್ಷಪ್ರದವಾದುದೂ, ಭಗವಂತನಿಗೆ ಸೇವೆಮಾಡುವ ಪರಿವಾರಗಳೊಡನೆ ಕೂಡಿದುದೂ, ಆದ ಇಂಥಹ ಗಿರಿಯನ್ನು ತನ್ನ ತೋಳಲ್ಲಿಟ್ಟುಕೊಂಡು ಅತ್ಯಂತ ವೇಗವಾಗಿ ಹಿಂದಿರುಗಿ ಬಂದನು' - ಎಂದು ಇರುವ ವರಾಹಪುರಾಣದ ಮುಂಚಿನಭಾಗದಲ್ಲಿ ಎರಡನೆಯ ಅಧ್ಯಾಯದಲ್ಲಿನ - ೩೪ ಎಂಬ ಸಂಖ್ಯೆಯಿಂದ ಸೂಚಿಸಲ್ಪಟ್ಟ ವಚನಗಳಿಂದಲೂ, ಅದರಲ್ಲಿಯೇ ನಾಲ್ಕನೆಯ ಅಧ್ಯಾಯದಲ್ಲ ೩೭ ಎಂಬ ಸಂಖ್ಯೆಯಿಂದ ಸೂಚಿಸಲ್ಪಟ್ಟು, "ವೈಕುಂಠದಿಂದ ಬಂದುದರಿಂದ ವೈಕುಂಠಾದ್ರಿ ಎಂದು ಹೇಳಲ್ಪಟ್ಟಿತು" ಎಂಬ ವಚನದಿಂದಲೂ, ಶ್ರೀ ವೈಕುಂಠದಲ್ಲಿರುವ ಪಂಚೋಪನಿಷತ್ಸ್ವರೂಪವಾಗಿ ದಿವ್ಯವಾದ, ಭಗವಂತನ ಕ್ರೀಡೆಗಾಗಿಯೇ ಆದ ಬೆಟ್ಟವಾಗಿ ಮಹಾನ್ ಪ್ರಸಿದ್ಧಿಯನ್ನು ಈ ಶ್ರೀಗಿರಿಯು ಹೊಂದಿದೆ.

ಅದೇ ಅಧ್ಯಾಯದಲ್ಲಿ, "ಈ ಬೆಟ್ಟವು ಒಂದು ಸಮಯದಲ್ಲಿ ಸ್ವರ್ಗವಾಸಿಗಳಾದ ದೇವತೆಗಳಿಗೆ ಶ್ರೀನಿವಾಸನಂತೆ ದರ್ಶನ ನೀಡಿತು. ಆದುದರಿಂದ ಅವರುಗಳು ಇದನ್ನು 'ಶ್ರೀನಿವಾಸಗಿರಿ' ಎಂದು ಪ್ರಸಿದ್ಧಪಡಿಸಿ ಹೇಳುತ್ತಾರೆ," ಎಂದಿರುವ ವಚನದಿಂದ ಶ್ರೀಮಹಾವಿಷ್ಣುವಿನ ಸುಂದರ ರೂಪವಾಗಿಯೂ ದೇವತೆಗಳಿಗೆ ಕಂಡು ಬಂದಿರುವುದಾಗಿ ಪ್ರಸಿದ್ಧಿಯನ್ನು ಈ ಪರ್ವತವು ಹೊಂದಿದೆ.

ಬ್ರಹ್ಮಾಂಡ ಪುರಾಣದ ಎರಡನೆಯ ಅಧ್ಯಾಯದಲ್ಲಿ "ಆನಂದದಿಂದ ಅರಳಿದ ದಿವ್ಯ ಚಕ್ಷುಸ್ಸುಗಳುಳ್ಳ ಭಗವಂತನು. ತನ್ನ ಮುಂದೆ ನಿಂತಿರುವ ಆದಿಶೇಷನನ್ನು ಬಳಿಗೆ ಕರೆದು ಮೇಘ ಘರ್ಜನೆಯಂತಿರುವ ಗಂಭೀರವಾದ ವಾಣಿಯಿಂದ - ಎಲೈ ದೋಷರಹಿತನಾದ ಅನಂತನೇ, ನನಗೆ ಪ್ರಿಯನಾದವನು ಈ ಪ್ರಪಂಚದಲ್ಲಿ ನಿನ್ನನ್ನು ಬಿಟ್ಟರೆ ಬೇರೊಬ್ಬರೂ ಇಲ್ಲ, ಆದುದರಿಂದ ನನಗೆ ಪ್ರಿಯವಾದುದೊಂದು ಕೆಲಸವನ್ನು ನೀನು ಮಾಡಬೇಕು. ನಾರದ ಮುನಿಗಳು ಹೇಳಿದುದೆಲ್ಲವನ್ನೂ ಕೇಳಿದೆಯಲ್ಲವೇ? ಕ್ರೀಡಿಸುವುದಕ್ಕೆ ತಕ್ಕದೊಂದು ಜಾಗದಲ್ಲಿ ವಾಸಿಸಬೇಕೆಂಬುದು ನನ್ನ (ಇಚ್ಛೆ) ಮನಸ್ಸು, ಭೂಲೋಕದಲ್ಲಿ ನೀನು ಒಂದು

ಉನ್ನತವಾದ ಪರ್ವತದ ಆಕಾರವನ್ನು ಹೊಂದಿ ಇರುವವನಾಗು. ನಿನ್ನ ಹೆಡೆಗಳ ಕೆಳಗೆ ಶ್ರೀದೇವಿಯೊಂದೊಡಗೂಡಿ ವಾಸಿಸುತ್ತೇನೆ - ಎಂದು ಹೇಳಲು, ಅದಕ್ಕೆ ಆದಿಶೇಷನು – ದೇವಾಧಿದೇವನೇ, ಅನಂತನಾದ ದಾಸನು (ನಾನು) ಪರ್ವತರೂಪವನ್ನು ತಾಳಿ ನಿಲ್ಲುತ್ತೇನೆ. ಅದರ ತಪ್ಪಲಲ್ಲಿ ತಾವು ಶ್ರೀದೇವಿಯಿಂದೊಡಗೂಡಿ ಆನಂದದಿಂದ ಇರುವವರಾಗಿ - ಎಂದು ಹೇಳಿರುವುದಾಗಿರುವ ವಚನದಿಂದ ಈ ಪರ್ವತವು ಆದಿಶೇಷರೂಪವಾಗಿ ತಿಳಿಯಲ್ಪಡುತ್ತದೆ.

ಈ ಅಧ್ಯಾಯದ ಮುಕ್ತಾಯದಲ್ಲಿಯೇ,- ಅಗಸ್ತ್ಯರೇ ಮುಂತಾದ ಋಷಿಗಳು, ತಾವು ಮಾಡುವ ತಪಸ್ಸುಗಳು ಫಲಿಸಬೇಕೆಂಬ ಆಸೆಯಿಂದ ಆ ಪರ್ವತದಲ್ಲಿ ಹರಿಯುತ್ತಿರುವ ನದಿಗಳಲ್ಲಿ ಸ್ನಾನಮಾಡಿ ದೀರ್ಘಕಾಲ ತಪಸ್ಸನ್ನಾಚರಿಸಿದರು. ಆ ಪರ್ವತವು ಶ್ರೀಮಹಾವಿಷ್ಣುವಿನ ಮತ್ತೊಂದು ದೇಹವಾದುದರಿಂದ ಅವರುಗಳು ಅದನ್ನು ಕಾಲಿನಿಂದ ತುಳಿಯಲಿಲ್ಲ. ನಾರಾಯಣನ ಅಂಶವಾಗಿ ಉದಯಿಸಿದ ಆದಿಶೇಷನಾದ ಸರ್ಪರಾಜನು ಪರ್ವತರೂಪವನ್ನು ಪಡೆದಿರುತ್ತಾನೆ - ಎಂದಿರುವುದರಿಂದ ಆದಿಶೇಷನ ದಿವ್ಯದೇಹವಾಗಿಯೂ, ಭಗವಂತನ ದಿವ್ಯದೇಹವಾಗಿಯೂ ಈ ಪರ್ವತವು ತಿಳಿಯಲ್ಪಡುತ್ತದೆ.

ವಾಮನ ಪುರಾಣದ ಎರಡನೆಯ ಅಧ್ಯಾಯದಲ್ಲಿನ ೨೧ ಎಂಬ ಸಂಖ್ಯೆಯಿಂದ ಸೂಚಿಸಲ್ಪಟ್ಟ ವಚನದಲ್ಲಿ - ಶುಕರೇ ಮೊದಲಾದ ಕೆಲವು ಋಷಿಗಳೂ, ಭೃಗು ಮುಂತಾದ ತಪೋಧನರುಗಳೂ, ಪ್ರಹ್ಲಾದನೇ ಮೊದಲಾದ ಪುಣ್ಯಪುರುಷರುಗಳೂ, ಅಂಬರೀಷಾದಿ ರಾಜರುಗಳೂ. ಶ್ರೇಷ್ಠವಾದ ಆ ಪರ್ವತವನ್ನು ವಿಷ್ಣುವಿನ ಬೇರೊಂದು ದೇಹವಾಗಿಯೇ ತಿಳಿದು ಅದನ್ನು ಕಾಲಿನಿಂದ ತುಳಿಯಲು ಅಂಜಿ ಅದರ ಪಕ್ಕಗಳಲ್ಲಿಯೇ ಇದ್ದು, ಆ ಬೆಟ್ಟದಿಂದ ಹೊರಡುವ ನದಿಗಳಲ್ಲಿಯೇ ಸ್ನಾನ ತರ್ಪಣಾದಿಗಳನ್ನು ಮಾಡಿಕೊಂಡು ಜನಾರ್ಧನನಾದ ಶ್ರೀ(ಮಹಾ)ವಿಷ್ಣುವನ್ನು ಪ್ರತ್ಯಕ್ಷವಾಗಿ ಕಾಣಲು ಇಚ್ಛಿಸಿ ತಪಸ್ಸನ್ನು ಮಾಡಿದರು - ಎಂಬಿರುವ ವಚನಗಳಿಂದಲೂ, ತತ್ವಜ್ಞರುಗಳಲ್ಲಿ ಉತ್ತಮರಾದ ಶುಕಾದಿ ಪರಮ ಋಷಿಗಳು, ಪ್ರಹ್ಲಾದಾದಿಪರಮ ಭಾಗವತರುಗಳು, ಅಂಬರೀಷಾದಿ ರಾಜರ್ಷಿಗಳೂ ಮುಂತಾದವರುಗಳಿಂದ ಶ್ರೀವಿಷ್ಣುವಿನ ದಿವ್ಯದೇಹವೆಂಬ ಅಭಿಪ್ರಾಯಗೊಂಡು ತಮ್ಮಗಳ ಭೂತದೇಹ (ಪಂಚಭೂತಗಳಿಂದಾದ ದೇಹ)ಗಳಿಂದಲೂ ಪಾದಗಳಿಂದಲೂ ತುಳಿಯುವುದಕ್ಕೆ ಸಂಕೋಚಪಟ್ಟು, ಅದರ (ಬೆಟ್ಟ) ತಪ್ಪಲಲ್ಲಿಯೇ ತಪಸ್ಸುಮಾಡುತ್ತಿದ್ದರೆಂಬುದರ ಮೂಲಕ ಶ್ರೀಮನ್ನಾರಾಯಣನ ದಿವ್ಯದೇಹವೆಂದು ಹೇಳಲ್ಪಟ್ಟುದಾಗಿ ಈ ಪರ್ವತವು ಅರಿಯಲ್ಪಡುತ್ತದೆ.

ಅಜ್ಞಾನವೆಂಬುದು ಸಂಪೂರ್ಣವಾಗಿ ವಿನಾಶಹೊಂದಿದ (ಸ್ವಲ್ಪವೂ ಇ ಆಳ್ವಾರುಗಳೂ (ದಿವ್ಯಸೂರಿಗಳೂ) ತಮ್ಮ ಭೌತಿಕ ದೇಹದಿಂದ ಪಾದಗಳಿಂದಲೂ ಶ್ರೀ ವೇಂಕಟಗಿರಿಯನ್ನು ಸ್ಪರ್ಶ ಮಾಡಬಾರದೆಂ ಅಭಿಪ್ರಾಯಪಟ್ಟು ಬೆಟ್ಟದ ಕೆಳಭಾಗದಲ್ಲಿಯೇ ಇದ್ದು ಭಗವಂತನಿಗೆ ಮಂಗಳಾಶಾ ಮಾಡಿದುದಾಗಿ ಹೇಳಲ್ಪಡುತ್ತದೆ.

ತಿರುವೇಂಕಟಗಿರಿಯು ಮೇರುಪರ್ವತದ ಮಗನೆಂದೂ, ಆದಿಶೇಷನಿ ವಾಯುದೇವನಿಗೂ ನಡೆದ ಸಂವಾದ (ವಾಗ್ಯುದ್ಧ)ದ ಕಾರಣವಾಗಿ ಅಲುಗಾ ತಳ್ಳಲ್ಪಟ್ಟದೆಂದೂ ಇರುವ ಒಂದು ಮಾತು ಮತ್ತೊಂದು ಕಲ್ಪವನ್ನು ಕುರಿತುದು ಹಾಗಿದ್ದರೂ ರಾಮಚಂದ್ರ, ಶ್ರೀಕೃಷ್ಣ ಮುಂತಾದವರಿಗೆ ದಶರಥ ಮತ್ತು ವಸುದೆ ಮುಂತಾದವರುಗಳ ಮಕ್ಕಳುಗಳಾಗಿದ್ದುದರೊಂದಿಗೆ ತಮಗೇ ಏರ್ಪ ದಿವ್ಯರೂಪವನ್ನು ಹೊಂದಿದ ಭಗವಂತನ ಅವತಾರವಾಗಿದ್ದುದ ಸರಿಹೊಂದುವಂತೆ, ಮೇರುಪರ್ವತಕ್ಕೆ ಶ್ರೀವೈಕುಂಠದಲ್ಲಿರುವ (ಕ್ರೀಡಾಗಿ ವಿಹಾರ ಪರ್ವತದ ಅವತಾರವಾಗಿರುವ ಗುಣವೂ, ಆದೀಶೇಷನೂ, ಭಗವಂತನ ಆವೇಶಿಸಿರುವುದರ ಕಾರಣದಿಂದ ಅವರುಗಳ ದಿವ್ಯ ದೇಹವಾಗುವ ಗುಣ ಸಮಂಜಸವಾಗುವುದರಲ್ಲಿ ಯಾವ ತಡೆಯೂ ಇರುವುದಿಲ್ಲ, ಗರುತ್ಮಂತನಿಂ ವೈಕುಂಠದಿಂದ ನೇರವಾಗಿ ತೆಗೆದುಕೊಂಡು ಬರುವುದೂ, ಮೇರುವಿನ ಮಗನ ಅವತರಿಸಿ ಆದಿಶೇಷ ವಾಯುದೇವ ಸಂವಾದದಿಂದ ತೆಗೆದುಕೊಂಡು ಬರುವುದ ಆದ ಇಷ್ಟೇ ವ್ಯತ್ಯಾಸವು ಬೇರೆ ಬೇರೆ ಕಲ್ಪಗಳ ಕಾರಣದಿಂದ ಉಂಟಾಯಿತ ಆದುದರಿಂದಲೇ ಎಲ್ಲಾ ಲೋಕದವರಿಂದಲೂ ನಮಸ್ಕರಿಸಲ್ಪ ವೇಂಕಟಾದ್ರಿಯೆಂದು ಪ್ರಸಿದ್ಧವಾದ ಬೆಟ್ಟವು - ಎಲ್ಲಾ ದೇವತೆಗಳಿಂದಲ ನಮಸ್ಕರಿಸಲ್ಪಟ್ಟು ಅತ್ಯಂತ ಪುನೀತವಾದ ಮೇರು ಪರ್ವತದ, ಮಗನಾಗುತ್ತದೆ ಎಂದೂ, "ವೇಗವುಳ್ಳ ಗರುತ್ವಂತನಿಂದ ವೈಕುಂಠಲೋಕದಿಂದ ತರಲ್ಪಟ್ಟ ವಿಷ್ಣುವಿ ಶ್ರೇಷ್ಠವಾದ ಕ್ರೀಡಾವಿಹಾರ ಪರ್ವತವು, ದೇವತೆಗಳು, ಋಷಿಗಳು ಮುಂತಾದವರಿಂ ಪೂಜಿಸಲ್ಪಟ್ಟು ಸ್ವರ್ಣಮುಖೀ ನದಿಯ ಪುಣ್ಯವಾದ ತೀರದಲ್ಲಿ ಇದೆ," ಎಂದೂ ವೇಂಕಟಗಿರಿಗೆ ಬೇರೆ ಬೇರೆ ಕಲ್ಪದಲ್ಲಿ ಏರ್ಪಟ್ಟ ಮೇರುವಿನ ಮಗನಾಗಿರುವಿ ಗರುಡನಿಂದ ತರಲ್ಪಟ್ಟ ವೈಕುಂಠ ಲೋಕ ಕ್ರೀಡಾ ವಿಲಾಸ ಪರ್ವತವಾಗಿರುವಿಕೆ ಆ ಈ ಎರಡೂ ಈ ಒಂದೇ ಬೆಟ್ಟದಲ್ಲಿ ಇರುವುದಾಗಿ ಹೇಳುವ-ಸ್ಕಂದ ಪುರಾಣ ಮೂವತ್ತೇಳನೆಯ ಅಧ್ಯಾಯದಲ್ಲಿರುವ ಎರಡು ವಚನಗಳೂ ಧೃಢಪಡಿಸುತ್ತವೆ

ಈ ರಿತೀಯೇ ಶ್ರೀವೈಕುಂಠದಲ್ಲಿರುವ ಕ್ರೀಡಾ ವಿಹಾರ ಭಾವಿಯಾ ಸ್ವಾಮಿಪುಷ್ಕರಿಣಿಗೆ ಸರಸ್ವತಿಯ, ಒಂದು ಅವತಾರವೆಂಬುದು ವಿರೋಧವಿಲ್ಲದೆಯೆ

ಸಮನ್ವಯಿಸುತ್ತದೆ. ಒಂದು ಕಲ್ಪದಲ್ಲಿ ದುಷ್ಕರವಾದ ತಪಸ್ಸನ್ನು ಮಾಡಿದ ಸರಸ್ವತೀ ದೇವಿಗೆ ಆ ಕಾಲದಲ್ಲಿ ಉಂಟಾದ ಇಷ್ಟಾರ್ಥವು ನೆರವೇರಿಸುವುದಕ್ಕಾಗಿ ಸ್ವಾಮಿ ಪುಷ್ಕರಿಣಿಯಲ್ಲಿ ಸೇರುವುದನ್ನು ಮಾತ್ರ ಭಗವಂತನು ಒಪ್ಪಿದುದನ್ನು ಇಟ್ಟುಕೊಂಡು ಸ್ವಾಮಿ ಪುಷ್ಕರಿಣಿಯು ಸರಸ್ವತಿಯ ಅವತಾರವೆಂದು ಹೇಳಲು ಯಾವ ಅಡ್ಡಿಯೂ ಇಲ್ಲವಲ್ಲವೇ?

ಮೇರು ಪರ್ವತಕ್ಕೆ ಮಗನಾಗಿರುವಿಕೆಯನ್ನು ಮಾತ್ರವೇ ಪರಿಗಣಿಸಿ ವೇಂಕಟಾಚಲಕ್ಕಾಗಲೀ ಸರಸ್ವತಿಯು ಪ್ರವೇಶಿಸಿರುವಿಕೆಯನ್ನು ಮಾತ್ರವೇ ಪರಿಗಣಿಸಿ ಸ್ವಾಮಿ ಪುಷ್ಕರಣಿಗಾಗಲೀ ಪ್ರಾಕೃತತ್ವ (ಈ ಲೋಕದ ಪಂಚಭೂತಗಳಿಂದ ಉಂಟಾದುವೆಂಬ ಕೀಳುಭಾವನೆ) ವನ್ನು ಕಿಂಚಿತ್ತೂ ಸಂದೇಹಿಸಲು ಅವಕಾಶವಿಲ್ಲ, ಆ ರೀತಿ ಪ್ರಾಕೃತತ್ವವನ್ನು ಹೇಳುವುದಾದರೆ ಆ ಎರಡಕ್ಕೂ, ಎಲ್ಲ ಪುರಾಣಗಳಲ್ಲೂ - ಈ ಲೋಕಕ್ಕೇ ಹೊರತಾದ ಅತ್ಯಂತ ಪರಿಶುದ್ಧವಾದ ಪರಮಪದದ ಪಂಚಭೂತಮಯವಾಗಿ ಭಗವಂತನಿಗೆ ಅತ್ಯಂತ ಪ್ರಿಯವಾದ ವಸ್ತುವಾದ ಗುಣವು ಘೋಷಿಸಲ್ಪಟ್ಟಿರುವುದು ಸಮನ್ವಯಗೊಳ್ಳದೇ ಹೋಗುವುದಲ್ಲವೇ? - ಎಂದೀರೀತಿ ಭಗವದ್ರಾಮಾನುಜ ಮುನಿವರ್ಯರು ವಿಮರ್ಶೆಮಾಡಿ ನಿಶ್ಚಯಿಸಿ ಇತರರಿಗೂ ವಿವರವಾಗಿ ಹೇಳಿದರು.

ಅದರಿಂದಲೇ ಅವರು ಮುಂಚೆ ಒಂದು ಯಾತ್ರೆಯಲ್ಲಿ ಆಳ್ವಾರುಗಳಂತೆ ತಾವೂ ಶ್ರೀವೇಂಕಟಗಿರಿಯಲ್ಲಿ ಪಾದವನ್ನಿಟ್ಟು ಏರಲು ಮನಸ್ಸಿಲ್ಲದೆಯೇ ಬೆಟ್ಟದ ಕೆಳಗಡೆಯೇ ಬಹಳ ಕಾಲ ವಾಸಿಸುತ್ತಾ ಬಂದರು. ಶ್ರೀಶೈಲಪೂರ್ಣರು, ಆನಂದಾಳ್ವಾನ್ ಮುಂತಾದವರು ಹಲವು ಬಾರಿ ನಿರ್ಬಂಧ ಮಾಡಿ ಪ್ರಾರ್ಥಿಸಿದಾಗಲೂ ಅಡಿಗಡಿಗೆ ಅಲ್ಲಿ ಹೋಗಲು ಅಂಗೀಕರಿಸಲಿಲ್ಲ. ನಂತರ ಸ್ಕಾಂದಪುರಾಣದ ಮೊದಲನೆಯ ಭಾಗದ ಒಂಭತ್ತನೆಯ ಅಧ್ಯಾಯದಲ್ಲಿ, ''ಪುಣ್ಯವನ್ನು ಮೇಲಿಂದ ಮೇಲೆ ಹೆಚ್ಚಿಸುವ ಆ ವೇಂಕಟಗಿರಿಯನ್ನು ಈ ರೀತಿಯಾಗಿ ಪ್ರಾರ್ಥಿಸಬೇಕು. ದೇವತೆಗಳೆಲ್ಲರೂ ವಾಸಿಸುವ ಜಾಗವಾಗಿ ಬ್ರಹ್ಮನೇ ಮುಂತಾದವರುಗಳಿಂದ ಗೌರವಿಸಲ್ಪಟ್ಟು ನಮಸ್ಕರಿಸಲ್ಪಟ್ಟ ಅತ್ಯಂತ ಪುಣ್ಯವಾದ ಹಿರಣ್ಮಯ ಪರ್ವತರಾಜನೇ, ನಿನ್ನನ್ನು ನಾನು ಕಾಲಿನಿಂದ ಮೆಟ್ಟಿ ಹತ್ತುತ್ತೇನೆ, ಪಾಪಮನಸ್ಸು ಹೊಂದಿದ ನನ್ನ ಈ ಪಾಪವನ್ನು (ಅಪರಾಧ) ಕರುಣೆಯಿಂದ ಕ್ಷಮಿಸಿ ಕೃಪೆಮಾಡಬೇಕು. ನಿನ್ನ ಶಿಖರದಲ್ಲಿ ವಿಜಯಗೈದು ವಾಸಿಸುತ್ತಿರುವ ಮಾಧವನನ್ನು ನನಗೆ ತೋರಿಸಿ ಕೃಪೆಮಾಡಬೇಕು ಎಂದು ಈ ರೀತಿ ಪ್ರಾರ್ಥನೆ ಮಾಡಿದ ನಂತರವೇ ಮಾನವರು ಪವಿತ್ರವಾದ ವೇಂಕಟಾಚಲಕ್ಕೆ ಮೆಲ್ಲಮೆಲ್ಲನೆ ಅಡಿಯಿಟ್ಟು ಏರಲು ಸಮರ್ಥನಾಗುತ್ತಾನೆ''- ಎಂದಿರುವ ವಚನಗಳನ್ನು ಕಂಡು,

ಇಂಥಹ ನಿಯಮದೊಂದಿಗೆ ಶ್ರೀವೇಂಕಟಗಿರಿಯನ್ನು ಹತ್ತುವುದರಲ್ಲಿ ಪುರಾಣಕಾರರು ಸಮ್ಮತಿಸಿರುವುದನ್ನು ಚಿಂತಿಸಿ, ಈ ನಿಯಮದಂತೆಯೇ ಯಾವಾಗಲಾದರೂ ಒಂದುಸಲ ಮಾತ್ರವೇ ತಿರುಪತಿ ಬೆಟ್ಟವನ್ನು ಹತ್ತಿ ಭಗವಂತನ ದರ್ಶನವನ್ನು ಪಡೆದು ಹೆಚ್ಚಿನ ಭಾಗ ಕೆಳಗಿನ ತಿರುಪತಿಯಲ್ಲಿಯೇ ತಂಗಿದ್ದು ತಿರುಮಲೆಯ ಕೆಳಗೇ ಶ್ರೀಶೈಲಪೂರ್ಣರಲ್ಲಿ ಶ್ರೀರಾಮಾಯಣವನ್ನು ಓದಲು ಪ್ರಾರಂಭಿಸಿದರು.

## ಶ್ರೀ ರಾಮನುಜರು ಏರ್ಪಡಿಸಿದ ವ್ಯವಸ್ಥೆಗಳೂ

ಅನಂತರ ಈ ರೀತಿ ಶಾಸ್ತ್ರಗಳಲ್ಲಿ ಹೇಳಲ್ಪಟ್ಟ ಶ್ರೀವೇಂಕಟಾಚಲದ ವೈಭವವನ್ನು ಚೆನ್ನಾಗಿ ತಿಳಿದುಕೊಂಡ ಶ್ರೀ ರಾಮಾನುಜರು, ತಮ್ಮ ಶ್ರೀರಾಮಾಯಣದ ಗುರುಗಳಾದ ಶ್ರೀಶೈಲಪೂರ್ಣರೂ, ಶಿಷ್ಯರಾದ ತಿರುಮಲೆ ಅನಂದಾಳ್ವಾನ್‌ರವರೂ ಶ್ರೀವೇಂಕಟನಾಥನ ಮಹಿಮೆಯನ್ನು ಚೆನ್ನಾಗಿ ಅರಿತು, ಯಾವ ಅಪಚಾರವೂ ಸಂಭವಿಸದಂತೆ ಆ ದೇವನಿಗೆ ಸಂತೋಷವಾಗುವ ರೀತಿಯಲ್ಲಿ ಕೈಂಕರ್ಯವನ್ನು ಮಾಡಿ ಬರುವುದನ್ನು ಕಂಡು ಸಂತೋಷಗೊಂಡೂ, ಇತರರು ಅಧಿಕ ಪಕ್ಷವಾಗಿ ಅಪಚಾರದಲ್ಲಿ ನಿಮಗ್ನ ರಾಗಿರುವುದನ್ನು ಕಂಡು ದುಃಖ ಗೊಂಡೂ, ಸರಿಯಾದ ಮಾರ್ಗಕ್ಕೆ ವಿರುದ್ಧವಾಗಿರುವ ಅವರುಗಳ ಕೃತ್ಯಗಳಿಂದ ಉಂಟಾದ ಅಪಚಾರವು ಹಾಗೆ ಉಂಟಾಗದಿರುವಂತೆ ಕೆಲವು ನಿಯಮಗಳನ್ನು (ವ್ಯವಸ್ಥೆ) ಏರ್ಪಡಿಸಬೇಕೆಂದು ಅಭಿಪ್ರಾಯಪಟ್ಟು, ಶ್ರೀಶೈಲಪೂರ್ಣರನ್ನೂ, ತಿರುಮಲೆ ಅನಂದಾಳ್ವಾನ್‌ರನ್ನೂ ಕರೆದು, ''ಹೇ ಆರ್ಯರುಗಳೇ, ಈ ತಿರುಪತಿ ಬೆಟ್ಟದಲ್ಲಿ, ಇದರ ಮಹಿಮೆಯನ್ನರಿಯದ ಜನಗಳು ತಮ್ಮಿಷ್ಟದಂತೆ ನಡೆಯುತ್ತಿರುವುದರಿಂದ ಉಂಟಾಗುವ ಅಪಚಾರವು ಆ ರೀತಿ ಆಗದಿರುವುದಕ್ಕಾಗಿ ಕೆಲವು ನಿಯಮಗಳನ್ನು ಏರ್ಪಡಿಸಲು ಇಚ್ಛಿಸುತ್ತೇನೆ. ಅವುಗಳನ್ನು ತಾವುಗಳು ಇಲ್ಲಿ ಅವಶ್ಯಕವಾಗಿ (ಖಂಡಿತವಾಗಿ) ನಡೆಸಿಕೊಡಬೇಕೆಂದು ಪ್ರಾರ್ಥಿಸುತ್ತೇನೆ.''

''ಕೈಂಕರ್ಯ ಮಾಡುವುದರಲ್ಲಿ ಆಸಕ್ತಿಯುಳ್ಳವರುಗಳು ಕೆಲವರು, ಬ್ರಹ್ಮನಿಷ್ಠರಾದವರು ಕೆಲವರು, ತಪಸ್ಸು ಮಾಡುವವರು ಕೆಲವರು, ಉದ್ಯಾನ ಪರಿಪಾಲಕರು ಕೆಲವರು, ಭಗವಂತನ ದಿವ್ಯಮಂಗಳ ವಿಗ್ರಹದ ಸೌಂದರ್ಯವನ್ನು ಸೇವೆಮಾಡುವವರು ಕೆಲವರು - ಈ ರೀತಿ ಋಷಿಗಳು ಆ ತಿರುಮಲೆಯಲ್ಲಿ ಇದ್ದರು. ಕೆಲವರು ತಿರುಮಲೆಯಲ್ಲಿದ್ದುಕೊಂಡೇ ದಿನವೂ ಭಗವಂತನನ್ನು ದರ್ಶನಮಾಡಿ ಸೇವೆ ಸಲ್ಲಿಸುತ್ತಾರೆ. ಕೆಲವರು ಆ ಬೆಟ್ಟದ ಸುತ್ತಮುತ್ತಲೂ ಯಾವಾಗಲೂ ವಾಸಿಸುತ್ತಿರುವವರು. ಇನ್ನೂ ಕೆಲವರು ಬೆಟ್ಟಕ್ಕೆ ಬಂದು

ಭಗವಂತನನ್ನು ದರ್ಶನಮಾಡಿ ನಂತರ ಪುನಃ ಬರುತ್ತೇವೆಂದು ಅವನಿಂದ ಅನುಮತಿಯನ್ನು ಪಡೆದು ನಡೆಯುತ್ತಿರುವುವರು. ಪೂಜಾಯೋಗ್ಯವಾದವರೂ ಮಹಾಭಾಗ್ಯಶಾಲಿಗಳೂ ಆದ ಅಗಸ್ತ್ಯಮಹಾಋಷಿಗಳು ತಮ್ಮ ಶಿಷ್ಯರುಗಳೊಡನೆ ಆ ತಿರುಪತಿ ಬೆಟ್ಟದಲ್ಲಿ ವಾಸವನ್ನು ಮಾಡುತ್ತಾ ಶ್ರೇಷ್ಠವಾದ ನಂದನವನವೊಂದನ್ನು ನಿರ್ಮಿಸಿ ಹಲವು ಬಗೆಯಾದ ಪುಷ್ಪಗಳಿಂದ ಶ್ರೀವೇಂಕಟನಾಥನನ್ನು ಅರ್ಚನೆ ಮಾಡುತ್ತಾ ಅನೇಕ ದಿನಗಳು ಆನಂದಾನುಭವವನ್ನು ಪಾನಮಾಡಿದರು'' - ಎಂದು ವರಾಹ ಪುರಾಣದ ಮೊದಲನೆಯ ಭಾಗದ ಇಪ್ಪತ್ತೊಂದನೆಯ ಅಧ್ಯಾಯದಲ್ಲಿರುವ ೫೩ ಎಂಬ ಸಂಖ್ಯೆಯಿಂದ ಸೂಚಿಸಲ್ಪಟ್ಟ ವಚನಗಳಿಂದ, ಭಗವಂತನ ಪಕ್ಕದಲ್ಲಿದ್ದುಕೊಂಡು ಮಾಡತಕ್ಕವುಗಳು, ದೂರದಲ್ಲಿದ್ದುಕೊಂಡು ಮಾಡಲಾಗದವುಗಳಾದ ದೇವಾಧಿದೇವನ ದಿವ್ಯಮುಖೋಲ್ಲಾಸ ಹೇತುವಾದ ಕೈಂಕರ್ಯಗಳನ್ನು ಮಾಡುವವರು ಕೆಲವರು ಮಾತ್ರವೇ ತಿರುಪತಿಯ ಬೆಟ್ಟದಲ್ಲಿದ್ದದಾಗಿ ಅರಿಯಲ್ಪಡುವುದರಿಂದ, ಇತರರು ಬೆಟ್ಟದ ಕೆಳಗೆ ಇದ್ದುಕೊಂಡು ಮಾಡತಕ್ಕ ಭಗವದನುಭವವೇ ಮುಂತಾದ ಕೆಲಸಗಳಲ್ಲಿ ನಿಷ್ಠರಾದವರು ಬೆಟ್ಟದ ಕೆಳಗೇ ಇರಬೇಕು. ಉತ್ಸವ ಕಾಲಗಳಲ್ಲಿ ಮಾತ್ರ ಅವರುಗಳು ಬೆಟ್ಟಕ್ಕೆ ಬರಬಹುದು. ಮಿಕ್ಕ ಸಮಯಗಳಲ್ಲಿ ಬೆಟ್ಟಕ್ಕೆ ಹೋಗ ಕೂಡದು - ಎಂದು ನಿಯಮವನ್ನು ಏರ್ಪಡಿಸಬೇಕು, '' ಎಲೈ ಅರ್ಜುನನೇ, ಈ ರೀತಿಯೇ ಆ ತಿರುಪತಿ ಬೆಟ್ಟದಲ್ಲಿ ಉತ್ಪತ್ತಿಯಾದ ಕಾಯಿ, ಹಣ್ಣು, ಗೆಣಸು ಮುಂತಾದವುಗಳನ್ನು ಯಾರೂ ತಮ್ಮ ಇಷ್ಟಾನುಸಾರವಾಗಿ ಭುಜಿಸಕೂಡದು. ಆ ಬೆಟ್ಟವು ವೈಕುಂಠನಾಡಿನ ಬೆಟ್ಟವಲ್ಲವೇ? (ಅಪ್ರಾಕೃತವಾದುದಲ್ಲವೇ?)'' ಎಂದು ಸ್ಕಂದಪುರಾಣದ ಸುವರ್ಣಮುಖೀ ಮಹಾತ್ಮ್ಯದಲ್ಲಿರುವ ಭಾರದ್ವಾಜ ಋಷಿಗಳ ವಚನದಿಂದ ಅಪ್ರಾಕೃತವಾದ ವೇಂಕಟಾದ್ರಿಯಲ್ಲಿ ಉಂಟಾದ, ಭಗವಂತನಿಗೆ ನಿವೇದನ ಮಾಡತಕ್ಕುವುಗಳಾದ, ಶಾಸ್ತ್ರಗಳಿಂದ ಅರಿಯಲ್ಪಟ್ಟ ಕಾಯಿ, ಹಣ್ಣು, ಗೆಣಸು ಮುಂತಾದ ವಸ್ತುಗಳೆಲ್ಲವನ್ನೂ ಶ್ರೀ ವೇಂಕಟನಾಥನಿಗೆ ನಿವೇದನ ಮಾಡದೆ ಭುಜಿಸಕೂಡದೆಂದು ತಿಳಿಸಲ್ಪಟ್ಟಿರುವುದರಿಂದಲೂ, ''ಭುಜಿಸತಕ್ಕ ಕಂದ ಮೂಲ ಫಲಾದಿಗಳನ್ನೂ ಅನ್ನಗಳನ್ನೂ ಭಗವಂತನ ಮುಂದಿಟ್ಟು ನಿವೇದನ ಮಾಡಿ ಅವರ ಪ್ರಸಾದವನ್ನು ಭುಜಿಸುತ್ತಾರೆ'' ಎಂದು ಆ ಜಾಗದಲ್ಲಿಯೇ ಪುನಃ ಹೇಳಿರುವುದರಿಂದಲೂ, ದೇವಸ್ಥಾನಗಳಿಗೆ ಉಪಯೋಗಿಸತಕ್ಕವುಗಳಾದ ವಿಷ್ಣು ಆಗಮನಗಳಲ್ಲಿ ವಿಧಿಸಲ್ಪಟ್ಟ ಎಲ್ಲಾ ವಸ್ತುಗಳನ್ನೂ, ತಿರುಪತಿ ಬೆಟ್ಟದಲ್ಲಿ ನಿತ್ಯದಾಸೋಹ ಮಾಡುವವರೂ, ಯಾತ್ರಿಕರಾಗಿ ಬರುವವರೂ, ಭಗವಂತನ ದೇವಸ್ಥಾನದಲ್ಲಿಯೇ ಅಡಿಗೆ ಮಾಡಿಸಿ, ಶ್ರೀ ವೇಂಕಟನಾಥನಿಗೆ ನಿವೇದಿಸಿ, ಆ ಪ್ರಸಾದವನ್ನೇ ತಮ್ಮ ಗೃಹಗಳಲ್ಲಿರುವ ಮೂರ್ತಿಗಳಿಗೆ ನಿವೇದಿಸಿ, ಅದನ್ನೇ ಆಯಾ ಕಾಲಕ್ಕೆ ತಕ್ಕ ಶ್ರಾದ್ಧಗಳಲ್ಲಿ (ತಿಥಿಗಳು)

ಕೇಳುವವರಾಗಿ. ಮುನಿಗಳೇ, ಬ್ರಾಹ್ಮಣರೂ ಮತ್ತಿತರರೂ ಆದ ಜನರು ನಾರಾಯಣಗಿರಿಯನ್ನು ಕುರಿತು ಹೋಗುವುದಕ್ಕಾಗಿ ಚಿಕ್ಕ ಚಿಕ್ಕದಾಗಿ ಅಡಿಯಿಟ್ಟು ನಡೆಯುವ ಅಡಿಗಳಿಗೆ ಉಂಟಾಗುವ ಫಲಗಳನ್ನೂ ಕೇಳುವವರಾಗಿ. ತಮ್ಮ ಮನೆಯಿಂದ ಶ್ರೀ ವೇಂಕಟಾದ್ರಿಯವರೆಗೂ ಎಷ್ಟು ಅಡಿಗಳು ಇರುತ್ತವೆಯೋ ಅವುಗಳಲ್ಲಿ ಒಂದೊಂದಡಿಗೂ ಒಂದೊಂದು ಯಾಗಮಾಡಿದ ಫಲವು ಈ ಪ್ರಪಂಚದ ಜನರಿಗೆ ಉಂಟಾಗುತ್ತದೆ'' ಎಂದು ಬ್ರಹ್ಮದೇವನು ಹೇಳಿರುವ ವಚನದಿಂದಲೂ, ಬ್ರಹ್ಮಹತ್ಯೆ ಮುಂತಾದುವುಗಳಿಂದ ಉಂಟಾಗುವ ಪಾಪ ನಾಶನ, ಜನ್ಮಾದಿ ದುಃಖಗಳು ನಾಶಹೊಂದಿ ಮೋಕ್ಷವು ಸಿದ್ಧಿಸುವುದು ಮುಂತಾದ ಫಲಗಳಿಗೆ ಉಪಾಯವಾಗಿ ಹೇಳಲ್ಪಟ್ಟ ಶ್ರೀ ವೇಂಕಟಾಚಲ ಯಾತ್ರೆಯಲ್ಲಿ ಕೂಡ ದೇಹವನ್ನು ಕಾಪಾಡುವುದಕ್ಕಾಗಿ ಏರ್ಪಡಿಸಿದ ವಾಹನವನ್ನೇರುವುದೂ ಮುಂತಾಂದುವು ಉಚಿತವಲ್ಲವೆಂದು ತಿಳಿಯಲ್ಪಡುವುದರಿಂದ, ನೇರವಾಗಿ ಕಾಲನ್ನಿಟ್ಟು ಹತ್ತುವ ಸಮಯದಲ್ಲಿಯೂ, ದೇವಾಧಿದೇವನ ಉತ್ಸವದಲ್ಲಿ, ದಿಗ್ಬಲಿಯನ್ನು ಹಾಕುವ ಬೀದಿಗಳಲ್ಲಿ ಹೋಗುವ ಸಮಯದಲ್ಲಿಯೂ ಜನರು ಚಪ್ಪಲಿಗಳನ್ನು ಧರಿಸುವುದೋ, ವಾಹವನ್ನೇರಿ ಹೋಗುವುದೋ ಕೂಡದು - ಎಂದು ನೀತಿಯನ್ನು ಕಲ್ಪಿಸಬೇಕು.

''ಚಂಡಾಲರೂ, ತುರುಕರೂ, ತಮ್ಮ ತಮ್ಮ ಜಾತಿ ಧರ್ಮಗಳಿಂದ ತಪ್ಪಿದವರೂ, ಇತರ ಪಾಪಿಗಳೂ ಮುಂತಾದ ಮನುಜರುಗಳಿಂದ ಹತ್ತಲಸಾಧ್ಯವಿಲ್ಲವೇ ಈ ಶ್ರೇಷ್ಠವಾದ ವೈಕುಂಠ ಬೆಟ್ಟವು?'' ಎಂಬ ವರಾಹ ಪುರಾಣದ ವಚನದಿಂದಲೂ, ''ಚಂಡಾಲರೂ, ಯವನರುಗಳೂ (ತುರುಕರು) ಮುಂತಾದವರುಗಳಿಂದಲೂ, ವೇದಬಾಹ್ಯರುಗಳಿಂದಲೂ (ವೇದವನ್ನೊಪ್ಪದ ನಾಸ್ತಿಕರುಗಳಿಂದಲೂ) ಈ ಶ್ರೇಷ್ಠವಾದುದೂ, ಪುನೀತವಾದುದೂ ಆದ ಈ ತಿರುಪತಿಯ ಬೆಟ್ಟವು ಹತ್ತಲಸಾಧ್ಯವಾಗುತ್ತದೆ'' ಎಂಬ ವಾಮನ ಪುರಾಣದ ಎರಡನೆಯ ಅಧ್ಯಾಯದಲ್ಲಿ ೨೧ನೇ ಸಂಖ್ಯೆಯ ವಚನದಿಂದಲೂ, ಚಂಡಾಳರೇ ಮೊದಲಾದ ಕೀಳುಜನರಿಗೆ ಈ ಬೆಟ್ಟವನ್ನು ಹತ್ತುವ ಯೋಗ್ಯತೆಯು ಇಲ್ಲವೆಂದು ತಿಳಿಯಲ್ಪಡುವುದರಿಂದ ಅಂಥಹವರು ಈ ಬೆಟ್ಟದ ಮೇಲೆ ಹತ್ತಕೂಡದೆಂಬ ನಿಯಮವನ್ನು ವಿಧಿಸಬೇಕು.

ಇಂಥಹ ಉತ್ತಮವಾದ ಆಚಾರ ನಿಯಮವು ಶ್ರೀವೇಂಕಟಗಿರಿಯಲ್ಲಿ ಎಷ್ಟುಮಾತ್ರ ಪ್ರದೇಶದಲ್ಲಿ ಅನುಷ್ಠಿಸಬೇಕೆಂದರೆ, - '' ಈ ರೀತಿ ಮಾಧವನಿಂದ ಕೇಳಲ್ಪಟ್ಟ ಪರಮಶಿವನು, ತಂದೆಯೇ, ಶ್ರೀವೇಂಕಟನಾಥನೇ, ತಾವು ಎಲ್ಲಿ,

ನಿತ್ಯವಾಸವನ್ನು ಮಾಡುತ್ತೀರೋ ಅಲ್ಲಿಯೇ ನಾನೂ ನಿತ್ಯವಾಸವನ್ನು ಮಾಡಬೇಕು,'' ಎಂದು ಉತ್ತರ ಕೊಡಲು, ಅದಕ್ಕೆ ಕಾಳಮೇಘದಂತೆ ಕಾಂತಿಯುಳ್ಳ ಭಗವಂತನು, ''ಮಹಾದೇವಾ, ಪಾರ್ವತೀಪತಿಯೇ, ಸರ್ವಜ್ಞನೇ, ವೇಂಕಟವೆಂಬ ಈ ಬೆಟ್ಟದಲ್ಲಿ ಈ ಕಲ್ಪವು ಮುಗಿಯುವವರೆಗೂ ವಾಸಿಸುತ್ತೇನೆ. ಈಶ್ವರನೇ,ನೀನೂ ಈ ಬೆಟ್ಟದ ಕೆಳಭಾಗದಲ್ಲಿ ಆಗ್ನೇಯ ದಿಕ್ಕಿನಲ್ಲಿ ನಿತ್ಯವಾಸವನ್ನು ಮಾಡುವವನಾಗು,'' ಎಂದು ಹೇಳಿದರೆಂದು ವರಾಹಪುರಾಣದ ಮೊದಲಭಾಗದ ಹದಿನೇಳನೆಯ ಅಧ್ಯಾದಲ್ಲಿರುವ ೪೫ನೇ ಸಂಖ್ಯೆಯ ವಚನದಿಂದ, ಶ್ರೀವೇಂಕಟಗಿರಿಯಲ್ಲಿ ಆವಿರ್ಭವಿಸಿದ ಶ್ರೀನಿವಾಸ ಭಗವಂತನನ್ನು ಸೇವೆಮಾಡಲು ಬಂದ ಬ್ರಹ್ಮ, ಶಿವ ಮುಂತಾದವರನ್ನು ಬೀಳ್ಕೊಡುವಾಗ, ರುದ್ರನು, ''ನೀವುವಾಸಿಸುವ ಜಾಗದಲ್ಲಿ ನಾನೂ ವಾಸಿಸುವಂತೆ ಕೃಪೆಮಾಡಬೇಕು'' ಎಂದು ಕೇಳಿದುದಕ್ಕೆ, ''ಶ್ರೀ ವೇಂಕಟಗಿರಿಯ ಕೆಳಭಾಗದಲ್ಲಿ ಆಗ್ನೇಯ ದಿಕ್ಕಿನಲ್ಲಿ ಒಂದು ಯೋಜನೆಯ ದೂರದಲ್ಲಿ ನಿತ್ಯವಾಗಿ ವಾಸಿಸುವವನಾಗು,'' ಎಂದು ಅಪ್ಪಣೆಕೊಟ್ಟ ಭಗವಂತನಿಂದ ಅಪ್ರಾಕೃತವಾದ ಶ್ರೀ ವೇಂಕಟಗಿರಿಯಲ್ಲಿ ಸ್ವಾಮಿ ಪುಷ್ಕರಿಣಿಯೇ ಮೊದಲಾಗಿ ಕಪಿಲ ತೀರ್ಥದ ಕೆಳದಡದ ವರೆಗೆ ಇರುವ ಭಗವಂತನ ಸನ್ನಿಧಿಯಾದ ಪ್ರದೇಶದಲ್ಲಿ ಇತರ ದೇವತೆಗಳು ವಾಸಿಸಲಾಗದು ಎಂಬುದು ಸೂಚ್ಯವಾಗಿ ತಿಳಿಸಲ್ಪಟ್ಟು ಬಿಟ್ಟಿರುವುದರಿಂದಲೂ, ''ಬ್ರಹ್ಮಾಂಡದಲ್ಲಿ ಶ್ರೀ ವೇಂಕಟಾದ್ರಿಗೆ ಸಮನಾದ ಪ್ರದೇಶವು ಬೇರೊಂದಿಲ್ಲ, ಸಕಲ ಸಂಪದ್ಭರಿತವಾದ ಈ ಶೇಷಗಿರಿಯು ಪುನೀತವಾದವುಗಳಿಗೆಲ್ಲಕ್ಕಿಂತ ಪುನೀತವಾದುದು,'' ಎಂದು ಶ್ರೀವೇಂಕಟಗಿರಿಯ ಪೂರ್ತವೂ ಎಲ್ಲ ಸ್ಥಳಗಳಿಗಿಂತ ಶ್ರೇಷ್ಠವಾದುದೂ, ಪುಣ್ಯವಾದುದೂ ಎಂದು ಎಲ್ಲೆಲ್ಲೂ ಪ್ರಸಿದ್ಧವಾಗಿದ್ದರೂ, ''ಮುನಿಶ್ರೇಷ್ಠರುಗಳು ಸ್ವಾಮಿ ಪುಷ್ಕರಿಣೀತಟದ ನಾಲ್ಕು ಪಕ್ಕಗಳಲ್ಲಿಯೂ ಒಂದು ಯೋಜನೆ ದೂರವಿರುವ ಸ್ಥಳಗಳಲ್ಲಿ ಮನಸ್ಸಂತೋಷದಿಂದ ಶ್ರೀವೇಂಕಟನಾಥನ ಕೃಪಾಕಟಾಕ್ಷವನ್ನು ಇಚ್ಛಿಸಿ ಉತ್ತಮವಾದ ತಪಸ್ಸನ್ನಾಚರಿಸುತ್ತಾ ವಾಸಿಸಿದರು'' ಎಂಬುವ ವಚನದಿಂದ ಕೆಲವು ಪರಮಋಷಿಗಳು ಸ್ವಾಮಿ ಪುಷ್ಕರಿಣಿಯ ನಾಲ್ಕುದಿಕ್ಕಿನಲ್ಲಿಯೂ ಒಂದು ಯೋಜನ ದೂರವಿರುವ ಭಾಗವು ಅತ್ಯಂತಾತ್ಯಂತ ಪಾವನವಾಗಿ ಭಗವಂತನು ಬಹಳವಾಗಿ ಇಚ್ಛೆಪಟ್ಟು ತಂಗಿರತಕ್ಕದಾದುದೆಂದೂ ನಿಶ್ಚಯಿಸಿ ಆ ಸ್ಥಳದಲ್ಲಿ ತಪಸ್ಸು ಮಾಡಿಕೊಂಡು ನಿತ್ಯವಾಸಮಾಡಿದುದಾಗಿ ಸುವರ್ಣಮುಖರೀ ಮಾಹಾತ್ಮ್ಯವು ಹೇಳುವ ಭಾಗದಲ್ಲಿ ತಿಳಿಸಲ್ಪಟ್ಟಿರುವುದರಿಂದಲೂ, ಸ್ವಾಮಿ ಪುಷ್ಕರಿಣಿಯಿಂದ ಸುತ್ತಲೂ ಒಂದು ಯೋಜನೆ ದೂರ ಅಳತೆಯುಳ್ಳ ಭಾಗದಲ್ಲಿ, ಈ ತಿರುಮಲೆಯಲ್ಲಿ ಮುಂಚೆ ಹೇಳಿದ ಉತ್ತಮ ನಿಯಮವು ಆಚರಿಸತಕ್ಕದೆಂದು ತಿಳಿಯಲ್ಪಡುತ್ತದೆ.

ಈ ರೀತಿ ಪರಮಪಾವನವಾದ ಶ್ರೀವೇಂಕಟಗಿರಿಯನ್ನು ಶ್ರೀವೇಂಕಟನಾಥನ ದಿವ್ಯದೇವಾಲಯವಾಗಿಯೇ ಗೌರವಿಸಿ ಈ ಸ್ಥಳದಲ್ಲಿ ವಾಸಿಸುವರೂ, ಯಾತ್ರಿಕರಾಗಿ ಬರುವ ಇತರರೂ ಅತ್ಯವಶ್ಯಕವಾಗಿ ಆಚರಿಸಬೇಕಾದವುಗಳೆಂದು ದಾಸನಾದ ನಾನು ನಿಶ್ಚಯಿಸಿದ ಈ ನಿಯಮಗಳನ್ನು ದಾಸನೊಂದಿಗೆ (ನನ್ನೊಂದಿಗೆ) ಒಂದೇ ವಿಧ ಅಭಿಪ್ರಾಯವನ್ನು ಹೊಂದಿ ನೆರವೇರಿಸಲು ಶ್ರೀ ವೇಂಕಟನಾಥನು ಸಂಕಲ್ಪವನ್ನು ಮಾಡಿಕೊಳ್ಳಬೇಕು. ಇಂಥಹ ನಿಯಮಗಳು ಆಚರಿಸಲ್ಪಟ್ಟುದಾದರೆ ಜನರು ಅಪಚಾರ ಪಡಲು ಅವಕಾಶವಿರುವುದಿಲ್ಲವೆಂದು (ಶ್ರೀರಾಮಾನುಜಮುನಿಗಳು) ಹೇಳಿದರು.

### ಶ್ರೀ ವೇಂಕಟನಾಥನ ದಿವ್ಯಾಜ್ಞೆ:-

ಆದರ ನಂತರ ಶ್ರೀ ರಾಮಾನುಜಮುನಿವರ್ಯರು ಹೇಳಿದುವುಗಳೂ, ಶಾಸ್ತ್ರಸಮ್ಮತವಾಗಿರುವುವುಗಳೂ ಆದ ಶ್ರೇಷ್ಠವಾದ ನಿಯಮಗಳು ಅನುಷ್ಠಿಸಲು ಯೋಗ್ಯವೆಂದು ಅಭಿಪ್ರಾಯಪಟ್ಟ ಶ್ರೀಶೈಲಪೂರ್ಣರೂ ಮತ್ತು ತಿರುಮಲೆ ಅನಂದಾಳ್ವಾನ್‌ರವರೂ ಇವುಗಳು ವೇಂಕಟನಾಥನಿಂದಲೇ ನಡೆಸಲ್ಪಡಬೇಕೆಂದು ತಿಳಿದು, ''ಭಗವಂತನೇ, ಯತಿರಾಜರ (ಶ್ರೀರಾಮಾನುಜರ) ಇಷ್ಟಾರ್ಥವನ್ನು ಸಫಲಗೊಳ್ಳುವಂತೆ ಮಾಡುವವರಾಗಿ,'' ಎಂದು ಭಗವಂತನನ್ನು ಕುರಿತು ತಮ್ಮ ಮನಸ್ಸಿನಲ್ಲಿಯೇ ಪ್ರಾರ್ಥಿಸಿಕೊಂಡರು. ನಂತರ ಆ ರಾತ್ರಿಯೇ ಶ್ರೀ ಶ್ರೀಶೈಲ ಪೂರ್ಣರ ಕನಸಿನಲ್ಲಿ ಶ್ರೀವೇಂಕಟನಾಥನು ಪ್ರತ್ಯಕ್ಷನಾಗಿ, ''ಹೇ ಶ್ರೀಶೈಲಪೂರ್ಣರೇ, ಮನ್ನಾಥಮುನಿ (ಎಂಬೆರುಮಾನಾರ್) ಗಳಾದ ಯತಿರಾಜರ ಆಣತಿಯಂತೆ ಮುಂಚೆ ಒಂದು ಕಾರಣದಿಂದ ಬಿಟ್ಟಿದ್ದ ಶಂಖ ಚಕ್ರಗಳನ್ನು ಪುನಃ ಧಾರಣೆಮಾಡುವುದು ನನಗೆ ಹೇಗೆ ಇಷ್ಟವಾಯಿತೋ, ಅದರಂತೆಯೇ ಈಗಲೂ ಅವರು ಏರ್ಪಡಿಸಿದ ಇತರ ನಿಯಮಗಳು ನನಗೆ ಇಷ್ಟವಾದುವುಗಳು'' ಎಂದು ಹೇಳಲು, ಇದನ್ನು ಕೇಳಿ ಎಚ್ಚರಗೊಂಡಿದ್ದ ಶ್ರೀಶೈಲಪೂರ್ಣರು ಇದನ್ನು ಪಂಡಿತರು, ಪಾಮರರು ಎಂಬ ವ್ಯತ್ಯಾಸವಿಲ್ಲದೆಯೇ ಎಲ್ಲರಿಗೂ ಭಗವಂತನ ಮೂಲಕವೇ ತಿಳಿಯಪಡಿಸಬೇಕೆಂದು ಮನಸ್ಸಿಟ್ಟು ದೇವಸ್ಥಾನಕ್ಕೆ ಬಂದು, ''ಹೇ ಭಗವನ್ ಶ್ರೀ ವೇಂಕಟಗಿರಿನಾಥನೇ, ಪದ್ಮಾವತೀ ದೇವಿಯನ್ನು ವಕ್ಷಃಸ್ಥಲದಲ್ಲಿಟ್ಟು ಕೊಂಡಿರುವವನೇ, ದೇವಾಧಿದೇವನಾದ ತಾವು ದಾಸನಿಗೆ ಕನಸಿನಲ್ಲಿ ಕೊಟ್ಟ ಆಜ್ಞೆಯನ್ನು ನೇರವಾಗಿ ಜನರೆಲ್ಲರೂ ತಿಳಿದು ಕೊಳ್ಳುವಂತೆ ಕೃಪೆಮಾಡಬೇಕು'' ಎಂದು ಪ್ರಾರ್ಥಿಸಿದರು. ಆಗ ಶ್ರೀ ವೇಂಕಟನಾಥನೂ ಸಹ ಒಬ್ಬ ಭಕ್ತನನ್ನು ಆವೇಶಿಸಿ ''ಹೇ ಜನರೇ, ನನ್ನ ಈ ಆಜ್ಞೆಯನ್ನು ನೀವುಗಳೆಲ್ಲರೂ ಕೇಳಿರಿ. ನಾನು ಮುಂಚೆಮಾಡಿದ ರಾಮಕೃಷ್ಣಾದಿ ಅವತಾರಗಳಲ್ಲಿ ವಸಿಷ್ಠರೇ ಮುಂತಾದ ಗುರುವರ್ಯರುಗಳ ಆಜ್ಞೆಯಂತೆಯೇ,

ಈಗ ಶ್ರೀಭಾಷ್ಯ ಮುಂತಾದ ಸದ್‌ಗ್ರಂಥಗಳನ್ನು ರಚಿಸಿದವರ ಮೂಲಕವಾಗಿ ನಾನೇ (ನಾರಾಯಣನೇ) ಪರತತ್ವ ಎಂಬುದನ್ನು ಹೊರಪಡಿಸಿದವರೂ, ನನಗೆ ಶಂಖ ಚಕ್ರಗಳನ್ನು ಕೊಟ್ಟವರೂ ಆದ ಶ್ರೀ ಭಾಷ್ಯಕಾರರ (ರಾಮಾನುಜರ) ಆಜ್ಞೆಯನ್ನೂ ಆದರಿಸಿ ಅದರಂತೆಯೇ ಅನುಷ್ಠಿಸುತ್ತೇನೆ. ನನ್ನನ್ನು ಸೇರಿದವರೆಲ್ಲರೂ ಭಾಷ್ಯಾಕಾರರು ಅಪ್ಪಣೆ ಕೊಡಿಸಿದ ನಿಯಮಗಳೆಲ್ಲವನ್ನೂ ನನಗೆ ಇಷ್ಟವಾದುವುಗಳೆಂದು ತಿಳಿದುಕೊಂಡು, ನಂಬಿಕೆಯಿಂದ ಆಚರಿಸಿ,'' ಎಂದು ಹೇಳಿ ಕೃಪೆಮಾಡಿದನು. ಶ್ರೀ ವೇಂಕಟನಾಥನ ಈ ದಿವ್ಯಾಜ್ಞೆಯನ್ನು ಕೇಳಿದ ಅಲ್ಲಿದ್ದ ಸಮಸ್ತಜನರೂ ಸಂತೋಷಗೊಂಡು ಇರುವಾಗ, ಆ ದೇವನ ಅಂತರಂಗ ಕೈಂಕರ್ಯಪರರಾದ ಬಿಂಬಾಧರನೆಂಬ ಅರ್ಚಕರು ಶ್ರೀ ಶಠಗೋಪ (ಶಠಾರಿ - ದೇವನಪಾದುಕೆಗಳು)ವನ್ನು ಎಲ್ಲರ ತಲೆಯಮೇಲೂ ಇಟ್ಟು, ''ಹೇ, ಭಾಗವತರುಗಳೇ, ಈ ತಿರುಮಲೆಯಲ್ಲಿ ಶ್ರೀವೇಂಕಟನಾಥನಿಗೆ ಇಷ್ಟವಾಗಿಯೂ, ಶಾಸ್ತ್ರ ಸಮ್ಮತವಾಗಿಯೂ, ಶ್ರೀಭಾಷ್ಯಕಾರರು ಏರ್ಪಡಿಸಿದ ಈ ನಿಯಮಗಳನ್ನು ಅನುಷ್ಠಿಸುವವರು ಭಗವಂತನಿಗೆ ಅತ್ಯಂತ ಪ್ರಿಯವಾದವರಾಗುತ್ತಾರೆ. ಅನುಷ್ಠಿಸದವರು ಭಗವಂತನ ದಿವ್ಯಾಜ್ಞೆಯಾದ ವೇದ ಶಾಸ್ತ್ರಗಳಿಗೆ ಬಾಹ್ಯರಾಗುತ್ತಾರೆ,'' - ಎಂದು ನಿಯಮಿಸಲ್ಪಟ್ಟವರಾಗಿ ಶ್ರೀರಾಮಾನುಜ ಮುನಿವರ ದಿವ್ಯಾಜ್ಞೆಗಳನ್ನು (ನಿಯಮಗಳನ್ನು) ಹಾಗೆಯೇ ಅನುಷ್ಠಿಸುತ್ತಾ ಬಂದರು.

**ತಿರುಪತಿಯ ಬೆಟ್ಟದಲ್ಲಿ ಹೂಮಾಲೆ ಮುಂತಾದವುಗಳನ್ನು ಧರಿಸಕೂಡದು.**

ಇನ್ನು ಶ್ರೀವೇಂಕಟಗಿರಿಯಲ್ಲಿ ಹೂಮಾಲೆ ಮುಂತಾದವುಗಳನ್ನು ಧರಿಸಕೂಡದು ಎಂಬ ವಿಷಯವು ತಿಳಿಸಲ್ಪಡುತ್ತದೆ. ಈ ರೀತಿ ಭಗವಂತನ ಆಜ್ಞೆಯಿಂದ, ಭಗವದ್ರಾಮಾನುಜಮುನಿಗಳಿಂದ ಏರ್ಪಡಿಸಲ್ಪಟ್ಟ - ಶಾಸ್ತ್ರಾನುಗುಣವಾದ - ವಿಶೇಷವಾಗಿ ಭಗವಂತನಿಗೆ ಮುಖೋಲ್ಲಾಸ ವನ್ನುಂಟುಮಾಡುವ ನಿಯಮಗಳನ್ನು ಎಲ್ಲರೂ ಕಪಟವಿಲ್ಲದೆ ಅನುಷ್ಠಾನಮಾಡಿ ಬರುತ್ತಿರಲು, ಶ್ರೀಶೈಲ ಪೂರ್ಣರ ಶಿಷ್ಯನೊಬ್ಬನು ರಜೋಗುಣ ತಮೋಗುಣಗಳಿಗೆ ವಶವಾಗಿ ಒಂದು ದಿನ ದೇವಾಧಿದೇವನಿಗೆ ಧರಿಸಬೇಕಾಗಿದ್ದ ಹೂಮಾಲೆಯನ್ನು ತನ್ನ ತಲೆಯಲ್ಲಿನ ಶಿಖೆಯಲ್ಲಿ ಮುಡಿದುಕೊಳ್ಳಲು, ಆ ರಾತ್ರಿ ಆ ಶ್ರೀಶೈಲಪೂರ್ಣರ ಕನಸಿನಲ್ಲಿ ದೇವಾಧಿದೇವನು ಪ್ರತ್ಯಕ್ಷನಾಗಿ ನಿಂತು, ''ಹೇ, ಶ್ರೀಶೈಲಪೂರ್ಣರೇ, ನಿಮ್ಮ ಶಿಷ್ಯನು ಕೆಟ್ಟಗುಣಗಳಿಗೆ ವಶಪಟ್ಟವನಾಗಿ ನನಗೆ ಪರಿಮಳದ್ರೋಹ (ವಾಸನೆಯ ಪದಾರ್ಥದ ವಿಷಯವಾಗಿ ತಪ್ಪುಮಾಡುವಿಕೆ) ಮಾಡಿದನು'' ಎಂದು ತಿಳಿಸಲು, ಇದನ್ನು ಕೇಳಿದ ಅವರು ನಿದ್ರೆಯಿಂದ ಎಚ್ಚೆತ್ತು ಮಾರನೆಯದಿನ ದೇವಸ್ಥಾನಕ್ಕೆ ತೆರಳಿ, ''ಭಗವಂತನೇ, ಇಂದಿನಿಂದ ನಿತ್ಯವೂ ನಿನ್ನ ಮಾಲೆಗಳ

ಪ್ರಸಾದವನ್ನು ಯಾರಿಗೂ ದಯಪಾಲಿಸ ಬೇಡಿ. ಕಲಿಯ ದೋಷದಿಂದ (ಕಲಿಯುಗದ ದೋಷ) ಒಳ್ಳೆಯವರಿಗೂ ಕೆಟ್ಟಗುಣಗಳು ಉದ್ಭವಿಸುವುದಕ್ಕೆ ಅವಕಾಶ ವುಂಟು. ತಿರುಮಲೆಯಲ್ಲಿ ನೀವು ಯಾರಿಗೂ ಹೂಮಾಲೆ ಕೊಡದೇ ಇದ್ದಲ್ಲಿ ''ಭಗವಂತನಿಗೆ ಅರ್ಪಿಸಿದ ಮಾಲೆಯನ್ನೇ ನಾನು ಮುಡಿದು ಕೊಂಡಿದ್ದೇನೆ'' ಎಂದು ಮೋಸಮಾಡಲಾಗದುದರಿಂದ, ''ಅರಸನು ದಂಡಿಸುತ್ತಾನೆ'' ಎಂಬ ಹೆದರಿಕೆಯಿಂದ ಕೆಟ್ಟನಡವಳಿಕೆಗಳು ಉಂಟಾಗಲು ಅವಕಾಶವಿರದು. ಆದುದರಿಂದ ಈ ತಿರುಮಲೆಯಲ್ಲಿ ಹೂಮಾಲೆಯನ್ನು ಧರಿಸಕೂಡದೆಂಬ ತಡೆಯು ಅರಸದಂಡನೆಯ ವಶವಾಗಿ ಏರ್ಪಟ್ಟುಬಿಟ್ಟರೆ, ಅದರಂತಿನ ಸಾಧಾರಣ ಸಕಲ ಭೋಗಗಳೂ ಕ್ರಮವಾಗಿ ಕಡಿಮೆಯಾಗಿ ಬಿಡುವುವು. ಆದುದರಿಂದ ದಾಸನಾದ ನನ್ನ ಕೋರಿಕೆಯನ್ನು ನೆರವೇರಿಸಿಡಲು ನೀವು ಧೃಡವಾದ ವ್ರತವನ್ನು ಕೈಗೊಳ್ಳಬೇಕು'' ಎಂದು ಪ್ರಾರ್ಥಿಸಿ ಕೊಂಡರು.

ನಂತರ ಶ್ರೀನಿವಾಸದೇವನು ಅವರ ವಿಜ್ಞಾಪನೆಯನ್ನು ಕೇಳಿ ಅರ್ಚಕರ ಮೂಲಕವಾಗಿ, ''ಹೇ ಶ್ರೀಶೈಲಪೂರ್ಣರೇ, ನನ್ನ ಅರ್ಚಾವತಾರವು ನನ್ನ ಭಕ್ತರುಗಳ ಇಷ್ಟವನ್ನು ನೆರವೇರಿಸುವುದನ್ನೇ ಫಲವಾಗಿ ಹೊಂದಿರುವುದರಿಂದ ನಿಮ್ಮ ಕೋರಿಕೆಯನ್ನು ನೆರವೇರಿಸುವುದಕ್ಕಾಗಿ ನಾನು ಧರಿಸಿಕೊಂಡ ಪುಷ್ಪಮಾಲೆ ಮುಂತಾದುವುಗಳನ್ನು ಇಂದಿನಿಂದ ಯಾರಿಗೂ ಕೊಡುವುದಿಲ್ಲ. ಆದುದರಿಂದ ಇನ್ನು ಮುಂದೆ ನಾನು ಧರಿಸಿ ಕಳೆದ ಮಾಲೆಗಳು ಮುಂತಾದವುಗಳನ್ನು ಸೇನೆಮುದಲಿಯಾರ್ (ವಿಷ್ವಕ್ಸೇನರು) ಮುಂತಾದ ಪರಿವಾರ ದೇವತೆಗಳಿಗೆ ಅರ್ಪಿಸಬೇಕು. ಅಥವಾ ಪೂಲಭಾವಿಯಲ್ಲಿ ಸೇರಿಸಬೇಕು.'' ಎಂದು ವಿವರವಾಗಿ ತಿಳಿಸಿ ಆಜ್ಞೆಯಿಟ್ಟು ಕೃಪೆಮಾಡಿದನು. ನಂತರ ಈ ಸುದ್ದಿಯನ್ನು ಕೇಳಿ ಶ್ರೀ ರಾಮಾನುಜ ಮುನಿಗಳೂ ಸಂತೋಷಗೊಂಡರು.

**ಶ್ರೀಸೇನಾಧಿಪತಿ ಜೀಯರ್ ಎಂಬ ಏಕಾಂಗಿಯನ್ನು ಏರ್ಪಡಿಸಿದುದು.**

ಇನ್ನು ಶ್ರೀ ವೇಂಕಟಗಿರಿಯಲ್ಲಿ ನಿತ್ಯವಾಸ ಮಾಡಿಕೊಂಡು ಭಗವಂತನ ದಿವ್ಯವಾದ ಐಶ್ವರ್ಯವನ್ನು ಕಾಪಾಡುವುದಕ್ಕಾಗಿ, ಶ್ರೀ ರಾಮಾನುಜಮುನಿವರ್ಯರು ತಮಗೆ ಪ್ರತಿನಿಧಿಯಾಗಿ (ಬದಲಾಗಿ) ಸ್ಥಾಪಿಸಿದ ಶ್ರೀಸೇನಾಧಿಪತಿ ಜೀಯರ್ ಎಂಬ ಹೆಸರುಳ್ಳ ನೈಷ್ಠಿಕ ಬ್ರಹ್ಮಚಾರಿಯಾದ (ಜೀವನಪೂರ್ತಿ ಮದುವೆ ಮಾಡಿಕೊಳ್ಳದೆ) ಬ್ರಹ್ಮಚಾರಿಯಾಗಿಯೇ ಇದ್ದ) ಏಕಾಂಗಿ ಸ್ವಾಮಿಯ ಚರಿತ್ರೆಯು ಹೇಳಲ್ಪಡುತ್ತದೆ.

ಶ್ರೀ ಭಗವದ್ರಾಮಾನುಜರು ಮುಂಚೆ ಹೇಳಿದ ಉತ್ತಮ ನಿಯಮಗಳನ್ನು ಏರ್ಪಡಿಸಿದನಂತರ, ಶ್ರೀ ಶ್ರೀಶೈಲಪೂರ್ಣರ ಶಿಷ್ಯನಾದ ಒಬ್ಬ ಶ್ರೀ ವೈಷ್ಣವನು ಕಲಿಕಾಲದ ದೋಷದಿಂದ ಮುಂಚೆ ಹೇಳಿದ ರೀತಿ ಒಂದು ನಿಯಮವನ್ನು ಮೀರಿದ

ಸ್ಥಿತಿಯನ್ನು ಕಂಡು, ಆ ನಿಯಮಗಳನ್ನು ಅವುಗಳಿರುವಂತೆಯೇ ಅನುಷ್ಠಿಸುವುದಕ್ಕೂ, ಸ್ಥಳವಾಸಿಗಳಿಗೆ ಆಗಾಗ ಆ ನಿಯಮಗಳಿಂದಾಗುವ ಅತ್ಯಂತ ಉತ್ಕೃಷ್ಟವಾದ ಫಲಗಳನ್ನು ಉಪದೇಶಿಸಿ ಅವುಗಳನ್ನು ಅವರುಗಳೂ ಅನುಷ್ಠಿಸುವುದಕ್ಕಾಗಿಯೂ, ದೇಶಾಧಿಪತಿಯಾದ ಅರಸನಿಗೆ ಆಗಾಗ ಶ್ರೀವೈಷ್ಣವ ಧರ್ಮಗಳನ್ನು ಕಲಿಸುವುದರ ಮೂಲಕ, ನಂಬಿಕೆಯನ್ನುಂಟುಮಾಡಿಸಿ, ಅದರ ಮೂಲಕವಾಗಿ ಶ್ರೀವೇಂಕಟನಾಥನ ದಿವ್ಯೋತ್ಸವವೇ ಮುಂತಾದ ಐಶ್ವರ್ಯಗಳನ್ನು ಅಭಿವೃದ್ಧಿಗೊಳಿಸಲು ಈ ದಿವ್ಯದೇಶದಲ್ಲಿ ವಿರಕ್ತರಾದ ಅಧಿಕಾರಿಯೊಬ್ಬರು ಸ್ಥಿರವಾಸಮಾಡಿಕೊಂಡಿರಬೇಕೆಂದು ಚಿಂತಿಸಿ, ಶ್ರೀ ಶೈಲಪೂರ್ಣರನ್ನೂ ತಿರುಮಲೆ ಆನಂದಾಳ್ವಾನ್‌ರನ್ನೂ ಕರೆದು, "ಹೇ ಆರ್ಯರುಗಳೇ, ಈ ತಿರುಮಲೆಯಲ್ಲಿ ಶ್ರೀ ವೈಕುಂಠನಾಥನ ದಿವ್ಯವೈಭವ (ಐಶ್ವರ್ಯ)ಗಳನ್ನು ಪರಿಪಾಲಿಸಲೂ, ಜನರು (ಕೆಟ್ಟನಡವಳಿಕೆಯಿಂದ ನಡೆಯದಂತೆ) ಅಪಚಾರವೆಸಗದಂತೆ ಇರುವ ಸಲುವಾಗಿ, ಅವರುಗಳ ಅಭ್ಯುದಯದ ಕಾರಣವಾಗಿ (ಇಹ ಸಂಸಾರದಲ್ಲೂ ಮತ್ತು ಪರದಲ್ಲೂ ಸುಖ ಸಂತೋಷದಿಂದಿರಲು) ದಾಸನು ನಿರ್ಮಿಸಿದ ನಿಯಮಗಳನ್ನು ಅವುಗಳಿರುವ ರೀತಿಯಲ್ಲಿಯೇ ನಡೆಸುವುದಕ್ಕೂ, ದೇವಸ್ಥಾನದಲ್ಲಿರುವ ಸರ್ವಪರಿಜನರುಗಳನ್ನೂ ನಿಯಂತ್ರಿಸುವ, ವೈರಾಗ್ಯವನ್ನೇ ಪ್ರಧಾನವನ್ನಾಗಿಯುಳ್ಳ, ಉನ್ನತವಾದ ಅಧಿಕಾರಿಯೊಬ್ಬನನ್ನು ಈ ತಿರುಮಲೆಯಲ್ಲಿ ನಿತ್ಯವಾಸಿಯಾಗಿ ಇರುವಂತೆ ಸ್ಥಾಪಿಸಬೇಕೆಂದು ಚಿಂತಿಸಿರುತ್ತೇನೆ. ಯಾವಾಗಲೂ ಭಗವದ್ಗುಣಗಳನ್ನು ಅನುಭವಿಸುವುದರಲ್ಲಿಯೂ, ಕೈಂಕರ್ಯಗಳನ್ನು ನೆರವೇರಿಸುವುದರಲ್ಲಿಯೇ ಮುಖ್ಯ ಗುರಿಯಾಗಿರುವವರಾಗಿ ದೇವಸ್ಥಾನದ ಪರಿಜನಗಳ ಗುಣ ದೋಷಗಳನ್ನು ಕಂಡು ಅದಕ್ಕೆ ತಕ್ಕಂತೆ ಅವರುಗಳನ್ನು ದಂಡಿಸುವುದೂ ಮುಂತಾದ ಕೆಲಸಗಳಲ್ಲಿ ತೃಪ್ತಿಯಿಲ್ಲದವರುಗಳಾದ ತಮ್ಮಗಳಿಬ್ಬರಿಗೂ, ಆ ಕಾಲಗಳಲ್ಲಿ ದೇವಸ್ಥಾನದಲ್ಲಿ ತಪ್ಪದೇ ಇದ್ದು ಆಯಾಯಾ ಸಂದರ್ಭಗಳಿಗೆ ಅನುಸಾರವಾಗಿ ಮಾಡಬೇಕಾದ ಕೆಲಸಗಳಲ್ಲಿ ಅಸ್ತವ್ಯಸ್ಥೆಗಳಿಂದ ಉಂಟಾಗುವ ಶ್ರಮವನ್ನು ಸಹಿಸಲೋ, ಮಾಡಲೋ ಅಸಾಧ್ಯವಾದುದರಿಂದ, ತಮ್ಮಗಳ ಅಧೀನರಾದಂಥಹ, ತಮ್ಮಗಳ ಆಜ್ಞೆಗಳನ್ನು ಪರಿಪಾಲಿಸುವವರಾಗಿ, ಮುಂಚೆ ತಿಳಿಸಿದ ಕಾರ್ಯಗಳನ್ನು ನೆರವೇರಿಸುವುದರಲ್ಲಿ ಆಸಕ್ತಿಯುಳ್ಳವರಾದ ವೈರಾಗ್ಯವುಳ್ಳ ಅಧಿಕಾರಿಯೊಬ್ಬರನ್ನು ನಿಯಮಿಸಲು (ಸ್ಥಾಪಿಸಲು) ಇಚ್ಛಿಸುತ್ತೇನೆ. ಆದುದರಿಂದ ತಾವುಗಳಿಬ್ಬರೂ ಸಮ್ಮತಿಸಿ ದಾಸನು ಏರ್ಪಡಿಸುವ ಅಧಿಕಾರಿಯು ತನ್ನ ಕರ್ತವ್ಯದಿಂದ ಚ್ಯುತರಾಗದಂತೆ ನೋಡಿಕೊಳ್ಳಬೇಕು.

ದಾಸನು ಇಲ್ಲಿಯೇ ಸ್ಥಿರವಾಗಿ ಇರುವವನಲ್ಲ. ಇದ್ದರೆ ದಾಸನೇ ಈ ಕಾರ್ಯವನ್ನು ಮಾಡುವೆ' ಎಂದು ಹೇಳಿ,

"ಒಬ್ಬ ಬ್ರಹ್ಮಚಾರಿಯು ತನಗೆ ವಿರಕ್ತನಾಗಿರುವುದಕ್ಕೆ ಮನಸ್ಸಿರುವುದಾಗಿ ತಿಳಿದಲ್ಲಿ ಬುದ್ಧಿಶಾಲಿಯಾದ ಆತನು ಆ ಮನಸ್ಸನ್ನೇ ಸಂಕಲ್ಪಿಸಿ (ಜೀವನ ಪರ್ಯಂತವೂ ಮದುವೆ ಮಾಡಿಕೊಳ್ಳದೆಯೇ, ಅದೇ ಸ್ಥಿರವಾದ ಮನಸ್ಸಿನಿಂದ ಇರುವವನಾಗುತ್ತೇನೆ ಎಂದು ಸಂಕಲ್ಪಿಸಿ) ಕಾಷಾಯವಸ್ತ್ರವನ್ನುಟ್ಟುಕೊಳ್ಳುವವನಾಗಬೇಕು," ಎಂದು ಪರಮೇಶ್ವರ ಸಂಹಿತೆಯಲ್ಲಿರುವಂತೆ, ಜಿತೇಂದ್ರಿಯನಾಗಿ ಅಸ್ಖಲಿತವೀರ್ಯನಾಗಿ (ದಾಂಪತ್ಯ ಜೀವನದಲ್ಲಿ ಆಸೆಯಿಲ್ಲದೆ, ವೀರ್ಯವನ್ನು ಊರ್ಧ್ವ ಮುಖವಾಗಿಟ್ಟು ಕೆಳಗೆ ಬೀಳದಂತೆ ಅಡಗಿಸಿಟ್ಟು) ಮಂತ್ರಪೂರ್ವಕವಾಗಿ ಕಾವಿ ಬಟ್ಟೆಯನ್ನು ಧರಿಸಿದ ಬ್ರಹ್ಮಚಾರಿಯೇ ನೈಷ್ಠಿಕ ಬ್ರಹ್ಮಚಾರಿಯಾದುದರಿಂದ ಅಂಥಹ ಒಬ್ಬರನ್ನು ಹುಡುಕಬೇಕೆಂದು ಹೇಳಿ, ಆಗ ಅನಂದಾಳ್ವಾನ್‌ರ ಶಿಷ್ಯರೊಬ್ಬರು ಬ್ರಹ್ಮಚಾರಿಯಾಗಿ ಗುರುಕುಲವಾಸವನ್ನು ಬಹಳವಾಗಿ ಇಷ್ಟಪಟ್ಟು ಆಚಾರ್ಯ ಕೈಂಕರ್ಯವೊಂದರಲ್ಲಿಯೇ ಮಗ್ನರಾಗಿಯೂ, ವೈರಾಗ್ಯ ಹೊಂದಿದವರಾಗಿಯೂ ಇರುವುದನ್ನು ಕಂಡು ಅವರನ್ನು ಕರೆಸಿ ಒಳ್ಳೆಯ ಉಪದೇಶವನ್ನು ಮಾಡಿ, ತಾವು ಯೋಚಿಸಿದಂತೆ ಕಾವಿವಸ್ತ್ರವನ್ನು ಧರಿಸಿಕೊಳ್ಳಲೂ, ಶ್ರೀವೇಂಕಟನಾಥನ ದೇವಸ್ಥಾನದಲ್ಲಿ ಮುಂಚೆ ಹೇಳಿದಂತೆ ಸಕಲವಿಧವಾದ ಕೈಂಕರ್ಯಗಳನ್ನು ಮಾಡಲು ಅವರನ್ನೊಪ್ಪಿಸಿ, ಅವರಿಗೆ ಅನಂದಾಳ್ವಾನ್‌ರ ಅನುಮತಿಯನ್ನೂ ಕೊಡಿಸಿ, ನೈಷ್ಠಿಕ ಬ್ರಹ್ಮಚಾರಿಯ ಸ್ಥಿತಿಗೆ ಅಂಗವಾಗಿ ಮುಂಚೆ ಹೇಳಿದ ಸಂಹಿತೆಯ ವಚನದಿಂದ ತಿಳಿಸಲ್ಪಟ್ಟ ಕಾಷಾಯ ವಸ್ತ್ರವನ್ನು ಮಂತ್ರಪೂರ್ವಕವಾಗಿ ಧರಿಸುವಂತೆ ಮಾಡಿ, ಸೇನೆಮುದಲಿಯಾರ್ (ವಿಷ್ವಕ್ಸೇನರು) ರಂತೆ ಭಗವತ್ಕೈಂಕರ್ಯಭಾರವನ್ನು ವಹಿಸುವುದರಿಂದಲೂ, ಸನ್ಯಾಸಾಶ್ರಮಕ್ಕೇ ಅಂಗವಾದ ತ್ರಿದಂಡ (ಮೂರು ಕೋಲು) ಮತ್ತು ಕಾಷಾಯವಸ್ತ್ರ ಇವೆರಡರಲ್ಲಿ ಒಂದಾದ, ವೈರಾಗ್ಯವನ್ನು ತಿಳಿಸುವ ಕಾವಿವಸ್ತ್ರವನ್ನು ಧರಿಸುವುದರಿಂದಲೂ, ವಿಷ್ವಕ್ಸೇನೈಕಾಂಗಿ ಎಂಬ ಸೇನಾಧಿಪತಿ ಜೀಯರ್ (ಸೇನಾಧಿಪತಿ ಯತಿ) ಎಂಬ ಹೆಸರನ್ನಿಟ್ಟು, "ಹೇ ಏಕಾಂಗಿಯೇ, ಶ್ರೀವೇಂಕಟನಾಥನಾದ ಶ್ರೀನಿವಾಸನ ದಿವ್ಯ ವೈಭವ (ಸಂಪತ್ತು) ಗಳಿಗೆ ಕೊರತೆ ಬಾರದಂತೆ ದೇವಸ್ಥಾನದಲ್ಲಿ ಸೇವೆ ಮಾಡುವವರು ಅಪಚಾರಮಾಡದಂತೆಯೂ (ತಪ್ಪುಮಾಡದಂತೆಯೂ) ಇರುವಂತೆ ಒಳ್ಳೆಯ ಉಪದೇಶವನ್ನು ಮಾಡಿ ಅವರುಗಳ ಮೂಲಕವಾಗಿ ಭಗವತ್ ಕೈಂಕರ್ಯಗಳನ್ನು ನಡೆಸಿಕೊಂಡು ಬನ್ನಿ, ಶ್ರೀವೇಂಕಟನಾಥನ ದಿವ್ಯಮಂಗಳ ವಿಗ್ರಹಕ್ಕೂ, ಹವಳದಂತಿರುವ ಶ್ರೀಮುಖ (ಬಾಯಿ) ಕ್ಕೂ ತಕ್ಕಂತೆ ಔಪಚಾರಿಕಗಳನ್ನು (ಹತ್ತಿರ ನಿಂತು ಮಾಡುವ ಧೂಪ, ದೀಪಗಳನ್ನು ಸಮರ್ಪಿಸುವುದೂ ಮುಂತಾದವುಗಳು) ಸಾಂಸ್ಪರ್ಶಿಕ (ಮುಟ್ಟಿಮಾಡುವಂಥಹ ಪೀತಾಂಬರ, ಚಂದನ, ಪುಷ್ಪಮಾಲೆ ಧರಿಸುವುದೂ

ಮುಂತಾದುವುಗಳು) ಅಭ್ಯವಹಾರಿಕ (ಕ್ಷೀರಾನ್ನ, ಪಾಯಸ, ಸಕ್ಕರೆಪೊಂಗಲ್ ಮುಂತಾದ ಮಧುರ ಪದಾರ್ಥಗಳನ್ನು ನಿವೇದಿಸುವುದು) ಎನ್ನುವ ಸಕಲ ವಿಧವಾದ ಭೋಗಗಳನ್ನು ಕ್ರಮವಾಗಿ ನೆರವೇರಿಸಿ, ದೇಶಾಧಿಪತಿಯಾದ ಅರಸನನ್ನು ಆಗಿಂದಾಗ್ಗೆ ಭೇಟಿಮಾಡಿ, ಅವನಿಗೆ ಭಗವತ್ಕೈಂಕರ್ಯದಲ್ಲಿ ಆಸಕ್ತಿಯನ್ನು ವೃದ್ಧಿಮಾಡಿ, ಅವನನ್ನು ಮುಂದಿಟ್ಟುಕೊಂಡು ನಿಂತು ಹೋದ ಕೈಂಕರ್ಯಗಳನ್ನು ಪುನಃ ನಡೆಸುವಂತೆ ಮಾಡಿ ( ಉಂಟಾಗಿಸಿ) ಆಯಾಯಾ ಕಾಲ ದೇಶಗಳಿಗನುಸಾರವಾಗಿ ಹೊಸದಾದ ಕೈಂಕರ್ಯಗಳನ್ನು ಏರ್ಪಡಿಸಿಯೂ, ನಡೆದುಕೊಂಡುಬರುತ್ತಿರುವ ಕೈಂಕರ್ಯಗಳನ್ನು ಮೇಲಿಂದ ಮೇಲೆ ವೃದ್ಧಿಪಡಿಸುತ್ತಲೂ, ಶ್ರೀವೇಂಕಟನಾಥನ ಕೈಂಕರ್ಯಭಾರವನ್ನು ಹೊತ್ತವರುಗಳೂ, ಆದರಿಂದ ಆ ದೇವನ ಮಹಾನ್ ಅಭಿಮಾನಕ್ಕೆ ಪಾತ್ರರಾದವರುಗಳಾದ ಶ್ರೀಶೈಲಪೂರ್ಣರೂ, ತಿರುಮಲೆ ಅನಂದಾಳ್ವಾನ್‌ರವರೂ ಆದ ಈ ಇಬ್ಬರ ಆಜ್ಞೆಯನ್ನು ಶಿರಸಾವಹಿಸಿ ನಡೆಸಿಯೂ ಶ್ರೀವೇಂಕಟನಾಥನ ದಿವ್ಯ ಸಂಪತ್ತನ್ನು ಪರಿಪಾಲನೆ ಮಾಡಿ, ಎಂದು ನಿಯಮಿಸಿದರು (ಶ್ರೀರಾಮಾನುಜರು)

### ಆ ಏಕಾಂಗಿಗೆ ಮಠ ಮುಂತಾದುವುಗಳನ್ನು ಏರ್ಪಡಿಸಿದುದು

ಮೇಲೂ, ಆ ರಾಮನುಜಮುನಿವರ್ಯರು, ಶ್ರೀರಾಮಾವತಾರದಲ್ಲಿ ಭಗವಂತ ( ರಾಮ) ನ ನಿತ್ಯನಿರವದ್ಯ ಕೈಂಕರ್ಯಭಾರವನ್ನು ಹೊತ್ತ ಆಂಜನೇಯನು ಇದ್ದುದರಿಂದ, ಆತನ ಅಭಿಮಾನವನ್ನುಂಟಾಗಿಸಲು, ಆತನ ಸನ್ನಿಧಿಗೆ (ದೇವಸ್ಥಾನಕ್ಕೆ) ಸಮೀಪದಲ್ಲಿಯೇ ಆ ಏಕಾಂಗಿಗೆ ವಾಸಿಸಲು ಮಠವೊಂದನ್ನು ನಿರ್ಮಿಸಿ, ಶ್ರೀರಾಮಾಯಣ ಗ್ರಂಥಪಾಠದ ಮುಕ್ತಾಯ ಸಮಯದಲ್ಲಿ, ಶ್ರೀ ಶ್ರೀಶೈಲಪೂರ್ಣರಿಂದ ಹೇಳಲ್ಪಟ್ಟು ತಮ್ಮಿಂದ ಆರಾಧಿಸಲ್ಪಟ್ಟು ಬರುತ್ತಿರುವ ಚಕ್ರವರ್ತಿ ಶ್ರೀಕುಮಾರ (ಶ್ರೀರಾಮ)ನನ್ನು ಆ ಮಠದಲ್ಲಿ ಬಿಜಯಗೈದಿಸಿ (ಪ್ರತಿಷ್ಠೆಮಾಡಿಸಿ) ಆ ದೇವನಿಗೆ ಆರಾಧನೆಯನ್ನು ಶ್ರದ್ಧೆಯಿಂದ ಮಾಡುವಂತೆ ಆ ಏಕಾಂಗಿಯನ್ನು ನಿಯಮಿಸಿ, ಶ್ರೀ ವೇಂಕಟನಾಥನ ಕೈಂಕರ್ಯಭಾರವನ್ನು ಹೊತ್ತವರೂ, ಶ್ರೀರಾಮನನ್ನು ಪೂಜಿಸುವುದರಲ್ಲಿ ಪೂರ್ಣ ದೃಷ್ಟಿಯನ್ನಿಟ್ಟಿರುವವರಾದ ಈ ಏಕಾಂಗಿಗೆ, ಮುಂಚೆ ಆ ಸ್ಥಾನವನ್ನು ವಹಿಸಿದ ಆಂಜನೇಯನದಾದ ಲಕ್ಷ್ಮಣಗಳೇ ಭಗವತ್ಕೈಂಕರ್ಯ ಭಾರವನ್ನು ವಹಿಸುವ ಗುಣವನ್ನು ತಿಳಿಯಪಡಿಸುವ ಉತ್ಕೃಷ್ಟ ಲಕ್ಷಣಗಳಾಗಿ ಇರತಕ್ಕವುಗಳೆಂದೂ, ಆಂಜನೇಯನ ಅಭಿಮಾನವನ್ನು ವೃದ್ಧಿಪಡಿಸುವುದರಿಂದ ದೋಷರಹಿತವಾದ ಭಗವತ್ಕೈಂಕರ್ಯವನ್ನು ರಕ್ಷಿಸುವುದಕ್ಕೆ ಬೇಕಾದ ಸಾಧನವು ಎಂದು ಚಿಂತಿಸಿ, ಆಂಜನೇಯನ (ಹನುಮಂತನ) ರೂಪವನ್ನು ಅಳವಡಿಸಿರುವ ಒಂದು ಮುದ್ರೆಯುಂಗುರ, ದೇವಸ್ಥಾನದ ಬಾಗಿಲುಗಳನ್ನು ಮುಚ್ಚಿ ಬೀಗ ಹಾಕುವ ಬೀಗಕ್ಕೆ

ಬೀಗದ ಕೈ, ಒಂದು ಘಂಟೆ, ಧ್ವಜವಸ್ತ್ರ, ಧ್ವಜದಸ್ತಂಭ (ಕೋಲು) ಆದುವುಗಳನ್ನು ನಿರ್ಮಿಸಿ, ಶ್ರೀವೇಂಕಟನಾಥನ ಮುಂದೆಯೇ ಇಟ್ಟು, ಆ ದೇವನ ಆಜ್ಞೆಯನ್ನು ಪಡೆದು ಆ ಏಕಾಂಗಿಗೆ ಕೊಡಿಸಿ ಅದರಿಂದಲೇ ಅವರು ಕೈಂಕರ್ಯವನ್ನು ನೆರವೇರಿಸಲು ಹೋಗುವಾಗ ಆ ಘಂಟಾನಾದದೊಂದಿಗೆ, ಆ ಧ್ವಜದೊಂದಿಗೆ ಹೋಗಬೇಕೆಂದೂ, ಆಂಜನೇಯನ ಮುದ್ರೆಯನ್ನು ಹೊಂದಿದ ಉಂಗುರದಿಂದ, ಹಣದ ಭಂಡಾರ, ಧಾನ್ಯ ಭಂಡಾರ, ದೇವಸ್ಥಾನ ಮುಂತಾದವುಗಳ ಬಾಗಿಲುಗಳ ಬೀಗಗಳಲ್ಲಿಯೂ, ಆಭರಣ ಪೆಟ್ಟಿಗೆಗಳಲ್ಲಿಯೂ ಮುಂತಾದ ಕಾಪಾಡಲ್ಪಡಬೇಕಾದ ಎಲ್ಲಾ ಜಾಗಗಳಲ್ಲಿಯೂ ರಕ್ಷಣೆಗಾಗಿ ಮುದ್ರೆಯನ್ನಿಡಬೇಕೆಂದೂ, ಹನುಮಂತನ ಮುದ್ರಾಂಕಿತವಿರುವ ಬೀಗದಕೈನಿಂದ ಪ್ರತಿನಿತ್ಯವೂ ರಾತ್ರಿ, ಹಗಲೂ ದೇವನ ಆರಾಧನೆಯು ಮುಗಿದನಂತರ ದೇವಸ್ಥಾನದ ಬಾಗಿಲಲ್ಲಿ ಜೋಡಿಸಿರುವ ಬೀಗವನ್ನು ಹಾಕಬೇಕು - ಎಂದೂ, ಈ ರೀತಿ ಭಗವಂತನ ದಿವ್ಯ ಐಶ್ವರ್ಯದ ರಕ್ಷಣೆಗಾಗಿ ನಿಯಮಗಳನ್ನು (ಶ್ರೀರಾಮಾನುಜರು) ಮಾಡಿದರು.

**ಯಾದವರಾಜನಿಗೆ ಆಜ್ಞಾಪಿಸಿದುದು**

ಅನಂತರ ಭಗವದ್ರಾಮಾನುಜರು ತಮ್ಮ ಚರಣಗಳಲ್ಲಿ ಸೇವೆಮಾಡುವ ಯಾದವರಾಜನನ್ನು ಕರೆದು, ''ಹೇ ಯಾದವರಾಜನೇ, ನಾಡಿನಲ್ಲೆಲ್ಲಾ ಚೆನ್ನಾಗಿ ವೃದ್ಧಿಸುತ್ತಿರುವ ಕಲಿಕಾಲದ ಆರಂಭದ ಫಲದಿಂದ ಶ್ರೀವೇಂಕಟನಾಥನ ಈ ದಿವ್ಯವಾದ ಐಶ್ವರ್ಯಕ್ಕೆ ಎಲ್ಲಾ ವಿಧವಾದ ತೊಂದರೆಗಳೂ ಉಂಟಾಗುತ್ತವೆ ಎಂದು ನನ್ನ ಮನಸ್ಸಿಗೆ ಅಂಜಿಕೆಯಾಗಿದೆ. ಆದುದರಿಂದ ನಾನು ಈ ವಿಧವಾದ ಕಟ್ಟು ಪಾಡುಗಳನ್ನು ಮಾಡಿದೆನು. ಇವುಗಳನ್ನು ಕ್ರಮವಾಗಿ ನೆರವೇರಿಸುವವನಾಗು. ಈ ದೇವಸ್ಥಾನದಲ್ಲಿರುವ ಕೈಂಕರ್ಯಪರರೂ, ಮಿಕ್ಕ ಪರಿಜನರೂ ಆದ ಎಲ್ಲರೂ, ನನಗೆ ಪ್ರತಿನಿಧಿಗಳಾಗಿ ನನ್ನಿಂದ ನೇಮಿಸಲ್ಪಟ್ಟ ಈ ವಿಷ್ವಕ್ಸೇನ ಏಕಾಂಗಿಗೆ ಎಲ್ಲಾ ವಿಧದಲ್ಲಿಯೂ ವಿಧೇಯರಾಗಿ ನಡೆದುಕೊಂಡು ಬರಬೇಕೆಂದೂ, ಇವರ ಆಜ್ಞೆಯನ್ನು ಮೀರಿದವರುಗಳು ಆ ಹಕ್ಕುಗಳಿಂದ ತೊಲಗಿಸಲ್ಪಡುವರೆಂದೂ, ಅತ್ಯಂತ ಪ್ರಬಲವಾದ, ಕಠಿಣವಾದ ಆಜ್ಞೆಯನ್ನು ಸುದೃಢವಾದ ಶಾಸನವನ್ನಾಗಿ ಹೊರಡಿಸುವವನಾಗು. ಇವರು ಮರಣಹೊಂದಿದರೂ ಸರಿಯೇ, ಅಥವಾ ತಮ್ಮ ಕರ್ತವ್ಯದಲ್ಲಿ ಎಲ್ಲೆ ಮೀರಿ ನಡೆದರೂ ಸರಿಯೇ, ನನಗೂ ಸಹ ಗೌರವಾನ್ವಿತರಾದ ಅತ್ಯಂತ ವಯೋವೃದ್ಧರುಗಳೂ ಆಗಿರುವ ಶ್ರೀ ಶ್ರೀಶೈಲಪೂರ್ಣರೂ ಶ್ರೀ ಅನಂದಾಳ್ವಾನ್‌ರವರೂ ಆದ ಈ ಈರ್ವರ ಅನುಮತಿಯನ್ನು ಆಧರಿಸಿ ಇವರ ಸ್ಥಾನಕ್ಕೆ ಬೇರೊಬ್ಬರನ್ನು ನಿಯಮಿಸುವವನಾಗು. ಈ ತರಹದ ಏಕಾಂಗಿಯೊಬ್ಬರು ಇಲ್ಲದಿದ್ದ ಪಕ್ಷದಲ್ಲಿ ದೇವಾಧಿದೇವನ ಕೈಂಕರ್ಯಗಳು ಯಾವ ಕೊರತೆಯೂ

ಇಲ್ಲದಂತೆ ನಡೆಯಲಾರದು. ಆದುದರಿಂದ ಅವಶ್ಯಕವಾಗಿ ಮುಂಚೆ ತಿಳಿಸಿದಂತೆ ಶಾಸನಗಳನ್ನು ಹೊರಡಿಸುವವನಾಗು'' ಎಂದು ನಿಯಮಿಸಿ ಅದನ್ನು ಶಾಸನವನ್ನಾಗಿ ಮಾಡಿಸಿ ಹೊರಪಡಿಸಿ, ಅರ್ಚಕರುಗಳೂ ಪರಿಚಾರಕರುಗಳೂ ಮತ್ತು ಇತರ ಅಧಿಕಾರಿಗಳೂ ಎಲ್ಲರನ್ನೂ ಆ ಏಕಾಂಗಿ ಶ್ರೀವೈಷ್ಣವರಿಗೆ ವಿಧೇಯರಾಗಿ ನಡೆಯಬೇಕೆಂದು ತಿಳಿಸಿ, ಅವರ ಮೂಲಕವಾಗಿಯೇ ಶ್ರೀವೇಂಕಟನಾಥನ ಸೇವೆಗಳೆಲ್ಲವನ್ನೂ ನಡೆಯುವಂತೆ ಮಾಡಿದರು.

ಈ ರೀತಿ ಶ್ರೀರಾಮಾನುಜ ಮುನಿವರ್ಯರು ತಮ್ಮ ಸ್ಥಾನದಲ್ಲಿ ಶ್ರೀಸೇನಾಧಿಪತಿಯೆಂಬ ಮತ್ತೊಂದು ಹೆಸರನ್ನು ಪಡೆದ ವಿಷ್ವಕ್ಸೇನ ಏಕಾಂಗಿಯನ್ನು ನಿಯಮಿಸಿ, ಶ್ರೀ ಶ್ರೀಶೈಲಪೂರ್ಣರಿಂದ ತಮಗೆ ಕೊಡಲ್ಪಟ್ಟ ಚಕ್ರವರ್ತಿ ಶ್ರೀಕುಮಾರ (ಚಕ್ರವರ್ತಿತ್ತಿರುಮಹನ್ - ಶ್ರೀರಾಮ) ನಿಗೆ ಆರಾಧನೆ ಮಾಡುವಂತೆ ಅವರನ್ನು ಏರ್ಪಡಿಸಿ ನಿಶ್ಚಿಂತರಾಗಿ, ಮುಂಚೆಯೇ ಕೆಳತಿರುಪತಿಯಲ್ಲಿ ಪ್ರತಿಷ್ಠೆ ಮಾಡಲ್ಪಟ್ಟವರಾಗಿ (ಆಂಡಾಳ್)ಗೋದಾ ದೇವಿಯೊಂದಿಗೆ ಕೂಡಿದ ಶ್ರೀಗೋವಿಂದರಾಜದೇವನ ದಿವ್ಯೈಶ್ವರ್ಯವನ್ನು ನಿರ್ವಿಘ್ನವಾಗಿ, ಉತ್ತಮವಾಗಿ ಕಾಪಾಡಬೇಕೆಂದು ಯಾದವರಾಜನಿಗೆ ಅಪ್ಪಣೆಮಾಡಿ ಶ್ರೀರಂಗಕ್ಕೆ ಹೋಗಿ ಸೇರಿ ಆಗಾಗ ಶ್ರೀವೇಂಕಟನಾಥನ ವೈಭವವನ್ನೂ ವಿಚಾರಿಸುತ್ತಲೇ ಬಂದರು.

**ಶ್ರೀವೇಂಕಟ ಶಠಕೋಪ ಜೀಯರ್ ಸ್ವಾಮಿ :-**

ಇನ್ನು ಶ್ರೀವೇಂಕಟಗಿರಿಯಲ್ಲಿ ಶ್ರೀಭಗವದ್ರಾಮಾನುಜ ಮುನಿವರ್ಯರಿಂದ ಸ್ಥಾಪಿಸಲ್ಪಟ್ಟ ಶ್ರೀವೇಂಕಟನಾಥ (ಅಪ್ಪನ್) ಶಠಕೋಪ ಜೀಯರ್ ಸ್ವಾಮಿಯ ಚರಿತ್ರೆಯು ಹೇಳಲ್ಪಡುತ್ತದೆ. ಆದಿಶೇಷಾವತಾರವಾಗಿ ಸಕಲದಿವ್ಯದೇಶ ರಕ್ಷಣೆ ಮಾಡುವುದರಲ್ಲಿಯೇ ನಿಮಗ್ನರಾಗಿದ್ದ ಶ್ರೀ ಭಗವದ್ರಾಮಾನುಜಮುನಿವರ್ಯರು ಶ್ರೀ ವೇಂಕಟಗಿರಿಯಾದ ದಿವ್ಯದೇಶವನ್ನು ಕುರಿತು ಮಾಡಿದ ಹಲವು ಯಾತ್ರೆಗಳಲ್ಲಿ ಮೊದಲ ಯಾತ್ರೆಯಲ್ಲಿ ವಿಠ್ಠಲ ದೇವನೆಂಬ ಒಬ್ಬರಾಜನನ್ನು ಅತ್ಯಂತ ಪ್ರಿಯನಾದ ಮತ್ತು ಅಂತರಂಗ ಕಿಂಕರನನ್ನಾಗಿ ಮಾಡಿಕೊಂಡು ಅವನ ಮೂಲಕವಾಗಿ ಜೀವನಕ್ಕಾಗಿ ಬಾಲಮಂಡ್ಯವೆಂಬ ಹೆಸರನ್ನುಳ್ಳದಾದ ನದೀ ನೀರಿನ ಆಶ್ರಯಪಡೆದ ಒಂದು ಗ್ರಾಮವನ್ನು ಕೊಡಿಸಿ, ತಮ್ಮ ಚರಣಾರವಿಂದಗಳನ್ನು ಆಶ್ರಯಿಸಿದ ಕೆಲವು ಶ್ರೀವೈಷ್ಣವರುಗಳನ್ನು ಕೆಳಗಿನ ತಿರುಪತಿಯಲ್ಲಿ ವಾಸಿಸುವಂತೆ ಮಾಡಿ ಅವರುಗಳಿಗೆ ತತ್ವಾರ್ಥಗಳನ್ನುಪದೇಶಿಸಿಕೊಂಡೂ, ಆಳ್ವಾರ್‌ಗಳೂ, ಪುರಾಣಪ್ರಸಿದ್ಧರಾದ ಶುಕಮಹರ್ಷಿ ಮೊದಲಾದ ಪರಮಋಷಿ ಗಣಗಳೂ, ಪ್ರಹ್ಲಾದನೇ ಮುಂತಾದ ಭಾಗವತರುಗಳೂ, ಅಂಬರೀಷಾದಿ ರಾಜರ್ಷಿಗಳೂ ಆದ ಇವರುಗಳಂತೆ,

ಆದಿಶೇಷಾವತಾರವಾಗಿಯೂ, ವೈಕುಂಠದಿಂದ ತರಲ್ಪಟ್ಟ ಅಪ್ರಾಕೃತವಾದ ಭಗವಂತನ ಕ್ರೀಡಾವಿಹಾರ ಪರ್ವತವಾಗಿಯೂ, ಭಗವಂತನ ದಿವ್ಯವಾದ ಶರೀರವಾಗಿಯೂ, ಪುರಾಣದಿಂದ ತಿಳಿಯಲ್ಪಟ್ಟ ಶ್ರೀವೇಂಕಟಗಿರಿಯನ್ನು ತಾವೂ ಹತ್ತಲಿಷ್ಟಪಡದವರಾಗಿ, ಕೆಳಗಿನಿಂದಲೇ ಶ್ರೀವೇಂಕಟನಾಥನನ್ನು ಮಂಗಳಾಶಾಸನ ಮಾಡಿಕೊಂಡೂ, ಕೆಳಗಿನ ತಿರುಪತಿಯಲ್ಲಿಯೇ ಕೆಲದಿನಗಳಿದ್ದು, ನಂತರ ಒಂದು ಕಾಲದಲ್ಲಿ (ಶ್ರೀರಂಗದಲ್ಲಿ) ಸಹಸ್ರಗೀತೆ ಕಾಲಕ್ಷೇಪ ಸಮಯದಲ್ಲಿ ತಾವೇ ಆಜ್ಞೆಮಾಡಿದಂತೆ ಇಲ್ಲಿಗೆ ಬಂದು ನಂದನವನ, ಕೆರೆ ಮುಂತಾದವುಗಳನ್ನು ಕೈಂಕರ್ಯವಾಗಿ ಮಾಡಿ ಪ್ರತಿನಿತ್ಯವೂ ಸುವಾಸನಾಭರಿತ ಶ್ರೀತುಳಸೀ ಮತ್ತು ಪುಷ್ಪಮಾಲೆಗಳನ್ನು ಸಮರ್ಪಿಸುವ ಕೈಂಕರ್ಯದಿಂದ ಶ್ರೀವೇಂಕಟನಾಥನನ್ನು ಸಂತೋಷಗೊಳಿಸಿ ಆದರಿಂದ ಭಗವಂಥನ ನಿರತಿಶಯ ಕರುಣಾರಸ ಪ್ರವಾಹದ ಸಮೃದ್ಧಿಗೆ ಪಾತ್ರರಾದ ಶ್ರೀ ಅನಂದಾಳ್ವಾನ್ ಹಲವು ಶ್ರೀ ವೈಷ್ಣವರುಗಳೊಡನೆ ತಿರುಮಲೆಯಿಂದ ಇಳಿದು ಬಂದು ಪ್ರಾರ್ಥಿಸಲು, ಶ್ರೀವೇಂಕಟಗಿರಿಯನ್ನು ಹತ್ತಿ ಹೋಗಿ, ಅಲ್ಲಿ ದೇವಾಧಿದೇವನ ದೇವಸ್ಥಾನದ ನೈಋತ್ಯದಿಕ್ಕಿನಲ್ಲಿ, ಆ ಅನಂದಾಳ್ವಾನ್, ತಮ್ಮ ಆಜ್ಞೆಯನ್ನು ಶಿರಸಾವಹಿಸಿ ನಿರ್ಮಿಸಿದ ತೋಟ, ಕೆರೆ ಮೊದಲಾದುವುಗಳನ್ನು ಕಂಡು ಆನಂದಿಸಿ, ಅವರನ್ನು ತಮ್ಮ ಶೀತಲ ಕರುಣಾ ಸುಧಾಸಾರಪೂರ ಪ್ರವಾಹದಿಂದ ತೊಯ್ದು, ಆಲಂಗಿಸಿ, ಕೊಂಡಾಡಿ, ಸ್ವಾಮಿಪುಷ್ಕರಿಣಿಯಲ್ಲಿ ಮಿಂದು, ಶ್ರೀ ವರಾಹದೇವನನ್ನೂ, ಶ್ರೀ ಶ್ರೀವೇಂಕಟನಾಥನನ್ನೂ ಸೇವೆಮಾಡಿ, ಯಾಮುನಾಚಾರ್ಯರ ಆಣತಿಯಂತೆ ಹಲವಾರು ದಿನಗಳ ಮುಂಚೆಯೇ ಇಲ್ಲಿಗೆ ಬಂದು, ದೇವಾಧಿದೇವನಿಗೆ ಅಭಿಷೇಕ ತೀರ್ಥವನ್ನು ತರುವುದೂ ಮುಂತಾದ ಹಲವು ಕೈಂಕರ್ಯಗಳಿಂದ ಶ್ರೀವೇಂಕಟನಾಥನನ್ನು ಆನಂದ ಪಡಿಸಿಕೊಂಡು ಬರುತ್ತಿರುವ ತಮ್ಮ ಮಾತುಲ (ತಾಯಿಯ ಸಹೋದರ - ಮಾವು) ಶ್ರೀಶೈಲಪೂರ್ಣರ ಆಜ್ಞೆಯಂತೆ ಮೂರುದಿನಗಳು ಉಪವಾಸವಿದ್ದು, ತಿರುಮಲೆಯಲ್ಲಿ ತಂಗಿದ್ದು, ನಂತರ ಬೆಟ್ಟವನ್ನಿಳಿದು ಕೆಳತಿರುಪತಿಯಲ್ಲಿಯೇ ಒಂದು ವರ್ಷಕಾಲ ವಾಸಮಾಡುತ್ತಾ ಶ್ರೀಶೈಲ ಪೂರ್ಣರ ಬಳಿ ಶ್ರೀರಾಮಾಯಣದ ವಿಶೇಷಾರ್ಥಗಳನ್ನು ಕೇಳಿ ತಿಳಿದುಕೊಂಡು ಆಗಾಗ್ಗೆ ಉಂಟಾದ ಕೆಲವು ಕೈಂಕರ್ಯಗಳನ್ನು ಮಾಡಿಕೊಂಡಿದ್ದು, ಪುನಃ ಶ್ರೀ ಶ್ರೀರಂಗ ಕ್ಷೇತ್ರಕ್ಕೆ ಹೋಗಲಿಚ್ಛಿಸಿ, ತಿರುಮಲೆಯನ್ನು ಹತ್ತಿ ಶ್ರೀವೇಂಕಟನಾಥನನ್ನು ಸೇವೆಮಾಡಿ ಆತನ ಅನುಜ್ಞೆಯನ್ನು ಪಡೆದು, ತಮ್ಮ ಅತ್ಯಂತ ಪ್ರಿಯಶಿಷ್ಯರಾದ, ತಮ್ಮ ಅಗಲುವಿಕೆಯನ್ನು ಸಹಿಸಲಾರದೆ ದುಃಖಿಸುವ ಶ್ರೀ ಅನಂದಾಳ್ವಾನ್‌ರವರಿಗೆ, ತಮ್ಮ ಅರ್ಚಾರೂಪ (ತಮ್ಮದೇ ಆದ ವಿಗ್ರಹ) ಒಂದನ್ನು ನಿರ್ಮಾಣಮಾಡಿ ಅದನ್ನು ತಾವು ಆಲಂಗಿಸಿಕೊಂಡು ಅವರಿಗೆ ಅದನ್ನು ಕೊಟ್ಟು ಶ್ರೀಶೈಲಪೂರ್ಣರಿಂದ ಗೋವಿಂದಭಟ್ಟರನ್ನು (ತಮ್ಮ ಚಿಕ್ಕಮ್ಮನ ಪುತ್ರರು

- ಎಂಬಾರ್ ಎಂದು ಕರೆಯಲ್ಪಟ್ಟವರು) ಧಾರಾಪೂರ್ವಕವಾಗಿ ಸ್ವೀಕರಿಸಿ (ಧಾರೆಯೆರೆಯಲ್ಪಟ್ಟುಕೊಟ್ಟ) ಅವರನ್ನೂ ಕರೆದುಕೊಂಡು ಶಿಷ್ಯಪರಿವಾರದೊಂದಿಗೆ ಶ್ರೀರಂಗಕ್ಷೇತ್ರಕ್ಕೆ ಪಾದ ಬೆಳೆಸಿದರು.

ಅದಾದ ನಂತರ ಮತ್ತೊಂದು ಯಾತ್ರೆಯಲ್ಲಿ ಆ ಪೂಜ್ಯರಾದ ಭಗವದ್ರಾಮಾನುಜಮುನಿಗಳು ಶೈವರುಗಳು ಶ್ರೀವೇಂಕಟನಾಥನನ್ನು ಬೇರೆ ದೇವತೆಯೆಂದು ವಾದಿಸಿ ಮಾಡಿದ ಕೋಲಾಹಲವನ್ನು ಪರಿಹರಿಸಿ ದೇಶಾಧಿಪತಿಯಾದ ಯಾದವರಾಜನನ್ನು ತಮಗೆ ಅಂತರಂಗ ಕಿಂಕರನನ್ನಾಗಿ ಮಾಡಿಕೊಂಡು, ಅವನ ಮೂಲಕವಾಗಿಯೇ ವಿಮಾನ, ಮಂಟಪ, ಗೋಪುರಾದಿ ಕೈಂಕರ್ಯಗಳನ್ನು ನೆರವೇರಿಸಿ, ಕ್ರಿಮಿಕಂಠ (ಹುಳುಗಳಿಂದಾವೃತವಾದ ಕಂಠ) ಚೋಳನ ಉಪದ್ರವದ ಕಾರಣವಾಗಿ ಬಿಜಯಗೈದಿದ್ದ ಶ್ರೀ ಚಿತ್ರಕೂಟನಾಥನಾದ ಗೋವಿಂದರಾಜನನ್ನು ದೇವಾಧಿದೇವನೊಂದಿಗೆ ತಿರುಪತಿಯಲ್ಲಿ ಪ್ರತಿಷ್ಠಾಪಿಸಿ, ಆ ದೇವನಿಗೆ ದೇವಿಯಾಗಿ ಭೂದೇವಿಯ ಅವತಾರವಾಗಿ ಎಡಶ್ರೀಹಸ್ತದಲ್ಲಿ ಕಲ್ಹಾರ ಕುಸುಮದಿಂದ ಕೂಡಿದ ಗೋದಾದೇವಿಯನ್ನು (ಶ್ರೀ ಆಂಡಾಳ್‌ರನ್ನು) ಆ ಭಗವಂತನಿಗೆ ದಕ್ಷಿಣ ಪಾರ್ಶ್ವ (ಬಲಭಾಗ)ದಲ್ಲಿ ಪ್ರತಿಷ್ಠೆಮಾಡಿಸಿ, ಆ ಈರ್ವರ ಉತ್ಸವಾದಿಗಳನ್ನು ಶ್ರೀವೇಂಕಟನಾಥನ ಉತ್ಸವಗಳಿಗೆ ಅಡ್ಡಿಬಾರದಂತೆ ನಡೆಸಲು ನಿಯಮಿಸಿ, ಆಗಾಗ ಏರ್ಪಡುವ ಹಲವು ಬಗೆಯಾದ ಸೇವೆಗಳನ್ನು ಮಾಡಿಕೊಂಡಿದ್ದು ಪುನಃ ಶ್ರೀರಂಗಕ್ಕೆ ಹೋಗಲು ಇಚ್ಛಿಸಿದವರಾಗಿ ಶ್ರೀಶೈಲಪೂರ್ಣರನ್ನೂ ಶ್ರೀ ಅನಂದಾಳ್ವಾನ್‌ರನ್ನೂ ಮುಂದಿಟ್ಟುಕೊಂಡು ತಿರುಮಲೆಯಲ್ಲಿ ರಾಮದೂತನಾದ ಆಂಜನೇಯನ ಮುಂದೆ ಮಠವೊಂದನ್ನು ಕಟ್ಟಿಸಿ ಮುಂಚೆ ಶ್ರೀರಾಮಾಯಣಗ್ರಂಥ ಶಾಂತಿ ಸಮಯದಲ್ಲಿ ಶ್ರೀಶೈಲಪೂರ್ಣರು ತಮಗೆ ಕೃಪೆಮಾಡಿಕೊಟ್ಟ ಚಕ್ರವರ್ತಿ ಶ್ರೀಕುಮಾರ (ಶ್ರೀರಾಮ)ನನ್ನು ಅದರಲ್ಲಿ ಬಿಜಯಮಾಡಿಸಿ ತಮಗೆ ಪ್ರತಿನಿಧಿಯಾಗಿ ಅವರನ್ನು ಆರಾಧಿಸುವ ಸಲುವಾಗಿ ಶ್ರೀವೇಂಕಟನಾಥನ ಸಕಲಕೈಂಕರ್ಯಗಳನ್ನೂ ನಿರ್ವಹಣೆ ಮಾಡುವ ಸಲುವಾಗಿಯೂ ತಿರುಮಲೆ ಅನಂದಾಳ್ವಾನ್‌ರವರ ಶಿಷ್ಯರಾಗಿ ಗುರುಕುಲವಾಸದಲ್ಲಿ ಅಪಾರ ಶ್ರದ್ಧೆಯನ್ನಿಟ್ಟಿದ್ದ, ಅವರಿಗೆ ಸಕಲ ವಿಧವಾದ ಸೇವೆಗಳನ್ನು ಮಾಡುವುದರೊಂದರಲ್ಲಿಯೇ ನಿರತರಾಗಿದ್ದ ಒಬ್ಬ ನೈಷ್ಠಿಕ ಬ್ರಹ್ಮಚಾರಿಯನ್ನು, ಪರಮೇಶ್ವರ ಸಂಹಿತೆಯಲ್ಲಿ ತಿಳಿಸಿರುವಂತೆ ವಿಧ್ಯುಕ್ತವಾಗಿ ಕಾಷಾಯವಸ್ತ್ರವನ್ನು ನೀಡಿ ಏಕಾಂಗಿಯೆಂದು ಕರೆಯತಕ್ಕವರಾಗಿಯೂ, ಸೇನಾಧಿಪತಿ ಜೀಯರ್ (ವಿಷ್ವಕ್ಸೇನಯತಿ) ಎಂಬ ಶ್ರೀನಾಮವನ್ನುಳ್ಳವರಾಗಿಯೂ ಹನುಮನ್ಮುದ್ರಾಚಿಹ್ನವನ್ನು ಹೊತ್ತ ಉಂಗುರ, ಘಂಟೆ, ಬೀಗದಕೈ, ಧ್ವಜ ಮುಂತಾದ ಕೆಲವು ಲಕ್ಷಣಗಳನ್ನುಳ್ಳವರಾಗಿರುವಂತೆಯೂ ಮಾಡಿ, ಆ ಮಠದಲ್ಲಿರುವಂತೆ

ಏರ್ಪಾಟುಮಾಡಿ ಯಾದವರಾಜನ ಮೂಲಕ - ಶ್ರೀವೇಂಕಟನಾಥನ ದಿವ್ಯದೇಗುಲಕ್ಕೆ ಸೇರಿದ ಪರಿಜನರೂ, ಪರಿಚಾರಕರೂ, ಅಧಿಕಾರಿಗಳೂ ಎಲ್ಲರನ್ನೂ ಎಲ್ಲಾವಿಧದಿಂದಲೂ ಆ ಏಕಾಂಗಿಗೆ ವಿಧೇಯರಾಗಿ ನಡೆಯಬೇಕೆಂಬುದಾಗಿಯೂ, ಆ ಏಕಾಂಗಿಯನ್ನು ಶ್ರೀ ಶೈಲಪೂರ್ಣರು ಮತ್ತು ತಿರುಮಲೆ ಅನಂದಾಳ್ವಾನ್‌ರವರ ವಶದಲ್ಲಿರುವವರಾಗಿಯೂ ಮಾಡಿಸಿ, ಆ ಈರ್ವರ ಅನುಮತಿಯನ್ನು ಪಡೆದು ಚಿಂತೆಯಿಲ್ಲದೆ ಶ್ರೀರಂಗಕ್ಕೆ ಬಿಜಯ ಮಾಡಿದರು.

ಇದರ ನಂತರ ಮತ್ತೊಂದು ಯಾತ್ರೆಯ ಸಂದರ್ಭದಲ್ಲಿ ಪೂಜ್ಯರಾದ ಆ ರಾಮಾನುಜಮುನಿವರ್ಯರು ತಿರುಮಲೆಗೆ ಬಿಜಯಗೈದು ಶ್ರೀ ವೇಂಕಟನಾಥನನ್ನು ಸೇವೆಮಾಡಿಕೊಂಡಿದ್ದು, ಆಗ ಕಲಿಯುಗದಲ್ಲಿ ನಾಲ್ಕುಸಾವಿರದ ಒಂದುನೂರ ಇಪ್ಪತ್ತು ವರ್ಷಗಳು ಕಳೆದು ತಮಗೆ ಒಂದು ನೂರ ಎರಡು ಪ್ರಾಯಗಳು (ವರ್ಷಗಳು) ಕಳೆದುದನ್ನು ಚಿಂತಿಸಿ ಶ್ರೀ ಅನಂದಾಳ್ವಾನ್‌ರನ್ನು ಕರೆದು, "ಹೇ ಅನಂದಾಳ್ವಾನ್‌ರವರೇ, ನಾನು ಒಂದು ನೂರೆರಡು ವರ್ಷಗಳನ್ನು ತುಂಬಿದವನಾಗಿ ಆಗಿಬಿಟ್ಟೆ. ಇನ್ನು ಮೇಲೆ ಇಲ್ಲಿ ಆಗಾಗ್ಗೆ ಬಂದು ಹೋಗುವುದಕ್ಕೆ ಶಕ್ತಿಯಿಲ್ಲದವನಾಗಿದೇನೆ. ಶ್ರೀಶೈಲಪೂರ್ಣರೂ ಮತ್ತು ಅವರ ಪುತ್ರರೂ ಪರಮಪದಕ್ಕೆ ಹೊರಟು ಹೋದರು. ಆದುದರಿಂದ ಇಲ್ಲಿ ನೀವು ಒಬ್ಬರೇ ಶ್ರೀವೇಂಕಟನಾಥನ ಕೈಂಕರ್ಯಭಾರವನ್ನು ಹೊತ್ತು ಅರವತ್ತಾರು ಪ್ರಾಯವುಳ್ಳ ವೃದ್ಧರಾಗಿರುತ್ತೀರಿ. ಆದುದರಿಂದ ನೀವೇ ಇಲ್ಲಿ ಶ್ರೀವೇಂಕಟನಾಥನಿಗೆ ಸೇವೆ (ಕೈಂಕರ್ಯ) ಮಾಡುವ ಎಲ್ಲರನ್ನೂ ನಿರ್ವಹಣೆಮಾಡುವ ಯೋಗ್ಯತೆಯನ್ನು ಹೊಂದಿರುತ್ತೀರಿ. ನನ್ನ ದೇವರಾದ ಚಕ್ರವರ್ತಿ ಶ್ರೀಕುಮಾರ (ಚಕ್ರವರ್ತಿ ತ್ತಿರುಮಹನ್=ರಾಮ)ನನ್ನು ಆರಾಧಿಸುವವರಾಗಿಯೂ, ಶ್ರೀವೇಂಕಟನಾಥನ ಕೈಂಕರ್ಯ ಭಾರವನ್ನು ವಹಿಸುವವರಾಗಿಯೂ, ನನ್ನಿಂದ ಮುಂಚೆ ನಿಯಮಿಸಲ್ಪಟ್ಟ ನೈಷ್ಠಿಕ ಬ್ರಹ್ಮಚಾರಿಯಾಗಿ, ನಿಮ್ಮಶಿಷ್ಯರಾಗಿ, ಸೇನಾಧಿಪತಿ ಜೀಯರ್ ಎಂಬ ಮತ್ತೊಂದು ಹೆಸರನ್ನುಳ್ಳ ಈ ವಿಷ್ವಕ್ಸೇನ ಏಕಾಂಗಿಯಾದ ಒಬ್ಬರೇ ಎಲ್ಲಾ ಕೈಂಕರ್ಯ ಭಾರವನ್ನೂ ವಹಿಸಲು ಸಾಧ್ಯವಿಲ್ಲದವರು. ಆದುದರಿಂದ ಇವರಿಗೆ ಸನ್ಯಾಸಾಶ್ರಮವನ್ನು ಕೊಟ್ಟು ಪ್ರಧಾನರನ್ನಾಗಿ ಮಾಡಿ ಇವರಿಗೆ ಸಹಾಯಕರಾಗಿ ಮೂವರು ಅಥವಾ ನಾಲ್ವರು ಏಕಾಂಗಿಗಳನ್ನು ಏರ್ಪಡಿಸಿ ಅವರುಗಳನ್ನು ಈ ಸನ್ಯಾಸಿಗೆ ಅಧೀನರನ್ನಾಗಿ ಮಾಡಿ ಅವರುಗಳೆಲ್ಲರಿಂದಲೂ ಶ್ರೀವೇಂಕಟನಾಥನ ಕೈಂಕರ್ಯವನ್ನು ಮಾಡಲಿಚ್ಚಿಸುತ್ತೇನೆ. - ಹೀಗೆಯೇ ತಿರುವಾಯ್ಮೊಳಿ (ಸಹಸ್ರಗೀತೆ) ಎಂಬ ತಮಿಳುವೇದದಲ್ಲಿ (ದ್ರಾವಿಡ ವೇದದಲ್ಲಿ) ಮೂರನೆಯ ಶತಕದ ಮೂರನೆಯ ದಶಕದಲ್ಲಿ, "ಎಲ್ಲೆಲ್ಲಿ ಭಗವಂತನು ಹೋಗುತ್ತಾನೆಯೋ ಅಲ್ಲಲ್ಲಿ

ಮುಕ್ತಿಹೊಂದಿದ ಜೀವಾತ್ಮನೂ ಕೈಂಕರ್ಯಮಾಡಲು ಆ ವಿಧಾತನ ಜೊತೆಯಲ್ಲಿ ಹೋಗುತ್ತಾನೆ,'' ಎಂದು ಶ್ರುತಿಯು ಹೇಳಿದಂತೆಯೇ, ''ಶ್ರೀವೇಂಕಟನಾಥನಿಗೆ ಎಲ್ಲಾ ಜಾಗಗಳಲ್ಲಿಯೂ, ಎಲ್ಲಾಕಾಲದಲ್ಲಿಯೂ, ಎಲ್ಲಾಸ್ಥಿತಿಯಲ್ಲಿಯೂ ಜೊತೆಯಲ್ಲಿದ್ದು ಮಾಡತಕ್ಕ ಎಲ್ಲಾ ವಿಧವಾದ ಸೇವೆಗಳನ್ನೂ ಮಾಡತಕ್ಕವನಾಗುವೆ,'' - ಎಂದು ಅಭಿಲಾಷಿಸಿದ ನಮ್ಮಾಳ್ವಾರ್ (ಪರಾಂಕುಶ ಸೂರಿ)ರವರ ಅಂಥಹ ಅಭಿಲಾಷೆಯನ್ನು ಪೂರ್ತಿ ಮಾಡುವುದಕ್ಕಾಗಿ, ಅವರ ಹೆಸರನ್ನು ಹೊಂದಿದವರಾದ ಒಬ್ಬರನ್ನು ಇಲ್ಲಿ ಸ್ಥಾಪಿಸಿ ಶ್ರೀವೇಂಕಟನಾಥನ ಸಕಲ ವಿಧವಾದ ಕೈಂಕರ್ಯಗಳನ್ನೂ ಮಾಡಿಸ ಬೇಕೆಂದು ಬಹಳ ದಿನಗಳಿಂದ ಇಷ್ಟಗೊಂಡಿರುತ್ತೇನೆ. ಆದುದರಿಂದ ಸೇನಾಧಿಪತಿಯೆಂಬ ವಿಷ್ವಕ್ಸೇನ ಏಕಾಂಗಿಯಾದ ನಿಮ್ಮ ಈ ಶಿಷ್ಯರನ್ನೇ ಸನ್ಯಾಸಾಶ್ರಮ ಸ್ವೀಕರಿಸುವಂತೆ ಮಾಡಿ ನಮ್ಮಾಳ್ವಾರ್ ರವರ ಹೆಸರನ್ನೇ ಅವರಿಗೆ ಇಡಲು ಆಸೆಪಡುತ್ತೇನೆ,'' ಎಂದು ಹೇಳಿ, ಅನಂದಾಳ್ವಾನ್‌ರವರ ಅಂಗೀಕಾರವನ್ನು ಪಡೆದು, ವಿಕಾರಿ ವರ್ಷ ಮಕರಮಾಸದ ಶುಕ್ಲಪಕ್ಷ ಶುಕ್ರವಾರ ಒಂದು ಶುಭಮೂಹೂರ್ತದಲ್ಲಿ ವಿಷ್ವಕ್ಸೇನ ಏಕಾಂಗಿಗೆ ಶಾಸ್ತ್ರೋಕ್ತವಾಗಿ ಸನ್ಯಾಸಾಶ್ರಮವನ್ನು ಕೊಟ್ಟು, ಶ್ರೀವೇಂಕಟನಾಥ (ಅಪ್ಪನ್)ಶಠಕೋಪ ಜೀಯರ್ ಎಂಬ ಶ್ರೀ ನಾಮವನ್ನಿಟ್ಟು ಅವರನ್ನೇ ತಮ್ಮ ಮಠದಲ್ಲಿ, ಮುಖ್ಯವಾಗಿ ಚಕ್ರವರ್ತಿ ಶ್ರೀಕುಮಾರನಿಗೆ ಆರಾಧನೆ ಮಾಡಬೇಕೆಂದು ನಿಲ್ಲಿಸಿ, ಅವರನ್ನಿಟ್ಟೇ ಅನಂದಾಳ್ವಾನ್‌ರವರ ಶಿಷ್ಯರುಗಳಾದ ನಾಲ್ವರಿಗೆ ಏಕಾಂಗಿ ಕಾಷಾಯವನ್ನು ಕೊಡಿಸಿ, ಅವರುಗಳನ್ನು ಶ್ರೀವೇಂಕಟನಾಥನ ಕೈಂಕರ್ಯದಲ್ಲಿಯೇ ನಿರತರಾಗಿರುವಂತೆಯೂ, ಆ ಜೀಯರನ್ನು ಅನುಸರಿಸಿಕೊಂಡಿರುವಂತೆಯೂ ಮಾಡಿ, ಇವರುಗಳೆಲ್ಲರನ್ನೂ ಎಲ್ಲ ವಿಧದಲ್ಲಿಯೂ ಶ್ರೀ ಅನಂದಾಳ್ವಾನ್ ರವರಿಗೆ ವಶಪಟ್ಟಿರುವವರುಗಳನ್ನಾಗಿ ಮಾಡಿ. ಯಾದವರ ರಾಜನನ್ನು ಕರೆದು, ''ಹೇ ಯಾದವರಾಜನೇ, ನೂರ ಎರಡು ಪ್ರಾಯಗಳನ್ನು ಕಳೆದುಕೊಂಡ ವೃದ್ಧನಾದ ನಾನು ಇನ್ನು ಈ ಶರೀರವನ್ನು ಬಿಡುವವರೆಗೆ ಶ್ರೀರಂಗದಲ್ಲಿಯೇ ವಾಸಿಸಲು ಇಚ್ಛಿಸಿರುತ್ತೇನೆ. ಅಡಿಗಡಿಗೆ ಇಲ್ಲಿಬಂದು ಹೋಗಿ ಮಾಡುವುದಕ್ಕೆ ನನಗೆ ಶಕ್ತಿಯಿಲ್ಲ. ಆದುದರಿಂದ ಈ ಶ್ರೀ ಅನಂದಾಳ್ವಾನ್‌ರನ್ನು ಮುಂದಿಟ್ಟುಕೊಂಡು ನಾಲ್ಕು ಏಕಾಂಗಿಗಳೊಡಗೂಡಿದ ಈ ಶಠಕೋಪಜೀಯರ್ ಮೂಲಕವಾಗಿ, ಶ್ರೀವೇಂಕಟನಾಥನ ಸಕಲ ಕೈಂಕರ್ಯಗಳನ್ನೂ ಚೆನ್ನಾಗಿ ನೆರವೇರಿಸಿಡಲು ಅರ್ಹನಾಗುವೆ. ಕಲಿಯ ಮಹಾನ್ ದೋಷದಿಂದ ಅಸ್ತಿಕರುಗಳಿಗೂ ದ್ರೋಹಚಿಂತನೆ ಉಂಟಾಗುವ ಸಾಧ್ಯತೆ ಇದೆ. ಆದುದರಿಂದ ವಿರಕ್ತರಾಗಿ ಕೈಂಕರ್ಯ ಮಾಡುವುದರಲ್ಲಿಯೇ ಸಮಾಸಕ್ತರಾದ ಇವರುಗಳು ಕೈಂಕರ್ಯಗಳು ಚೆನ್ನಾಗಿ ನಡೆಯಲ್ಪಡುತ್ತಿವೆಯೇ ಅಥವಾ ಇಲ್ಲವೇ ಎಂದು ವಿಚಾರಿಸಲು ನಿಯಮಿಸಲ್ಪಟ್ಟಿರುತ್ತಾರೆ. ಶ್ರೀವೇಂಕಟನಾಥನ ಧನಾದಾಯ, ವ್ಯಯ, ದಿವ್ಯಾಭರಣಗಳು ಮುಂತಾದ ವಿಷಯಗಳಲ್ಲಿ ಅಪ್ಪನ್ ಶಠಕೋಪಜೀಯರ್

ಅವರನ್ನು ಸೇರಿದ ಪರಿಜನಗಳಿಂದಲೂ ಒಂದು ಆಲೇಖ (ಲೆಖ್ಖಪತ್ರ) ಬರೆಯಬೇಕೆಂದೂ ವ್ಯವಸ್ಥೆ ಮಾಡಿಸಿ, ದೇವಸ್ಥಾನದ ಕೆಲಸಗಳನ್ನು ಮಾಡುವ ಅಧಿಕಾರಿಗಳಿಂದ ಶ್ರೀವೇಂಕಟನಾಥನ ಐಶ್ವರ್ಯವು ಕಳ್ಳತನವಾಗದಂತೆ ವ್ಯವಸ್ಥೆಮಾಡುವವನಾಗು.

ಈ ನಾಲ್ವರು ಏಕಾಂಗಿಗಳೂ ಮುಂಚೆ ನಿಯಮಿಸಲ್ಪಟ್ಟ ಸೇನಾಧಿಪತಿ ಜೀಯರ್ ಎಂಬ ಒಬ್ಬ ಏಕಾಂಗಿಯ ಸ್ಥಾನದಲ್ಲಿ ಒಬ್ಬರಿಗೊಬ್ಬರ ಸಹಾಯಕ್ಕಾಗಿ ಆಯಾ ಕೈಂಕರ್ಯಗಳನ್ನು ಸುಗಮವಾಗಿ ಮಾಡುವುದಕ್ಕಾಗಿ ನಿಯಮಿಸಲ್ಪಟ್ಟಿದಾರೆ. ಇವರುಗಳೊಂದಿಗೆ ಎಲ್ಲಾ ಕೈಂಕರ್ಯಗಳನ್ನೂ ಮಾಡುವವರಾಗಿಯೂ, ಸಕಲ ಕೈಂಕರ್ಯ ನಿರ್ವಹಣಾ ಭಾರವನ್ನು ವಹಿಸುವವರಾಗಿಯೂ ಈ ಶಠಗೋಪಜೀಯರ್ ನಿಯಮಿಸಲ್ಪಟ್ಟಿರುತ್ತಾರೆ.

ಈ ಶ್ರೀ ಅನಂದಾಳ್ವಾನ್‌ರವರನ್ನು ಮುಂದಿಟ್ಟುಕೊಂಡು ಈ ಎಲ್ಲರ ಮೂಲಕವಾಗಿಯೂ ಕ್ರಮವಾಗಿ ಕೈಂಕರ್ಯಗಳು ನಡೆಯುವಂತೆ ಪಾಲಿಸುವವನಾಗು.

ಈ ಅನಂದಾಳ್ವಾನ್ ಶ್ರೀ ವೇಂಕಟನಾಥನ ಅಪಾರ ಕೃಪೆಗೆ ಪಾತ್ರರಾದವರು, ಶಾಸ್ತ್ರಾರ್ಥವನ್ನು ಬಹಳ ಚೆನ್ನಾಗಿ ಅರಿತವರು. ನನಗೆ ಅತ್ಯಂತ ಪ್ರಿಯರಾದವರು. ಶಾಸ್ತ್ರಗಳಲ್ಲಿ ಹೇಳಿರುವ ಧರ್ಮಗಳನ್ನೂ ಆಚಾರಗಳನ್ನೂ ವ್ಯವಸ್ಥಾಪಿಸುವುದರಲ್ಲಿ ಕುಶಲರು. ಆದುದರಿಂದ ಇವರು ಆಚಾರ್ಯಸ್ಥಾನವನ್ನು ನಿರ್ವಹಿಸುವವರಾಗಿ (ಸ್ಥಳಾಚಾರ್ಯಪುರುಷರಾಗಿ) ನಮ್ಮಿಂದ ನಿಯಮಿಸಲ್ಪಟ್ಟಿರುತ್ತಾರೆ.

ಆದುದರಿಂದ ಇವರನ್ನು ಮುಂದಿಟ್ಟುಕೊಂಡು ಇವರ ಆಜ್ಞೆಯಂತೆಯೇ ಸಕಲಶಾಸ್ತ್ರಧರ್ಮಗಳಿಗೂ ಭಂಗವುಂಟಾಗದಂತೆ, ದೇವಸ್ಥಾನದಲ್ಲಿ ಕೈಂಕರ್ಯಗಳು ನಡೆಯುವಂತೆ ಮಾಡಬೇಕು.

ಇಂಥಹ ಆಚಾರ್ಯಸ್ಥಾನವನ್ನು ನಿರ್ವಹಣೆಮಾಡುವ ಪುರುಷರುಗಳನ್ನು ದಿವ್ಯದೇಶಗಳಲ್ಲಿ ಗೌರವಿಸಿ ವಂಶಪರಂಪರೆಯಾಗಿ ಬರುವಂತೆ ಸ್ಥಾಪಿಸಬೇಕು. ಇಲ್ಲದಿದ್ದಲ್ಲಿ ಸಕಲ ಶಾಸ್ತ್ರ ಧರ್ಮಗಳ ಮರ್ಯಾದೆಗೆ ಭಂಗವುಂಟಾಗಿ ನಾಶವಾಗುತ್ತದೆ.

ಆದುದರಿಂದಲೇ, ಶಾಸ್ತ್ರದಲ್ಲಿ ಹೇಳಲ್ಪಟ್ಟಿರುವ ಧರ್ಮನಿಯಮಗಳನ್ನು ಸ್ಥಾಪನೆಮಾಡುವುದಕ್ಕಾಗಿ ಸದ್ವಿದ್ಯೆ ಮತ್ತು ಸದ್ವಂಶಗಳಿಂದ ಗೌರವಾನ್ವಿತವಾದವರೂ ಬ್ರಹ್ಮಜ್ಞಾನ ಪಡೆದವರಲ್ಲಿ ಶ್ರೇಷ್ಠರಾದವರೂ, ಶಾಸ್ತ್ರಧರ್ಮಗಳನ್ನು ಬೋಧಿಸುವುದರಲ್ಲಿ ಆಸಕ್ತಿಯಿರುವವರೂ ಆದ ಆಚಾರ್ಯ ಪುರುಷರುಗಳು

ಎಪ್ಪತ್ನಾಲ್ಕು ಜನರು ಎಲ್ಲಾ ಪ್ರದೇಶಗಳಲ್ಲಿಯೂ ನಮ್ಮಿಂದ ಸ್ಥಾಪಿಸಲ್ಪಟ್ಟು ನಿರ್ವಹಿಸುತ್ತಾ ಬರುತ್ತಿದಾರೆ''

**ಆಚಾರ್ಯಪುರುಷ ಲಕ್ಷಣ :-**

ಪಾದ್ಮೋತ್ತರ ಖಂಡದ ಮೊದಲನೆಯ ಅಧ್ಯಾಯದಲ್ಲಿ ವೇದದಲ್ಲಿ ಹೇಳಿರುವ ಧರ್ಮಾನುಷ್ಠಾನಗಳನ್ನು ಪರಿಪಾಲಿಸುವವನೂ, ವಿಷ್ಣುಭಕ್ತನೂ, ಮಾತ್ಸರ್ಯವಿಲ್ಲದವನೂ, ಮಂತ್ರಜ್ಞಾತನೂ, ಮಂತ್ರದಲ್ಲಿ ಭಕ್ತಿ ಶ್ರದ್ಧೆಯುಳ್ಳವನೂ, ಯಾವಾಗಲೂ ಮಂತ್ರವನ್ನೇ ಆಧಾರವನ್ನಾಗಿಕೊಂಡವನೂ, ಪರಿಶುದ್ಧವಾದವನೂ, ಸುದ್ಗುರುವಿನ ಉಪದೇಶ ಪರಂಪರೆಯನ್ನು ಸೇರಿದವನೂ, ವೇದಾಂತ ಶಾಸ್ತ್ರದಲ್ಲಿ ಪಾರಂಗತನೂ, ಭಗವದನುಭವ ಕೈಂಕರ್ಯಗಳನ್ನೇ ಪುರುಷಾರ್ಥವನ್ನಾಗಿ ಕೊಂಡವನೂ, ಅದಕ್ಕಾಗಿ ಭಗವಂತನನ್ನೇ ಉಪಾಯವಾಗಿಕೊಂಡವನೂ, ಬ್ರಹ್ಮವಿದ್ಯಾಪಾರಂಗತನೂ, (ಬ್ರಹ್ಮನನ್ನು ಚೆನ್ನಾಗಿ ಅರಿತವನು) ಮಿಕ್ಕವುಗಳಲ್ಲಿ ಆಸೆಯಿಲ್ಲದವನೂ, ಕೋಪ, ಲೋಭ ಇವುಗಳಿಲ್ಲದವನೂ, ಒಳ್ಳೆಯ ನಡವಳಿಕೆಯನ್ನು ಕಲಿಸುವವನೂ, ಮೋಕ್ಷಾರ್ಥಿಯೂ, ಪರಮಾತ್ಮನ ಬಗ್ಗೆ ವಿಚಾರ ಮಾಡುವವನೂ, ಇಂಥಹ ಸದ್ಗುಣಗಳಿಂದ ಕೂಡಿದವನು ಆಚಾರ್ಯನೆಂದು ಶಾಸ್ತ್ರದಲ್ಲಿ ಹೇಳಲ್ಪಡುತ್ತಾನೆ. ಯಾವನೊಬ್ಬನು ಇತರರನ್ನು ಒಳ್ಳೆಯ ನಡತೆಯುಳ್ಳವರನ್ನಾಗಿ ತಿದ್ದುವನೋ ಅವನು ಆಚಾರ್ಯನೆಂದು ಹೇಳಲ್ಪಡುತ್ತಾನೆ,- ಎಂದು ಆಚಾರ್ಯಲಕ್ಷಣವು ಹೇಳಲ್ಪಡುತ್ತದೆಯಲ್ಲವೇ?

ಹಾರೀತ ವಿಶಿಷ್ಟ ಪರಮ ಧರ್ಮಶಾಸ್ತ್ರದಲ್ಲಿಯೂ, ಎರಡನೆಯ ಅಧ್ಯಾದಲ್ಲಿ - ನಿಷ್ಕಲ್ಮಷನೂ, ಬ್ರಾಹ್ಮಣನೂ, ವಿಷ್ಣುಭಕ್ತನೂ, ಶುದ್ಧ ಸತ್ವಗುಣ ಸಂಪನ್ನನೂ, ಹೊಸದು ಹೊಸದಾದ ಯಾಗ, ಪೂಜೆ, ದಾನ ಮುಂತಾದ ಕರ್ಮಗಳನ್ನು ಮಾಡುವವನೂ, ಸದಾಚಾರ್ಯೋಪದೇಶ ಪರಂಪರೆಗೆ ಸೇರಿದವನೂ, ದ್ವಯ ಮಂತ್ರಾರ್ಥವನ್ನು ಚೆನ್ನಾಗಿ ಅರಿತವನೂ, ಜ್ಞಾನ ವೈರಾಗ್ಯಗಳಿಂದ ತುಂಬಿದವನೂ, ವೇದ ವೇದಾಂತಗಳಲ್ಲಿ ನಿಷ್ಠಾವಂತನೂ, ಒಳ್ಳೆಯ ಆಚಾರದಲ್ಲಿರುವಂತೆ ಇತರರನ್ನು ನಿಯಮಿಸುವವನೂ, ಸರ್ವಧರ್ಮಜ್ಞರಲ್ಲಿ ಶ್ರೇಷ್ಠನೂ, ಪರಮ ಭಾಗವತನೂ, ತನ್ನನ್ನೂ ಇತರರನ್ನೂ ಪಾಪಕೆಲಸಗಳಲ್ಲಿ ಪ್ರವರ್ತಿಸದಂತೆ ಕಾಪಾಡುವವನೂ, ಒಳ್ಳೆಯ ಆಚಾರಗಳನ್ನು ಅನುಷ್ಠಿಸುವವನೂ ಆದ ಆಚಾರ್ಯವನ್ನು ಮೊದಲು ಆಶ್ರಯಿಸಬೇಕು. ವಿಷ್ಣುಭಕ್ತನಾಗಿ ಎಲ್ಲಾ ಶಾಸ್ತ್ರಗಳನ್ನೂ, ಪುರಾಣಗಳನ್ನೂ ಚೆನ್ನಾಗಿ ಅರಿತು, ಅವುಗಳಲ್ಲಿ ಹೇಳಿರುವ ಧರ್ಮಗಳಣ್ನು ಯಾವನೊಬ್ಬನು ಆಚರಿಸುತ್ತಾನೆಯೋ ಅವನೇ ಆಚಾರ್ಯನೆಂದು ಹೇಳಲ್ಪಟ್ಟಿರುತ್ತಾನೆ, - ಎಂದು ಹೇಳಲ್ಪಟ್ಟಿದೆ.

ಈ ರೀತಿಯೇ ಶಾಸ್ತ್ರಗಳ ಅರ್ಥವಾದ ಧರ್ಮಗಳನ್ನು ಯಾವನು ತಿಳಿದುಕೊಂಡು ತಾನೂ ಅನುಷ್ಠಾನಮಾಡಿ, ಇತರರನ್ನೂ ಅದರಲ್ಲಿ ಸ್ಥಾಪಿಸುತ್ತಾನೆಯೋ ಅವನೇ ಆಚಾರ್ಯನೆಂದು ಹೇಳಲ್ಪಡುತ್ತಾನೆ, - ಎಂದು ಇವೇ ಮೊದಲಾದ ಇತರ ವಚನಗಳಿಂದಲೂ ಕಾಣತಕ್ಕವುಗಳು.

**ಯಾದವರಾಜನಿಗೆ ನಿಯಮಿಸಿದ ಅಂತಿಮ ಆಜ್ಞೆ :-**

ಈ ರೀತಿ ಶಾಸ್ತ್ರಗಳಲ್ಲಿ ಹೇಳಲ್ಪಟ್ಟ ಲಕ್ಷಣಗಳನ್ನು ಹೊಂದಿದ ಆಚಾರ್ಯಪುರುಷರುಗಳು ಒಂದೊಂದು ದಿವ್ಯದೇಶದಲ್ಲಿಯೂ ಆಯಾಯ ದಿವ್ಯದೇಶ ಧರ್ಮಗಳನ್ನು ಪರಿಪಾಲಿಸುವುದಕ್ಕಾಗಿ, ಅವಶ್ಯಕವಾಗಿ ವಂಶಪಾರಂಪರ್ಯವಾಗಿ ಸ್ಥಾಪಿಸಲ್ಪಡಬೇಕು. ಇಂಥಹ ಆಚಾರ್ಯಪುರುಷರುಗಳು ಇಲ್ಲದಿದ್ದರೆ ದಿವ್ಯದೇಶ ಧರ್ಮಾನುಷ್ಠಾನಗಳಿಗೆ ಲೋಪವುಂಟಾಗಿ ನಾಶವಾಗುವುವು. ಆದುದರಿಂದ ಇಂಥಹ ಲಕ್ಷಣಗಳನ್ನು ಸಂಪೂರ್ಣವಾಗಿ ಹೊಂದಿದವರುಗಳಲ್ಲಿ (ಶ್ರೇಷ್ಠರಾದ) ಮೊದಲಿಗರಾದ ಈ ಅನಂದಾಳ್ವಾನ್‌ರನ್ನು ಮುಂದಿಟ್ಟುಕೊಂಡೇ ಆಯಾಯ ಧರ್ಮಕಾರ್ಯಗಳನ್ನು ಇಲ್ಲಿ ಮಾಡಿಸಲ್ಪಡಬೇಕು.

ಭಗವಂತನ ಪರಿಜನ ಪರಿಚಾರಕರುಗಳ ಬಗ್ಗೆ ಆಯಾ ಕೈಂಕರ್ಯಗಳಿಗೆ ತಕ್ಕ ಯೋಗ್ಯತೆ ಮತ್ತು ಯೋಗ್ಯತೆ ಇಲ್ಲದಿರುವಿಕೆ ಇವುಗಳಿಗೆ ಕಾರಣವಾದ ಸಚ್ಚಾರಿತ್ರ್ಯ ಮತ್ತು ದುಶ್ಚಾರಿತ್ರ್ಯಗಳನ್ನು ಕ್ರಮವಾಗಿ ವಿವೇಚಿಸಿ ಈ ಆನಂದಾಳ್ವಾನ್ ಯಾವಾಗಲಾದರೂ ಒಬ್ಬರನ್ನು ಸೇರಿಸಿಕೊಳ್ಳಬೇಕೆಂದಾಗಲೀ, ಒಬ್ಬರನ್ನು ಹೊರದೂಡಬೇಕೆಂದಾಗಲೀ ತಿಳಿಸಿದರೆ ಅದರಲ್ಲಿ ಸಂದೇಹವನ್ನು ಕೊಳ್ಳದೆ ಹಾಗೆಯೇ ನೀನು ಮಾಡಬೇಕು.

ಇಂಥಹ ಆಚಾರ್ಯಸ್ಥಾನವನ್ನು ನಿರ್ವಹಿಸುವ ಪುರುಷರುಗಳು ಆಯಾ ದಿವ್ಯದೇಶದ ರಕ್ಷಣೆಯನ್ನೂ, ಶ್ರೀ ವೈಷ್ಣವ ಧರ್ಮದ ಅಭಿವೃದ್ಧಿಯನ್ನೇ ಗುರಿಯಾಗಿ ಕೊಂಡಿರುವವರೂ ಆಗಿದ್ದು ಇನ್ನು ಮೇಲೆ ಭವಿಷ್ಯತ್ಕಾಲದಲ್ಲಿಯೂ ಒಂದು ವೇಳೆ ಇಲ್ಲಿ ಬಂದು ವಾಸಮಾಡಲು ಇಚ್ಛಿಸಿದ್ದೇ ಆದರೆ, ಅವರುಗಳನ್ನೂ ನೀನು ಗೌರವಿಸಿ ಈ ದಿವ್ಯದೇಶದ ರಕ್ಷಕರುಗಳನ್ನಾಗಿ ಇಲ್ಲಿ ಸ್ಥಾಪಿಸಬೇಕು.

ಇವರುಗಳಂತಿನ ಆಚಾರ್ಯಪುರುಷರುಗಳು ಸಿಗುವುದು ಅರಿದಲ್ಲವೇ? ಅತ್ಯಂತವಾಗಿ ಗೌರವಿಸಲ್ಪಡತಕ್ಕ ಈ ಆಚಾರ್ಯ ಪುರುಷರುಗಳನ್ನು ದೇವಾಧಿದೇವನ ದಿವ್ಯ ದೇವಾಲಯಗಳಲ್ಲಿ ನಡೆಯುವ ಗೋಷ್ಠಿಗಳಲ್ಲಿ ಗೌರವಿಸುವ ಸಂದರ್ಭಗಳಲ್ಲಿ ದೇವಸ್ಥಾನವನ್ನೇ ಆಧಾರವಾಗಿಟ್ಟುಕೊಂಡು ಜೀವಿಸುವ ಪರಿಜನ ಪರಿಚಾರಕರುಗಳನ್ನು ಗೌರವಿಸುವುದಕ್ಕೆ ಮುಂಚೆಯೇ ಗೌರವಿಸ ಬೇಕು

ಆವಾಗಲೂ ಇಂಥಹವರು ಹಲವರು ಸೇರಿದಲ್ಲಿ ಅವರವರ ಯೋಗ್ಯತೆಗೆ ತಕ್ಕ ರೀತಿ ಕ್ರಮವಾಗಿ ಗೌರವಿಸಬೇಕು.

ಶಾಂಡಿಲ್ಯ ವಿಶಿಷ್ಟ ಧರ್ಮಶಾಸ್ತ್ರದ ನಾಲ್ಕನೆಯ ಅಧ್ಯಾಯದಲ್ಲಿ - ಅಲ್ಲಿ ಸೇರಿದ ಭಗವದ್ಭಕ್ತರುಗಳಲ್ಲಿ ಹಿರಿಯರುಗಳನ್ನು ಮೊದಲು ಕ್ರಮವಾಗಿಯೂ ಅತ್ಯಂತ ಭಕ್ತಿಯೊಂದಿಗೆ ಶುದ್ಧವಾದ ಅರ್ಘ್ಯ ಮುಂತಾದುವುಗಳಿಂದಲೂ, ಧನದಿಂದಲೂ ಪೂಜಿಸಬೇಕು - ಎಂದೂ, ನನ್ನ ಬಗೆಗಿನ ಭಕ್ತಿಯೂ, ಜ್ಞಾನವೂ, ಕ್ರಿಯೆಗಳೂ ಯಾರು ಯಾರಿಗೆ ಅಧಿಕವಾಗಿರುವುದೋ ಅವರವರುಗಳನ್ನು ಆಯಾಯಾಕ್ರಮಕ್ಕೆ ಸೇರಿದಂತೆ ಕ್ರಮವಾಗಿ ಗೌರವಿಸಬೇಕು - ಎಂದೂ ಹೇಳಲ್ಪಟ್ಟಿದೆ.

ಆದುದರಿಂದ ಇಲ್ಲಿ ಈಗ ಆಚಾರ್ಯಸ್ಥಾನವನ್ನು ನಿರ್ವಹಿಸಿಕೊಂಡು ನಿತ್ಯವಾಸಿಯಾಗಿರುವ ಅನಂದಾಳ್ವಾನ್‌ರವರಿಗೂ, ಶ್ರೀವೇಂಕಟನಾಥನ ಸಕಲಕೈಂಕರ್ಯ ಭಾರವನ್ನು ವಹಿಸುವವರಾಗಿ ಈಗ ನಿಯಮಿಸಲ್ಪಟ್ಟ ಶಠಗೋಪ ಜೀಯರ್ ಸ್ವಾಮಿಗೂ, ಅವರಿಗೆ ಸಹಾಯಕರಾಗಿ ಏರ್ಪಟ್ಟು ಅವರಂತೆಯೇ ಕೈಂಕರ್ಯದಲ್ಲಿ ಆಸಕ್ತಿಯಿರುವ ಈ ಏಕಾಂಗಿಗಳಿಗೂ ತಕ್ಕಂತೆ, ಕ್ರಮತಪ್ಪದಂತೆ ಗೌರವವನ್ನು ಸಲ್ಲಿಸಬೇಕು. ಪೂಜಿಸತಕ್ಕವರುಗಳನ್ನು ಪೂಜಿಸದೆಯೋ ಪೂಜಿಸತಕ್ಕವರಲ್ಲದವರನ್ನು ಮೊದಲು ಪೂಜಿಸುವುದೋ, ಅಪಾರ ಹಾನಿಯನ್ನುಂಟು ಮಾಡುವುದೆಂಬುದು ಮಹಾ ಭಾರತದಲ್ಲಿ, ರಾಜಸೂಯಯಾಗಸಭೆಯ ಸಂದರ್ಭದಲ್ಲಿ ಭೀಷ್ಮರು ಹೇಳಿದ ವಚನ ಮುಂತಾದುವುಗಳಿಂದಲೂ ವಿವರವಾಗಿ ಅರಿಯಲ್ಪಡುತ್ತದೆ.

ಆದುದರಿಂದ ಉತ್ತಮವಾದ ಯೋಗ್ಯತೆಯನ್ನು ಪಡೆದವರನ್ನು ಮೊದಲಲ್ಲಿಯೇ ಗೌರವಿಸದೇ ಇರುವುದು, ಯೋಗ್ಯತೆ ಇಲ್ಲದವರನ್ನು ಪ್ರಪ್ರಥಮವಾಗಿ ಗೌರವಿಸುವುದೂ ಆದ ಎಲ್ಲೆ ಮೀರಿದಕೃತ್ಯಗಳಿಂದ, ನಾನು, ನನ್ನದು ಎಂಬ ಅಹಂಕಾರದಿಂದ ಯಾರೂ ಯಾವಕಾಲಕ್ಕೂ ಮಾಡಕೂಡದು. - ಎಂದು ಯಾದವರಾಜನಿಗೆ ಕಟ್ಟಳೆಯಿಟ್ಟು, ಅವನಿಂದಲೇ ಹಾಗೆಯೇ ಒಂದು ನೀತಿಯನ್ನು (ಶ್ರೀರಾಮಾನುಜರು) ಮಾಡಿಸಿದರು.

ಮುಂಚೆ ಹೇಳಿದ ಈ ಆಚಾರ್ಯಪುರುಷರುಗಳನ್ನು ವಂಶಪಾರಂಪರ್ಯವಾಗಿ, ದಿವ್ಯದೇಶಪರಿಪಾಲಕರುಗಳಾಗಿ ಸ್ಥಾಪಿಸ ಬೇಕು. ಜೀಯರಿಗೆ ಸಹಾಯಕರುಗಳಾದ ಏಕಾಂಗಿಗಳೂ, ಮೇಲಿಂದ ಮೇಲೆ ಈ ರೀತಿಯೇ ನಾಲ್ವರಾಗಿಯೋ, ಒಂದು ಕಾಲದಲ್ಲಿ ಸ್ಥಾನ ವಿಶೇಷಗಳ ಕಾರಣದಿಂದ ಕರ್ತವ್ಯಭಾರಗಳು ಹೆಚ್ಚಿದಲ್ಲಿ ಇದಕ್ಕಿಂತ ಹೆಚ್ಚಿನ ಸಂಖ್ಯೆಯಲ್ಲಿ ಇರುವಂತೆ ಆಯಾಯ ಕಾಲದಲ್ಲಿ ಕಾರ್ಯನಿರ್ವಾಹಿಗಳಿಂದ ಸ್ಥಾಪಿಸಲ್ಪಡ ಬೇಕು.

ಈ ರೀತಿ ಸ್ಥಾಪಿಸಲ್ಪಟ್ಟ ಇವರುಗಳಲ್ಲಿ ಯಾರೊಬ್ಬರು ಕಲಿಯುಗದ ದೋಷದ ಕಾರಣವಾಗಿಯೋ, ತಾವು ಮುಂಚೆಮಾಡಿದ ಪಾಪಕೃತ್ಯಗಳ ಬಲದ ಕಾರಣವಾಗಿಯೋ, ಯಾವಾಗಲಾದರೂ ಹದ್ದುಮೀರಿ ನಡೆದುಕೊಳ್ಳುವವರಾದಲ್ಲಿ, ಅವರುಗಳನ್ನು ತಕ್ಕ ಕಾಲ, ದೇಶ, ನಡತೆ ಇವುಗಳನ್ನರಿತವರೂ, ಧರ್ಮವನ್ನು ತಿಳಿದವರಲ್ಲಿ ಶ್ರೇಷ್ಠರಾದವರೂ ಆದ ಎಲ್ಲರೂ ಒಂದು ಸೇರಿ ಕೈಂಕರ್ಯಕ್ಕೆ ಕೇಡುಬರುವುದನ್ನು ಚೆನ್ನಾಗಿ ಪರಿಶೀಲಿಸಿ, ಸ್ವಲ್ಪವೂ ಸಂದೇಹಪಡದೆ ಆ ಅಧಿಕಾರಸ್ಥಾನದಿಂದ ತೆಗೆದು ಬಿಡಬೇಕೆಂದು ಭಗವದ್ರಾಮಾನುಜರು ಯಾದವರಾಜನನ್ನು ಮುಂದಿಟ್ಟುಕೊಂಡು ಕಟ್ಟುಪಾಡನ್ನು ಮಾಡಿದರು. ಶ್ರೀವೇಂಕಟಗಿರಿಯಲ್ಲಿ ಶ್ರೀಶೈಲಪೂರ್ಣರ ಶಿಷ್ಯರೊಬ್ಬರು ಮುಂಚೆ ಮಾಡಿದ ಧರ್ಮ ಕಟ್ಟುಪಾಡನ್ನು ಮೀರಿನಡೆದುದನ್ನೂ, ಸ್ವತ್ತನ್ನು ಕದಿಯುವುದರಲ್ಲಿ ಆಸೆಗೊಂಡ ಒಬ್ಬನು ತಮಗೂ ವಿಷವಿಟ್ಟುದುದನ್ನೂ, ದ್ರವ್ಯಗಳ ಆಸೆಯಿಂದ ಮನುಜರು ಎಲ್ಲಾ ಪಾಪಗಳನ್ನೂ ಮಾಡುವುದಕ್ಕೆ ಪ್ರವರ್ತಿಸುವುದನ್ನೂ, ಪ್ರಾಚೀನರು, ಅರ್ವಾಚೀನರು ಆದ ಮಹಾತ್ಮರುಗಳೂ ಕೂಡ ಆಸೆಯ ಕಾರಣದಿಂದ ಮಾಡಬಾರದ ಕೆಲಸಗಳಲ್ಲಿ ಪ್ರವರ್ತಿಸುವುದೂ ಕಂಡು ಬರುವುದನ್ನು ಉದಾಹರಣೆಯಾಗಿ ತೋರಿಸಿ, ಕೆಲವು ಸಮಯ ಧರ್ಮದ ಎಲ್ಲೆಯನ್ನು ಮೀರಿ ನಡೆಯುವಿಕೆಯು ಎಲ್ಲರಿಗೂ ಏರ್ಪಡಬಹುದೆಂದು ಹೇಳಿಯೇ ಆ ಕಟ್ಟುಪಾಡನ್ನು ಮಾಡಿದರು.

ಈ ರೀತಿಯಾಗಿ ಕಟ್ಟುಪಾಡು ಮಾಡಿದನಂತರ ಭಗವದ್ರಾಮಾನುಜ ಮುನಿಗಳು ಶ್ರೀನಿವಾಸ ಭಗವಂತನ ಅನುಮತಿಯನ್ನು ಪಡೆದು ಶ್ರೀರಂಗಕ್ಕೆ ಹೊರಡಲು ಇಷ್ಟವುಳ್ಳವರಾಗಿ ಯಾದವರಾಜನನ್ನು ಕರೆದು, ''ಈಗ ಇಲ್ಲಿರುವವರುಗಳಲ್ಲಿ ಈ ಅನಂದಳ್ವಾನ್ ಒಬ್ಬರೇ ಎಲ್ಲಾವಿಧದಲ್ಲಿಯೂ ಉತ್ಕೃಷ್ಟತಮರಾದ ಆಚಾರ್ಯರು. ಆದುದರಿಂದ ಇವರ ಆಜ್ಞೆಯಂತೆ ಎಲ್ಲವನ್ನೂ ಪರಿಪಾಲಿಸುವವನಾಗು'' ಎಂದು ಆಜ್ಞೆಮಾಡಿ, ಅನಂದಾಳ್ವಾನ್‌ರನ್ನು ಕರೆದು, ''ಹೇ ಅನಂದಾಳ್ವಾನ್‌ರವರೇ, ನೀವೊಬ್ಬರು ಇಲ್ಲಿ ತಲೆಗೂದಲು ಬೆಳ್ಳಗಾದ ವೃದ್ಧರಾಗಿರುತ್ತೀರಿ. ನಿಮ್ಮನ್ನು ಸೇರಿದ ಶಠಕೋಪಮುನಿಗಳೇ ಮುಂತಾದವರನ್ನು ಆಯಾಯಾ ಕೈಂಕರ್ಯಗಳಲ್ಲಿ ಕ್ರಮವಾಗಿ ಬಿಟ್ಟು ಎಲ್ಲವನ್ನೂ ಕಾಪಾಡಲು ಸಮರ್ಥರಾಗುವವರಾಗಿ. ನಿಮ್ಮ ಸ್ಥಾನದಲ್ಲಿ ನಿಮ್ಮಂತೆ ಇರುವವರನ್ನೂ, ನನ್ನಸ್ಥಾನದಲ್ಲಿ ಶಠಕೋಪ ಮುನಿಗಳಂತಿರುವವರನ್ನೂ, ಶ್ರೀಶೈಲಪೂರ್ಣರ ಸ್ಥಾನದಲ್ಲಿಯೂ ಕೆಲವರನ್ನು ಶ್ರೀನಿವಾಸನಿಗೆ ಕೈಂಕರ್ಯಮಾಡುವುದಕ್ಕಾಗಿ ಸ್ಥಾಪಿಸಬೇಕು. ಅಂಥಹ ಕೆಲವರು ಈಗ ಇಲ್ಲಿ ಇಲ್ಲವೆಂಬುದೇ ನನಗೆ ಕೊರತೆಯಾಗಿ ಕಾಣುತ್ತದೆ. ಅದನ್ನೂ ಒಂದು ಸಮಯ ನೀವು ಪೂರ್ತಿ ಮಾಡುವವರಾಗುತ್ತೀರಿ.

ಷಡಮರ್ಷಣ ಕುಲದಲ್ಲಿ ಅವತರಿಸಿದ ಪೂಜ್ಯರಾದ ಶ್ರೀಮನ್ನಾಥಮುನಿಗಳು ಭಗವದ್ಭಕ್ತರುಗಳಲ್ಲಿ ಮೊದಲಿಗರಾಗಿ, ಆ ಸಮಯದಲ್ಲಿ ಸ್ವಲ್ಪ ಅಧಿಕವಾದ ಶಾಖೆಗಳನ್ನು ಹೊಂದಿದ್ದ ಷಡಮರ್ಷಣ ಗೋತ್ರದಲ್ಲಿ ಉಂಟಾದುದಾದ ಆ ಕಾಲದ ವಂಶ ಸಮೂಹವೆಲ್ಲವನ್ನು ತಮ್ಮ ವಂಶವಾಗಿಯೇ ತಿಳಿದು ಗೌರವಿಸಿ, ''ಯಾವನು ಜನ್ಮದಾರಭ್ಯ ಮರಣದವರೆಗಿನ ಪರ್ಯಂತ ವಾಸುದೇವನನ್ನು (ಶ್ರೀಕೃಷ್ಣನನ್ನು) ದೈವವಾಗಿ ಕೊಳ್ಳುವುದಿಲ್ಲವೋ ಅಂಥಹವನು ನಮ್ಮ ಕುಲದಲ್ಲಿ ಹುಟ್ಟದಯೇ ನಾಶವಾಗಲಿ, ಹುಟ್ಟಿಬಿಟ್ಟರೋ ಶೀಘ್ರದಲ್ಲಿ ಮರಣ ಹೊಂದಲಿ,'' ಎಂದು ಸಂಕಲ್ಪವನ್ನು ಮಾಡಿಕೊಂಡುದುದು ಪ್ರಸಿದ್ಧವು.

ಶ್ರೀಮನ್ನಾಥಮುನಿಗಳ ಪಾದಾರವಿಂದಗಳನ್ನು ಶರಣವಾಗಿ ಆಶ್ರಯಿಸಿದ ಕುರುಕಾಪಾಲ ತಾತ (ಕುರುಗೈ ಕ್ಕಾವಲಪ್ಪನ್) ಎಂಬ ಆಚಾರ್ಯರು ವೀರನಾರಾಯಣಪುರದಲ್ಲಿ ಯೋಗವನ್ನು ಅಭ್ಯಸಿಸುತ್ತಿದ್ದಾಗ, ನನ್ನ ಪರಮಾಚಾರ್ಯರಾದ ಶ್ರೀ ಯಮುನಾ ಚಾರ್ಯರು (ಆಳವಂದಾರ್) ಅವರಿಂದ ಯೋಗರಹಸ್ಯವನ್ನು ತಿಳಿದುಕೊಳ್ಳಲು ಅಪೇಕ್ಷೆಪಟ್ಟು ಅವರ ಧ್ಯಾನ ಸಮಾಧಿ ಸ್ಥಿತಿಗೆ ಭಂಗವುಂಟಾಗುವುದೆಂದು ಅಂಜಿ, ಗೋಡೆಯ ಪಕ್ಕದಲ್ಲಿ ಮರೆಯಾಗಿ ನಿಂತಿರಲು, ತಾತಸೂರಿಯು, ಸಮಾಧಿಯಲ್ಲಿ ತಮ್ಮ ತೋಳುಗಳನ್ನು ಅಮುಕಿ ಗೋಡೆಯ ಆಚೆಯಲ್ಲಿ ಒಬ್ಬರನ್ನು ಭಗವಂತನು ನೋಡುತ್ತಿದ್ದದನ್ನು ಕಂಡು ಒಡನೆಯೇ ಸಮಾಧಿ ಸ್ಥಿತಿಯಿಂದ ಹೊರಗೆ ಬಂದು, ಎದ್ದು, ತಮ್ಮ ದಿವ್ಯ ಮುಖವನ್ನು ತಿರುಗಿಸಿ, ''ಷಡಮರ್ಷಣ ಕುಲದಲ್ಲಿ ಉದಯಿಸಿದ ಯಾರಾದರೂ ಇಲ್ಲಿ ಬಂದವರುಂಟೋ?'' ಎಂದು ಹೇಳಲು ನಂತರ ಯಾಮುನಾರ್ಯರು ''ದಾಸನಾದ ಯಾಮುನನು ಇಲ್ಲಿ ಬಂದಿದೇನೆ'' ಎಂದು ಹೇಳಿಕೊಂಡೇ ಬಂದು ಅವರ ಶ್ರೀಚರಣಗಳಲ್ಲಿ ಬಿದ್ದು'' ಸ್ವಾಮಿ, ಗೋಡೆಯ ಮರೆಯಲ್ಲಿ ನಿಂತಿದ್ದ ದಾಸನನ್ನು ತಾವು ತಿಳಿದುಕೊಂಡುದು ಹೇಗೆಯೋ?'' ಎಂದು ಕೇಳಲು, ಅದಕ್ಕೆ ತಾತಸೂರಿಯು, ''ಯೋಗಸ್ಥಿತಿಯಲ್ಲಿ ನನ್ನಿಂದ ಇಷ್ಟಬಂದಂತೆ ಅನುಭವಿಸಲ್ಪಡುವ ಭಗವಂತನು ಶ್ರೀದೇವಿಯಾದ ತನ್ನ ದಿವ್ಯ ಮಹಿಷಿಯು ತನ್ನ ಯೋಗದಿಂದ ನಿಬಿಡವಾಗಿ ಆಲಂಗಿಸಿದ್ದಾಗಲೂ ಸಹ ಅವಳ ಮುಖವನ್ನೂ ನೋಡದವನು ಈಗ ನನ್ನ ತೋಳನ್ನು ಒತ್ತಿ ಎರಡು ಮೂರು ಸಲ ಮುಖವನ್ನು ಎತ್ತಿ ಎತ್ತಿ ಗೋಡೆಯಿಂದ ಮರೆಸಲ್ಪಟ್ಟ ಜಾಗವನ್ನು ನೋಡಿದನು. ಅದರಿಂದ ಷಡಮರ್ಷಣ ಕುಲದಲ್ಲಿ ಉದ್ಭವರಾದ ಯಾರಾದರೂ ಇಲ್ಲಿಗೆ ಬಂದಿರ ಬೇಕೆಂದು ತಿಳಿದೆನು'' ಎಂದು ಉತ್ತರನೀಡಿ, ಶ್ರೀಮನ್ನಾಥಮುನಿಗಳ ಸಂಕಲ್ಪವನ್ನು ಭಗವಂತನೂ ಸಫಲಮಾಡಿದನು'' ಎಂದು ಹೇಳಿದರು. ಆದುದರಿಂದ ಭಗವಂತನಿಗೆ ಅತ್ಯಂತ ಪ್ರಿಯವಾದುದೂ, ಶ್ರೀಮನ್ನಾಥ ಮುನಿಗಳ ಅಭಿಮಾನಕ್ಕೆ ಪಾತ್ರವಾದುದೂ ಆದ ಅಂಥಹ ಷಡಮರ್ಷಣ ಗೋತ್ರದಲ್ಲಿ ಜನಿಸಿದ ಒಬ್ಬರನ್ನು ಇಲ್ಲಿ ತಕ್ಕ ಸಮಯದಲ್ಲಿ

ಸ್ಥಾಪಿಸುವವರಾಗಿ,'' ಎಂದು ನಿಯಮಿಸಿ, ''ಶಠಕೋಪ ಜೀಯರೇ, ಏಕಾಂಗಿಗಳು ನಾಲ್ವರೊಂದಿಗೆ ಕೂಡಿ ಅನಂದಾಳ್ವಾನ್‌ರ ಆಜ್ಞೆಯನ್ನು ಪರಿಪಾಲಿಸಿ ಶ್ರೀವೇಂಕಟನಾಥನ ದಿವ್ಯವಾದ ಐಶ್ವರ್ಯವನ್ನೂ, (ಮಠದಲ್ಲಿ) ಶ್ರೀಚಕ್ರವರ್ತಿ ಶ್ರೀಕುಮಾರನಾದ ಶ್ರೀರಾಮನ ಆರಾಧನೆಯನ್ನೂ ನಿರ್ದಿಷ್ಟವಾಗಿ ನೆರವೇರಿಸಿಕೊಂಡು ಬನ್ನಿ'' ಎಂದು ನಿಯಮವನ್ನು ಮಾಡಿ ತಿರುಪತಿ ಬೆಟ್ಟದಿಂದ ಇಳಿದರು.

ಆದಾದ ನಂತರ ಆಂಡಾಳ್ ಜೊತೆ ಶ್ರೀಗೋವಿಂದರಾಜ ದೇವನನ್ನೂ ನಮಸ್ಕರಿಸಿ ಸೇವೆ ಮಾಡಿ, ಅವರ ದಿವ್ಯವಾದ ಐಶ್ವರ್ಯವೂ ನಿರ್ದಿಷ್ಟವಾಗಿ ಪರಿಪಾಲಿಸುವುದನ್ನು ಕಂಡು ಅತ್ಯಂತ ಸಂತೋಷಗೊಂಡ ಭಗವದ್ರಾಮಾನುಜರು ಯಾದವರಾಜನನ್ನು ಕರೆದು, ''ಹೇ ರಾಜನ್, ಶ್ರೀಗೋವಿಂದರಾಜನೂ ಶ್ರೀವೇಂಕಟಗಿರಿಯ ಮಹಾರಾಜನೂ ಆದ ಈ ಈರ್ವರೂ, ಶೈವಜನರು ಗಳಿಂದುಂಟಾದ ದೊಡ್ಡ ಆಪತ್ತೆಂಬ ಸಮುದ್ರದಲ್ಲಿ ಬಿದ್ದು ಹೇಗೋ ದಡವನ್ನು ಸೇರಿದರು. ಇನ್ನು ಅಂಥಹ ಉಪದ್ರವವು ಅವರುಗಳಿಗೆ ಉಂಟಾಗದಂತೆ ಕಾಪಾಡುವವನಾಗು. ಶಂಖ ಚಕ್ರಗಳನ್ನು (ತೋಳ್ಗಳಲ್ಲಿ) ಒತ್ತಿಕೊಳ್ಳದವರಾದ ಬೇರೆ ದೇವತೆಗಳ ಭಕ್ತರುಗಳಿಗೆ, ಎಷ್ಟು ಕಷ್ಟಬಂದರೂ ಈ ದಿವ್ಯದೇಶದಲ್ಲಿ ಭಗವಂತನ ಕೈಂಕರ್ಯಗಳನ್ನು ಪರಿಶೀಲಿಸುವ ಅಧಿಕಾರ ಮುಂತಾದುವುಗಳನ್ನು ಕೊಡುವುದರ ಮೂಲಕವಾಗಿ ಒಳಹೋಗುವುದಕ್ಕೆ ಸ್ವಲ್ಪವೂ ಆಸ್ಪದವನ್ನು ಕೊಡಬೇಡ.

ಈಗ ಈ ದಿವ್ಯದೇಶವನ್ನು ಬಿಟ್ಟುಹೋಗುವ ನಾನು ಅಧಿಕವಾದ ಪ್ರೀತಿಯ ಕಾರಣದಿಂದಾಗಿ, ದೊಡ್ಡದಾದ ಕೇಡು ಸಂಭವಿಸಬಹುದೆಂದು ಅಂಜಿ ನಿನಗೆ ನಾನು ಮಾಡುವ ಈ ಆಜ್ಞೆಯನ್ನು, ಮುಂದೆ ಒಂದಾನೊಂದು ಸಮಯ ಹಗೆಗಳನ್ನು ನಾಶಮಾಡವುದಕ್ಕಾಗಿ ದ್ವಾರಕೆಯನ್ನು ಬಿಟ್ಟು ಹೋಗುವಾಗ ಶ್ರೀಕೃಷ್ಣನು, ''ನಾನು ಬರುವವರೆಗೆ ಚಕ್ರಾಂಕಿತ (ತೋಳುಗಳಲ್ಲಿ) ರಲ್ಲದವರನ್ನು ಒಳಗೆ ಹೋಗಲು ಬಿಡಿಬೇಡಿ,'' ಎಂದು ದ್ವಾರಕಾಪಟ್ಟಣದ ದ್ವಾರಪಾಲಕರುಗಳಿಗೆ ಕೊಟ್ಟ ಅಪ್ಪಣೆಯಂತೆ ತಿಳಿದು ಜಾಗ್ರತೆಯಾಗಿ ಇರುವವನಾಗು,'' ಎಂದು ಕಟ್ಟಳೆಯನ್ನಿಟ್ಟು, ಕರುಣಾರ್ದ್ರಕಟಾಕ್ಷದಿಂದ ಆತನನ್ನನುಗ್ರಹಿಸಿ ಪರಿಪೂರ್ಣವಾದ ಮಂಗಳಶಾಸನವನ್ನು ಮಾಡಿ ಅವನನ್ನು ಕೊಂಡಾಡಿದ ಆ ರಾಮಾನುಜರು, ತಮ್ಮ ಅಗಲುವಿಕೆಯನ್ನು ತಾಳದ ಅನಂದಾಳ್ವಾನ್, ಶಠಕೋಪ ಜೀಯರ್, ಯಾದವರಾಜ ಮುಂತಾದವರು ಬಾಷ್ಪಪರ್ಯಾಕುಲಿತ ನೇತ್ರಗಳಿಂದ ಕೂಡಿ, ಅವರನ್ನು ಹಿಂಬಾಲಿಸಲು, ತಾವೂ ಬಾಷ್ಪ ಪರ್ಯಾಕುಲಿತನೇತ್ರವುಳ್ಳವರಾಗಿ ಅತೀವ ಶ್ರಮದಿಂದ ಅವರುಗಳ ಸಮ್ಮತಿಯನ್ನು ಪಡೆದು ಶ್ರೀರಂಗ ದಿವ್ಯ ನಗರಕ್ಕೆ ಬಿಜಯಮಾಡಿದರು.

**ಶ್ರೀ ರಾಮಾನುಜ ವಿಗ್ರಹ ಪ್ರತಿಷ್ಠೆಯೂ, ಶ್ರೀರಾಮಾನುಜ ನೂತ್ತಂದಾದಿಯನ್ನು ಪಠಿಸುವುದೂ**

ಇನ್ನು ವೇಂಕಟನಾಥನ ದಿವ್ಯ ದೇವಾಲಯದಲ್ಲಿ ಶ್ರೀ ರಾಮಾನುಜರ ಅರ್ಚಾಮೂರ್ತಿ (ವಿಗ್ರಹ) ಯಾದ ದಿವ್ಯ ಮಂಗಳ ವಿಗ್ರಹವನ್ನು ಪ್ರತಿಷ್ಠೆ ಮಾಡಿದುದೂ ಮತ್ತು ಅವರ ವಿಷಯವಾದ ದಿವ್ಯ ಪ್ರಬಂಧವನ್ನು ಅನುಸಂಧಾನಮಾಡುವುದೂ ಆದ ಇವುಗಳ ಇತಿಹಾಸ(ಚರಿತ್ರೆ)ವು ಹೇಳಲ್ಪಡುತ್ತದೆ.

ಈ ರೀತಿ ರಾಮಾನುಜರ ದಿವ್ಯಾಜ್ಞೆಯನ್ನು ಅನುಸರಿಸಿ ಶ್ರೀವೇಂಕಟಗಿರಿಯಾದ ದಿವ್ಯದೇಶದಲ್ಲಿ ಧರ್ಮಕಾರ್ಯಗಳೆಲ್ಲವೂ ಯಾವ ಕೊರತೆಯೂ ಇಲ್ಲದಂತೆ ನಡೆಸಲ್ಪಟ್ಟು ಬರುತ್ತಿರುವಾಗ, ಒಂದು ಸಮಯ ಶ್ರೀ ರಾಮಾನುಜರ ಅವತಾರ ಸಮಾಪ್ತಿಯನ್ನು ಒಬ್ಬ ಶ್ರೀವೈಷ್ಣವರು ಹೇಳಿದುದನ್ನು ಕೇಳಿ ಅನಂದಾಳ್ವಾನ್ ರವರು ಅತ್ಯಂತ ವ್ಯಾಕುಲ ಮನಸ್ಕರಾಗಿ, ತಂದೆಯನ್ನು ಕುರಿತ ಮಗನ ರೀತಿಯಲ್ಲಿ, ಒಂದು ವರ್ಷಕಾಲ ದುಃಖದೀಕ್ಷೆಯನ್ನು ಕೊಂಡು ಶ್ರೀರಾಮಾನುಜ ನಂದವನ ಕೈಂಕರ್ಯವನ್ನೂ ಗಮನಿಸದೆ, ಶ್ರೀವೇಂಕಟನಾಥನನ್ನು ಸೇವೆ ಮಾಡದೆಯೇ ಇದ್ದರು.

ಆಗ ಶ್ರೀವೇಂಕಟನಾಥನೂ ಅಪಾರ ದುಃಖವನ್ನು ಹೊಂದಿ ಪರಮಕರುಣೆಯಿಂದ ಅನಂದಾಳ್ವಾನ್‌ರನ್ನು ಕರೆದುಕೊಂಡು ಬರುವಂತೆ ಅರ್ಚಕರ ಮೂಲಕವಾಗಿ ಒಬ್ಬ ದೂತನನ್ನು ಕಳುಹಿಸಲು, ಅವನಿಂದ ಒತ್ತಾಯಿಸಲ್ಪಟ್ಟು ಕರೆದುಕೊಂಡು ಬರಲ್ಪಟ್ಟ ಅನಂದಾಳ್ವಾನ್ ದೇವಸ್ಥಾನವನ್ನು ಸೇರಿ, ಅಪಾರ ದುಃಖ ಸಾಗರದಲ್ಲಿ ಮುಳುಗಿ ಮುಖವನ್ನು ಎತ್ತಿ ನೋಡದಯೇ ಅವನತಮುಖವಾಗಿ ನಿಂತಿರಲು, ಭಗವಂತನು, "ಹೇ ಅನಂದಾಳ್ವಾನ್‌ರವರೇ, ನಾನಲ್ಲವೇ ಶ್ರೀ ರಾಮಾನುಜರಾದ ಒಂದು ದೊಡ್ಡ ನಿಧಿಯನ್ನು ಕಳೆದುಕೊಂಡು ಬಿಟ್ಟೆ? ನಿಮಗೆ ಅವರ ಸ್ಥಾನದಲ್ಲಿ ನಾನೇ ಇರುತ್ತೇನೆ, ದುಃಖಿಸಬೇಡಿ. ನಿಮಗೆ ಯಾವ ಕೊರತೆಯೂ ಬಾರದು. ನಿಮ್ಮ ಇಷ್ಟಾರ್ಥವೆಲ್ಲವನ್ನೂ ನಾನೇ ನೆರವೇರಿಸುತ್ತೇನೆ," ಎಂದು ಅತ್ಯಂತ ಆದರದಿಂದ ಸಮಾಧಾನಪಡಿಸಿ, ನಿರಂತರ (ಸತತ)ವಾಗಿ (ಅರ್ಚನೆಮಾಡಲ್ಪಟ್ಟ)ಪುಷ್ಪರಾಶಿಯಿಂದ ಘಮ ಘಮವೆಂದು ಸುವಾಸನೆಯನ್ನು ಹೊಂದಿದ ತನ್ನ ಶ್ರೀ ಪಾದಯುಗ್ಮವಾದ (ಶಠಾರಿ) ಶ್ರೀ ಶಠಗೋಪ, ತೀರ್ಥ, ಪ್ರಸಾದ ಮುಂತಾದವುಗಳನ್ನು ಕೊಟ್ಟು ಗೌರವಿಸಲು, ಅವುಗಳನ್ನು ಪಡೆದ ಅನಂದಾಳ್ವಾನ್ ಸ್ವಲ್ಪ ಮುಖವನ್ನು ಎತ್ತಿ ಶ್ರೀವೇಂಕಟನಾಥನ ಚಂದ್ರಮಂಡಲದಂತಿರುವ ದಿವ್ಯವದನಾರವಿಂದವನ್ನು ದರ್ಶಿಸಿದವರಾಗಿ "ಹೇ ಭಗವನ್, ಶ್ರೀವೇಂಕಟನಾಥನೇ, ಶ್ರೀನಿವಾಸಾ, ಶ್ರೀರಾಮಾನುಜ ಮುನಿಗಳ

ವಿಷಯದಲ್ಲಿ ದಾಸನು ಮಾಡುವ ಈ ವಿಜ್ಞಾಪನೆಯನ್ನು ತಾವು ನೆರವೇರಿಸಿ ಕೊಡಬೇಕು ಎಂದು ಪ್ರಾರ್ಥಿಸುತ್ತೇನೆ'' ಎಂದು ಬಿನ್ನವಿಸಿದರು.

ಅನಂತರ, ಭಗವಂತನಿಂದ - ನಿಮ್ಮಕೋರಿಕೆಗಳನ್ನು ಸಂಕೋಚವಿಲ್ಲದಂತೆ ಹೇಳಿ - ಎಂದು ಹೇಳಲ್ಪಟ್ಟ ಶ್ರೀ ಅನಂದಾಳ್ವಾನ್, ''ಪ್ರಕೃತಿ ಮಂಡಲಕ್ಕಿಂತ ಮೇಲೆಯುಳ್ಳ ಪರಮ ಪದದಲ್ಲಿ ವಾಸಿಸುವವನು, ಶಂಖ ಚಕ್ರ ಗದೆ ಮುಂತಾದುವುಗಳನ್ನು ಧರಿಸಿದವನಾಗಿ ಎಲ್ಲರನ್ನೂ ಪೋಷಿಸುವವನು,'' ಎಂದು ಪರಮ ಪುರುಷನಾಗುವುದಕ್ಕೆ ಅಸಾಧಾರಣ ಲಕ್ಷಣಗಳಾಗಿ ಹೇಳಲ್ಪಟ್ಟ ಶಂಖ ಚಕ್ರಗಳನ್ನು ಕಲಿಯುಗಾರಂಭದಲ್ಲಿ ಪರಮಕರುಣೆಯಿಂದ, ತೊಂಡಮಾನ್ ಎಂಬ ಭಕ್ತನು, ಜಯಿಸಲು ಕಷ್ಟ ಸಾಧ್ಯವಾದ ಶತ್ರುಗಳಕೂಟವನ್ನು ಕಂಡು ಅಂಜಿಕೆಗೊಳ್ಳಲು, ತಾವು ಅವನಿಗೆ ಶತ್ರುಗಳನ್ನು ನಾಶಪಡಿಸಲು ಶಂಖಚಕ್ರಗಳನ್ನು ಕೊಟ್ಟು ಕೃಪೆಮಾಡಿದಿರಿ. ಅಂಥಹ ತಮ್ಮ ಮಹಾನ್ ಔದಾರ್ಯವಾದ ಸದ್ಗುಣವನ್ನರಿಯದ ಮೂಢರುಗಳಾದ ಈ ಲೋಕದವರು ನಿಮಗೇ ಅಸಾಧಾರಣವಾದ ಸುದರ್ಶನ ಪಾಂಚಜನ್ಯ ಚಿಹ್ನೆಗಳು ನಿಮ್ಮಲ್ಲಿ ಕಾಣಬಾರದೇ ಇದ್ದುದರಿಂದ ತಮ್ಮನ್ನು ಅನ್ಯದೇವತೆಯಾಗಿ ತಿಳಿದು ಭ್ರಮಿಸಿ ಮತಿಗೇಡಿಗಳಾದರು. ಅವರುಗಳು ಇರುವಂತೆಯೇ ತಮ್ಮಲ್ಲಿ ಪರಮ ಪುರುಷತ್ವವನ್ನು ಅರಿತು ಅದರ ಮೂಲಕವಾಗಿ ಮುಕ್ತಿ ಹೊಂದುವುದಕ್ಕಾಗಿ, ಶೈವ ಜನರ ಅರ್ಥವಿಲ್ಲದ ಕೋಲಾಹಲವನ್ನು ಕೊನೆಗಾಣಿಸಿ, ಬಹಳವಾದ ಪ್ರಯತ್ನದಿಂದ ಯಾದವ ರಾಜನನ್ನೂ ಒಳ್ಳೆಯದಾರಿಗೆ ತಂದು, ಹಿಂದಿನಂತೆ ಶಂಖ ಚಕ್ರಾಯುಧಗಳನ್ನು ತಾವು ಧರಿಸಿಕೊಳ್ಳುವಂತೆ ಶ್ರೀರಾಮಾನುಜ ಮುನಿಗಳಲ್ಲವೇ ಕೃಪೆಮಾಡಿದರು.

ಈ ರೀತಿಯೇ ದೋಷಗಂಧವೂ ಇಲ್ಲದ ಸಕಲ ಸದ್ಗುಣ ಕೂಟಗಳಿಗೆ ನಿಧಿಯಾದ ತಮ್ಮಲ್ಲಿ ನಿರ್ಗುಣತ್ವ ಮುಂತಾದ ದೋಷಗಳನ್ನು ಹೇಳುತ್ತಿರುವ ವೇದ ಬಾಹಿರರುಗಳನ್ನೂ, ವೇದದ ಬಗ್ಗೆ ಕುದೃಷ್ಟಿಯಿಂದ ತಪ್ಪಾದ ಅರ್ಥ ಹೇಳುವವರನ್ನೂ ನಿರಾಕರಿಸುವುದಕ್ಕಾಗಿ, ತಮ್ಮನ್ನು ಮೂರು ಬಗೆಯಾದ ಚೇತನ, ಅಚೇತನ ಗಳನ್ನುಳ್ಳ ರೂಪವೆಂದು ಸತ್, ಸ್ಥಿತಿ (ರಕ್ಷಣೆ), ಪ್ರವೃತ್ತಿ (ಪ್ರಯತ್ನ) ಭೇದವನ್ನು ತಮಗೆ ಅವಶ್ಯವಾಗಿರುವಂತೆ ಉಳ್ಳವರೆಂದೂ, ಸಮಸ್ತ ಲೋಕಗಳ ಸೃಷ್ಟಿ, ಸ್ಥಿತಿ ಮತ್ತು ಲಯ (ಸಂಹಾರ) ಆದ ಇವುಗಳನ್ನು ಕ್ರೀಡಾರ್ಥವಾಗಿ ಉಳ್ಳವರೆಂದೂ, ಸಮಗ್ರ ವೇದಾಂತಗಳಲ್ಲಿಯೂ ಹೇಳಲ್ಪಡುವವರಾಗಿಯೂ, ಸರ್ವದೋಷಗಳಿಗೆ ಶತ್ರುವಾಗಿ, ಜ್ಞಾನಾನಂದವೇ ಸ್ವರೂಪವಾಗಿ ಉಳ್ಳವರಾಗಿಯೂ, ಅಪ್ರಾಕೃತ (ಪರಮಪದದ ಪಂಚಭೂತಮಯ)ವಾದ ದಿವ್ಯಸ್ವರೂಪದಿಂದ ಕೂಡಿದವರಾಗಿಯೂ, ಶ್ರೀದೇವಿ, ಭೂದೇವಿ, ನೀಳಾದೇವಿಯರುಗಳ ಪ್ರಾಣೇಶ್ವರನಾಗಿಯೂ, ಬ್ರಹ್ಮರುದ್ರಾದಿಗಳಿಂದ

ಆಶ್ರಯಣೀಯರಾಗಿಯೂ, ಇಹ (ಈ ಲೋಕ) ಪರ (ಪರಮಪದವಾದ ಪರಲೋಕ) ಎಂಬ ಎರಡು ವಿಭೂತಿಗಳನ್ನೂ (ತಮ್ಮ ಆಜ್ಞಾನುಸಾರವಾಗಿ ನಡೆಯುತ್ತಿರುವ ಲೋಕಗಳನ್ನೂ) ಪರಾಮರಿಸುವವರಾಗಿಯೂ, ನಿತ್ಯಸೂರಿಗಳಿಂದಲೂ, ಮುಕ್ತರುಗಳಿಂದಲೂ, ಅನುಭವಿಸತಕ್ಕವರಾಗಿಯೂ, ಎಲ್ಲಾ ಉಪನಿಷದ್ವಾಕ್ಯಗಳನ್ನು ಆಧರಿಸಿ, ನಿರೂಪಿಸಿ, ಶ್ರೀಭಾಷ್ಯಾದಿ ಗ್ರಂಥಗಳನ್ನು ರಚಿಸಿ, ಸತ್ಯವಾದ ಜ್ಞಾನವನ್ನುಂಟಾಗಿಸಿ, ಈ ಲೋಕದವರುಗಳನ್ನು ಕಾರುಣ್ಯದಿಂದ ಕಾಪಾಡಿದುದು ಈ ರಾಮಾನುಜಮುನಿವರ್ಯರಲ್ಲವೇ?

ಆದುದರಿಂದ, ಸಮಸ್ತಲೋಕಗಳಿಗೂ ಅದ್ಭುತ ಸಹಾಯ ಮಾಡಿದ ಭಗವದ್ರಾಮಾನುಜ ಮುನಿಗಳನ್ನು ತಿಳಿಸುವ ''ಪ್ರಪನ್ನ ಗಾಯತ್ರಿ'' ಎಂಬ ಹೆಸರಿನಿಂದ ಪ್ರಸಿದ್ಧವಾದ ನೂರೆಂಟು ಪಾಶುರ (ಪದ್ಯ)ಗಳನ್ನು ರೂಪವಾಗಿ ಕೊಂಡದ್ದೂ 'ರಾಮಾನುಜ ನೂತ್ತಂದಾದಿ' ಎಂಬ ಮತ್ತೊಂದು ಹೆಸರುಳ್ಳದ್ದೂ (ಶ್ರೀರಾಮಾನುಜರ ವಿಷಯವಾದ ಪದ್ಯಗಳು ನೂರೆಂಟೂ ಅಂತ್ಯಾದಿ ರೂಪದಲ್ಲಿ ರಚಿಸಲ್ಪಟ್ಟಿವೆ) ಶ್ರೀರಂಗಾಮೃತಸೂರಿ (ತಿರುವರಂಗತ್ತಮುದನಾರ್) ವರ್ಯರು ಕೃಪೆಮಾಡಿ ರಚಿಸಿದ ಪ್ರಬಂಧವನ್ನು ತಿರುವಧ್ಯಯನೋತ್ಸವದಲ್ಲಿ ಪ್ರತ್ಯೇಕವಾಗಿ ಒಂದು ದಿನ ತಾವು ಕೃಪೆಮಾಡಿ ಕೇಳಬೇಕು'' ಎಂದೂ

ಆಳ್ವಾರ್‌ಗಳು ತಿರುಪತಿ ಬೆಟ್ಟವನ್ನು ಹತ್ತಿ ತಮ್ಮನ್ನು ಮಂಗಳಾ ಶಾಸನ ಮಾಡದ ಕೊರೆಯನ್ನು ತೀರಿಸುವುದಕ್ಕಾಗಿಯೂ, ಯಾವಾಗಲೂ ಶ್ರೀರಾಮಾನುಜ ಮುನಿವರ್ಯರ ಮಂಗಳಾಶಾಸನವುಂಟಾಗುವುದಕ್ಕಾಗಿಯೂ, ಕಲಿಯ ಪ್ರಭಾವದಿಂದುಂಟಾದ ದೋಷದಿಂದ ವೇದವನ್ನು ಒಪ್ಪದವರೂ, ಅದಕ್ಕೆ ತಪ್ಪಾದ ಅರ್ಥವನ್ನು ಹೇಳುವವರೂ ಆದ ಕೆಲವರುಗಳ ವಂಚನೆಗಳನ್ನು ವಿನಾಶಪಡಿಸುವುದಕ್ಕಾಗಿ ಶ್ರೀರಾಮಾನುಜಮುನಿವರ್ಯರನ್ನು ಅರ್ಚಾರೂಪ (ವಿಗ್ರಹ)ವಾಗಿ ಈ ದಿವ್ಯದೇಶದಲ್ಲಿ ಪ್ರತಿಷ್ಠೆಮಾಡಿಸಲು ಅನುಮತಿಯನ್ನು ದಯಪಾಲಿಸಬೇಕು'' - ಎಂದು ಪ್ರಾರ್ಥಿಸಿಕೊಂಡರು.

ಈ ರೀತಿ ಪ್ರಾರ್ಥಿಸಲ್ಪಟ್ಟ ಶ್ರೀವೇಂಕಟನಾಥನು ಪರಮಸಂತೋಷಗೊಂಡು,''ಹೇ ಅಂನದಾಳ್ವಾನ್‌ರವರೇ, ನೀವು ಕೇಳಿದ ಈ ವರಗಳೆರಡೂ ನನಗೆ ಪರಮ ಇಷ್ಟವಾದುವುಗಳು. ನನ್ನ ಬಗ್ಗೆ ಶಠಕೋಪಸೂರಿ (ನಮ್ಮಾಳ್ವಾರ್) ಕಲಿಯನ್ (ತಿರುಮಂಗೈಯಾಳ್ವಾರ್) ಮುಂತಾದ ದಿವ್ಯಸೂರಿಗಳು ಹಾಡಿದ ದಿವ್ಯ ಪ್ರಬಂಧ ಭಾಗಗಳಂತೆಯೇ ನನ್ನವರಾದ ರಾಮಾನುಜ ಮುನಿವರ್ಯರ ವಿಷಯವಾಗಿ ಹಾಡಿರುವ ದಿವ್ಯಪ್ರಬಂಧವಾದ ಪ್ರಪನ್ನಗಾಯತ್ರಿ

(ರಾಮಾನುಜನೂತ್ತಂದಾದಿ)ಯೂ ಅಧ್ಯಯನೋತ್ಸವದಲ್ಲಿ ಬೇರೆಯಾಗಿಯೇ ಒಂದು ದಿನ ಪ್ರಪನ್ನರುಗಳಿಂದ (ಭಗವಂತನನ್ನೇ ಶರಣ್ಯನೆಂದು ತಿಳಿದವರು) ನಿಮ್ಮ ಇಷ್ಟಾರ್ಥದಂತೆ ಅನುಸಂಧಾನ ಮಾಡಲ್ಪಡಲಿ. ಶ್ರೀರಾಮಾನುಜ ಮುನಿವರ್ಯರೂ ನಿಮ್ಮ ಕೋರಿಕೆಯಂತೆ ನನ್ನದೇವಸ್ಥಾನದಲ್ಲಿಯೇ ಒಂದು ಭಾಗದಲ್ಲಿ ಆದಿಶೇಷ, ಗರುಡ ವಿಷ್ವಕ್ಸೇನರುಗಳಂತೆಯೇ ಅರ್ಚಾರೂಪದಲ್ಲಿ ಶಾಸ್ತ್ರೋಕ್ತವಾಗಿ ಪ್ರತಿಷ್ಠೆ ಮಾಡಲ್ಪಡಲಿ'' ಎಂದು ಉತ್ತರವನ್ನು ಕೊಟ್ಟನು.

ಅನಂತರ ಅನಂದಾಳ್ವಾನ್‌ರೂ ಈ ರೀತಿ ಭಗವಂತನು ವಿಶೇಷವಾದ ಕಟಾಕ್ಷವನ್ನು ಮಾಡಿದುದರಿಂದ ಪರಮಸಂತುಷ್ಟರಾದ ಮನಸ್ಸುಳ್ಳವರಾಗಿ ತಮ್ಮ ಅಭಿಮಾನ ವಿಶೇಷಕ್ಕೆ ಒಪ್ಪುವರೀತಿ ಅಧ್ಯಯನೋತ್ಸವದ ಅಂತ್ಯ ದಿನದಲ್ಲಿ ಅನುಸಂಧಾನ ಮಾಡತಕ್ಕುದಾಗಿ ಶ್ರೀರಾಮಾನುಜ ಮುನಿವರ್ಯರಿಂದ ನಿಯಮಿಸಲ್ಪಟ್ಟ ''ಕಣ್ಣಿನುಣ್ ಶಿರುತ್ತಾಂಬು'' (ಶ್ರೀಮಧುರ ಕವಿಸೂರಿ ವಿರಚಿತವಾದುದು) ದಿವ್ಯಪ್ರಬಂಧವನ್ನು ಅನುಸಂಧಿಸುವ ದಿನದ ಮಾರನೆಯದಿನ ಶ್ರೀರಾಮಾನುಜ ನೂತ್ತಂದಾದಿಯನ್ನು ಪ್ರತ್ಯೇಕವಾಗಿ ಅನುಸಂಧಾನ ಮಾಡುವಂತೆ ನಿಯಮಿಸಿ, ಅದರ ನಂತರ, ಮುಂಚೆ ರಾಮಾನುಜಮುನಿಗಳು ನಿಯಮಿಸಿದುದೂ, ಶ್ರೀಶೈಲಪೂರ್ಣರ ಇತಿಹಾಸವನ್ನು ನೆನಪು ಕೊಡುವುದೂ ಆದ ತಣ್ಣೀರು ಅಮೃತವನ್ನು ಎದುರುಗೊಳ್ಳುವ ಉತ್ಸವವನ್ನು ಮಾಡುವುದಾಗಿ ಏರ್ಪಾಟು ಮಾಡಿ, ಮುಂದೊಂದು ಕಾಲದಲ್ಲಿ ಶ್ರೀರಾಮಾನುಜ ಮುನಿಗಳು ಗಾಢಾಲಿಂಗನಮಾಡಿ ಸಂಸ್ಕರಿಸಿ ತಮಗೆ ಕೊಟ್ಟದ್ದೂ, ಅಂದಿನಿಂದ ತಮ್ಮ ವಾಸಗೃಹದಲ್ಲಿ ತಮ್ಮಿಂದ ಆದರದೊಡನೆ ಆರಾಧಿಸಲ್ಪಟ್ಟು ಬರುವುದೂ ಆದ ಆ ಶ್ರೀಮದ್ರಾಮಾನುಜರ ದಿವ್ಯವಾದ ವಿಗ್ರಹವನ್ನೇ, ಶ್ರೀವೈಖಾನಸಾಗಮದಲ್ಲಿ ಹೇಳಿರುವಂತೆಯೇ ಕ್ರಮವಾಗಿ ಸಂಸ್ಕರಿಸಿ (ಮಂತ್ರಗಳಿಂದ ಶಕ್ತಿಯನ್ನು ತುಂಬಿಸಿ)ಶ್ರೀವೇಂಕಟನಾಥನ ದಿವ್ಯ ದೇವಾಲಯದಲ್ಲಿಯೇ ಎಡಭಾಗದಲ್ಲಿ ಒಂದು ಮಂಟಪದಲ್ಲಿ ಪ್ರತಿಷ್ಠೆಯನ್ನು ಮಾಡಿಸಿ, ''ಶ್ರೀಮದ್ರಾಮಾನುಜಾಚಾರ್ಯ ಶ್ರೀಪಾದಾಂಭೋರುಹದ್ವಯಂ'' (ಶ್ರೀರಾಮಾನುಜಾಚಾರ್ಯರ ಶ್ರೀ ಚರಣದ್ವಯಗಳು) ಎಂದು ಭಗವಂತನು ತಮ್ಮ ವಿಷಯವಾಗಿ ಹೇಳಿದ ಧ್ಯಾನ ಶ್ಲೋಕ (ತನಿಯನ್)ದ ಸತ್ಯತೆಯಿಂದ ತಮಗೆ ಶ್ರೀರಾಮಾನುಜರ ಶ್ರೀಚರಣಂಬುಜವಾಗುವ ಯೋಗ್ಯತೆಯೂ, ''ರಾಮಾನುಜಪದಚ್ಛಾಯಾ ಗೋವಿಂದಾಹ್ವಾನಪಾಯಿನೀ'' (ಗೋವಿಂದನೆಂದು ಹೆಸರು ಪಡೆದು ರಾಮಾನುಜರ ದಿವ್ಯ ಚರಣಗಳನ್ನು ಬಿಟ್ಟು ಅಗಲಲಾರದ ಶ್ರೀ ಪಾದುಕೆಗಳು) ಎಂಬ ವಚನದ ಸತ್ಯತೆಯಿಂದ ''ಎಂಬಾರ್'' ರವರಿಗೆ ರಾಮಾನುಜರ ಪಾದುಕೆಗಳಾಗುವ ಸ್ಥಿತಿಯೂ, 'ಪಾದುಕೇ ಯತಿರಾಜಸ್ಯ ಕಥಯಂತಿ ಯದಾಹ್ವಯಾ' ಯಾರ (ಮುದಲಿಯಾಂಡಾನ್) ಹೆಸರಿನಿಂದ ರಾಮಾನುಜರ

ಪಾದುಕೆಗಳನ್ನು ಕರೆಯುತ್ತಾರೆಯೋ, ಎಂಬ ವಚನದ ಸತ್ಯತೆಯಿಂದ ಮುದಲಿಯಾಂಡಾನ್‌ರವರಿಗೆ ರಾಮಾನುಜರ ಪಾದುಕೆಯಾಗುವ ಸ್ಥಿತಿಯು ಬೇರೆ ಬೇರೆಯಾಗಿ ವ್ಯವಸ್ಥಿಸಲ್ಪಟ್ಟಿದ್ದರೂ, ಈ ದಿವ್ಯ ದೇಶದಲ್ಲಿ ತಮಗಿರುವ ಅಭಿಮಾನದ ಅಧಿಕತೆಯಿಂದ ರಾಮಾನುಜರ ಪಾದಾರವಿಂದ ಛಾಯಾ ವಿಶಿಷ್ಟವಾದ ಪಾದುಕೆಗಳಿಗೆ (ಅಂದರೆ ಆ ಮೂರಕ್ಕೂ) ಅನಂದಾಳ್ವಾನ್ ಎಂಬ ತಮ್ಮ ದಿವ್ಯನಾಮವನ್ನೇ ಇಟ್ಟು, ಈ ರೀತಿಯ ಹಲವಾರು ಶ್ರೀ ವೈಷ್ಣವ ಮತ ಧರ್ಮಗಳನ್ನು ಮೇಲಿಂದ ಮೇಲೆ ಅಭಿವೃದ್ಧಿ ಮಾಡಿಕೊಂಡು "ಸರ್ವದೇಶಗಳಲ್ಲಿ, ದಿಕ್ಕುಗಳಲ್ಲಿ, ಕಾಲಗಳಲ್ಲಿ ಅಪ್ರತಿಹತವಾದ ಪರಾಕ್ರಮವುಳ್ಳ ರಾಮಾನುಜಾರ್ಯರ ದಿವ್ಯಾಜ್ಞೆಯು ವರ್ಧಿಸಲಿ, ಅಭಿವೃದ್ಧಿಸಲಿ. ರಾಮಾನುಜಾಚಾರ್ಯರ ದಿವ್ಯಾಜ್ಞೆಯು ಪ್ರತಿದಿನವೂ ಉಜ್ವಲವಾಗಿ ಸರ್ವದಿಕ್ಕುಗಳ ಅಂತ್ಯದವರೆಗೂ ವ್ಯಾಪಿಸಲಿ! ಈ ದಿವ್ಯಾಜ್ಞೆಯು ಸಕಲ ಲೋಕಗಳಿಗೂ ಹಿತವನ್ನು ತೋರುತ್ತದೆಯಲ್ಲವೇ?" ಎಂದು ಒಂದೊಂದು ವೇಳೆಯಲ್ಲಿಯೂ ಭಗವಂತನ ಸನ್ನಿಧಿಯಲ್ಲಿ ಶ್ರೀರಾಮಾನುಜಾಚಾರ್ಯರ ದಿವ್ಯಾಜ್ಞೆಯ ಅಭಿವೃದ್ಧಿಯನ್ನೇ (ರಾಮಾನುಜರಿಂದ ನಿಯಮಿಸಲ್ಪಟ್ಟ ಧರ್ಮ ಕಾರ್ಯಗಳ ಅಭಿವೃದ್ಧಿಯನ್ನು) ಪ್ರಾರ್ಥನೆ ಮಾಡಿಕೊಂಡು ಬರುವವರಾಗಿ ಶ್ರೀವೇಂಕಟನಾಥನಿಗೆ ಮಂಗಳಾಶಾಸನ ಮಾಡುವುದೊಂದನ್ನೇ ಅತಿ ಹೆಚ್ಚಿನ ಫಲವನ್ನಾಗಿ ಭಾವಿಸಿ, ದೇವನ ಗುಣಗಳನ್ನು ಅನುಭವಿಸಿಕೊಂಡೂ ಅವನಿಗೆ ಕೈಂಕರ್ಯಗಳನ್ನು ಮಾಡಿಕೊಂಡೂ ಸಂತೋಷವಾಗಿ ವಾಸಿಸುತ್ತಿದ್ದರು.

**ಇಯಪ್ಪಾ (ಮೊದಲಿಗರಾದ ಆಳ್ವಾರುಗಳು ರಚಿಸಿದ ದಿವ್ಯ ಪ್ರಬಂಧ) ಮುಂಚೆಯೂ ಕಣ್ಣಿನುಣ್ ಶಿರುತ್ತಾಂಬು (ಮಧುರ ಕವಿ ಆಳ್ವಾರ್ ವಿರಚಿತ ಪ್ರಬಂಧ) ಪ್ರಬಂಧವನ್ನು ಕೊನೆಯಲ್ಲಿಯೂ ಅನುಸಂಧಾನ ಮಾಡುವಂತೆ ರಾಮಾನುಜಮುನಿವರ್ಯರು ಆಜ್ಞೆಮಾಡಿದುದು.**

ಇನ್ನು ಶ್ರೀವೇಂಕಟಗಿರಿಯ ದೇವಸ್ಥಾನ ಮುಂತಾದ ಕ್ಷೇತ್ರಗಳಲ್ಲಿ ದಿವ್ಯ ಪ್ರಬಂಧಗಳನ್ನು ಪೂರ್ಣವಾಗಿ ಪಾರಾಯಣ (ಓದುವ) ಮಾಡುವ ಸಂದರ್ಭಗಳಲ್ಲಿ ಮೊದಲಾಳ್ವಾರ್‌ಗಳ ದಿವ್ಯ ಪ್ರಬಂಧವಾದ 'ಇಯಪ್ಪಾ' ದಿಂದ ತೊಡಗಿ ಕೊನೆಯಲ್ಲಿ ಪ್ರತ್ಯೇಕವಾಗಿ ಒಂದು ದಿನ ಮಧುರಕವಿ ಸೂರಿಯ ದಿವ್ಯ ಪ್ರಬಂಧವನ್ನು ಪಾರಾಯಣ ಮಾಡುವುದಕ್ಕೆ ಕಾರಣವಾದ ಇತಿಹಾಸವು ಹೇಳಲ್ಪಡುತ್ತದೆ.

ಒಂದುಸಲ ಶ್ರೀರಾಮಾನುಜ ಮುನಿಗಳಿಗೆ ಆಳ್ವಾರ್‌ಗಳು ರಚಿಸಿ ಹಾಡಿದ ದಿವ್ಯಪ್ರಬಂಧಗಳನ್ನುಪದೇಶಿಸಿದ ಆಚಾರ್ಯರೂ, ಏಳುನೂರು ತಮಿಳು ಕವಿಗಳಿಗೆ ನಾಯಕರಾಗಿ ಪಟ್ಟಾಭಿಷೇಕ ಮಾಡಲ್ಪಟ್ಟವರೂ, ಶ್ರೀರಂಗನಾಥನ ದಿವ್ಯ ಮಂಗಳ ವಿಗ್ರಹದ ಸೌಂದರ್ಯವನ್ನು ಅನುಭವಿಸುವುದರಲ್ಲಿ ಸ್ಪಂದಿಸುವ

ಹೃದಯವನ್ನುಳ್ಳವರೂ, ದೇವಗಾನ ರೀತಿಯಲ್ಲಿ ದಿವ್ಯ ಪ್ರಬಂಧಗಳನ್ನು ಹಾಡಬಲ್ಲವರೂ, ಆದಕಾರಣದಿಂದ ಆಳವಂದಾರ್‌ರವರಿಂದ ಮುನಿವಾಹನರು (ತಿರುಪಾಣಾಳ್ವಾರ್) ಎಂದು ಮತ್ತೊಂದು ಹೆಸರಿಡಲ್ಪಟ್ಟವರೂ ಆದ ಆಳ್ವಾರ್ ತಿರುವರಂಗಪ್ಪೆರುಮಾಳ್ ಅರೈಯರ್ (ಶ್ರೀಶಠಕೋಪ ಶ್ರೀರಂಗರಾಜ ವಿಜ್ಞಪ್ತಿಕರು) ಎಂದು ಪ್ರಸಿದ್ಧಿ ಹೊಂದಿದವರಾದ ಆಚಾರ್ಯ ಶಿಖಾಮಣಿಯಾದವರು ಒಂದು ಸಲ ಶ್ರೀರಂಗ ಕ್ಷೇತ್ರದಲ್ಲಿ ಶ್ರೀ ಕಾರ್ತಿಕಮಹೋತ್ಸವದಲ್ಲಿ ಶ್ರೀರಂಗನಾಥನಿಗೆ ಮಂಗಳಾ ಶಾಸನವನ್ನು ಮಾಡಿದ ನಂತರ ಶ್ರೀರಾಮಾನುಜರಾದ ಯತಿರಾಜರ ಮಠಕ್ಕೆ ಬಿಜಯಗೈದು ಆ ರಾಮಾನುಜರಿಂದ ಸ್ವಾಗತಿಸಲ್ಪಟ್ಟು, ನಮಸ್ಕರಿಸಿ ಸತ್ಕರಿಸಲ್ಪಟ್ಟು, ''ಹೇ ರಾಮಾನುಜ ಮುನಿಗಳೇ, ತಿರುವೇಂಕಟ ಯಾತ್ರೆಯನ್ನು ಆಳ್ವಾರ್‌ಗಳು ವಿಶೇಷವಾಗಿ ಕೊಂಡಾಡುತ್ತಾರೆ. ಆಳ್ವಾರುಗಳಲ್ಲಿ ಅಗ್ರಮಾನ್ಯರಾಗಿ ಪೂಜಿಸತಕ್ಕವರಾದ ಶ್ರೀ ಶಠಕೋಪ ಸೂರಿ (ನಮ್ಮಾಳ್ವಾರ್) ಯವರ ಸಹಸ್ರಗೀತೆಯ (ತಿರುವಾಯ್ಮೊಳಿಯ) ಮೂರನೆಯ ಶತಕದ ಮೂರನೆಯ ದಶಕ ಹತ್ತನೆಯ ಪಾಶುರದಲ್ಲಿ ''ಮಾನವರೇ, ಭಗವಂತನು ನಿಮಗೆ ಪ್ರಸಾದಿಸಿರುವ ಆಯಸ್ಸುಳ್ಳವರೆಗೂ, ದೇಹಾವಯವಗಳು ಶಿಥಿಲಗೊಂಡು ದೌರ್ಬಲ್ಯವಾಗುವುದಕ್ಕೆ ಮುಂಚೆಯೇ, ವಿಶಾಲವಾದ ಹೆಡೆಗಳೊಂದಿಗೆ ಕೂಡಿದ ಆದಿಶೇಷನನ್ನು ಹಾಸಿಗೆಯನ್ನಾಗಿ ಕೊಂಡಿರುವ ಭಗವಂತನದಾದ ಸುಂದರ ಉದ್ಯಾನ ವನವನ್ನೂ ಮನೋಹರವಾದ ಪುಷ್ಪಗಳಿಗೆ ವಿಶಾಲವಾದ ತಟಗಳನ್ನುಳ್ಳ ಶ್ರೀವೇಂಕಟಗಿರಿಗೆ ಹೋಗಿ ಶ್ರೀನಿವಾಸನನ್ನು ಭಜಿಸಿ'' ಎಂದೂ, ಆರುಗುಣಗಳಿಂದ ಕೂಡಿ ವಿರಾಜಿಸುತ್ತಾ ಷಡ್ದರ್ಶನ ಮಹಾಸಾಗರದಲ್ಲಿ ಸಾರಾಸಾರವನ್ನು ತಿಳಿದುಕೊಂಡವರಾದವರೂ ಪೂಜಾರ್ಹರಾದವರೂ ಆದ ಶ್ರೀಭಕ್ತಿಸಾರ ದಿವ್ಯಸೂರಿ (ತಿರುಮಳಿಶೈಯಾಳ್ವಾರ್)ಗಳು ಚತುರ್ಮುಖ ಶ್ರೀಮದಂದಾದಿ (ನಾನ್ಮುಹನ್ ತಿರುವಂದಾದಿ) ನಲವತ್ತೆರಡನೆಯ ಪಾಶುರದಲ್ಲಿ ಅತ್ಯಂತ ಉನ್ನತವಾದ ಸ್ವಭಾವುಳ್ಳ ಶ್ರೀವೇಂಕಟಗಿರಿಗೆ ನಮಸ್ಕರಿಸಿ. ಅದು ತನ್ನ ಸದ್ಗುಣಗಳಿಂದ ಸ್ಥಿರವಾಗಿ ನಿಂತು ಪಾಪಗಳನ್ನು ಹೋಗಲಾಡಿಸುವುದು. ಅಲ್ಲಿ ಪರಿಮಳ ತುಂಬಿದ ತಾವರೆಯ ಹೂವಿನಲ್ಲಿ ಸೇರಿದ ಚತುರ್ಮುಖನೂ, ತ್ರಿನೇತ್ರನೂ (ಪರಶಿವನೂ) ಆದ ಈರ್ವರೂ, ಎಲ್ಲ ದೇವತೆಗಳಿಂದಲೂ, ಅಸುರರುಗಳಿಂದಲೂ ನಮಸ್ಕರಿಸತಕ್ಕ ಶ್ರೀ ಮಹಾವಿಷ್ಣುವಿನ ಶ್ರೀಪಾದಗಳಲ್ಲಿ ತಾವರೆಹೂವುಗಳನ್ನು ಸಮರ್ಪಿಸಿ ಸ್ತುತಿಸುತ್ತಾರೆ - ಎಂದೂ

ಅವರೇ (ಆ ಭಕ್ತಿಸಾರರೇ) ತಮ್ಮ ಶ್ರೀಮಚ್ಛಂದೋವೃತ್ತದ (ತಿರುಚ್ಛಂದ ವಿರುತ್ತಮ್) ಎಂಭತ್ತೊಂದನೆಯ ಪಾಶುರದಲ್ಲಿ (ತಾನು) ಕಡೆದ ಹಾಲ್ಗಡಲಿನಲ್ಲಿ (ಕ್ಷೀರಾಬ್ದಿಯಲ್ಲಿ) ಶಯನಿಸಿಕೊಂಡು, ಕಾಲನೇಮಿಯೆಂಬ ಅಸುರನನ್ನು ಜಯಿಸಿ,

ಮನೋವ್ಯಾಕುಲಗೊಂಡ, ಇಂದ್ರ ಪುತ್ರನೂ, ವಾಲಿಯತಮ್ಮನೂ ಆದ ಸುಗ್ರೀವನಿಗೆ ಸಹಾಯ ಮಾಡುವುದಕ್ಕಾಗಿ, ರಾಮನಾಗಿ ಅವತರಿಸಿ ದಟ್ಟವಾಗಿ ಬೆಳೆದ ಏಳು ಸಾಲವೃಕ್ಷಗಳನ್ನು ಒಂದೇ ಬಾಣದಿಂದ ಭೇಧಿಸಿ, ಶ್ರೀವೇಂಕಟಗಿರಿಯನ್ನು ಸೇರಿದ ಶ್ರೀ ವಿಷ್ಣುವಿನ ಪಾದಗಳನ್ನೇ ಪ್ರತಿನಿತ್ಯವೂ ಹಿಡಿದು ಶಾಂತವಾಗಿ ಬಾಳಿರಿ - ಎಂದು ಹೇಳಿರುವರು.

ಈ ರೀತಿಯೇ ಹಲವು ಕಡೆಗಳಲ್ಲಿ ಆಳ್ವಾರ್‌ಗಳು, ಆಸೆಯೊಂದಿಗೂ, ಸಂತೋಷದೊಂದಿಗೂ, ಪ್ರಶಂಸೆಮಾಡಿ ಹಾಡಿರುವ ಶ್ರೀವೇಂಕಟಗಿರಿಯ ಯಾತ್ರೆಯನ್ನು ಮಾಡಿ ''ಮರಳಿ ಬರುತ್ತೇನೆ'' - ಎಂದು ಹೇಳಿ ರಾಮಾನುಜಮುನಿಗಳ ಒಪ್ಪಿಗೆಯನ್ನು ಪಡೆದು ಶ್ರೀವೇಂಕಟಗಿರಿಗೆ ಹೊರಟು ನಡುದಾರಿಯಲ್ಲಿ ಶ್ರೀಕಾಂಚೀ ಮಹಾನಗರದಲ್ಲಿ (ಕಂಚಿ) ಶ್ರಿ ದೇವರಾಜನೆಂದು (ಶ್ರೀ ತೇವಪ್ಪೆರುಮಾಳ್ - ಶ್ರೀವರದರಾಜ) ಪ್ರಸಿದ್ಧರಾಗಿ ಭಕ್ತರು ಅಪೇಕ್ಷಿಸಿದುದೆಲ್ಲವನ್ನೂ ಕೊಡುವ ವ್ರತವನ್ನು ಕೈಗೊಂಡ ಶ್ರೀವರದರಾಜ ಭಗವಂತನನ್ನು ನಮಸ್ಕರಿಸಿ ಶ್ರೀವೇಂಕಟಗಿರಿಯ ತಟವಾದ ತಿರುಪತಿಯನ್ನು ಸೇರಿ ರಾಮಾನುಜ ಮುನಿಯವರ ಅಭಿಮಾನಕ್ಕೆ ಪಾತ್ರರಾದ ಶ್ರೀಗೋವಿಂದರಾಜನನ್ನು ಪೂಜಿಸಿ, ಶ್ರೀ ವೇಂಕಟಗಿರಿಯನ್ನೇರುವ ಮೆಟ್ಟಿಲುಗಳ ಪ್ರಾರಂಭದಲ್ಲಿರುವ ಹುಣಸೆಯ ಮರವನ್ನೂ, ಅದರ ಕೆಳಗಡೆ ಇರುವ ಗುಂಡುಕಲ್ಲಿನ ಮೇಲೆ ದರ್ಶನಕೊಡುವ (ಭಗವಂತನ) ದಿವ್ಯ ಚರಣಾಂಬುಜದ್ವಯಗಳನ್ನೂ, ಅದರ ಪಕ್ಕದಲ್ಲಿ ಸೇವೆಯನ್ನು ಕೊಡುವ ಪರಾಂಕುಶರು (ಸಮ್ಮಾಳ್ವಾರ್), ಕಲಿಯನ್ (ತಿರುಮಂಗೈಳ್ವಾರ್) ಮುಂತಾದವರೇ ಆದ ಅಳ್ವಾರ್ ಗಳನ್ನೂ, ನಂತರ ಬೆಟ್ಟವನ್ನು ಹತ್ತುವಾಗ ಬರುವ ನಡುದಾರಿಯಲ್ಲಿ ಪ್ರಕಾಶಿಸುವ ಶ್ರೀಕಾನನ ನರಸಿಂಹಸ್ವಾಮಿ (ಕಾಟ್ಟಳಗಿಯಶಿಂಗರ್) ಯನ್ನೂ ಸೇವೆಮಾಡಿ, ಹತ್ತಿ ಶಿಲಾವರಣದವರೆಗೂ ಹೋಗಿ, ನಂತರ ತಿರುಮಲೈ ಆನಂದಾಳ್ವಾನ್‌ರವರಿಂದ, ಎದುರುಗೊಂಡು ಸ್ವಾಗತಿಸಲ್ಪಟ್ಟು, ಒಬ್ಬರನ್ನೊಬ್ಬರು ನಮಸ್ಕಾರಮಾಡಿ ಕೊಂಡು ಸುಸ್ವಾಗತವನ್ನು ಕೋರಿ, ಕುಶಲ ಪ್ರಶ್ನೆಗಳಾದ ನಂತರ ಅನಂದಾಳ್ವಾನ್ ಜೊತೆ ಮಾತನಾಡಿಕೊಂಡೇ ಹೋಗಿ, ಶ್ರೀವೇಂಕಟನಾಥನ ದಿವ್ಯ ದೇವಾಲಯದ ಮಹಾದ್ವಾರವನ್ನು ಸೇರಿ, ಅದರ ಮುಂದೆ ಸಾಷ್ಟಾಂಗ ಪ್ರಣಾಮವನ್ನು ಮಾಡಿ, ರಾಜ ಬೀದಿಗಳಲ್ಲಿ ಪ್ರದಕ್ಷಿಣವಾಗಿ ಬಂದು, ಸುಪ್ರಸಿದ್ಧವಾದ ಸ್ವಾಮಿಪುಷ್ಕರಿಣಿಯಲ್ಲಿ ಮಿಂದು, ನಿತ್ಯಾನುಷ್ಠಾನಗಳನ್ನು ಮುಗಿಸಿಕೊಂಡು, ನಮ್ಮಾಳ್ವಾರ್‌ರವರು ಹಾಡಿದ - ಶ್ರೀವೃತ್ತ (ತಿರುವಿರುತ್ತಮ್) ದಿವ್ಯ ಪ್ರಬಂಧದಲ್ಲಿ - (ನಾನು ಹೇಳುವುದನ್ನು ಯಾರೂ ಕೇಳದೇ ಇರುವುದರಿಂದ ) ಅರ್ಥವಿಲ್ಲದ ಮಾತಾಗಿಯೇ ಆಗಲಿ - ಪ್ರಳಯ ಭೀಕರವಾದ ಅತಿ ಚಂಚಲವಾದ , ಅಲ್ಲೋಲ ಕಲ್ಲೋಲವಾದ ತರಂಗಗಳನ್ನು

ಕೊಂಡ ಮಹಾಸಾಗರದಿಂದ ಸಮಸ್ತ ಜಗತ್ತನ್ನೂ ವರಾಹ ರೂಪವನ್ನು ಧರಿಸಿ, ಉದ್ಧರಿಸಿ ಮಹೋಪಕಾರ ಮಾಡಿದವನೂ, ಅತ್ಯಂತ ದೊಡ್ಡದಾದ ಕಲ್ಪವೃಕ್ಷಗಳಿಂದ ಕೂಡಿದ ಸ್ವರ್ಗದಲ್ಲಿರುವವರಿಗೂ, ಅಲ್ಲದ ಮನುಷ್ಯರಿಗೂ, ಇತರ ಎಲ್ಲರಿಗೂ ವಿಶದವಾಗಿಯೂ, ವಿಲಕ್ಷಣವಾಗಿಯೂ ಕಂಡುಬರುವ (ಮೋಕ್ಷೋಪಾಯವಾದ) ಜ್ಞಾನವನ್ನು ವಿಧಿಸಿ, ಮಹೋಪಕಾರಮಾಡಿದವನಾದ ದೇವಾಧಿದೇವನಲ್ಲದೆ ನಾನು ಕಂಡ ವಸ್ತುವು ಬೇರೊಂದಿಲ್ಲ - ಎಂಬರ್ಥವುಳ್ಳ ತೊಂಭತ್ತೊಂಭತ್ತನೆಯ ಪಾಶುರದಲ್ಲಿ, ಹೇಳಿ, ಆ ಆಳ್ವಾರ್ ರವರಿಗೆ ಇಷ್ಟವಾದ ಶ್ರೀ ಜ್ಞಾನವರಾಹ ದೇವನಿಗೆ ಮಂಗಳಾಶಾಸನವನ್ನು ಮಾಡಿ, ಪುನಃ ಶ್ರೀವೇಂಕಟನಾಥನ ದಿವ್ಯ ದೇಗುಲದ ಮಹಾದ್ವಾರದ ಬಳಿ ದೀರ್ಘದಂಡ ನಮಸ್ಕಾರಮಾಡಿ, ಸೇವೆ ಮಾಡುವ ಕ್ರಮದ ರೀತಿಯಲ್ಲಿ ದೇವಸ್ಥಾನದ ಬಲಿಪೀಠ, ಧ್ವಜಸ್ತಂಭ ಇವುಗಳ ಬಳಿ ದೀರ್ಘದಂಡ ನಮಸ್ಕಾರ ಮಾಡಿ, ಶ್ರೀಮಹಾನಸ (ಪಾಕಶಾಲಾ) ಲಕ್ಷ್ಮಿಗೆ ನಮಸ್ಕರಿಸಿ, ಶ್ರೀದೇವಿಯ ತೀರ್ಥವಾದ, ಶ್ರೀಮತ್ಸುಂದರಸ್ವಾಮಿಕೂಪವೆಂದು ಮತ್ತೊಂದು ಹೆಸರುಳ್ಳ ಬಂಗಾರು ಭಾವಿಯನ್ನು ಪ್ರದಕ್ಷಿಣೆ ಮಾಡಿ, ಶ್ರೀಮದಾನಂದ ವಿಮಾನ ನಿಲಯವನ್ನು ದರ್ಶಿಸಿ ಪ್ರದಕ್ಷಿಣೆಯಾಗಿ ಬಂದು, ಶ್ರೀಕಟಾಹ ತೀರ್ಥ (ತೊಟ್ಟಿತೀರ್ಥ) ದಲ್ಲಿ ಭಗವಂತನ ತೀರ್ಥವನ್ನು ಸೇವಿಸಿ ಶ್ರೀ ವಿಷ್ವಕ್ಸೇನರನ್ನೂ, ಶ್ರೀವೇಂಕಟಾದ್ರಿ ನರಸಿಂಹ ದೇವನನ್ನೂ ನಮಸ್ಕರಿಸಿ, ಗರುತ್ಮಂತನನ್ನು ಪ್ರದಕ್ಷಿಣೆಮಾಡಿ (ದ್ವಾರ ಪಾಲಕರುಗಳೂ, ಗರುತ್ಮಂತನೂ ಬಿಜಯಗೈದಿರುವ) ಶ್ರೀ ಕೃಷ್ಣ ಮಂಟಪವನ್ನು ಸೇರಿ ದ್ವಾರಪಾಲಕರುಗಳ ಸನಿಹಕ್ಕೆ ಬಂದು, ಸಾಲಂಕೃತನಾಗಿ ಮತ್ತು ಗಜದಂತೆ ಕಂಡು ಬರುವವನೂ, ಪೆರಿಯಾಳ್ವಾರ್ ತಿರುಮೊಳಿ ದಿವ್ಯಪ್ರಬಂಧದ - ಮೊದಲನೆಯ ದಶಕದ ಆರನೆಯ ಪಾಶುರದಲ್ಲಿ ಹೇಳಿರುವಂತೆ - ಸಕಲ ದಿವ್ಯಾಭರಣಗಳಿಂದ ಅಲಂಕರಿಸಲ್ಪಟ್ಟವನಾದ ಶ್ರೀನಿಧಿ (ಮೂಲಮೂರ್ತಿ) ಯನ್ನು ಕಂಡು ಆ ಪಾಶುರವನ್ನು ಅನುಸಂಧಾನ ಮಾಡುತ್ತಲೇ ಆನಂದದಿಂದ ಪುಳಕಾಂಕಿತರಾಗಿ, ದರ್ಶನಮಾಡಿ, ಬಾಗಿಲೊಳಗೆ ನಡೆದು, ತಮ್ಮ ಆಚಾರ್ಯರಾದ ಶ್ರೀ ಆಳವಂದಾರ್ ಪ್ರಸಾದಿಸಿದ ಸ್ತೋತ್ರರತ್ನವನ್ನು, ಮೂರಡಿಗಳನ್ನಿಟ್ಟು ಮೂರಲೋಕಗಳನ್ನು ಮಾಪನಮಾಡಿದವನೇ, ಶಂಖ, ಚಕ್ರ, ಕಲ್ಪವೃಕ್ಷ, ಧ್ವಜ, ತಾವರೆಹೂ, ಅಂಕುಶ, ವಜ್ರಾಯುಧ ಮುಂತಾದವುಗಳನ್ನು (ರೇಖಾರೂಪದಲ್ಲಿ) ಚಿಹ್ನೆಯಾಗಿ ಹೊಂದಿದ ನಿನ್ನ ಚರಣಾರವಿಂದಗಳು ನನ್ನದಾದ ತಲೆಯನ್ನು ಯಾವಾಗ ಅಲಂಕರಿಸುತ್ತದೆ? - ಎಂದರ್ಥವುಳ್ಳ, ಕದಾಪುನ ಶ್ಶಂಖರಥಾಂಗಕಲ್ಪಕಧ್ವಜಾರವಿಂದಾಂಕುಶ ವಜ್ರಲಾಂಛನಂ ತ್ರಿವಿಕ್ರಮ ತ್ವಚ್ಚರಣಾಂಬುಜದ್ವಯಂ ಮದೀಯ ಮೂರ್ಧಾನ ಮಲಂಕರಿಷ್ಯತಿ॥ ಶ್ಲೋಕದವರೆಗೆ ಅನುಸಂಧಾನ ಮಾಡಿಕೊಂಡೇ ಇರುವಾಗ, ಈ ಅರ್ಚೆಯರನ್ನು, ''ಸ ಮಹಾತ್ಮಾಸುದುರ್ಲಭಃ (ಇಂಥಹ ಮಹಾತ್ಮನು ಸಿಕ್ಕುವುದು

ಅತ್ಯಂತ ದುರ್ಲಭವು - ಗೀತೆ ೭ -೯) ಎಂದು ಹೇಳಲ್ಪಟ್ಟ ಅತ್ಯಂತ ಉತ್ತಮ ಅಧಿಕಾರಿ ಇವರೇ ಎಂದು ಚಿಂತಿಸಿದ ಶ್ರೀ ವೇಂಕಟನಾಥನು ಅರ್ಚಕರ ಮೂಲಕವಾಗಿ ಆಳ್ವಾರ್ ತಿರುವರಂಗಪ್ಪೆರುಮಾಳ್ ಅರೈಯರ್‌ರನ್ನು ಅರುಳಪ್ಪಾಡು (ಸ್ವಾಗತಿಸಿ)ಮಾಡಿ, ''ಅಡಿಕ್ಕೀಳ್ ಅಮರ್‌ನ್ದು ಪುಗುನ್ದು ಅಡಿಯೀರ್ ವಾಳ್‌ಮಿನ್'' (ತಿರುವಾಯೊಳಿ ೬-೧೦-೧೧) ಎಂದು ಹೇಳಿದಂತೆ ನಿಯಮಿಸಲು ಅರೈಯರೂ ಸಹ ಪರಮಾನಂದದಿಂದ ಉಕ್ಕಿಬಂದ ಹೃದಯರಾಗಿ ಹತ್ತಿರ ಹೋಗಿ, 'ಪಡಿಯಾಯ್ ಕಿಡಂದು ಉನ್ ಪವಳವಾಯ್ ಕಾಣ್ಬೇನೇ' (ಹೊಸಲಾಗಿ (ಮೆಟ್ಟಲು) ಇದ್ದು ನಿನ್ನ ಹವಳದಂತಿರುವ ಮುಖವನ್ನು ಯಾವಾಗಲೂ ನೋಡಿಯೇನೇ) (ಪೆರುಮಾಳ್‌ತಿರುಮೊಳಿ ೪-೯೦) ಎಂದು ಕುಲ ಶೇಖರಸೂರಿ (ಕುಳಶೇಖರಾಳ್ವಾರ್)ಯವರ ಮನೋರಥವನ್ನು ಅನುಸಂಧಾನ ಮಾಡಿಕೊಂಡು ಅಲ್ಲಿದ್ದ ಚಿನ್ನದ ಹೊಸ್ತಿಲನ್ನು ಕುಲಶೇಖರಸೂರಿಯವರೇ ಎಂದು ಭಾವಿಸಿ ಅದನ್ನು ದಾಟದೆ ಅದರ ಪಕ್ಕದಲ್ಲಿಯೇ ನಿಂತು ಮುಂಚೆ ಹೇಳಿದ ತಿರುವಾಯ್ಮೊಳಿಯನ್ನು ಮೊದಲಿನಿಂದ ಅನುಸಂಧಾನ ಮಾಡುತ್ತಾ ಬಂದು, ಅದರ ಹತ್ತನೆಯ ಪಾಶುರ (ಪದ್ಯ) ದಲ್ಲಿ ಹೇಳಿರುವಂತೆ ''ಅಲರ್ ಮೇಲ್ ಮಂಗೈಯುರೈಮಾರ್ಬಾ'' - ''ಉನ್ ಅಡಿಕ್ಕೀಳ್ ಅಮರ್‌ನ್ದು ಪುಹುಂದೇನೇ'' ಎಂದು ಶ್ರೀದೇವಿಯನ್ನು (ಪದ್ಮಾವತೀದೇವಿಯನ್ನು) ಪುರುಷಕಾರವಾಗಿ (ಶಿಫಾರಿಸು ಅಥವಾ ಒಪ್ಪಿಸುವವಳಾಗಿ) ಮುಂದಿಟ್ಟುಕೊಂಡು (ಭಗವಂತನನ್ನೇ ಆಶ್ರಯ (ಶರಣ್ಯ) ನನ್ನಾಗಿ ಮಾಡಿಕೊಳ್ಳುವ) ಪ್ರಪತ್ತಿಯನ್ನು ಮಾಡಿ ದಿವ್ಯಾಭರಣಗಳ ಸೌಂದರ್ಯವನ್ನೂ, ಶ್ರೀಪಾದದಿಂದ ಹಿಡಿದು ಶ್ರೀ ಶಿಖೆ (ಕೀರಿಟ)ಯ ವರೆಗೂ ಆದ ದಿವ್ಯವಾದ ಸೌಂದರ್ಯವನ್ನು ಅನುಭವಿಸಿಕ್ಕೊಂಡಿರಲು, ನಂತರ ಶ್ರೀವೇಂಕಟನಾಥನು ತೀರ್ಥ, ಪ್ರಸಾದ, ಶ್ರೀಶಠಗೋಪ (ಶಠಾರಿ), ತಾನುಟ್ಟುಕಳೆದ ಪೀತಾಂಬರ (ಶೇಷವಸ್ತ್ರ), ನಿರಂತರವಾಗಿ ಅರ್ಚಿಸಲ್ಪಡುವ ಕುಸುಮಗಳ ಪರಿಮಳದಿಂದ ಘಮ ಗಮಿಸುತ್ತಿರುವ ತನ್ನ ದಿವ್ಯ ಚರಣಾಂಬುಜ ರೇಣು ಆದುವುಗಳನ್ನು ಪ್ರಸಾದಿಸುವುದು ಮುಂತಾದ ಉಪಚಾರಗಳಿಂದ ಗೌರವಿಸಿ, ''ಹೇ ವಿಜ್ಞಾಪನೆಮಾಡುವ ಅರೈಯರೇ, ನಮ್ಮ ರಾಮಾನುಜಮುನಿವರ್ಯರ ದಿವ್ಯಪ್ರಬಂಧಾಚಾರ್ಯರಾದ ನೀವು ನಮ್ಮ ನಿರತಿಶಯ ಪ್ರೀತಿಗೆ ಪಾತ್ರರಾಗಿರುತ್ತೀರಿ'' ಎಂದು ಹೇಳಿದ ನಂತರ, ''ವ್ಯಾಸಪರಾಶರುಗಳಿಂದ ಮುಂಚೆ ರಚಿಸಲ್ಪಟ್ಟ ಗ್ರಂಥಗಳಂತೆಯೇ, ಮೊದ ಮೊದಲು ಮುದಲಾಳ್ವಾರ್‌ಗಳು ಎಂದು ಹೇಳಲ್ಪಟುವ (ಪ್ರಥಮ ದಿವ್ಯ ಸೂರಿಗಳು) ಸರೋಯೋಗಿ (ಪೊಯ್‌ಗೈಯಾಳ್ವಾರ್) ಭೂತಯೋಗಿ (ಪೂತ್ತಾಳ್ವಾರ್), ಮಹಾಯೋಗಿ (ಪೇಯಾಳ್ವಾರ್) ಎಂದು ಹೆಸರುಗೊಂಡ ಆಳ್ವಾರುಗಳಿಂದ ರಚಿಸಲ್ಪಟ್ಟು ನಮ್ಮನ್ನು ಕುರಿತುದುದೂ ನಮಗೆ

ಬಹಳ ಪ್ರಿಯವಾದುದೂ ಆದ ದಿವ್ಯ ಪ್ರಬಂಧ ಪಾಶುರಗಳಲ್ಲಿ ಯಾವುದಾದರೂ ಒಂದು ಪಾಶುರವನ್ನು ಗಾನಮಾಡುವವರಾಗಿ,'' ಎಂದು ನಿಯಮಿಸಲು, ಆರೈಯರ್‌ರವರು, ಅತ್ಯಂತ ನೀಚನಾದ ದಾಸನನ್ನು ಆಳ್ವಾರ್‌ಗಳಲ್ಲಿ ತಾನಿಟ್ಟ ಪ್ರೇಮಕ್ಕೆ ವಶನಾದ ಭಗವಂತನು ಈ ರೀತಿ ಚಿಂತಿಸುತ್ತಿದಾನೆ, ಎಂದು ಚಿಂತಿಸಿ, ಅತ್ಯಂತ ಸಂತೋಷದಿಂದ ಪ್ರಥಮ ಸೂರಿಗಳು ರಚಿಸಿದ ದಿವ್ಯಪ್ರಬಂಧಗಳಲ್ಲಿ ಮೊದಲ ಪದ್ಯ ಮತ್ತು ಕೊನೆಯ ಪದ್ಯಗಳನ್ನೂ, ಎರಡನೆಯ ಶ್ರೀ ಅಂದಾದಿ (ಇರನ್ದಾಮ್ ತಿರುವಂದಾದಿ) ಯಲ್ಲಿ 'ಮನತ್ತು ಳ್ಳಾನ್ ವೇಂಗಡತ್ತಾನ್' ನೆರಿಯಾರ್ ಕುಳಲ್ ಕಟ್ಟೈ') ಇಪ್ಪತ್ತೆರಡನೆಯ ಪಾಶುರವನ್ನೂ ದೇವಗಾನರೀತಿಯಲ್ಲಿ, ಆದರಿಂದ, ಮುಕ್ತಿ ಹೊಂದಿದವನು ಸಾಮಗಾನದಿಂದ ಪರಮಪದನಾಥನನ್ನು ಸಂತೋಷಗೊಳುವ ರೀತಿಯಲ್ಲಿ ಶ್ರೀವೇಂಕಟನಾಥನನ್ನು ಆನಂದಗೊಳ್ಳುವಂತೆ ಮಾಡಲು, ಆದಕ್ಕೆ ಅತ್ಯಂತ ಸಂತೋಷಗೊಂಡ ಭಗವಂತನು ಪುನಃ ತೀರ್ಥ, ಶಠಾರಿ ಮುಂತಾದವುಗಳನ್ನು ಪ್ರಸಾದಿಸಲು, ಉಪಚರಿಸಲ್ಪಟ್ಟು ತೃಪ್ತಿ ಹೊಂದಿರಲು, ನಂತರ ಅನಂದಳ್ವಾನ್‌ರವರು, ''ಹೇ ತಿರುವರಂಗಪ್ಪೆರುಮಾಳ್ ಆರೈಯರ್ ರವರೇ, ತಾವು ನಾಳೆಯಿಂದ ಇಲ್ಲಿ ನಡೆಯಲಿರುವ ತಿರುವಧ್ಯಯನೋತ್ಸವದಲ್ಲಿ ಆಳ್ವಾರ್‌ಗಳು ರಚಿಸಿದ ದಿವ್ಯ ಪ್ರಬಂಧಗಳನ್ನು ಶ್ರೀವೇಂಕಟನಾಥನ ದಿವ್ಯಕರ್ಣಗಳಿಗೆ ಇಂಪಾಗಿರುವಂತೆ ದೇವಗಾನರೀತಿಯಲ್ಲಿ ಹಾಡುವವರಾಗಿ'' ಎಂದು ವಿಜ್ಞಾಪಿಸಲು, ಆದನ್ನು ಕೇಳಿದ ಶ್ರೀ ಆರೈಯರ್‌ವರು ಆದನ್ನು ಶ್ರೀವೇಂಕಟನಾಥನ ದಿವ್ಯಾಜ್ಞೆಯೆಂದೇ ಭಾವಿಸಿ, ಮಾರನೆಯ ದಿನದಿಂದ ಪ್ರಾರಂಭಿಸಿ ಪರಿಯಾಳ್ವಾರ್ (ವಿಷ್ಣುಚಿತ್ತಸೂರಿ) ರಚಿಸಿದ ''ತಿರುಪ್ಪಲ್ಲಾಂಡು'' ನಿಂದ ಪ್ರಾರಂಭಿಸಿ ಕ್ರಮವಾಗಿ ಪ್ರತಿನಿತ್ಯವೂ ದಿವ್ಯ ಪ್ರಬಂಧಗಳನ್ನು ಹಾಡಿ ಮನಸ್ಸಂತೋಷಗೊಂಡು ಉತ್ಸವವು ಸಂಪೂರ್ಣವಾದೊಡನೆ ತಿರುಮಲೈ ಅನಂದಾಳ್ವಾನ್‌ರಿಂದ, ಪ್ರೀತಿಯಿಂದ, ವಿಶೇಷವಾಗಿ ಗೌರವಿಸಲ್ಪಟ್ಟು, ಶ್ರೀವೇಂಕಟನಾಥನ ಅನುಮತಿಯನ್ನು ಪಡೆದು ಶ್ರೀರಂಗವನ್ನು ಸೇರಿ, ಶ್ರೀರಾಮಾನುಜಮುನಿವರ್ಯರ ಬಳಿಸಾರಿ, ಅವರಿಂದ ವಂದನೆ ಮುಂತಾದುವುಗಳನ್ನು ಸ್ವೀಕರಿಸಿ ಗೌರವಿಸಲ್ಪಟ್ಟವರಾಗಿ, ''ಹೇ ರಾಮಾನುಜಮುನಿಗಳೇ, ನಿಮಗೆ ದಿವ್ಯಪ್ರಬಂಧಗಳನ್ನು ಉಪದೇಶಿಸಿದೆನೆಂಬುದರಿಂದ ನನ್ನಲ್ಲಿ ಶ್ರೀವೇಂಕಟನಾಥನು ಮಾಡಿದ ಕೃಪೆಯ ಹಿರಿಮೆಯು ವಾಚಕಗಳಿಗೆ ಎಟುಕದು,'' ಎಂದು ಹೇಳಿ, ಶ್ರೀವೇಂಕಟನಾಥನು ಪ್ರಥಮ ಸೂರಿಗಳು ರಚಿಸಿದ ದಿವ್ಯಪ್ರಬಂಧಗಳನ್ನು ಹಾಡುವಂತೆ ಕಟ್ಟಳೆಯಿಟ್ಟದ್ದನ್ನೂ, ನಂತರ ತಿರುಮಲೈ ಅನಂದಾಳ್ವಾನ್‌ರು ಅಧ್ಯಯನೋತ್ಸವದಲ್ಲಿ ದಿವ್ಯಪ್ರಬಂಧಗಳನ್ನು ಪೂರ್ಣವಾಗಿ ಹಾಡುವಂತೆ ನಿಯಮಿಸಿದುದನ್ನೂ, ನಂತರ ಮತ್ತೂ ನಡೆದ ಇತರ ಎಲ್ಲವನ್ನೂ ರಾಮಾನುಜ ಮುನಿವರ್ಯರಲ್ಲಿ ತಿಳಿಸಿದರು.

ಶ್ರೀ ಅರೈಯರ್ ವಿಷಯವಾಗಿ ಹಿರಿಯರು ಒಂದು ಶ್ಲೋಕವನ್ನು ಹೇಳಿರುತ್ತಾರೆ, ಅದರ ತಾತ್ಪರ್ಯ:- ಯಾರೊಬ್ಬ ಕವಿಶ್ರೇಷ್ಠರು ರಾಮಾನುಜ ಮುನಿವರ್ಯರಿಗೆ ಶ್ರೀ ಶಠಕೋಪ ಸೂರಿ (ನಮ್ಮಾಳ್ವಾರ್)ಯವರ ಒಳ್ಳೆಯ ಶ್ರೀ ಸೂಕ್ತಿಗಳನ್ನು ಉಪದೇಶಿಸಿದರೋ, ಯಾರೊಬ್ಬರು ಶ್ರೀವೇಂಕಟನಾಥನ ದಿವ್ಯಾಜ್ಞೆಯನ್ನು ಅವರ ಮುಂದೆಯೇ ಅಯೋನಿಜರಾದ (ತಾಯಿಯ ಜಠರದಿಂದ ಜನಿಸದ) ಪ್ರಥಮ ಸೂರಿಗಳ ಶ್ರೀ ಸೂಕ್ತಿಗಳನ್ನು ದೇವಗಾನದಿಂದ, ಭಕ್ತಿಯಿಂದ ಹಾಡಿದರೋ, ಅಂಥಹ ಮುನಿವಾಹನರೆಂಬ ಹೆಸರುಳ್ಳವರೂ, ಶ್ರೀಮನ್ನಾಥಮುನಿಗಳ ಕುಲದಲ್ಲಿ ಉದಿಸಿದವರೂ ಆದ ತಿರುವರಂಗಪ್ಪೆರುಮಾಳ್ ಅರೈಯರ್ (ಶ್ರೀಶಠಕೋಪ ಶ್ರೀರಂಗರಾಜ ವಿಜ್ಞಪ್ತಿಕರು) ಎಂಬ ಆಚಾರ್ಯರನ್ನು ವಂದಿಸುತ್ತೇನೆ - ಎಂಬುದಾಗುತ್ತದೆ.

ನಂತರ ಭಗವದ್ರಾಮಾನುಜ ಮುನಿವರ್ಯರು ಅರೈಯರ್ (ವಿಜ್ಞಾಪನೆ ಮಾಡುವವರು) ಹೇಳಿದ ಈ ಎಲ್ಲವನ್ನೂ ಕೇಳಿ ಅತೀವ ಸಂತೋಷಗೊಂಡು, ಮನದಲ್ಲೇ ವಿವೇಚಿಸಿ, ಪ್ರಥಮ ಸೂರಿ ಮೂವರೂ ತಮ್ಮ ಪ್ರಬಂಧಗಳಲ್ಲಿ-

ಪ್ರಥಮ ಶ್ರೀ ಅಂದಾದಿ (ಮುದಲ್ ತಿರುವಂದಾದಿ) - ಇಪ್ಪತ್ತಾರನೆಯ ಪಾಶುರದಲ್ಲಿ - (ಸಂಪತ್ತು - ಧನ ಬೇಕೆಂಬ ಆಸೆಯಿಂದ) ಉಯರ್‌ವಾರುಂ - ಇಚ್ಛಿಸುವವರೂ, (ಕೈವಲ್ಯ ಮೋಕ್ಷವೇ ಸಾಕು ಭಗವಂತನು ಬೇಕಿಲ್ಲವೆಂದು ಭಾವಿಸಿ) ಅಗನ್ರು ಶೆಲ್ವಾರುಂ - ದೂರ ಹೋಗುವವರೂ, ಶುಭಕರವಾದ (ಒಳ್ಳೆಯ) ತುಳಸೀಮಾಲೆಯನ್ನು ಧರಿಸಿದ ಭಗವಂತನಾದ ಮಹಾವಿಷ್ಣುವನ್ನು ಅಗಲದ (ತನ್ನ) ಸ್ಥಿತಿಯನ್ನು ಅರಿತು ಯಾವಾಗಲೂ (ಅವನನ್ನೇ) ಭಜಿಸುವವರೂ (ಮುಕ್ತಿಯನ್ನಿಚ್ಛಿಸುವವರು) ಆದ ಇವರುಗಳ ಪಾಪವಾದ ಅಗ್ನಿಯನ್ನು ಶಮನಮಾಡುವುದು ಶ್ರೀವೇಂಕಟಗಿರಿಯೇ - ನಿತ್ಯಸೂರಿಗಳ ಮನಸ್ಸಾದ ದೀಪವನ್ನು (ಭಗವಂತನನ್ನು ಕಾಣಲು ಇಲ್ಲಿಗೆ ಬನ್ನಿ -ಎಂದು) ಹಚ್ಚಿಸುವ ಬೆಟ್ಟವಾಗುತ್ತದೆ, - ಎಂದೂ, ಮೂವತ್ತೇಳನೆಯ ಪಾಶುರದಲ್ಲಿ - ಎಲ್ಲದಿಕ್ಕಿನಲ್ಲೂ ಇರುವ ವೈದಿಕರು ಬಂದು ಸೇವೆ ಮಾಡುವ ಸ್ಥಳವಾದ ಶ್ರೀವೇಂಕಟಗಿರಿಯೇ (ಭಾರತಯುದ್ಧದಲ್ಲಿ) ಪಾಂಚ ಜನ್ಯವನ್ನು ಊದುವ ಅಧರದವನಾಗಿ (ಬಾಯಿ), ತನ್ನನ್ನಾಶ್ರಯಿಸಿದವರಲ್ಲಿ ಪ್ರೀತಿಯನ್ನು ಮಾಡುವ ಭಗವಂತನ ಅಭಿಮತದ (ಅಭಿಮಾನವಾದ) ಊರಾಗುತ್ತದೆ, - ಎಂದೂ, ಎಪ್ಪತ್ತಾರನೆಯ ಪಾಶುರದಲ್ಲಿ, ಭೂಮಿಯನ್ನಳೆದ ನಿರವಧಿಕ ಗುಣವನ್ನು ಹೊಂದಿದ ದೇವನು ಬಿಜಯಗೈದಿರುವ ಶ್ರೀವೇಂಕಟಗಿರಿಯು, ಒಂದು ಕೊರತೆಯೂ ಉಂಟಾಗದಂತೆ ಪರಮ ಪದವನ್ನು ಕೊಡುತ್ತದೆ ಯೆಂದೂ - ತೊಂಭತ್ತೊಂಭತ್ತನೆಯ ಪಾಶುರದಲ್ಲಿ - ಈ ಕ್ಷೀರಸಾಗರ

ಪ್ರವಾಹದಲ್ಲಿ ವಾಸಿಸುವವನೂ, ಶ್ರೀವೇಂಕಟಗಿರಿಯಲ್ಲಿ ಸ್ಥಾಪಿತವಾಗಿರುವವನೂ ಆದ ಶ್ರೀಮಹಾವಿಷ್ಣುವು ಹೃದಯದಲ್ಲಿ ವಿರಾಜಮಾನನಾಗಿದಾನೆ ಎಂದೂ, ಹೇ ಮನವೇ ಹಾಗೆಂದು ತಿಳಿ - ಎಂದೂ

ಎರಡನೆಯ ತಿರುವಂದಾದಿ - ಇಪ್ಪತ್ತೈದನೆಯ ಪಾಶುರದಲ್ಲಿ - ಪರಮಪದ ವಾಸಿಗಳಾದ ನಿತ್ಯಸೂರಿಗಳ ಸ್ತೋತ್ರಗಳಿಂದ ಶ್ರೇಷ್ಠವಾದ, ಸಹಜವಾದ, ಸದ್ಗುಣಗಳನ್ನುಳ್ಳ ಶ್ರೀಮಹಾವಿಷ್ಣುವು ಬಂದು ನಿಂತ ಸ್ಥಳವು, ಎತ್ತರವಾಗಿ ಬೆಳೆಯಲ್ಪಟ್ಟ ಬಿದಿರುಗಳ ತಂಪಾದ ತಟಗಳನ್ನು ಹೊಂದಿದ ಶ್ರೀವೇಂಕಟಗಿರಿಯೇ- ಎಂದೂ, ಮೂವತ್ತೂರನೆಯ ಪಾಶುರದಲ್ಲಿ - ನನ್ನ ಹೃದಯವು ಶ್ರೀ ತುಳಸೀಮಾಲೆಯನ್ನು ಧರಿಸಿದ ದೇವನ ದಿವ್ಯನಾಮಗಳನ್ನು ಬಹಳಕಾಲ ನೆನೆದು ಕೊಳ್ಳುವುದರಲ್ಲಿ ಸ್ಥಿರವಾಗಿದೆ. ನನ್ನ ದೇಹವೂ ಅವನನ್ನು ಬಹಳಕಾಲ ಸೇವೆಮಾಡಲು ಸ್ಥಿರವಾಗಿದೆ. ನನ್ನ ಬಾಯಿಯೂ ಸಹ ಉದ್ದವಾಗಿ ಬೆಳೆಯಲ್ಪಟ್ಟ ಬಿದಿರುಗಳಿಂದ ಕೂಡಿದ ತಂಪಾದ ಬೆಟ್ಟದ ತಟಗಳನ್ನುಳ್ಳ ಗಂಭೀರವಾದ ವೇಂಕಟಗಿರಿಯಲ್ಲಿ ಉಳ್ಳವನ ಗುಣಗಳ ಸಂಕೀರ್ತನ ಮಾರ್ಗದಲ್ಲಿಯೇ ಸ್ಥಿರವಾಗಿದೆಯೆಂದೂ, ಐವತ್ತೂರನೆಯ ಪಾಶುರದಲ್ಲಿ, ವೇಂಕಟವೇ (ವೇಂಕಟಗಿರಿಯೇ) ನಾವು ಆದರಿಸುವ ಬೆಟ್ಟವಾಗುತ್ತದೆ - ಎಂದೂ, ಎಪ್ಪತ್ತೈದನೆಯ ಪಾಶುರದಲ್ಲಿ ಮೇಘ ಸಮಾನ ವರ್ಣವನ್ನು ಹೊಂದಿದ ದಿವ್ಯಮಂಗಳ ವಿಗ್ರಹವನ್ನುಳ್ಳ ದೇವನ ಬೆಟ್ಟವು ಈ ಶ್ರೀ ವೇಂಕಟಾಚಲವಲ್ಲವೇ? - ಎಂದೂ,

ಮೂರನೆಯ ತಿರುವಂದಾದಿ - ಮೂವತ್ತೊಂಭತ್ತನೆಯ ಪಾಶುರದಲ್ಲಿ - ಚಂದ್ರಮಂಡಲವನ್ನು ಮುಟ್ಟಿದ ಪ್ರವಾಹವುಳ್ಳ ಜಲಪಾತಗಳ ಭೋರ್ಗರೆಯುವ ನಾದವುಳ್ಳ ನೀರನ್ನು ಪಡೆದ ಶ್ರೀವೇಂಕಟಗಿರಿಯಲ್ಲಿ ವಿರಾಜ ಮಾನನಾಗಿರುವ ದೇವಾಧಿದೇವನು (ನನ್ನ) ಹೃದಯದಲ್ಲಿದಾನೆ - ಎಂದೂ - ಅರವತ್ತೊಂಭತ್ತನೆಯ ಪದ್ಯದಲ್ಲಿ - (ನನ್ನ ಮಗಳು) ಬೆಟ್ಟವನ್ನು ಹೇಳುವ ಸಂದರ್ಭಗಳಲ್ಲಿ (ಇತರ ಬೆಟ್ಟಗಳ ವಿಷಯವಾಗಿ ಮಾತನಾಡದೇ) (ಹಾಡದೆ) ವೇಂಕಟಗಿರಿಯ ವಿಷಯವಾಗಿ ಮಾತನಾಡುತ್ತಾಳೆ (ಹಾಡುತ್ತಾಳೆ) - ಎಂದೂ ಹಾಡಿರುವುದರಿಂದಲೂ, ಈ ರೀತಿಯೇ ಹಲವಾರು ಪದ್ಯಗಳಲ್ಲಿಯೂ ಶ್ರೀವೇಂಕಟಗಿರಿಯನ್ನೂ ಅದರ ನಾಥನನ್ನೂ ವಿಶೇಷವಾಗಿ ಹಾಡಿರುವುದು ಕಂಡು ಬರುವುದರಿಂದಲೂ, (ಪ್ರಥಮ ಸೂರಿಗಳೂ) ಶ್ರೀವೇಂಕಟಗಿರಿಯನ್ನೂ, ಅಲ್ಲಿ ಎಲ್ಲರಿಗೂ ಸುಲಭವಾದ ನಿತ್ಯಸನ್ನಿಧಿ (ನಿತ್ಯವಾಸ) ಮಾಡಿಕೊಂಡಿರುವ ದೇವನನ್ನೂ ತಮ್ಮ ನಿತ್ಯಾನುಭವಕ್ಕೆ ಪಾತ್ರನಾದವನಾಗಿ ತಾವೇ ಪ್ರತಿಪಾದಿಸಿರುತ್ತಾರೆ.

ಈ ರೀತಿಯೇ ಅವರುಗಳು (ಆದಿಸೂರಿತ್ರಯರು) ಶ್ರೀವೇಂಕಟಯಾತ್ರೆಯನ್ನು ಮಾಡಿ, ಅದರ ತಪ್ಪಲುಗಳಲ್ಲಿ ಬಹುದಿನಗಳು ಮಂಗಳಾ ಶಾಸನ ಮಾಡುವುದರಲ್ಲಿಯೇ ನಿರತರಾಗಿದ್ದು, ಭಗವಂತನನ್ನು ಅನುಭವಿಸಿ ಕೊಂಡಿದ್ದರೆಂದು ಭಾರ್ಗವ ಪೂರಾಣವೂ ಹೇಳುತ್ತದೆ.

ಅದರ ನಂತರ, ಶ್ರೀಕಲಿಯನ್ (ತಿರುಮಂಗೈಯಾಳ್ವಾರ್) ರವರೂ ಆ ಆದಿಸೂರಿತ್ರಯರ ಅಂತರಂಗ ಅಭಿಪ್ರಾಯವನ್ನೇ ಅನುಸರಿಸಿ ಮಹಾಶ್ರೀಸೂಕ್ತ (ಪೆರಿಯ ತಿರುಮೊಳಿ) ದಲ್ಲಿ, ಎರಡನೆಯಕಾಂಡ (ಶತಕ) ಎಂಟನೆಯ ದಶಕದಲ್ಲಿನ ಎರಡನೆಯ ಪದ್ಯದಲ್ಲಿರುವ - (ಭಾಷೆಗಳ ಸೇರ್ಪಡೆಯಿಲ್ಲದ್ದರಿಂದ) ಪ್ರಿಯವಾದಂಥಹ ದ್ರಾವಿಡ (ತಮಿಳು) ಪಾಶುರಗಳನ್ನು ಹಾಡುವವರು ವಂದಿಸುವ ದೇವನಾಗಿ ಶ್ರೀವೇಂಕಟನಾಥನನ್ನು ಕುರಿತಿರುವ ''ಶೆಂದಮಿಳ್ ಪಾಡುವಾರ್ ತಾಂ ವಣಂಗುಂ ತೇವರ್ ಇವರ್ ಗೊಲ್'' ಎಂಬ ತಮ್ಮ ಶ್ರೀಸೂಕ್ತಿಯಿಂದ ಪ್ರಿಯವಾದಂಥಹ ತಮಿಳು ಹಾಡುಗಳನ್ನು ಹಾಡುವವರಾಗಿ ಒಪ್ಪಲ್ಪಟ್ಟ ಆದಿಸೂರಿತ್ರಯರುಗಳಿಗೆ, ಶ್ರೀವೇಂಕಟನಾಥನೇ ಅನುಭವ ವಿಷಯವೆಂದು ಶ್ರುತಪಡಿಸಿದ್ದಾರೆ ಎಂಬುವ ಈ ಅಂಶವೂ ಶ್ರೀರಂಗನಾಥ ಶಿಷ್ಯಪರಂಪರೆಯ ಉಪದೇಶದಿಂದ ತಿಳಿಯಲ್ಪಡುತ್ತದೆ.

ಆದುದರಿಂದ ಶ್ರೀವೇಂಕಟನಾಥನೂ. ಅವರುಗಳ ಪಾಶುರಗಳನ್ನೇ ಕೇಳಬೇಕೆಂದು ಪರಾಂಕುಶ ಶ್ರೀರಂಗರಾಜ ಅರೈಯರ್‌ರವರನ್ನು ನಿಯಮಿಸಿದನು - ಎಂದು ಭಾವಿಸಿಕೊಂಡು, ಶ್ರೀಭಗವದ್ರಾಮಾನುಜರು ಶ್ರೀಮನ್ನಾಥಮುನಿಗಳ ವಂಶದಲ್ಲಿ ಜನಿಸಿದ ಒಬ್ಬ ಅರೈಯರನ್ನು ಕರೆದು ಅವರಿಗೆ ತಿರುವೇಂಗಡನಾಥ ಅರೈಯರ್ (ಮಲೈಕ್ಕಿನಿಯನಿನ್ರಾರರೈಯರ್) ಎಂದು ದಿವ್ಯನಾಮವನ್ನಿಟ್ಟು, ''ಹೇ ಶ್ರೀಶೈಲನಾಥ (ವೇಂಕಟನಾಥ) ರರೈಯರೇ! ಇನ್ನು ನೀವು ಶ್ರೀವೆಂಕಟಗಿರಿಯಲ್ಲಿ ನಿತ್ಯವಾಸವನ್ನು ಮಾಡಿಕೊಂಡು ದಿವ್ಯಸೂರಿಗಳು ಹಾಡಿದ ದಿವ್ಯಪ್ರಬಂಧಗಳನ್ನು ದೇವಗಾನ ರೀತಿಯಲ್ಲಿ ಪ್ರತಿನಿತ್ಯವೂ ಹಾಡಿ, ಆ ದೇವನನ್ನು ಸಂತೋಷಪಡಿಸುತ್ತಾ ಬನ್ನಿ - ಎಂದು ಹೇಳಿದರು.

ಶ್ರೀವೇಂಕಟನಾಥನು ಶ್ರೀಶಠಕೋಪ ಶ್ರೀರಂಗರಾಜ ಅರೈಯರ್‌ರವರನ್ನು ಕುರಿತು, ಆದಿ ಸೂರಿತ್ರಯರು ತನ್ನನ್ನು ಕುರಿತು ಹಾಡಿದ ಪಾಶುರಗಳನ್ನು ಪ್ರಥಮವಾಗಿ ಹಾಡುವಂತೆ ನೇರವಾಗಿಯೇ ನಿಯಮಿಸಿದುದರಿಂದ, ಇನ್ನು ಮೇಲೆ, ವರ್ಷೇ ವರ್ಷೇ ನಡೆಯುವ ಶ್ರೀ ಅಧ್ಯಯನೋತ್ಸವ ಮುಂತಾದ ಕಾಲಗಳಲ್ಲಿ ನಾಲ್ಕು ಸಹಸ್ರ ದಿವ್ಯ ಪ್ರಬಂಧ ಪದ್ಯಗಳನ್ನು ಪೂರ್ತಿಯಾಗಿ ಹಾಡುವ ಸಂದರ್ಭಗಳಲ್ಲಿ

ಶ್ರೀವೇಂಕಟಗಿರಿಯಾದ ದಿವ್ಯದೇಶವನ್ನು ಪ್ರಮುಖ ವಿಷಯವನ್ನಾಗಿ ಕೊಂಡಿರುವ, ಆದಿಸೂರಿ ತ್ರಯರುಗಳ ಪ್ರಬಂಧಗಳನ್ನು ಪ್ರಾರಂಭಿಸಿ 'ಇಯರ್ಪಾ' ಪೂರ್ತಿಯಾಗಿ ಮೊದಲದಿನವೇ ಓದಿ ಮಾರನೆಯ ದಿನದಿಂದ ಶ್ರೀ ರಂಗನಾಥನ ದಿವ್ಯದೇವಾಲಯದಲ್ಲಿ ಓದುವ ರೀತಿಯಲ್ಲಿ ಪೆರಿಯಾಳ್ವಾರ್ (ವಿಷ್ಣುಚಿತ್ತಸೂರಿ)ರು ರಚಿಸಿ ಹಾಡಿದ 'ತಿರುಪ್ಪಲ್ಲಾಂಡು' ನಿಂದ ತೊಡಗಿ ಇತರ ದಿವ್ಯ ಪ್ರಬಂಧಗಳನ್ನು (ಪ್ರಥಮ ಸಹಸ್ರವನ್ನು) ಪೆರಿಯ ತಿರುಮೊಳಿ (ಮಹಾಶ್ರೀಸೂಕ್ತಿ)ಯನ್ನೂ ಇತರ ಪ್ರಬಂಧಗಳನ್ನೂ ಓದಿ, ಅದರ ನಂತರ ಏಕಾದಶೀ ಮೊದಲಾಗಿ ಹತ್ತುದಿನಗಳಲ್ಲಿ ಒಂದೊಂದು ದಿನವೂ ಸಹಸ್ರಗೀತೆಯಲ್ಲಿ ಒಂದೊಂದು ಶತಕದಂತೆ ಕ್ರಮವಾಗಿ ಓದಿ ಮುಗಿಸಿ, ಆದರ ಮಾರನೆಯದಿನ, ಮುಂಚೆ ನಮ್ಮಾಳ್ವಾರ್ ತಿರುವಾಯ್ಮೊಳಿ - ಮೂರನೆಯ ದಶಕದ ಮೊದಲನೆಯ ಪಾಶುರದಲ್ಲಿ ಇಷ್ಟಪಟ್ಟ - ''ಶ್ರೀ ಶೈಲನಾಥನಿಗೆ ಎಲ್ಲಾ ದೇಶ, ಕಾಲ, ಸ್ಥಿತಿ ಗಳಲ್ಲಿಯೂ ದಾಸನು ಮಾಡತಕ್ಕ ಸಮಸ್ತ ಕೈಂಕರ್ಯಗಳನ್ನೂ ಆ ಆಳ್ವಾರ್‌ರವರ ಆಸೆಯನ್ನು ಪೂರ್ತಿಮಾಡುವುದಕ್ಕಾಗಿಯೇ ಮಾಡುತ್ತಾ ಬರುತ್ತಿರುವವರೂ, ಮುಕ್ತಿ ಹೊಂದಲಿಚ್ಛಿಸುವ ಶ್ರೀವೈಷ್ಣವರುಗಳೆಲ್ಲರಿಗೂ ದಿವ್ಯಪ್ರಬಂಧಾನುಸಂಧಾನವು ಕೈಗೂಡಲು ಆ ಪ್ರಬಂಧಗಳನ್ನು ಪ್ರವಚನ ಮಾಡಿ (ಕಲಿಸಿ ಕೊಟ್ಟು) ಬರುತ್ತಿರುವವರೂ, ನಮಾಳ್ವಾರ್ ರವರ ವಿಷಯದಲ್ಲಿ ಮಧುರ ಕವಿ ಸೂರಿ (ಮಧುರಕವಿಯಾಳ್ವಾರ್)ಯವರಂತೆ ಚರಮ ಪರ್ವನಿಷ್ಠೆ (ಆಚಾರ್ಯ ಕೈಂಕರ್ಯದಲ್ಲಿ ನಿಷ್ಠೆ) ಯುಳ್ಳವರೂ, ಆ ನಿಷ್ಠೆಯನ್ನು ತಿಳಿಸುವ ಮಧುರಕವಿಗಳ ದಿವ್ಯ ಪ್ರಬಂಧವನ್ನು ಅದರಲ್ಲಿ ಹೇಳಿರುವಂತೆ ಆಚರಿಸಿಕೊಂಡೇ ಗಮನವಾಗಿ ಅನುಸಂಧಿಸುತ್ತಾ ಇರುವವರೂ, ಆ ನಿಷ್ಠೆಯನ್ನು ಪಡೆದುದರಿಂದ - ಶ್ರೀ ವೇಂಕಟನಾಥನ ಕಟಾಕ್ಷಕ್ಕೆ ಮುಖ್ಯ ಪಾತ್ರರಾದುದರಿಂದ ತಮಗೂ ತಮ್ಮನ್ನು ಸೇರಿದವರಿಗೂ ಮಧುರಕವಿದಾಸನೆಂಬ ಹೆಸರನ್ನೇ ಯಾವಾಗಲೂ ಧರಿಸತಕ್ಕುದಾಗಿ ನಿಯಮಿಸಿದವರೂ ಆದ ಅನಂದಾಳ್ವಾನ್‌ರವರಿಂದ ಆದರ ದಿಂದ ಅನುಸಂಧಿಸಲ್ಪಡುತ್ತಿರುವ 'ಕಣ್ಣಿನುಣ್ ಶಿರುತ್ತಾಂಬು' ದಿವ್ಯ ಪ್ರಬಂಧವನ್ನು' ಮುಖ್ಯವಾಗಿ, ಬೇರೆಯಾಗಿ ಅನುಸಂಧಾನ ಮಾಡಿ'' ಎಂದು ಕಟ್ಟಳೆಯಿಟ್ಟು ಅನಂದಾಳ್ವಾನ್‌ರವರಿಗೆ ಒಂದು ಪತ್ರವನ್ನು ಬರೆದುಕೊಟ್ಟು ಆ ಅರೈಯರನ್ನು (ವಿಜ್ಞಾಪನೆ ಮಾಡುವವರನ್ನು) ಶ್ರೀಶೈಲ (ತಿರುಪತಿಬೆಟ್ಟ)ಕ್ಕೆ ಹೊರಡುವಂತೆ ಮಾಡಿದರು.

ಅದರ ನಂತರ ಆ ಅರೈಯರ್ ಸ್ವಾಮಿಯವರು, ಆ ಪತ್ರವನ್ನು ಶಿರಸಾವಹಿಸಿಕೊಂಡು ಕುಟುಂಬ ಸಮೇತರಾಗಿ ಹೊರಟು ತಿರುಮಲೆಯನ್ನು ಸೇರಿ,

ಮೊದಲು ಅನಂದಾಳ್ವಾನ್‌ರವರನ್ನು ಕಂಡು ಒಬ್ಬರನ್ನೊಬ್ಬರು ನಮಸ್ಕಾರ ಮಾಡುವುದು, ಯೋಗಕ್ಷೇಮವನ್ನು ವಿಚಾರಿಸುವುದು ನಡೆದ ನಂತರ, ಶ್ರೀರಾಮಾನುಜ ಮುನಿಗಳು ಕೊಟ್ಟು ಕಳುಹಿಸಿದ ಶ್ರೀಮುಖವನ್ನು (ಪತ್ರವನ್ನು) ಅವರಿಗೆ ಕೊಟ್ಟು, ಆ ಮುನಿಗಳು ಹೇಳಿಕಳುಹಿಸಿದ ವೃತ್ತಾಂತಗಳೆಲ್ಲವನ್ನೂ ವಿಜ್ಞಾಪಿಸಿದರು.

ನಂತರ ಅನಂದ್ವಾಳ್ವಾನ್‌ರು ಆ ಶ್ರೀಮುಖವನ್ನು ತಲೆಯ ಮೇಲಿಟ್ಟುಕೊಂಡು ಆದರದಿಂದ ಅರ್ಥವನ್ನು ಓದಿ ತಿರುವೇಂಕಟನಾಥರರ್ಯೆಯರ್ ರೊಂದಿಗೆ ಶ್ರೀವೇಂಕಟನಾಥನ ಸನ್ನಿಧಿಗೆ ತೆರಳಿ, ''ಹೇ ವೇಂಕಟನಾಥ, ಭಗವದ್ರಾಮಾನುಜ ಮುನಿವರು ದಿವ್ಯಸೂರಿಗಳು ರಚಿಸಿದದ ದಿವ್ಯ ಪ್ರಬಂಧಗಳನ್ನು ಒಂದೊಂದು ದಿನವೂ, ಶ್ರೀ ಅಧ್ಯಯನೋತ್ಸವದಲ್ಲಿಯೂ ತಮ್ಮ ಮುಂದೆಯೇ ಅನುಸಂಧಾನ ಮಾಡಬೇಕೆಂದು ಕಟ್ಟಳೆಯನ್ನು ಮಾಡಿ ತಮ್ಮ (ದೇವನ) ಶ್ರೀನಾಮವನ್ನೇ ಇಟ್ಟು ಒಬ್ಬ ಅರ್ರೈಯರ್ ಸ್ವಾಮಿಯನ್ನು ಕಳುಹಿಸಿ, ಶ್ರೀಮುಖವನ್ನೂ ಬರೆದುಕೊಟ್ಟು ಕಳುಹಿಸಿ, ಅದರ ಮೂಲಕವಾಗಿ, ತಮ್ಮ ಸನ್ನಿಧಿಯಲ್ಲಿ ದಿವ್ಯ ಪ್ರಬಂಧವನ್ನು ಓದುವಂತೆ ಏರ್ಪಾಡು ಮಾಡಲು ದಾಸನಿಗೆ ಆಜ್ಞೆಯನ್ನು ಮಾಡಿದಾರೆ. ಅವರ ಆಜ್ಞೆಯನ್ನು ದಾಸನು ನೆರವೇರಿಸುವಂತೆ ತಾವು ಕರುಣೆಯಿಟ್ಟು ಪ್ರೀತಿಯಿಂದ ಒಪ್ಪಬೇಕು'' - ಎಂದು ದೇವಾಧಿ ದೇವನನ್ನು ಪ್ರಾರ್ಥಿಸಿ ನಿಂತಿರಲು ಆ ದೇವನೂ ಸಹ ಅರ್ಚಕರ ಮೂಲಕವಾಗಿ ''ಹೇ ಅನಂದಾಳ್ವಾನ್, ಶ್ರೀ ರಾಮಾನುಜರ ದಯೆಗೆ ವಿಶೇಷವಾಗಿ ಪಾತ್ರರಾದ ತಮ್ಮಲ್ಲಿ ನಮ್ಮ ಕರುಣೆಯು ಉಕ್ಕಿ ಬಂದು ಪ್ರವಾಹದಂತೆ ಹರಿಯುತ್ತಿದೆ. ರಾಮಾನುಜಮುನಿಗಳು ನಿಯಮಿಸಿದ ದಿವ್ಯ ಪ್ರಬಂಧಾನುಸಂಧಾನವನ್ನು ಸಕ್ರಮವಾಗಿ ಏರ್ಪಡಿಸಿ ನಿಮ್ಮ ಇಷ್ಟದಂತೆಯೇ ನೆರವೇರಿಸುವವರಾಗಿ. ನಾವೂ ಅವರ ನಿಯಮವನ್ನು ಪರಮಾದರದಿಂದ ಸ್ವೀಕರಿಸುತ್ತೇವೆ,'' - ಎಂದು ನಿಯಮಿಸಲು, ಅಂನಂದಾಳ್ವಾನ್, ಶ್ರೀಮುಖದಲ್ಲಿ ಬರೆಯಲ್ಪಟ್ಟ ಶ್ರೀ ಆಚಾರ್ಯರ ಆಜ್ಞೆಯಂತೆ ಒಂದೊಂದು ವರ್ಷವೂ ಅಧ್ಯಯನೋತ್ಸವದಲ್ಲಿ ಮೊದಲು ಆದಿಸೂರಿತ್ರಯರುಗಳ ''ಇಯರ್ಪಾ'' (ಆದಿಸೂರಿತ್ರಯರುಗಳ ದಿವ್ಯಪ್ರಬಂಧಗಳು) ವನ್ನು ಪೂರ್ಣವಾಗಿ ಓದಿ, ಅದಾದನಂತರ ಸಹಸ್ರಗೀತೆ (ತಿರುವಾಯ್ಮೊಳಿ)ಯನ್ನು ಹತ್ತು ದಿನಗಳಲ್ಲಿ ಒಂದೊಂದು ಶತಕವಾಗಿ ಓದಿ ಮುಗಿಸಿ, ಅದರ ಮಾರನೆಯದಿನ ತಮಗೆ ಇಷ್ಟವಾದ ಮಧುರಕವಿಗಳ 'ಕಣ್ಣಿನುಣ್ ಶಿರುತ್ತಾಂಬು'ನ್ನು ಮುಖ್ಯವಾಗಿ, ಬೇರೆಯಾಗಿ, ಓದಬೇಕೆಂಬ ಕಟ್ಟಳೆಯನ್ನು ಮಾಡಿ, ಆ ರೀತಿಯೇ ನಡೆಸಿಕೊಂಡು ಶ್ರೀವೇಂಕಟನಾಥನನ್ನು ಸಂತೋಷಪಡಿಸಿಕೊಂಡು ಆ ವೇಂಕಟನಾಥರರ್ರೈಯರ್

ರವರನ್ನು ಆ ತಿರುಮಲೆಯಲ್ಲಿಯೇ ನಿತ್ಯವಾಸಮಾಡಿ ಜೀವನ ನಡೆಸಿಕೊಂ ಬರುವಂತೆ ಮಾಡಿದರು.

ಶ್ರೀ ಅನಂತಾಳ್ವಾರ್ಯರು ಕಟ್ಟಿದ ಶ್ರೀವೇಂಕಟಾಚಲೇತಿಹಾಸ ಮಾಲೆ ಏಳನೆಯ ಪುಷ್ಪಗುಚ್ಛ ಸಮಾಪ್ತವು.

ಶ್ರೀಮತೇ ರಾಮಾನುಜಾಯ ನಮಃ

## ಇತಿಹಾಸ ಮಾಲೆಯು ಮುಕ್ತಾಯಗೊಂಡಿತು.



# ಶ್ರೀ ಅನಂತಾಚಾರ್ಯರು

## (ತಿರುಮಲೈ ಅನಂದಾಳ್ವಾನ್)



ಗೋವಿಂದ ರಾಜ ಸನ್ನಿಧಿ, ತಿರುಪತಿ

# ಲೇಖಕರ ವಿಳಾಸ


೧. ವಿದ್ವಾನ್ ಎಂ ಎಲ್. ನರಸಿಂಹಮೂರ್ತಿ
ಅದ್ವೈತ ವೇದಾಂತ ವಿಭಾಗ
ರಾಷ್ಟ್ರೀಯ ಸಂಸ್ಕೃತ ವಿದ್ಯಾಪೀಠ, ತಿರುಪತಿ

೨. ವಿದ್ವಾನ್ ರಾಮಚಂದ್ರಶರ್ಮಾ ತ್ಯಾಗಲಿ
೯೦, ಗಣೇಶನಂದನ ಸಿ.ಎಚ್.ಬಿ.ಎಸ್ ೧ ನೇ ಲೇಔಟ
ವಿಜಯನಗರ, ಬೆಂಗಳೂರು - ೫೬೦ ೦೪೦

೩. ವಿದ್ವಾನ್ ಅನಂತ ಶರ್ಮಾ ಭುವನಗಿರಿ
೪೩, "ಗಿರಿಶ್ರೀ" ೩-ಬಿ ಮುಖ್ಯರಸ್ತೆ
ಗಿರಿನಗರ, ಬೆಂಗಳೂರು - ೫೬೦ ೦೮೫

೪ ವಿದ್ವಾನ್ ವಿ. ಎನ್. ಭಟ್ಟ
ಸಹ್ಯಾದ್ರಿ ಕಲಾ ಕಾಲೇಜು
ಶಿವಮೊಗ್ಗ - ೫೭೭ ೨೦೩

೫. ಡಾ. ಎ. ಕೆ. ಶಾಸ್ತ್ರಿ
ನಿವೃತ್ತ ಇತಿಹಾಸ ಪ್ರಾಧ್ಯಾಪಕರು
'ಭವಾನಿ' ಟಿ ಎಸ್.ಎಸ್ ರೈಸ ಮಿಲ್ ಹತ್ತಿರ
ಶಿರಶಿ (ಉತ್ತರ ಕನ್ನಡ ಜಿಲ್ಲೆ)

೬. ವಿದ್ವಾನ್ ಡಿ. ಎಸ್. ಭಟ್ಟ
ನಿವೃತ್ತ ಪ್ರಾಚಾರ್ಯರು, ಸೋಮಸಾಗರ
ಅಂಚೆ : ಕಾನಗೋಡ, ತಾ : ಶಿರಶಿ (ಉ. ಕ. ಜಿಲ್ಲೆ)

೭. ಡಾ. ವಿ. ಡಿ. ಹೆಗಡೆ
ಪ್ರವಾಚಕರು, ಹಿಂದಿ ವಿಭಾಗ
ಮೈಸೂರು ವಿಶ್ವವಿದ್ಯಾಲಯ, ಮಾನಸಗಂಗೋತ್ರಿ
ಮೈಸೂರು - ೫೭೦ ೦೦೬

೮. ಡಾ. ಕೆ. ವಿ. ಆಚಾರ್ಯ
ಮುಖ್ಯಸ್ಥರು, ಇಲೆಕ್ಟ್ರೋನಿಕ್ಸ ವಿಭಾಗ
ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು - ೫೬೦ ೦೫೬

೯. ಡಾ. ಎಸ್. ಬಾಲಚಂದ್ರರಾವ್
ಪ್ರಾಂಶುಪಾಲರು, ನ್ಯಾಶನಲ್ ಕಾಲೇಜು
ಬಸವನಗುಡಿ, ಬೆಂಗಳೂರು - ೫೬೦ ೦೦೪

೧೦. ಲಕ್ಷ್ಮೀಶ ತೋಳ್ಪಾಡಿ
ಕೆಂಬಳಾಜೆ ಹೌಸ್, ಶಾಂತಿಗೋಡು
ಅಂಚೆ : ನೆರಿಮುಗೆರು, ಪುತ್ತೂರು - ೫೭೪ ೨೦೨ (ದ. ಕ)

೧೧. ಶ್ರೀ ಶ್ರೀರಂಗಪ್ರಿಯ ಮಹಾದೇಶಿಕ ಶ್ರೀಪಾದಂಗಳು
ಅಷ್ಟಾಂಗ ಯೋಗ ವಿಜ್ಞಾನ ಮಂದಿರ
೬೨೫, ೪ ನೇ ಮೇನ್, ಹನುಮಂತ ನಗರ,
ಬೆಂಗಳೂರು - ೫೬೦ ೦೧೯

೧೨. ಡಾ. ಆರ್. ಗಣೇಶ
೧೨೫೦, (೩೦) ೪ ನೇ ಮೇನ್, ಇ ಬ್ಲಾಕ್
೨ ನೇ ಹಂತ, ರಾಜಾಜಿನಗರ, ಬೆಂಗಳೂರು - ೫೬೦ ೦೧೦

೧೩. ಡಾ. ಜಿ. ಎನ್ ಭಟ್
ಮುಖ್ಯಸ್ಥರು, ಸಂಸ್ಕೃತ ವಿಭಾಗ
ಕೆನರಾ ಕಾಲೇಜು, ಮಂಗಳೂರು

೧೪. ಡಾ. ಶ್ರೀಕೃಷ್ಣ ಭಟ್ ಅರ್ತಿಕಜೆ
ಮುಖ್ಯಸ್ಥರು, ಕನ್ನಡ ವಿಭಾಗ
ಮದ್ರಾಸ ವಿಶ್ವವಿದ್ಯಾಲಯ
ಮರಿನಾ ಕೆಂಪಸ್, ಚೆನ್ನೈಯಿ - ೬೦೦ ೦೦೫

೧೫. ಡಾ. ಜೆ. ಸದಾನಂದಂ
ತೆಲುಗು ಪ್ರಾಧ್ಯಾಪಕರು ಹಾಗೂ ಅಷ್ಟಾವಧಾನಿಗಳು
ಅನಂತಪುರ, ಆಂಧ್ರ ಪ್ರದೇಶ

೧೬. ಡಾ. ಜಿ. ಎಂ. ಹೆಗಡೆ
ಮುಖ್ಯಸ್ಥರು, ಕನ್ನಡ ವಿಭಾಗ
ಕಿಟೆಲ್ ಆರ್ಟ್ಸ ಕಾಲೇಜು, ಧಾರವಾಡ - ೫೮೦ ೦೦೧

# ಶ್ರೀ ಭಗವತ್ಪಾದ ಪ್ರಕಾಶನ (ರಿ.)

ಶ್ರೀ ಸೋಂದಾ ಸ್ವರ್ಣವಲ್ಲೀ ಮಹಾಸಂಸ್ಥಾನ
ಅಂಚೆ : ಮಠದೇವಳ, ಶಿರಸಿ (ಉ. ಕ.) - ೫೮೧ ೩೩೬

## ಮಹಾಸಂಸ್ಥಾನದಿಂದ ಪ್ರಕಟಗೊಂಡು ಮಾರಾಟಕ್ಕೆ ಲಭ್ಯವಿರುವ ಪುಸ್ತಕಗಳ ಮತ್ತು ಕ್ಯಾಸೆಟ್‌ಗಳ ವಿವರ

| | | | |
|---|---|---|---|
| ೧. | ಬೌಧಾಯನೀಯ ನಿತ್ಯಕರ್ಮ | ರೂ | ೧೦೦-೦೦ |
| ೨ | ಬೋಧಾಯನೋಕ್ತಸಂಧ್ಯಾವಿಧಿಃ | ರೂ. | ೧೦-೦೦ |
| ೩. | ಸ್ವರ್ಣವಲ್ಲೀ ಮಹಾಸಂಸ್ಥಾನ (ಚರಿತ್ರೆ) | ರೂ. | ೧೦೦-೦೦ |
| ೪. | ವಿವಾಹ ಸಂಸ್ಕಾರ | ರೂ | ೨೫-೦೦ |
| ೫ | ಗಾಯತ್ರೀ ಜಪಯಜ್ಞ | ರೂ. | ೨೫-೦೦ |
| ೬. | ಸ್ವರ್ಣವಲ್ಲೀ ಸುಧಾ ಕುಸುಮ - ೧ | ರೂ. | ೧೦-೦೦ |
| ೭. | ಸ್ವರ್ಣವಲ್ಲೀ ಸುಧಾ ಕುಸುಮ - ೨ | ರೂ | ೧೦-೦೦ |
| ೮ | ಭಗವದ್ಗೀತೆ ಆಧ್ಯಾತ್ಮವಿದ್ಯೆ ಸಂಪುಟ - ೧ | ರೂ. | ೧೦೦-೦೦ |
| ೯. | ಕೃಷ್ಣಯಜುರ್ವೇದ ಸ್ವಾಹಾಕಾರವಿಧಿಃ | ರೂ. | ೧೮೦-೦೦ |
| ೧೦. | ಶ್ರೀ ಸರ್ವಜ್ಞೇಂದ್ರ ಸರಸ್ವತೀ | ರೂ. | ೨೫-೦೦ |
| ೧೧. | ಗಾಯತ್ರೀ ಮಹತ್ವ (ಕ್ಯಾಸೆಟ್) | ರೂ. | ೩೦-೦೦ |
| ೧೨ | ಬೋಧಾಯನೋಕ್ತ ಸಂಧ್ಯಾವಂದನೆ (ಕ್ಯಾಸೆಟ್) | ರೂ. | ೩೦-೦೦ |
| ೧೩. | ಶ್ರೀ ಲಕ್ಷ್ಮೀನೃಸಿಂಹ ಕಲ್ಪೋಕ್ತಪೂಜಾವಿಧಿಃ | ರೂ. | ೫೦-೦೦ |
| ೧೪. | ಶಂಕರಾಚಾರ್ಯರ ಸ್ತೋತ್ರರತ್ನಮಾಲೆ | ರೂ. | ೫೦-೦೦ |
| ೧೫. | ಸನಾತನ ಸಂಸ್ಕಾರಗಳು | ರೂ. | ೫೦-೦೦ |
| ೧೬. | ಕೃಷ್ಣಯಜುರ್ವೇದ ಸ್ವಾಹಾಕಾರ ವಿಧಿಃ ಭಾಗ - ೨ | ರೂ | ೪೫೦-೦೦ |
| ೧೭. | ವಿಭೂತಿ ಪುರುಷ ವಿದ್ಯಾರಣ್ಯರು | ರೂ. | ೬೫-೦೦ |
| ೧೮. | ಶ್ರೀ ಬೃಹತ್ ಗಂಗಾಧರೇಂದ್ರ ಸರಸ್ವತೀ | ರೂ. | ೭೦-೦೦ |
| ೧೯. | ಶ್ರೀ ಸರ್ವಜ್ಞೇಂದ್ರರು | ರೂ | ೪೫-೦೦ |
| ೨೦. | ಶ್ರೀ ಗಂಗಾಧರೇಂದ್ರ ಸರಸ್ವತೀ ಮಹಾಸ್ವಾಮಿಗಳ ಸಂದೇಶ ನುಡಿ | ರೂ. | ೬೫-೦೦ |
| ೨೧ | ಶ್ರೀ ಸ್ವರ್ಣವಲ್ಲೀ ಗುರುವಂಶ ಚರಿತಂ | ರೂ. | ೧೦೦-೦೦ |
| ೨೨. | ಶ್ರೀ ಶಂಕರಾಚಾರ್ಯರ ಅದ್ವೈತದರ್ಶನ | ರೂ. | ೧೨೦-೦೦ |

" ಸ್ವರ್ಣವಲ್ಲೀ ಪ್ರಭಾ " ಮಾಸಪತ್ರಿಕೆಗೆ ಚಂದಾದಾರರಾಗಿ
ಜ್ಞಾನಾನಂದ ಅನುಭವಿಸಿರಿ

ಚಂದಾವಿವರ ·

| | | |
|---|---|---|
| ವಾರ್ಷಿಕ ಚಂದಾ | ರೂ. | ೯೦-೦೦ |
| ಮೂರು ವರ್ಷದ ಚಂದಾ | [illegible] | [illegible] |
| ಪ್ರೋತ್ಸಾಹಕ ಸದಸ್ಯರು | [illegible] | ೧,೦೦೦-೦೦ |
| ಪೋಷಕ ಸದಸ್ಯರು | [illegible] | ೫,೦೦೦-೦೦ |



